# ಶ್ರೀಮದ್ಭಾಗವತಮ್

*"This book is published with the financial assistance of*
**Tirumala Tirupati Devasthanams**
*under their scheme aid to publish religious books"*

ಕೃಷ್ಣ ನಾರಾಯಣ ಬೆಂಗೇರಿ

ಬೆಂಗಳೂರು

# ಶ್ರೀಮದ್ಭಾಗವತಮ್ 

ಪುಟಗಳು : 328+12

ಲೇಖಕರು : ಕೃಷ್ಣ ನಾರಾಯಣ ಬೆಂಗೇರಿ

©

ಪ್ರಥಮ ಮುದ್ರಣ : 1997

ಪ್ರತಿಗಳು : 1,000

ಬೆಲೆ ರೂ. 100/-

**ಪ್ರಕಾಶಕರು :**

ಶ್ರೀ ಕೆ. ಎನ್. ಬೆಂಗೇರಿ

ಶ್ರೀ ನಾರಾಯಣ ಪ್ರಕಾಶನ

D 2 - 791, ಬಿ.ಡಿ.ಎ. ಫ್ಲಾಟ್ಸ್, ನೀಲಸಂದ್ರ

ಬೆಂಗಳೂರು - 560 047

ದೂರವಾಣಿ : 5554694

**ಮುದ್ರಕರು :**

ಬೃಂದಾವನ ಪ್ರಿಂಟರ್ಸ್ ಮತ್ತು ಪಬ್ಲಿಷರ್ಸ್ (ಪ್ರೈ) ಲಿ.

12 / 13, ಲಾಲಬಾಗ ಫೋರ್ಟ ರಸ್ತೆ

ಬೆಂಗಳೂರು - 560 004

ದೂರವಾಣಿ : 2224484

# ಸಮರ್ಪಣೆ



ಈ ಪುಸ್ತಕವನ್ನು ನಮ್ಮ ಆರಾಧ್ಯ ದೇವರಾದ ಉಡುಪಿ ಶ್ರೀಕೃಷ್ಣನ ಪಾದಾರವಿಂದಗಳಿಗೆ ಶತಕೋಟಿ ಪ್ರಣಾಮಗಳೊಂದಿಗೆ

# ಕೃತಜ್ಞತೆಗಳು

ಶ್ರೀ ತಿರುಪತಿ - ತಿರುಮಲಾಯಿ
ದೇವಸ್ಥಾನದವರು ಈ ಪುಸ್ತಕಕ್ಕೆ
ಧನ ಸಹಾಯ ಮಾಡಿದ್ದಾರೆ.
ಅವರಿಗೆ ನಮ್ಮ ಸಹಸ್ರ ಪ್ರಣಾಮಗಳು.

# ಮುನ್ನುಡಿ

ಶ್ರೀಮದ್ಭಾಗವತ ಪುರಾಣವು ಭಾರತ ದೇಶದ ಎಲ್ಲ ಪುರಾಣಗಳಲ್ಲಿ ಬಹಳ ಪ್ರಾಚೀನವಾದದ್ದಲ್ಲದೆ ಬಲು ಹಿರಿಮೆಯನ್ನು ಹೊಂದಿರುವಂಥದ್ದು. ಈ ಪುರಾಣವನ್ನು ಜಗತ್ತಿನ ಎಲ್ಲಾ ಭಾಷೆಗಳಲ್ಲಿ ಪರಿವರ್ತಿಸಲಾಗಿದೆ. ೧೭೮೪ ರಲ್ಲಿ ಈಸ್ಟ್ ಇಂಡಿಯಾ ಕಂಪನಿಯ ಪರವಾಗಿ, ಭಾರತಕ್ಕೆ ಬಂದ ಸರ್ ವಿಲಿಯಮ್ ಜೋನ್ಸ್ ಎಂಬ ಆಂಗ್ಲ ನ್ಯಾಯಧೀಶರು ಶ್ರೀಮದ್ಭಾಗವತವನ್ನು ಪರ್ಶಿಯನ್ ಭಾಷೆಯ ಮುಖಾಂತರ ಓದಿದ್ದರಂತೆ.

ಶ್ರೀಮದ್ಭಾಗವತದ ಸಪ್ತಾಹ ಭಾರತದಲ್ಲಿ ಮೇಲಿಂದ ಮೇಲೆ ಆಗುತ್ತಲೆ ಇರುತ್ತವೆ. ಈ ಪುರಾಣದಲ್ಲಿನ ವಿಶಿಷ್ಠ ಮಹತ್ವವನ್ನು ಅರಿಯಲು ಮೂಲಗ್ರಂಥವನ್ನು ಓದಿದೆ ಅದಕ್ಕಾಗಿ ಇದರಲ್ಲಿ ಅಡಗಿರುವ ಮೂಲಭೂತ ತತ್ವಗಳನ್ನು ತಿಳಿಸಿ ಹೇಳುವದಕ್ಕೆ ಪ್ರಯತ್ನ ಪಟ್ಟಿದ್ದೇನೆ.

ISKCON ಸಂಸ್ಥೆಯವರು ಶ್ರೀಮದ್ಭಾಗವತ ಪುರಾಣ ಮೂಲಗ್ರಂಥಗಳನ್ನು ಪ್ರಸಿದ್ಧಿಸಿದ ಸುದ್ದಿಯು ಬಂದಾಗ ಅವುಗಳನ್ನು ಪಡೆದುಕೊಂಡು, ಹಲವಾರು ಸಲ ಓದಿದೆ. ಓದಿದ ಮೇಲೆ ಈ ಪುರಾಣದಲ್ಲಿ ನನಗೆ ಹೆಚ್ಚು ಆಸಕ್ತಿ ಹುಟ್ಟಿತು ಮತ್ತು ಅದರಲ್ಲಿದ್ದ ಮಾಹಿತಿಯು ಹೆಚ್ಚು ಉಪಯುಕ್ತವಿದೆ ಎಂದು ಅನ್ನಿಸಿತು. ಅದಕ್ಕಾಗಿ ಈ ಪುರಾಣದ ಸಾರಾಂಶ ಬರೆಯಲೇ ಬೇಕೆಂಬ ಹಟ ನನ್ನಲ್ಲಿ ಹುಟ್ಟಿತು. ಅದರಂತೆ ಸತತ ೨ ವರ್ಷಗಳ ಕಾಲ ಆ ಕೆಲಸವನ್ನು ಮಾಡಿದೆ; ಪುರಾಣದ ಸಾರಾಂಶವನ್ನು ಆಂಗ್ಲ ಭಾಷೆಯಲ್ಲಿ ಬರೆದದ್ದಾಯ್ತು. ಕೆಲವು ದಿವಸ ಬೆರಳಚ್ಚಿನಲ್ಲಿ ಕೆಲಸ ಮಾಡಿದೆ. ಆಗ ನನ್ನ ಮಗ ಗೋಪಾಲ ಮತ್ತು ಸೊಸೆ - ಸೌ. ಮೀನಾ ಕಂಪ್ಯೂಟರದಲ್ಲಿ ಅದನ್ನು ಸರಿಪಡಿಸಲು ಸಲಹೆ ಮಾಡಿದರು ಮತ್ತು ಆ ವಿದ್ಯೆಯನ್ನು ನನಗೆ ಕಲಿಸಿದರು. ಕೊನೆಗೆ ಪುರಾಣದ ಸಾರಾಂಶವು ಕಂಪ್ಯೂಟರ ವರ್ಡ್ ಪ್ರೊಸೆಸಿಂಗ್‌ದಲ್ಲಿ ಮೂಡಿಬಂತು. ಕೆಲವು ನನ್ನ ಮಿತ್ರರು ಅದನ್ನು ಅಚ್ಚಿನಲ್ಲಿ ಹಾಕಲು ಸಲಹೆ ಮಾಡಿದರು. ಶ್ರೀಯುತರಾದ ಮದ್ದುರಾವ ಕೌಜಲಗಿ ಅವರು ಈ ಪುಸ್ತಕದಲ್ಲಿ ಹೆಚ್ಚು ಉತ್ಸಾಹ ತೋರಿಸಿದ್ದಾರೆ. ಅವರು ಈ ಕೃತಿಯನ್ನು ಪ್ರಸಿದ್ಧಿ ಮಾಡಬೇಕೆಂದು ಒತ್ತಾಯಿಸಿದರು. ಶ್ರೀ.ಪಿ.ಜೆ. ಬಾಗಿಲತಾಯಿ ಮತ್ತು ಶ್ರೀ ಆರ್.ಆರ್. ಪರ್ವತೀಕರರು ಆಂಗ್ಲಭಾಷೆಯ ಕರಡನ್ನು ಓದಿ ಕೆಲವು ಸಲಹೆಗಳನ್ನು ಮಾಡಿದರು. ಅವುಗಳನ್ನು ಇದರಲ್ಲಿ ಸೇರಿಸಿದೆ. ಅವರಿಗೆ ನಾನು ತುಂಬಾ ಆಭಾರಿ. ಆದರೆ ಎಲ್ಲಕ್ಕಿಂತ ಮೊದಲು ಕನ್ನಡದಲ್ಲಿ ಭಾಷಾಂತರ ಬೇಕೆಂದು ನನಗೆ ಅನಿಸಿತು. ಅದಕ್ಕಾಗಿ ಶ್ರೀಮತಿ ಬಿ.ಎಸ್. ವೆಂಕಟಲಕ್ಷ್ಮಿಯವರನ್ನು ಕೇಳಿಕೊಂಡೆ. ಅವರು ಒಪ್ಪಿ ಭಾಷಾಂತರಿಸಿ ನನಗೆ ತುಂಬಾ ಉಪಕಾರ ಮಾಡಿದ್ದಾರೆ. ಅದಕ್ಕಾಗಿ ಅವರಿಗೆ ನಾವೆಲ್ಲ ತುಂಬಾ ಚಿರಋಣಿಗಳು.

ಈ ಪುಸ್ತಕಕ್ಕೆ ಮೊದಲಿನಿಂದಲೂ ಉತ್ಸಾಹ ತೋರಿಸಿ ತಿರುಪತಿ - ತಿರುಮಲಾಯಿ ಪುಸ್ತಕ ಕಮೀಟಿಯಲ್ಲಿ ನಮ್ಮ ಪರವಾಗಿ ಆಸಕ್ತಿ ತೋರಿಸಿ ಸಹಾಯ ಮಾಡಿದ ನಮ್ಮ ಸ್ನೇಹಿತರಾದ ಶ್ರೀ ಆದ್ಯ ರಾಮಾಚಾರ್ಯ ಮತ್ತು ಶ್ರೀ ಗೋವಿಂದಮೂರ್ತಿ ದೇಸಾಯರಿಗೂ ನಾನು ಆಭಾರಿಯಾಗಿದ್ದೇನೆ.

ಕನ್ನಡದಲ್ಲಿ ಭಾಷಾಂತರವಾದ ಮೇಲೆ ಅದನ್ನು ಮೂಲ ಗ್ರಂಥಗಳೊಂದಿಗೆ ಹೋಲಿಸಿ ಅದನ್ನು ಓದುವ ಜವಾಬ್ದಾರಿಯು ನನ್ನ ಪತ್ನಿ ಸೌ ಆಶಾಳ ಮೇಲೆ ಬಿದ್ದಿತು.

ಪುರಾಣದ ಸಾರಾಂಶ ಬರೆಯಬೇಕೆಂಬ ದಿನದಿಂದ ಇಲ್ಲಿಯವರೆಗೆ ಎಲ್ಲ ಜವಾಬ್ದಾರಿಗಳನ್ನು ಹೊತ್ತು ಕರಡು ಓದಿ, ಸಲಹೆ ಮಾಡಿದ್ದಕ್ಕೆ ಅವಳಿಗೆ ನಾನು ವೈಯಕ್ತಿಕವಾಗಿ ತುಂಬಾ ಉಪಕೃತನು. ಅವಳ ಸಹಾಯವಿಲ್ಲದಿದ್ದರೆ ಈ ಹೊತ್ತಿಗೆಯು ಹೊರ ಬರುವುದು ಅಸಾಧ್ಯವಾದ ಮಾತು.

ಶ್ರೀ ವೇದವ್ಯಾಸರು - ಶ್ರೀಮನ್ ನಾರಾಯಣನ ಭಾಗಶಃ ಅವತಾರ - ವೇದಗಳನ್ನು ನಾಲ್ಕು ಭಾಗಗಳಲ್ಲಿ ವಿಂಗಡಿಸಿದ್ದಲ್ಲದೆ, ಎಲ್ಲ ಉಪನಿಷತ್ತುಗಳನ್ನು ಕ್ರೋಢೀಕರಿಸಿ "ವೇದಾಂತ ಸೂತ್ರ" - ಮತ್ತು ಮಹಾಭಾರತವನ್ನು ಬರೆದರು. ಆದರೂ ಅವರಿಗೆ ಮನಃಶಾಂತಿ ಸಿಗಲಿಲ್ಲ. ಶ್ರೀ ನಾರದರು. ಶ್ರೀಮದ್ಭಾಗತವನ್ನು ಬರೆಯಲು ಸೂಚಿಸಿದರು. ಅದರಂತೆ ಈ ಪುರಾಣವು ಬರೆಯಲ್ಪಟ್ಟಿತು.

ಶ್ರೀಮದ್ಭಾಗವತ ಪುರಾಣವು ಜಗತ್ತಿನ ಎಲ್ಲ ವಿಷಯಗಳನ್ನು ಅಳವಡಿಸಿಕೊಂಡಿದೆ. ಇದು ಸೂರ್ಯನಂತೆ ತೇಜಸ್ವಿಯಾಗಿದೆ ಮತ್ತು ಶ್ರೀ ಕೃಷ್ಣನ ಚರಿತ್ರೆಯನ್ನು ಒಳಗೊಂಡಿದೆ. ಶ್ರೀ ವೇದವ್ಯಾಸರ ಪುತ್ರ ಶ್ರೀ ಶುಕಾಚಾರ್ಯರು, 7 ದಿನಗಳಲ್ಲಿ ಮರಣ ಹೊಂದಬೇಕಾದ ಪರೀಕ್ಷಿತ ರಾಜನಿಗೆ ಈ ಪುರಾಣವನ್ನು ತಿಳಿಸಿ ಹೇಳಿದ್ದಾರೆ. ಇದೊಂದು ಬೃಹತ್ ಕೃತಿ. ಅರ್ಥ ಮಾಡಿಕೊಳ್ಳಲು ಕಷ್ಟಕರ. ಅದಕ್ಕಾಗಿ ಸರಳ ಭಾಷೆಯಲ್ಲಿ ಜನರಿಗೆ ಅರ್ಥವಾಗುವ ಹಾಗೆ ನಾನು ಸಂಗ್ರಹಿಸಿದ್ದೇನೆ. ಆದರೆ ಮೂಲಗ್ರಂಥಕ್ಕೆ ಯಾವ ತರಹದ ಅನ್ಯಾಯವನ್ನು ಮಾಡಿಲ್ಲ.

ISKCON ದವರು ಪ್ರಕಟಿಸಿದ ಮೂಲ ಗ್ರಂಥಗಳ ಮೇಲೆ ಅವಲಂಬಿಸಿ ಪುರಾಣದ ಸಾರಾಂಶ ಮಾಡಿದ್ದೇನೆ.

ಈ ಪುಸ್ತಕವನ್ನು ಹೊರ ತರಲು ನಮ್ಮ ಏಕಮೇವ ಸೋದರ ಅಳಿಯ ಕೃಷ್ಣ ಫೋತದಾರ ಎಲ್ಲ ಸಹಾಯವನ್ನು ಮಾಡಿದ್ದಾನೆ. ಅದಕ್ಕೆ ಬೇಕಾಗುವ ರೂಪ ರೇಖೆಗಳನ್ನು ಅವನೇ ಸಿದ್ಧ ಪಡಿಸಿದ್ದಾನೆ. ಅವನಿಗೆ ಮತ್ತು ಅವನ ಪತ್ನಿ ಸೌ ಪ್ರತಿಮಾ ಮತ್ತು ಮಕ್ಕಳಿಗೆ ದೇವರು ಅನಂತ ಸುಖ ಸಮೃದ್ಧಿಗಳನ್ನು ದಯಪಾಲಿಸಲಿ.

ಕೃ.ನಾ. ಬೆಂಗೇರಿ

# ಶ್ರೀಮದ್ಭಾಗವತಮ್

## ಒಂದು ಸಾರಾಂಶ

### ಪೀಠಿಕೆ

(ಪೀಠಿಕೆಯು, ಮೂಲ ಶ್ರೀಮದ್ಭಾಗವತದ ಹಾಗೂ ಈ ಮಹಾಪುರಣದಲ್ಲಿ ಉಲ್ಲೇಖಿತಗೊಂಡಿರುವ ವಿವಿಧ ಪಾತ್ರಧಾರಿಗಳನ್ನು ಕುರಿತದ್ದಾಗಿದೆ. ಅಲ್ಲದೆ ಇದು ಮಹಾಭಾರತ ಯುದ್ಧದ ಕೊನೆಯ ಹಂತ ಹಾಗೂ ಕಟ್ಟಕಡೆಯ ಪಾಂಡವರನ್ನು ಕೊಲ್ಲಲು ಅಶ್ವತ್ಥಾಮನು ಹೂಡಿದ ಬ್ರಹ್ಮಾಸ್ತ್ರ ಮತ್ತು ಭಗವಂತನು ಅದನ್ನು ನಿವಾರಿಸಿದ ಬಗೆಯನ್ನು ಕುರಿತಿದ್ದಾಗಿದೆ).

ॐ नमो भगवते वासुदेवाय
जन्माद्यस्य यतोऽन्वयादितरतश्चार्थेष्वभिज्ञः स्वराट्
तेने ब्रह्म हृदा य आदिकवये मुह्यन्ति यत्सूरयः ।
तेजोवारिमृदां यथा विनिमयो यत्र त्रिसर्गोऽमृषा
धाम्ना स्वेन सदा निरस्तकुहकं सत्यं परं धीमहि ॥ १ ॥

ಓಂ ನಮೋ ಭಗವತೇ ವಾಸುದೇವಾಯ
ಜನ್ಮಾದ್ಯಸ್ಯ ಯತೋಽನ್ವಯಾದಿತರತಶ್ಚಾರ್ಥೇಷ್ವಭಿಜ್ಞಃ ಸ್ವರಾಟ್
ತೇನೇ ಬ್ರಹ್ಮ ಹೃದಾಯ ಆದಿಕವಯೇ ಮುಹ್ಯಂತಿ ಯತ್ಸೂರಯಃ।
ತೇಜೋವಾರಿಮೃದಾಂ ಯಥಾ ವಿನಿಮಯೋ ಯತ್ರ ತ್ರಿಸರ್ಗೋಽಮೃಷಾ
ಧಾಮ್ನಾ ಸ್ವೇನ ಸದಾ ನಿರಸ್ತಕುಹಕಂ ಸತ್ಯಂ ಪರಂ ದೀಮಿಹಿ ॥ ೧ ॥

ಶ್ರೀಮದ್ಭಾಗವತದ ಈ ಪ್ರಾರಂಭಿಕ ಶ್ಲೋಕವು ಮುಖ್ಯವಾದದ್ದು. ಇದನ್ನು ಪ್ರತಿನಿತ್ಯ ಮುಂಜಾನೆ ಪಠಿಸಬೇಕಾದ ಅಗತ್ಯವಿದೆ. ಈ ಶ್ಲೋಕವು ಮಹಾವಿಷ್ಣು ಅಥವಾ ಶ್ರೀ ಕೃಷ್ಣ ಪರಮಾತ್ಮನಿಗೆ ಭಕ್ತಿ ಪೂರ್ವಕ ಪ್ರಣಾಮಗಳನ್ನು ಸಲ್ಲಿಸುವುದಾಗಿದೆ. ಈತನೇ ಪರಮ ಸತ್ಯ, ಸೃಷ್ಟಿ, ಪುಷ್ಟಿ ಹಾಗೂ ವ್ಯಕ್ತಗೊಂಡ ವಿಶ್ವದ ನಿರ್ನಾಮಕ್ಕೆ ಕಾರಣನು. ಪ್ರಪ್ರಥಮ ಜೀವಿಯಾದ ಬ್ರಹ್ಮನ ಹೃದಯಕ್ಕೆ ವೈದಿಕ ಜ್ಞಾನವನ್ನು ತುಂಬಿಸಿದವನು ಇವನೇ. ಆದ್ದರಿಂದ ಯಾರೇ ಆಗಲಿ ಇವನನ್ನು ಅಂದರೆ - ತನ್ನ ಅತಿಶಯ ಆವಾಸಸ್ಥಾನದಲ್ಲಿ ಇರುವಂಥ ಹಾಗೂ ಜಗತ್ತಿನ ಮಿಥ್ಯೆಗಳಿಂದ ಎಂದೆಂದಿಗೂ ಮುಕ್ತನಾಗಿರುವ ಶ್ರೀ ಕೃಷ್ಣನನ್ನು ಧ್ಯಾನಿಸಬೇಕು.

ನೈಮಿಷಾರಣ್ಯ ವನದಲ್ಲಿ ಶೌನಕನ ನೇತೃತ್ವದಲ್ಲಿ ಋಷಿಮುನಿಗಳು ಭಗವಂತನನ್ನು ಸಂತೃಪ್ತಗೊಳಿಸುವ ಸಲುವಾಗಿ ಯಜ್ಞವೊಂದನ್ನು ನೆರವೇರಿಸಲು ಸಮಾವೇಶಗೊಂಡಿದ್ದರು.

ಮುನಿಗಳು ಶೌನಕನಿಂದ ಶ್ರೇಷ್ಠವಾದ್ದೂ ಹಾಗೂ ಜನರಿಗೆ ಅತ್ಯುನ್ನತ ಒಳಿತಾದದ್ದೂ ಯಾವುದು ಎಂಬುದನ್ನು ತಿಳಿಯ ಬಯಸಿದರು. ಇದಲ್ಲದೆ ಅವರು ಜನರಿಗೆ ಸಂಪೂರ್ಣ ತೃಪ್ತಿಯನ್ನು ಒದಗಿಸುವಂಥ ಎಲ್ಲ ಧರ್ಮಗ್ರಂಥಗಳ ಸಾರ ಸಂಗ್ರಹದ ಬಗ್ಗೆಯೂ ತಿಳಿಯ ಬಯಸಿದರು. ಅವರು ಶ್ರೀ ಕೃಷ್ಣ ಪರಮಾತ್ಮ ಹಾಗೂ ಅವನ ಅವತಾರಗಳನ್ನು ಕುರಿತೂ ಕೇಳಿದರು. ಕೃಷ್ಣಾವತಾರವು ಅಂತ್ಯಗೊಂಡ ನಂತರ ಧಾರ್ಮಿಕ ತತ್ವಗಳು ಯಾರಿಗೆ ರವಾನಿಸಲ್ಪಟ್ಟವು ಎಂಬುದನ್ನು ತಿಳಿಯಲೂ ಅವರು ಆಶಿಸಿದರು.

ವ್ಯಾಸದೇವರ ಪುತ್ರರಾದ ಶ್ರೀ ಶುಕಾಚಾರ್ಯರಿಂದ "ಶ್ರೀಮದ್ಭಾಗವತ"ವು ಪರೀಕ್ಷಿತ ರಾಜನಿಗೆ ತಿಳಿಸಲ್ಪಟ್ಟಿತು.

ಭಗವಾನ್ ಕೃಷ್ಣನು "ಪರಮಾತ್ಮ" ನಾಗಿದ್ದು ಪ್ರತಿಯೊಬ್ಬರ ಹೃದಯದಲ್ಲೂ ನೆಲೆಸಿದ್ದಾನೆ. ಶ್ರೀಮದ್ಭಾಗವತದ ತರಗತಿಗಳಿಗೆ ತಪ್ಪದೆ ಹಾಜರಾಗುವ ಮೂಲಕ ಮತ್ತು ಪರಿಶುದ್ಧ ಭಕ್ತನಿಗೆ ಸೇವೆ ಸಲ್ಲಿಸುವ ಮೂಲಕ ಮಾನವರ ಎಲ್ಲ ಸಂಕಷ್ಟಗಳೂ ನಿವಾರಿಸಲ್ಪಡುತ್ತವೆ. ಭಗವಂತನು ಐಹಿಕ ಸ್ವಭಾವದ ಮೂರು ವಿಧಾನಗಳೊಂದಿಗೆ ಸೇರ್ಪಡೆಯಾಗಿದ್ದಾನೆ. ಅವೆಂದರೆ ಕಾಮ, ಸುಸ್ವಭಾವ ಹಾಗೂ ಮೌಢ್ಯ. ಅವನು ಬ್ರಹ್ಮ ವಿಷ್ಣು ಹಾಗೂ ಮಹೇಶ್ವರರ ಮೂರು ಮೌಲಿಕ ರೂಪಗಳನ್ನು ಸ್ವೀಕರಿಸುತ್ತಾನೆ. ಪ್ರಕಟಿತ ಧರ್ಮಗ್ರಂಥಗಳಲ್ಲಿ ಭಗವಾನ್ ಕೃಷ್ಣನನ್ನು ಕುರಿತಾದದ್ದೇ ಅತ್ಯುನ್ನತ ಜ್ಞಾನ. ಯಜ್ಞವನ್ನು ನೇರವೇರಿಸುವ ಉದ್ದೇಶ ಅವನನ್ನು ಸಾಕ್ಷಾತ್ಕಾರಗೊಳಿಸಿಕೊಳ್ಳುವುದು. ಅವನೇ ಪರಮ ಜ್ಞಾನ. ಐಹಿಕ ಸೃಷ್ಟಿಯ ಆದಿಯಲ್ಲಿ ಪರಿಪೂರ್ಣ ವ್ಯಕ್ತಿತ್ವನಾದ ವಾಸುದೇವನು ತನ್ನ ಅತಿಶಯ ಸ್ಥಿತಿಯಲ್ಲಿ ತನ್ನದೇ ಆಂತರಿಕ ಶಕ್ತಿಯ ಮೂಲಕ ಕಾರಣ ಪರಿಣಾಮ ಗಳನ್ನೊಳಗೊಂಡಂಥ ಶಕ್ತಿಯನ್ನು ಸೃಷ್ಟಿಸಿದ. ಐಹಿಕ ಗುಣಗಳನ್ನು ಸೃಷ್ಟಿಸಿದ ನಂತರ ಭಗವಂತನು ತನ್ನನ್ನೇ ವಿಸ್ತರಿಸಿಕೊಂಡು ಅವನ್ನು ಪ್ರವೇಶಿಸುತ್ತಾನೆ. ಭಗವಂತನು ಅಸ್ತಿತ್ವದಲ್ಲಿ ಅಗ್ನಿಯಂತೆ ಸರ್ವವಸ್ತುಗಳನ್ನೂ ಆವರಿಸಿಕೊಂಡಿದ್ದು, ಕಟ್ಟಿಗೆಯನ್ನು ಪ್ರವೇಶಿಸಿ ಅದ್ವಿತೀಯನಾಗಿ ಹಲವಾರು ರೂಪಗಳಲ್ಲಿ ಕಾಣಿಸಿಕೊಳ್ಳುತ್ತಾನೆ. ತನ್ನ ಸೃಷ್ಟಿಗೊಳಗಾದ ಎಲ್ಲ ದ್ರವಗಳಲ್ಲೂ ಅವನಿಗೆ ಪ್ರವೇಶವಿದೆ. ಉಪ ದೇವತೆಗಳು, ಮಾನವರು ಹಾಗೂ ಕೆಳಸ್ತರದ ಮೃಗಗಳ ಆವಾಸಸ್ಥಾನಗಳಾದ ಎಲ್ಲ ಗ್ರಹಗಳನ್ನು ಅವನು ನಡೆಸುತ್ತಾನೆ. ಈ ಅವತಾರವನ್ನು ಪಡೆದುಕೊಂಡು ಪರಿಶುದ್ಧ ಒಳಿತಿನ ವಿಧಾನದ ಮೂಲಕ ಅವನ್ನು ಪುನಃಶ್ಚೇತನಗೊಳಿಸಲು ವಿವಿಧ ಲೀಲೆಗಳನ್ನು ಪ್ರಕಟಿಸುತ್ತಾನೆ.

ಶ್ರೀ ಶುಕಾಚಾರ್ಯರು ಹೇಳುತ್ತಾರೆ : "ಸೃಷ್ಟಿಯ ಆದಿಯಲ್ಲಿ ಭಗವಂತನು ಪುರುಷ ರೂಪಕ್ಕೆ ತನ್ನನ್ನು ವಿಸ್ತರಿಸಿಕೊಂಡಿರುವುದರಿಂದಾಗಿ ಪ್ರಾರಂಭದಲ್ಲಿ ಐಹಿಕ ಕ್ರಿಯೆಯ ಹದಿನಾರು ತತ್ವಗಳು ಆರಂಭಿಸಲ್ಪಟ್ಟವು. ಇದು ಐಹಿಕ ವಿಶ್ವವನ್ನು ಸೃಷ್ಟಿಸುವ ಉದ್ದೇಶದಿಂದ ನಡೆದಂಥದ್ದು. ಅವನ ಹೊಕ್ಕಳ ಸರೋವರದಿಂದ ತಾವರೆಯ ದಂಟೊಂದು ಉಗಮಗೊಂಡು ಅದರಿಂದ ಮತ್ತು ಬೇರಿನ ಮೇಲ್ಭಾಗದಿಂದ ಸರ್ವರಿಗೂ ಒಡೆಯನಾದ ಬ್ರಹ್ಮನು ಕಾಣಿಸಿಕೊಳ್ಳುತ್ತಾನೆ. ಭಕ್ತಾದಿಗಳು ಪುರುಷನ ಅತಿಶಯ ಆಕೃತಿಯಲ್ಲಿ ಸಾವಿರ

ಪಾದಗಳು, ಸಾವಿರ ತೊಡೆಗಳು, ಸಾವಿರ ಬಾಹುಗಳು ಹಾಗೂ ಸಾವಿರ ವದನಗಳನ್ನು ಕಾಣುತ್ತಾರೆ. ಈ ಶರೀರದಲ್ಲಿ ಸಾವಿರಾರು ಶಿರಗಳು, ಕರ್ಣಗಳು, ನಯನಗಳು ಹಾಗೂ ನಾಸಿಕಗಳಿವೆ. ಅವೆಲ್ಲವೂ ಅಲಂಕೃತವಾಗಿವೆ. ಈ ಆಕೃತಿಯು ವಿಶ್ವದೊಳಗಿನ ವಿವಿಧ ಅವತಾರಗಳ ಅವಿನಾಶಿಯಾದ ಮೂಲಬೀಜವಾಗಿರುತ್ತದೆ. ಈ ಆಕೃತಿಯ ಕಣಗಳು ಹಾಗೂ ಅಂಗಗಳಿಂದ ಉಪದೇವತೆಗಳು, ಪುರುಷರು ಹಾಗೂ ಇತರ ಜೀವಿಗಳು ಸೃಷ್ಟಿಗೊಳ್ಳುತ್ತಾರೆ. ಮೊದಲಿಗೆ ಬ್ರಹ್ಮಚಾರಿಗಳಾಗಿಯೇ ಉಳಿಯ ಬಯಸಿದ ಹಾಗೂ ದೈವಸಾಕ್ಷಾತ್ಕಾರಕ್ಕಾಗಿ ತೀವ್ರ ತಪಸ್ಸುಗಳನ್ನು ಕೈಗೊಂಡ ಬ್ರಹ್ಮನ ಅವಿವಾಹಿತ ಪುತ್ರರಾದ ಕುಮಾರರು ಮಾತ್ರರಿದ್ದರು. ಭಗವಂತನ ಇಪ್ಪತ್ತೆರಡು ಅವತಾರಗಳೆಂದರೆ ಕುಮಾರ, ವರಾಹ, ನಾರದ, ನರ ನಾರಾಯಣ, ಕಪಿಲ (ಸಾಂಖ್ಯಾ), ದತ್ತಾತ್ರೇಯ (ಅತ್ರಿ ಮುನಿಯ ಪುತ್ರ), ಯಜ್ಞ (ಪ್ರಜಾಪತಿ ಋಷಿ ಮತ್ತು ಆತನ ಪತ್ನಿ ಆಕೃತಿಯ ಪುತ್ರ), ಋಷಭ, ಪೃಥು, ಮತ್ಸ್ಯ, ಕೂರ್ಮ, ಧನ್ವಂತರಿ, ಮೋಹಿನಿ, ನರಸಿಂಹ, ವಾಮನ, ಪರಶುರಾಮ, ವ್ಯಾಸದೇವ, ರಾಮ (ದಾಶರಥಿ ರಾಮ), ಬಲರಾಮ, ಕೃಷ್ಣ, ಬುದ್ಧ ಮತ್ತು ಕಲ್ಕಿ (ಆದರೆ ನಾರಾಯಣೀಯ ವ್ಯಾಖ್ಯಾನದಲ್ಲಿ ಹೇಳಿದ ದಶಾವತಾರಗಳಲ್ಲಿ ಬುದ್ಧನ ಹೆಸರು ಇರುವುದಿಲ್ಲ. ಮೊದಲಿನ ಅವತಾರವು ಹಂಸವೆಂದು ಹೇಳಿದೆ).

## ಭಾಗವತದ ಆರಂಭ

ನಿರಂತರವಾಗಿ ಉಗಮಿಸುವ ಜಲ ಮೂಲದಿಂದ ಹರಿಯುವ ತೊರೆಗಳಂತೆ ಭಗವಂತನ ಅವತಾರಗಳು ಅಸಂಖ್ಯ. ಮನುಗಳು, ಉಪದೇವತೆಗಳು ಹಾಗೂ ಮನುವಿನ ಸಂತತಿಯವರು ಭಗವಂತನ ನಿರುಪಾಧಿಕ ಭಾಗದ ಅಂಗಗಳು. ಭಗವಾನ್ ಕೃಷ್ಣನು ವರಿಷ್ಠನಾದ ಮೂಲ ವ್ಯಕ್ತಿ. ಭಗವಂತನು ಬ್ರಹ್ಮಾಂಡವನ್ನು ಸೃಷ್ಟಿಸುತ್ತಾನಲ್ಲದೆ ತಾನೇ ಅದರಿಂದ ಬಾಧಿತನಾಗದಂತೆ ಅದನ್ನು ನಿರ್ನಾಮಗೊಳಿಸುತ್ತಾನೆ. ಅವನು ಎಲ್ಲವುಗಳೊಳಗಿದ್ದರೂ ಸದಾ ಸ್ವತಂತ್ರನು. ಶ್ರೀಮದ್ಭಾಗವತವು ಭಗವಂತನ ಸಾಹಿತ್ಯಕ ಪ್ರತಿರೂಪವಾಗಿದ್ದು ದೈವಾವತಾರವಾದ ವ್ಯಾಸದೇವರಿಂದ ರಚಿಸಲ್ಪಟ್ಟಿದೆ. ಇದರ ಉದ್ದೇಶ ಎಲ್ಲ ಜನರ ಅಂತಿಮ ಒಳಿತಾಗಿದ್ದು ಸಕಲರಿಗೂ ಯಶಸ್ಸು, ಆಹ್ಲಾದತೆ ಹಾಗೂ ಪರಿಶುದ್ಧತೆಯನ್ನು ನೀಡುವುದಾಗಿದೆ. ಶ್ರೀ ವ್ಯಾಸದೇವರು ಎಲ್ಲ ವೈದಿಕ ಸಾಹಿತ್ಯಗಳು ಹಾಗೂ ವಿಶ್ವದ ಇತಿಹಾಸಗಳ ಸತ್ವವಾದ ಭಾಗವತವನ್ನು ತಮ್ಮ ಪುತ್ರ ಶುಕಾಚಾರ್ಯರಿಗೆ ಪ್ರವಚನ ಮಾಡಿದರು. ನಂತರ ಶ್ರೀ ಶುಕಾಚಾರ್ಯರು ಮಹಾನ್ ಚಕ್ರವರ್ತಿ ಪರೀಕ್ಷಿತನಿಗೆ ಇದನ್ನು ಬೋಧಿಸಿದರು. ಈ ಭಾಗವತ ಪುರಾಣವು ಸೂರ್ಯನಷ್ಟೇ ಪ್ರಕಾಶಮಾನವಾಗಿದ್ದು ಕೃಷ್ಣ ಪರಮಾತ್ಮನ ಕಣ್ಮರೆಯ ನಂತರ ಹುಟ್ಟಿಕೊಂಡಂಥದ್ದು. ಪರೀಕ್ಷಿತ ರಾಜನಿಗೆ ಶ್ರೀ ಶುಕಾಚಾರ್ಯರು ಭಾಗವತವನ್ನು ತಿಳಿಸಿಕೊಟ್ಟ ಸಂದರ್ಭದಲ್ಲಿ ಶ್ರೀ ಶೌನಕನು ಅದನ್ನು ಗಮನವಿಟ್ಟು ಆಲಿಸಿದನು. ಶ್ರೀ ಶೌನಕನು ಮುಂದುವರಿಸಿ (1) ಶ್ರೀ ವ್ಯಾಸದೇವರು ಭಾಗವತದ ರಚನೆಯನ್ನು ಏಕೆ

ಹಾಗೂ ಹೇಗೆ ಕೈಗೊಂಡರು (2) ಪರೀಕ್ಷಿತನು ಶ್ರೀ ಶುಕಾಚಾರ್ಯರನ್ನು ಭೇಟಿಯಾದ ಬಗೆ ಯಾವುದು ಹಾಗೂ (3) ಪರೀಕ್ಷಿತನು ಸಕಲವನ್ನೂ ತ್ಯಜಿಸಿ ಮೃತ್ಯುವಿಗಾಗಿ ಕಾದು ಕೂತದ್ದಕ್ಕೆ ಕಾರಣವೇನು ಮುಂತಾದ ಋಷಿಗಳ ಪ್ರಶ್ನೆಗಳಿಗೆಲ್ಲ ಉತ್ತರಿಸಿದರು.

ದ್ವಿತೀಯ ಯುಗವು ತೃತೀಯ ಯುಗದೊಂದಿಗೆ ಹೊಂದಿಕೆಯಾಗುತ್ತಿದ್ದ ಸಂದರ್ಭದಲ್ಲಿ ಮಹಾಮುನಿ ಪರಾಶರರಿಂದ ಗರ್ಭಿಣಿಯಾದ ಸತ್ಯವತಿಯು ವ್ಯಾಸದೇವರಿಗೆ ಜನ್ಮ ನೀಡಿದಳು. ಒಂದಾನೊಂದು ಕಾಲದಲ್ಲಿ ವ್ಯಾಸದೇವರು ಸರಸ್ವತಿ ನದಿಗೆ ಸಂಪ್ರೋಕ್ಷಣೆ ಮಾಡಿದ ನಂತರ ಧ್ಯಾನಮಗ್ನವಾಗಿ ಏಕಾಕಿಯಾಗಿ ಕುಳಿತಿದ್ದರು. ಆಗ ಅವರು ಯುಗದ ಕರ್ತವ್ಯಗಳಲ್ಲಿ ದೋಷಗಳನ್ನು ಕಂಡರು. ತನ್ನ ತಪಃಶಕ್ತಿಯ ಪ್ರಭಾವದಿಂದ ಐಹಿಕ ವಿಶ್ವದ ಪ್ರತಿಯೊಂದೂ ವಿನಾಶಗೊಳ್ಳುತ್ತಿರುವುದನ್ನು ಕಂಡರು. ಅವರು ವೇದಗಳನ್ನು ನಾಲ್ಕು ಭಾಗಗಳಾಗಿ ವಿಭಜಿಸಿದರು. ಅವರು ಋಗ್ವೇದವನ್ನು ಪೈಲ ಋಷಿಗೆ, ಸಾಮ ವೇದವನ್ನು ಜೈಮಿನಿಗೆ, ಯಜುರ್ವೇದವನ್ನು ವೈಶಂಪಾಯನನಿಗೆ, ಮತ್ತು ಅಥರ್ವ ವೇದವನ್ನು ಅಂಗೀರನಿಗೆ ನೀಡಿದರು. ರೋಮಹರ್ಷನಿಗೆ ಪುರಾಣಗಳನ್ನು ಹಾಗೂ ಇತಿಹಾಸ ದಾಖಲೆಗಳನ್ನು ಒಪ್ಪಿಸಲಾಯಿತು. ಈ ಮುನಿಗಳು ಅವನ್ನು ತಮ್ಮ ಶಿಷ್ಯರಿಗೆ ನೀಡಿದರು. ಈ ಎಲ್ಲ ಸಾಧನೆಗಳಿಂದಾಗಿ ಅವರ ಮನಸ್ಸಿಗೆ ತೃಪ್ತಿಯುಂಟಾಗಲಿಲ್ಲ. ಅತೃಪ್ತ ಮುನಿಯು ತಮ್ಮೆಲ್ಲ ಪ್ರಯತ್ನಗಳಿದ್ದಾಗ್ಯೂ ತಾವು ಹೃದಯದೊಳಗೆ ಅಸಂತೋಷ ಗೊಂಡಿರುವುದನ್ನು ಕಂಡುಕೊಂಡರು. ತಮ್ಮ ಕಾರ್ಯಯಾತ್ರೆ ಅಪರಿಪೂರ್ಣವೆಂಬುದಾಗಿ ಅವರಿಗೆ ಭಾಸವಾದಾಗ ಭಗವಂತನ ಭಕ್ತಿ ನಿಯಮವನ್ನು ತಾವು ನಿರ್ದಿಷ್ಟವಾಗಿ ತೋರಿಸಿಲ್ಲವೆಂಬುದಾಗಿ ಭಾವಿಸಿದರು, ಈ ಸಮಯಕ್ಕೆ ಸರಿಯಾಗಿ ಶ್ರೀ ವ್ಯಾಸದೇವರ ಆಶ್ರಮಕ್ಕೆ ನಾರದ ಮುನಿ ಭೇಟಿ ಕೊಟ್ಟಾಗ ವ್ಯಾಸದೇವರು ಅವರನ್ನು ಗೌರವಪೂರ್ವಕವಾಗಿ ಬರಮಾಡಿಕೊಂಡರು.

ನಾರದ ಮುನಿಯು ಶ್ರೀ ವ್ಯಾಸದೇವರನ್ನು "ಶರೀರ ಅಥವಾ ಮನಸ್ಸನ್ನು ಆತ್ಮ ಸಾಕ್ಷಾತ್ಕಾರದ ಗುರಿಗಳನ್ನಾಗಿ ಗುರುತಿಸುವುದರಿಂದಾಗಿ ನಿಮಗೆ ತೃಪ್ತಿಯುಂಟಾಗಿದೆಯೇ?" ಎಂಬುದಾಗಿ ಪ್ರಶ್ನಿಸಿದರು. ಅವರು ಶ್ರೀ ವ್ಯಾಸದೇವರನ್ನು ಅವರ ಉನ್ನತ ಕೃತಿಗಳಿಗಾಗಿ ಅಭಿನಂದಿಸಿದರು. ಶ್ರೀ ವ್ಯಾಸದೇವರು ತನ್ನೊಳಗೆ ಉಂಟಾಗಿರುವ ಅತೃಪ್ತಿಗೆ ಮೂಲಕಾರಣವನ್ನು ತಿಳಿದುಕೊಳ್ಳಲು ಬಯಸಿದರು. ಅವರು ನಾರದ ಮುನಿಯನ್ನು ತಮ್ಮ ದೋಷಗಳ ಬಗ್ಗೆ ವಿಚಾರಿಸಿದರು. ನಾರದ ಮುನಿಯು ಹೀಗೆಂದರು: "ನೀನು ಭಗವಂತನ ಮಹೋನ್ನತ ಹಾಗೂ ಕಳಂಕರಹಿತ ವೈಭವಗಳನ್ನು ಸರಿಯಾದ ರೀತಿಯಲ್ಲಿ ಬಿತ್ತರಿಸಿಲ್ಲ. ಭಗವಂತನ ಅತಿಶಯ ಪ್ರಜ್ಞೆಗಳನ್ನು ತೃಪ್ತಿಪಡಿಸದಂಥ ಅಧ್ಯಾತ್ಮವು ಬೆಲೆಯಿಲ್ಲದ್ದು ಎಂದು ಪರಿಣಿಸಲಾಗುತ್ತಿದೆ. ಧಾರ್ಮಿಕ ಕ್ರಿಯೆಗಳಿಂದ ಆರಂಭವಾಗುವ ನಾಲ್ಕು ತತ್ತ್ವಗಳನ್ನು ನೀನು ವಿವರಿಸಿರುವೆಯಾದರೂ ನೀನು ಭಗವಂತನ ಲೀಲೆಗಳನ್ನು ಬಣ್ಣಿಸಿಲ್ಲ". ಶ್ರೀ ವ್ಯಾಸದೇವರ ಮಹಾಭಾರತವು ಫಲಪ್ರದ ಚಟುವಟಿಕೆಗಳನ್ನು ವಿವರಿಸುವುದಿಲ್ಲ ಎಂಬ ಕಾರಣಕ್ಕಾಗಿ ನಾರದ ಮುನಿಯು ಅದಕ್ಕೆ ಅಂಗೀಕಾರವನ್ನು

ನೀಡಲಿಲ್ಲ. ಶ್ರೀ ಕೃಷ್ಣಪರಮಾತ್ಮನ ಭಕ್ತನೊಬ್ಬನು ಕೆಲವೊಮ್ಮೆ ಕೆಳಗೆ ಬಿದ್ದರೂ ಇತರರಂತೆ ಐಹಿಕ ವಿಶ್ವವನ್ನು ಹಾದು ಹೋಗಬೇಕಾಗಿಲ್ಲ ಎಂಬುದಾಗಿ ನಾರದ ಮುನಿಯು ತಿಳಿಸಿದರು. ಅವರು ಮುಂದುವರಿಸಿ ಹೀಗೇಂದರು : "ಶ್ರೇಷ್ಠನಾದ ಭಗವಂತನೇ ವಿಶ್ವವಾಗಿದ್ದರೂ ಅವನೇ ಅದರಿಂದ ದೂರವಾಗಿ ಉಳಿದಿದ್ದಾನೆ. ಅವನಿಂದಲೇ ವಿಶ್ವವು ಪ್ರಕಟಗೊಂಡಿದ್ದು ಅದು ಅವನಲ್ಲೇ ಉಳಿಯುತ್ತದೆ. ಬಿಡುಗಡೆಯಾದ ನಂತರ ಅವನೊಳಗೇ ಪ್ರವೇಶಿಸುತ್ತದೆ. ಅದ್ದರಿಂದ ನಾರದ ಮುನಿಯು ವ್ಯಾಸದೇವರಿಗೆ ಶ್ರೇಷ್ಠನಾದ ಶ್ರೀ ಕೃಷ್ಣಪರಮಾತ್ಮನ ಅತಿಶಯ ಚಟುವಟಿಕೆಗಳನ್ನು ವಿವರಿಸುವಂತೆ ವಿನಂತಿಸಿಕೊಂಡರು.

## ನಾರದರ ಉಗಮ

ಅ ನಂತರ ನಾರದರು ತಮ್ಮದೇ ಪೂರ್ವ ಜನ್ಮವನ್ನು ಸ್ಮರಿಸಿಕೊಂಡರು.

ವೇದಾಂತ ತತ್ವಗಳನ್ನು ಅನುಸರಿಸುತ್ತಿದ್ದ ಬ್ರಾಹ್ಮಣರಿಗೆ ಸೇವೆ ಸಲ್ಲಿಸುವಲ್ಲಿ ತೊಡಗಿದ್ದ ಸೇವಕಿಯೊಬ್ಬಳ ಮಗ ಅವರಾಗಿದ್ದು ವರ್ಷದಲ್ಲಿ ನಾಲ್ಕು ತಿಂಗಳುಗಳ ಕಾಲ ಅವರು ಋಷಿಗಳ ಸೇವೆಯಲ್ಲಿ ತೊಡಗಿದ್ದರು. ಆ ಬ್ರಾಹ್ಮಣರು ಅವರ ಬಗ್ಗೆ ಕರುಣೆ ತೋರಿ ಅವರನ್ನು ಆಶೀರ್ವದಿಸಿದರು. ಒಮ್ಮೆ ಅವರ ಅನುಮತಿ ಪಡೆದು ಅವರು ತಿಂದುಳಿದ ಆಹಾರವನ್ನು ಭುಜಿಸಿದ್ದರಿಂದ ಅವರ ಪಾಪಗಳೆಲ್ಲವೂ ಪರಿಹಾರಗೊಂಡವು. ಹೀಗೆ ಅವರು ಹೃದಯದಲ್ಲಿ ಪರಿಶುದ್ಧಗೊಂಡಾಗ ಅವರಿಗೆ ಅತಿಶಯನಾದ ಭಗವಂತನು ಆಕರ್ಷಕನೆನ್ನಿಸಿದನು. ಆ ಬ್ರಾಹ್ಮಣರ ಮೂಲಕ ಅವರು ಶ್ರೀ ಕೃಷ್ಣ ಪರಮಾತ್ಮನ ಚಟುವಟಿಕೆಗಳನ್ನು ಕೇಳುತ್ತಿದ್ದಂತೆ ಅವರ ಅಭಿರುಚಿಯು ಹೆಚ್ಚಿತು. ಬ್ರಾಹ್ಮಣರು ಆ ಸ್ಥಳದಿಂದ ಇನ್ನೇನು ಹೊರಡಲಿದ್ದಾಗ ಭಗವಂತನೇ ಅವರಿಗೆ ಆ ಮೊದಲು ನೀಡಿದ್ದ ಗೋಪ್ಯ ವಿಷಯವನ್ನು ಅವರಿಗೆ ಭೋಧಿಸಿದನು. ಇದು ನಾರದರಿಗೆ ಭಗವಂತನ ಶಕ್ತಿಯ ಪ್ರಭಾವವನ್ನು ಅರಿತುಕೊಳ್ಳುವಲ್ಲಿ ನೆರವಾಯಿತು. ಈ ಜ್ಞಾನದಿಂದಾಗಿ ಯಾರಾದರೂ ಭಗವಂತನ ಬಳಿಗೇ ಹಿಂತಿರುಗಿದರೆ ಅವನನ್ನು ಸ್ವತಃ ಭೇಟಿಯಾಗಬಹುದು. ಎಲ್ಲ ಕಷ್ಟ ಹಾಗೂ ದುಃಖಗಳನ್ನು ನಿರ್ಮೂಲ ಮಾಡಬಲ್ಲಂಥ ಅತ್ಯುತ್ತಮ ನಿವಾರಣಾ ಕ್ರಮವೆಂದರೆ ಒಬ್ಬರು ತಮ್ಮ ಚಟುವಟಿಕೆಗಳನ್ನು ಭಗವಂತನ ಸೇವೆಗಾಗಿ ಮುಡಿಪಾಗಿಡುವುದು ಎಂಬುದಾಗಿ ಪ್ರಾಜ್ಞರು ನಿರ್ಧರಿಸಿದರು. ಭಗವಂತನ ಧ್ಯೇಯಗಳನ್ನು ಸಂತೃಪ್ತ ಪಡಿಸಲು ಮಾಡಿದ ಎಲ್ಲವನ್ನೂ "ಭಕ್ತಿಯೋಗ" ವೆಂದು ಕರೆಯಲಾಯಿತು. ನಾರದ ಮುನಿಗೆ ವೇದಗಳಲ್ಲಿ ಪ್ರಕಟಗೊಂಡಂಥ ಅತಿಶಯ ಜ್ಞಾನವೆಲ್ಲವನ್ನೂ ತಿಳಿಸಿಕೊಡಲಾಯಿತು.

ಆದ್ದರಿಂದ ನಾರದ ಮುನಿಯು ಶ್ರೀ ವ್ಯಾಸದೇವರಿಗೆ "ಪ್ರಾಜ್ಞರ ಸಂದೇಹಗಳನ್ನು ತೃಪ್ತಿಪಡಿಸಿ ಅದೇ ಕಾಲಕ್ಕೆ ಸದಾ ಕಾಲವೂ ಐಹಿಕ ಕಳವಳಗಳಿಂದ ಕಷ್ಟಗಳನ್ನು ಅನುಭವಿಸುತ್ತಿರುವ ಸಾಮಾನ್ಯ ಜನಸಮೂಹದ ಸಂಕಷ್ಟಗಳನ್ನು ನಿವಾರಿಸುವ ಸಲುವಾಗಿ

ಅವನು ವೇದಗಳ ಮೂಲಕ ಅರಿತಿರುವ ಭಗವಂತನ ಚಟುವಟಿಕೆಗಳನ್ನು ವಿವರಿಸುವಂತೆ" ವಿನಂತಿಸಿಕೊಂಡನು.

ನಾರದ ಮುನಿಯು ತನ್ನ ತಾಯಿಯು ಸರ್ಪದ ಕಡಿತದಿಂದ ಮರಣ ಹೊಂದಿದಾಗ ಭೂಮಿಯ ಮೇಲೆಲ್ಲ ಅಲೆದಾಡಿದರು. ನಂತರ ಪ್ರಯಾಣದಿಂದ ಆಯಾಸಗೊಂಡಾಗ ಅಂತರ್ಯದಲ್ಲಿ ವಾಸವಾಗಿರುವ ಭಗವಂತನನ್ನು ಧ್ಯಾನಿಸಲು ಉದ್ಯುಕ್ತರಾದಾಗ ಶ್ರೀ ಕೃಷ್ಣ ಪರಮಾತ್ಮನು ಅವರ ಹೃದಯ ಕಮಲದಲ್ಲಿ ಕಾಣಿಸಿಕೊಂಡನು. ಉತ್ತುಂಗ ಸಾಗರದಲ್ಲಿ ಮುಳುಗಿ ಹೋದ ಅವರಿಗೆ ತನ್ನನ್ನಾಗಲಿ ಅಥವಾ ಭಗವಂತನನ್ನಾಗಲಿ ಕಾಣಲು ಸಾಧ್ಯವಾಗಲೇ ಇಲ್ಲ. ಅನಂತರ ಭಗವಂತನೇ ಅವರೊಂದಿಗೆ ಸಂಭಾಷಿಸಿದ. "ನೀನು ಈ ಜನ್ಮದಲ್ಲಿ ನನ್ನನ್ನೆಂದೂ ಕಾಣಲು ಸಾಧ್ಯವಿಲ್ಲವೆಂಬ ಬಗ್ಗೆ ನನಗೆ ವಿಷಾದವಿದೆ. ಸೇವೆಯನ್ನು ಅಪೂರ್ಣವಾಗಿಯೇ ಉಳಿಸಿಕೊಂಡವರು ಮತ್ತು ಎಲ್ಲ ಐಹಿಕ ಮಾಲಿನ್ಯಗಳಿಂದ ಸಂಪೂರ್ಣವಾಗಿ ಸ್ವತಂತ್ರರಾಗದಿರುವವರು ನನ್ನನ್ನು ಕಾಣುವುದು ಕಷ್ಟ". ಭಗವಂತನು ಮುಂದೆ ಹೇಳಿದನು: "ನೀನು ನನ್ನನ್ನು ಒಂದೇ ಒಂದು ಬಾರಿ ಕಂಡಿದ್ದು ಇದನ್ನು ಸಾಧ್ಯ ಮಾಡಿಕೊಟ್ಟ ಉದ್ದೇಶ ನನ್ನ ಬಗ್ಗೆ ನಿನ್ನ ಆಸೆಯನ್ನು ಹೆಚ್ಚಿಸುವುದು. ನೀನು ನನಗಾಗಿ ಪರಿತಪಿಸುವುದು ಹೆಚ್ಚಾದಂತೆಲ್ಲ ನೀನು ಐಹಿಕ ಬಯಕೆಗಳಿಂದ ಹೆಚ್ಚೆಚ್ಚು ಸ್ವತಂತ್ರನಾಗುತ್ತೀಯೆ". ಅನಂತರ ಮೊದಲ ಜನ್ಮದಲ್ಲಿ ನಾರದ ಮುನಿಯು ಸಾವಿಗೀಡಾದರು.

ನಾರದ ಮುನಿಯು ಮುಂದೆ ಹೇಳಿದರು : "ಈ ಯುಗದ ಅಂತ್ಯದಲ್ಲಿ ದೇವಪ್ರಮುಖನು ವಿನಾಶವನ್ನುಂಟು ಮಾಡುವ ಸಾಗರದೊಳಗೆ ಮಲಗಿದಾಗ ಬ್ರಹ್ಮನು ಎಲ್ಲ ಕ್ರಿಯಾತ್ಮಕ ಮೂಲಾಂಶಗಳೊಂದಿಗೆ ಅವನನ್ನು ಪ್ರವೇಶಿಸಲು ಪ್ರಾರಂಭಿಸಿದ ಸಂದರ್ಭದಲ್ಲಿ ನಾನೂ ಅವನ ಉಸಿರಾಟದೊಂದಿಗೆ ಪ್ರವೇಶ ಮಾಡಿದೆ". ಪರಮಾತ್ಮನ ಇಚ್ಛೆಗೆ ಅನುಗುಣವಾಗಿ ಬ್ರಹ್ಮನು ಮರೀಚಿ, ಅಂಗೀರ, ಅತ್ರಿ ಮೊದಲಾದ ಋಷಿಗಳನ್ನು ಸೃಷ್ಟಿಸುವ ಸಲುವಾಗಿ ಎಚ್ಚರಗೊಂಡಾಗ ಅವರೊಂದಿಗೇ ಪರಮಾತ್ಮನ ಅತಿಶಯ ಶರೀರವೇ ಅಲ್ಲದೆ ನಾರದ ಮುನಿಯೂ ಕಾಣಿಸಿಕೊಂಡರು. ಆಗಿನಿಂದಲೂ ನಾರದ ಮುನಿಯು ಪರಮಾತ್ಮನ ಕೃಪೆಯಿಂದ ಯಾವ ನಿರ್ಬಂಧಗಳೂ ಇಲ್ಲದೆ ಎಲ್ಲೆಡೆಗಳಲ್ಲೂ ಸಂಚರಿಸುತ್ತಿದ್ದಾರೆ. ನಾರದ ಮುನಿಯು ಭಗವಂತನಿಗೆ ನಿರಂತರವಾಗಿ ಭಕ್ತಿ ಪೂರ್ವಕ ಸೇವೆಯನ್ನು ಸಲ್ಲಿಸಿದ್ದೇ ಇದಕ್ಕೆ ಕಾರಣ. ನಾರದ ಮುನಿಯು ಅನಂತರ ಶ್ರೀ ವ್ಯಾಸದೇವರನ್ನು ಬೀಳ್ಕೊಟ್ಟರು.

ನಾರದ ಮುನಿಯ ನಿರ್ಗಮನದ ನಂತರ ಶ್ರೀ ವ್ಯಾಸದೇವರು ಏನು ಮಾಡಿದರೆಂದು ಶೌನಕನು ಸೂತನನ್ನು ಕೇಳಿದನು. ಅವರು ಹೀಗೆ ಹೇಳಿದನು : "ವೇದಗಳೊಂದಿಗೆ ನಿಕಟ ಸಂಬಂಧವನ್ನು ಹೊಂದಿರುವ ಸರಸ್ವತಿ ನದಿಯ ಪಶ್ಚಿಮ ಕರಾವಳಿಯಲ್ಲಿ ಮುನಿಗಳ ಧ್ಯಾನ ಚಟುವಟಿಕೆಗಳನ್ನು ಅತಿಶಯ ರೀತಿಯಲ್ಲಿ ಜೀವಂತವಾಗಿಡುವ ಸಮ್ಯಪ್ರಾಸದಲ್ಲಿ ಧ್ಯಾನವನ್ನು ಕೈಗೊಳ್ಳುವ ಸಲುವಾಗಿ ಶ್ರೀ ವ್ಯಾಸದೇವರು ಕುಟೀರಕ್ಕೆ ಹೊರಟರು. ಆ ಸ್ಥಳದಲ್ಲಿ ಶ್ರೀ ವ್ಯಾಸದೇವರು ತನ್ನನ್ನು ಶುಚಿಗೊಳಿಸಿಕೊಳ್ಳುವ ಸಲುವಾಗಿ ನೀರನ್ನು

ಸ್ಪರ್ಶಿಸಿ ಧ್ಯಾನಮಗ್ನರಾದರು. ಅವರು ಭಕ್ತಿಪೂರ್ವಕ ಸೇವೆಯಲ್ಲಿ ತದೇಕಚಿತ್ತರಾಗಿದ್ದಾಗ (ಭಕ್ತಿಯೋಗ) ನಿಯಂತ್ರಣಗೊಂಡಿದ್ದ ಶಕ್ತಿಯಲ್ಲಿ ಭಗವಂತನನ್ನು ಕಂಡರು. (ಈ ಕುಟೀರವು ಪ್ರಾಯಶಃ ಇಂದಿಗೂ ಟಿಬೆಟ್, ಭಾರತ ಸರಹದ್ದಿನಲ್ಲಿ ಬದರೀಕಾಶ್ರಮದ ಬಳಿಯಿರುವ "ವ್ಯಾಸಗುಹೆ".)

ಈ ಮಹಾ ಮುನಿಯು ಶ್ರೀಮದ್ಭಾಗವತವನ್ನು ಬರೆದು ಅದನ್ನು ಪರಿಷ್ಕರಿಸಿದ ನಂತರ ಅಷ್ಟು ಹೊತ್ತಿಗಾಗಲೇ ಆತ್ಮಸಾಕ್ಷಾತ್ಕಾರದಲ್ಲಿ ನಿರತರಾಗಿದ್ದ ತನ್ನ ಸ್ವಂತ ಮಗ ಶ್ರೀ ಶುಕಾಚಾರ್ಯರಿಗೆ ಅದನ್ನು ಬೋಧಿಸಿದರು.

## ಮಹಾಭಾರತ ಯುದ್ಧದ ಕೊನೆ

ಶ್ರೀ ಶುಕಾಚಾರ್ಯರು ಶೌನಕನ ನೇತೃತ್ವದಲ್ಲಿದ್ದ ಋಷಿಗಳನ್ನು ಈ ರೀತಿ ಸಂಭೋಧಿಸಿದರು : "ಈಗ ಭಗವಾನ್ ಶ್ರೀ ಕೃಷ್ಣನ ಅತಿಶಯ ಉಲ್ಲೇಖ ಹಾಗೂ ಜನನ, ದೊರೆಯಾಗಿದ್ದೂ ಋಷಿ ಸದೃಶನಾಗಿದ್ದ ಪರೀಕ್ಷಿತ ಮಹಾರಾಜನ ಕಾರ್ಯಗಳು ಹಾಗೂ ಪಾಂಡುವಿನ ಮಕ್ಕಳ ಐಹಿಕ ತ್ಯಾಗವನ್ನು ಕುರಿತ ವಿಷಯಗಳು ಪ್ರಾರಂಭವಾಗುತ್ತವೆ."

ದುರ್ಯೋದನನು ತೀವ್ರವಾಗಿ ಗಾಯಗೊಂಡು ಕುರುಕ್ಷೇತ್ರದ ರಣರಂಗದಲ್ಲಿ ಮಲಗಿದ್ದಾಗ ಪಾಂಡವರನ್ನು ಸಂಹರಿಸುತ್ತೇನೆಂದು ವಚನವನ್ನು ಕೈಗೊಂಡ ಅಶ್ವತ್ಥಾಮನು ತಪ್ಪು ತಿಳಿವಳಿಕೆಯಿಂದ ಪಾಂಡವರ ಮಕ್ಕಳನ್ನು, ಅಂದರೆ ಉಪ ಪಾಂಡವರ ಶಿರಗಳನ್ನು ತುಂಡರಿಸಿ, ತಾನು ತನ್ನ ವಾಗ್ದಾನವನ್ನು ಪೂರೈಸಿದ್ದೇನೆಂದು ತಿಳಿಸಲೋಸಗ ಅವರ ರುಂಡಗಳನ್ನು ದುರ್ಯೋದನನ ಬಳಿಗೆ ತಂದನು. ಆದರೆ ಆ ಶಿರಗಳು ಪಾಂಡವರ ಪುತ್ರರದ್ದಾಗಿದ್ದರಿಂದ ದುರ್ಯೋದನನಿಗೆ ಸಂತೋಷವಾಗಲಿಲ್ಲ.

ಇತ್ತ ದ್ರೌಪದಿಯು ತನ್ನ ಕುವರರ ಸಾವಿನಿಂದ ಶೋಕಿಸುತ್ತಿದ್ದಾಗ ಅರ್ಜುನನು ಅವಳಿಗೆ ಅಶ್ವತ್ಥಾಮನನ್ನು ಕೊಲ್ಲುತ್ತೇನೆಂದು ಭರವಸೆ ನೀಡಿದ. ಅರ್ಜುನನು ಅಶ್ವತ್ಥಾಮನನ್ನು ಅಟ್ಟಿಸಿಕೊಂಡು ಹೋಗಿ ಅವನು ಮುಂದೆ ಓಡಲಾರದಾದಾಗ ಅರ್ಜುನನ ಮೇಲೆ ಅಶ್ವತ್ಥಾಮನು ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿದ.

ಆ ಸಮಯದಲ್ಲಿ ಎಲ್ಲ ದಿಕ್ಕುಗಳಲ್ಲೂ ಪ್ರಖರವಾದ ಜ್ವಾಲೆಯೊಂದು ಹರಡಿಕೊಂಡಿತು. ಅದು ಎಷ್ಟು ತೀಕ್ಷ್ಣವಾಗಿತ್ತೆಂದರೆ ತನ್ನ ಪ್ರಾಣವೇ ಅಪಾಯದಲ್ಲಿದೆ ಎಂದು ಬಗೆದ ಅರ್ಜುನನು ಶ್ರೀ ಕೃಷ್ಣ ಪರಮಾತ್ಮನನ್ನು ಪ್ರಾರ್ಥಿಸಿ ನೆರವನ್ನು ಕೋರಿದ. ಭಗವಂತನು ಅರ್ಜುನನಿಗೂ ಬ್ರಹ್ಮಾಸ್ತ್ರವನ್ನು ಹೂಡುವಂತೆ ತಿಳಿಸಿದ. ಎರಡು ಬ್ರಹ್ಮಾಸ್ತ್ರಗಳೂ ಸಮ್ಮಿಲನಗೊಂಡಾಗ ಸೂರ್ಯನ ತಟ್ಟೆಯೋಪಾದಿಯಲ್ಲಿ ಬೆಂಕಿಯ ಒಂದು ದೊಡ್ಡ ವೃತ್ತವು ಹೊರವಲಯ ಹಾಗೂ ಗಗನ ಮಂಡಲವನ್ನು ಆವರಿಸಿಕೊಂಡಿತು. "ಮೂರು ಲೋಕಗಳ ಜನಸ್ತೋಮ ಈ ಅಸ್ತ್ರಗಳ ಸೇರ್ಪಡೆಯಿಂದ ಉಂಟಾದ ಶಾಖದಿಂದ ತತ್ತರಿಸಿದರು". "ನಿರ್ನಾಮದ ಸಂದರ್ಭದಲ್ಲಿ ಸಂಭವಿಸುವಂಥ "ಸಂವರ್ತಕ"

ಅಗ್ನಿಯ ನೆನಪು ಎಲ್ಲರಲ್ಲೂ ಉಂಟಾಯಿತು". ಅಶ್ವತ್ಥಾಮನನ್ನು ಬಂಧಿಸಿ ದ್ರೌಪದಿಯ ಬಳಿಗೆ ಕರೆತಂದಾಗ ತನ್ನ ಮೇಲೆ ಕರುಣೆ ತೋರಿ ಬಿಡುಗಡೆ ಮಾಡಬೇಕೆಂದು ಅವನು ಅಂಗಲಾಚಿದ. ಅರ್ಜುನನು ಅಶ್ವತ್ಥಾಮನ ಕೇಶವನ್ನು ಹಾಗೂ ಅವನ ಹಣೆಯಲ್ಲಿದ್ದ "ಮಣಿ"ಯನ್ನು ತೆಗೆದು ಚಿರಂಜೀವಿಯಾಗಿದ್ದ ಅವನಿಗೆ ಅಲೆದಾಡಲು ಅವಕಾಶ ನೀಡಿದ.

(ಪ್ರಸಿದ್ದ ಸೋವಿಯತ್ ವಿದ್ವಾಂಸರೊಬ್ಬರ ಪುಸ್ತಕದಲ್ಲಿ ಪ್ರಕಟವಾಗಿರುವಂತೆ ವಿಜ್ಞಾನಿಗಳೂ ಸಹ "ಬ್ರಹ್ಮಾಸ್ತ್ರ" ಒಂದು ಕಟ್ಟು ಕಥೆಯಲ್ಲ ಎಂಬುದನ್ನು ಒಪ್ಪಿದ್ದಾರೆ. ಎ. ಎ. ಗೋರ್ಬೋವಸ್ಕಿಯೆಂಬುವರು ತಮ್ಮ "ಬುಕ್ ಆಫ್ ಹೈಪಾಥಿಸಿಸ್" ಎಂಬ ಗ್ರಂಥದಲ್ಲಿ "ಬ್ರಹ್ಮಾಸ್ತ್ರವೆಂಬುದು ಕಟ್ಟು ಕಥೆಯಲ್ಲ. ಒಮ್ಮೆ ಭೂಮಿಯ ಮೇಲೆ ವಾಸವಾಗಿದ್ದ ಅತ್ಯುನ್ನತವಾಗಿ ಅಭಿವೃದ್ಧಿ ಹೊಂದಿದ್ದ "ಪ್ರೋಟೊ ನಾಗರಿಕತೆಯಲ್ಲಿ" ಇದನ್ನು ಉಪಯೋಗಿಸಿರಬಹುದಾದ ಸಾಧ್ಯತೆಯಿದ್ದು ಕಾಲಕ್ರಮದಲ್ಲಿ ಇದು ತೊರೆದು ಹೋಗಿರಬಹುದು" ಎನ್ನುತ್ತಾರೆ. ಮಹಾಭಾರತದಿಂದ ಸವಿಸ್ತಾರವಾಗಿ ಉಲ್ಲೇಖಿಸುವ ಡಾ. ಗೊರ್ಬೋವಸ್ಕಿ ತಮ್ಮ ಸಿದ್ಧಾಂತವನ್ನು ಪುಷ್ಟೀಕರಿಸುತ್ತ ಪ್ರಾಚೀನ ಭಾರತದಲ್ಲಿ ಅಣ್ವಾಸ್ತ್ರಗಳು ತಿಳಿಯದಿದ್ದಂಥದ್ದೇನಿಲ್ಲ ಎಂದು ಹೇಳಿ ಅಸ್ತ್ರವನ್ನು ಪ್ರಯೋಗಿಸುವ ಮೂಲಕ ಉಂಟಾದ ವಿನಾಶಕಾರಿ ಶಾಖಗಳ ಬಗ್ಗೆ ಪ್ರಸ್ತಾಪಿಸುತ್ತಾರೆ. ನಾಲ್ಕು ಸಾವಿರ ವರ್ಷಗಳ ಕೆಳಗೆ ಸಾವಿಗೀಡಾದ ಮಾನವನೊಬ್ಬನ ಅಸ್ಥಿಪಂಜರದಲ್ಲಿ ಸಾಮಾನ್ಯ ಮಟ್ಟಕ್ಕಿಂತಲೂ ಹೆಚ್ಚಾಗಿ ವಿಕಿರಣದ ವಿದ್ಯುನ್ಮಾಪಕ ಕ್ರಿಯೆ ಇದ್ದುದ್ದನ್ನು ಗುರುತಿಸಲಾಯಿತು ಎಂದಿದ್ದಾರೆ. "ದುರದೃಷ್ಟವಶಾತ್ ನಮ್ಮ ಅಣ್ವಸ್ತ್ರ ಯುಗದಲ್ಲಿ ಬ್ರಹ್ಮಾಸ್ತ್ರ ಸ್ಫೋಟಗೊಳ್ಳುವುದನ್ನು ಕುರಿತ ವಿವರಣೆ ಉತ್ಪ್ರೇಕ್ಷೆಯಂತೆ ಭಾಸವಾಗುವುದಿಲ್ಲ" ಅವರು ಮುಂದುವರೆದು, "ಧೂಮರಹಿತ ಅಗ್ನಿಯನ್ನು ಹೊಂದಿದ್ದು ಉರಿಯುತ್ತಿರುವ ನಕ್ಷೆಯೊಂದನ್ನು ಬಿಡುಗಡೆ ಮಾಡಲಾಯಿತು. ವೃತ್ತದ ಎಲ್ಲ ಬದಿಗಳೂ ಕತ್ತಲೆಯಿಂದ ಆವರಿಸಲ್ಪಟ್ಟವು", "ಪಂಚಭೂತಗಳೆಲ್ಲವೂ ಗೊಂದಲಗೊಂಡಂತೆ ತೋರಿದವು. ಸೂರ್ಯ ತಿರುಗುತ್ತಿರುವಂತೆ ಭಾಸವಾಯಿತು. ಭೂ ಮಂಡಲವೇ ಶಬ್ಧದಿಂದ ಅವೃತವಾಯಿತು. ಭೀಕರ ಜ್ವರವನ್ನು ಅನುಭವಿಸುತ್ತಿರುವಂತೆ ತೋರಿತು". "ಸಮಕಾಲದ" ಅಣ್ವಾಸ್ತ್ರಗಳೊಂದಿಗಿನ ಹೋಲಿಕೆ ಸ್ಪಷ್ಟವಾಗಿದೆ. ಇಡೀ ಜನಸಂಖ್ಯೆಯನ್ನು ಕುಗ್ಗಿಸಲು ರೂಪುಗೊಂಡಿರುವ ಅಸ್ತ್ರವು ಜನರನ್ನು ಭಸ್ಮಗೊಳಿಸುತ್ತದೆ. ಈ ಅಸ್ತ್ರದ ಬಳಕೆಯಿಂದಾಗಿ ಜೀವಿಗಳ ವಿನಾಶವಾಗುತ್ತದೆ. ಬದುಕುಳಿದವರು ತಮ್ಮ ಕೂದಲು, ಉಗುರಗಳನ್ನು ಕಳೆದುಕೊಂಡು ಅವರ ಆಹಾರವು ಮುಂದೆ ಅನೇಕ ವರ್ಷಗಳ ಕಾಲ ತಿನ್ನಲು ಅನರ್ಹವೆನ್ನಿಸುತ್ತದೆ. ಸೂರ್ಯ ಹಾಗೂ ಆಕಾಶ ಮೋಡಗಳಿಂದ ಹಾಗೂ ಪ್ರತಿಕೂಲ ಹವೆಯಿಂದ ತುಂಬಿಕೊಳ್ಳುತ್ತದೆ ಎಂದು ವಿದ್ವಾಂಸರು ಎನ್ನುತ್ತಾರೆ. ಪುರಾಣಗಳು ಹಾಗೂ ಧಾರ್ಮಿಕ ಗ್ರಂಥಗಳಲ್ಲಿ ನೀಡಲಾಗಿರುವ ವಿವರಣೆಯನ್ವಯ ಈ ಅಸ್ತ್ರವನ್ನು ಭಾರತದಲ್ಲಿ "ಬ್ರಹ್ಮಾಸ್ತ್ರ"ವೆಂದೂ, ದಕ್ಷಿಣ ಆಫ್ರಿಕಾದಲ್ಲಿ "ಮಾಷ್ಮಾಕ್" ಎಂದೂ ಕರೆಯಲಾಗಿದ್ದು ಜಗತ್ತಿನ ವಿನಾಶದ ಸಂದರ್ಭದಲ್ಲಿ ಅದು ಪ್ರಪಂಚವನ್ನು ಆವರಿಸಿಕೊಳ್ಳುತ್ತದೆ. "ಸಮರಾಂಗಣ ಸೂತ್ರಧಾರ" ಎಂಬ ಸಂಸ್ಕೃತ

ಪದ್ಯವನ್ನು ಉಲ್ಲೇಖಿಸಿರುವ ಡಾ. ಗೋರ್ಬೊಸ್ಕಿಯವರು ಹಾರಾಡುವ ನೌಕೆಗಳನ್ನು ನಿರ್ಮಿಸುವ ತಿಳಿವಳಿಕೆಯನ್ನು ಪ್ರಾಚೀನರು ಪಡೆದಿದ್ದರು. ಆದರೆ "ತಿಳಿವಳಿಕೆ ಇಲ್ಲದವರ ಕೈಗೆ" ಅದು ಸಿಗುವುದನ್ನು ತಪ್ಪಿಸುವ ಉದ್ದೇಶದಿಂದ ಅದನ್ನು ರಹಸ್ಯವಾಗಿಡಲಾಯಿತು, ಎಂದು ಅವರು ಅಭಿಪ್ರಾಯ ಪಟ್ಟಿದ್ದಾರೆ.)

ಅನಂತರ ಪಾಂಡವರು ಯುದ್ಧದಲ್ಲಿ ಮಡಿದ ತಮ್ಮ ಬಂಧುಗಳಿಗೆ ತರ್ಪಣವನ್ನು ನೀಡುವ ಸಲುವಾಗಿ ಗಂಗಾನದಿಯ ದಂಡೆಗೆ ಹೊರಟಾಗ ದ್ರೌಪದಿಯೂ ಅವರನ್ನು ಹಿಂಬಾಲಿಸಿದಳು.

ಶ್ರೀ ಕೃಷ್ಣ ಪರಮಾತ್ಮನು ದುಃಖಿಸುತ್ತಿದ್ದ ಪಾಂಡವರನ್ನು ಸಮಾಧಾನ ಪಡಿಸಿ ತಾನು ದ್ವಾರಕೆಗೆ ಹಿಂತಿರುಗಲು ಸಿದ್ಧತೆಯನ್ನು ನಡೆಸಿದನು. ಅವನು ಅವರೊಂದಿಗೆ ಶುಭಕಾಮನೆಗಳನ್ನು ಹಂಚಿಕೊಂಡನು. ಅವನು ಇನ್ನೇನು ಹೊರಡಲಿದ್ದಾಗ ಭಯವೃತಳಾದ ಉತ್ತರೆಯು ತನ್ನತ್ತ ಧಾವಿಸುತ್ತಿರುವುದು ಅವನಿಗೆ ಕಂಡಿತು. ಅಶ್ವತ್ಥಾಮನು ಹೂಡಿದ್ದ "ಬ್ರಹ್ಮಾಸ್ತ್ರ" ಅವಳ ಗರ್ಭದಲ್ಲಿದ್ದ ಶಿಶುವನ್ನು ಕೊಲ್ಲಲು ಉದ್ಯುಕ್ತವಾದ್ದರಿಂದ ತನ್ನನ್ನು ಸಾವಿನಿಂದ ತಪ್ಪಿಸಬೇಕೆಂದು ಅವಳು ಭಗವಂತನನ್ನು ಕೇಳಿಕೊಂಡಳು. ಅವಳು ಅವನನ್ನು ಹಲವಾರು ರೀತಿಗಳಲ್ಲಿ ಕೊಂಡಾಡಿ ರಕ್ಷಣೆಯನ್ನು ಕೋರಿದಳು. ಆಗ ಭಗವಂತನಿಗೆ ಅಶ್ವತ್ಥಾಮನು ಪಾಂಡವರ ಸಂತತಿಯ ಕಟ್ಟ ಕಡೆಯ ಜೀವವನ್ನು ಸಂಹರಿಸುವ ಸಲುವಾಗಿ ಬ್ರಹ್ಮಾಸ್ತ್ರವನ್ನು ಪುನಃ ಪ್ರಯೋಗ ಮಾಡಿದ್ದನೆಂದು ತಿಳಿಯಿತು.

ಉತ್ತರೆಯನ್ನು ಅಟ್ಟಿಸಿಕೊಂಡು ಹೋಗುತ್ತಿದ್ದ ಬ್ರಹ್ಮಾಸ್ತ್ರವನ್ನು ಕಂಡ ಪಂಚ ಪಾಂಡವರು ತಮ್ಮ ತಮ್ಮ ಆಯುಧಗಳನ್ನು ತೆಗೆದುಕೊಂಡರು. ಕುರು ಸಂತತಿಯನ್ನು ಉಳಿಸುವ ಸಲುವಾಗಿ ಭಗವಂತನು ಉತ್ತರೆಯನ್ನು ಕಾಪಾಡಲು ಉದ್ದೇಶಿಸಿ ಸುದರ್ಶನ ಚಕ್ರವನ್ನು ಕೈಗೆತ್ತಿಕೊಂಡು ತನ್ನ ಸ್ವಯಂ ಶಕ್ತಿಯಿಂದ ಅವಳ ಗರ್ಭವನ್ನು ಪ್ರವೇಶಿಸಿ ಬ್ರಹ್ಮಾಸ್ತ್ರದ ಪರಿಣಾಮವನ್ನು ತಟಸ್ಥವಾಗಿಸಿದನು. ಸಂತತಿಯು ಉಳಿದದ್ದನ್ನು ಕಂಡ ಕುಂತಿಯು ಭಗವಂತನನ್ನು ಕೊಂಡಾಡಿದಳು. ಅವಳು ಪ್ರಾರ್ಥನೆಯನ್ನು ಸಲ್ಲಿಸಿದಳಲ್ಲದೆ ಪಾಂಡವರಿಗೆ ಅವರ ಜೀವನದುದ್ದಕ್ಕೂ ಭಗವಂತನು ತೋರಿದ ಹಲವಾರು ಕರುಣೆಗಳನ್ನು ಸ್ಮರಿಸಿದಳು. ಅವಳೆಂದಳು: "ನನ್ನ ಪ್ರಿಯ ಕೃಷ್ಣ, ಮಹಾಮಹಿಮನಾದ ನೀನು ವಿಷಾಹಾರದಿಂದ, ಭೀಕರ ಬೆಂಕಿಯಿಂದ, ನರಭಕ್ಷಕರಿಂದ, ದುಷ್ಟಕೂಟದಿಂದ ಹಾಗೂ ಉನ್ನತ ಸೇನಾನಿಗಳು ಪಾಲ್ಗೊಂಡಿದ್ದ ಯುದ್ಧಗಳಲ್ಲಿ ನಮ್ಮನ್ನು ರಕ್ಷಿಸಿದೆ. ಈಗ ನೀನು ಅಶ್ವತ್ಥಾಮನ ಅಸ್ತ್ರದಿಂದ ನಮ್ಮನ್ನು ಕಾಪಾಡಿದೆ". ಭಗವಂತನ ಅಸ್ತಿತ್ವದ ಬಗ್ಗೆ ಆಶ್ವಾಸನೆ ದೊರಕಿಸಿಕೊಳ್ಳುವ ಸಲುವಾಗಿ ಆ ಸಂಕಷ್ಟಗಳೆಲ್ಲ ಮತ್ತೆ ಸಂಭವಿಸಲಿ ಎಂಬುದಾಗಿ ಅವಳು ಆಶಿಸುತ್ತಾಳೆ. ಕುಂತಿಯ ಪ್ರಾರ್ಥನೆಯನ್ನು ಆಲಿಸಿದ ಭಗವಂತನು ಮುಗುಳ್ನಕ್ಕನು. ಯುಧಿಷ್ಠಿರನೂ ಭಗವಂತನನ್ನು ಪ್ರಾರ್ಥಿಸಿದನು.

ಭಗವಂತನನ್ನು ಒಳಗೊಂಡಂತೆ ಎಲ್ಲರೂ ಶರಮಂಚದ ಮೇಲೆ ಮಲಗಿದ್ದ ಭೀಷ್ಮರನ್ನು ಕಾಣಲು ಯುದ್ಧ ಭೂಮಿಗೆ ತೆರಳಿ ಭೀಷ್ಮರಿಗೆ ವಂದಿಸಿದರು. ನಾರದ, ಧೌಮ್ಯ, ವ್ಯಾಸ, ಭಾರದ್ವಾಜ, ಪರಶುರಾಮ, ವಸಿಷ್ಠ ಹಾಗೂ ಇನ್ನಿತರರು ಅಲ್ಲಿ

ಸಮಾವೇಶಗೊಂಡರು. ತನ್ನ ಮುಂದೆಯೇ ನಿಂತ ಭಗವಂತನನ್ನು ಕಂಡ ಭೀಷ್ಮರು ಅವನಿಗೆ ಪ್ರಾರ್ಥನೆ ಸಲ್ಲಿಸಿ ಅವನನ್ನು ಕೊಂಡಾಡಿದರು. ಅನಂತರ ಭೀಷ್ಮರು ರಾಜಕೀಯ ಶಾಸ್ತ್ರ ಹಾಗೂ ಆಡಳಿತದ ನಿರ್ವಹಣೆಯನ್ನು ಕುರಿತು ಯುಧಿಷ್ಠಿರನಿಗೆ ಸೂತ್ರಗಳನ್ನು ಭೋಧಿಸಿ ಸಲಹೆ ನೀಡಿದರು. ಅವರು ಭಗವಂತನಿಗೆ ಪ್ರಾರ್ಥನೆ ಸಲ್ಲಿಸಿ ಅವನ ಸಮ್ಮುಖದಲ್ಲೇ ಕೊನೆಯುಸಿರೆಳೆದು ತಮ್ಮ ಆತ್ಮವನ್ನು ಅವನಲ್ಲಿ ಲೀನವಾಗಿಸಿಕೊಂಡರು. ಅವರು ಸಾಯುವ ಮುನ್ನ ಪ್ರಾರ್ಥಿಸಿದರು "ನನ್ನ ಸಾವಿನ ಕ್ಷಣದಲ್ಲಿ ನಾನು ದೇವ ಪ್ರಮುಖನಾದ ಕೃಷ್ಣ ಪರಮಾತ್ಮನಲ್ಲೇ ಆರಕ್ಷಣೆಗೊಳ್ಳುವಂತಾಗಲಿ. ತನ್ನ ಬಲಗೈಲಿ ಚಾವಟಿಯನ್ನು ಹಿಡಿದು ಎಡಗೈಲಿ ಹಗ್ಗವನ್ನು ಹಿಡಿದು ಎಲ್ಲ ರೀತಿಯಲ್ಲೂ ಅರ್ಜುನನ ಸಾರಥಿಯ ಮೇಲೆ ನಾನು ನನ್ನ ಮನಸ್ಸನ್ನು ಕೇಂದ್ರೀಕರಿಸುತ್ತೇನೆ". ಕೊನೆಗೆ ಭೀಷ್ಮರು ನುಡಿದರು. "ಈಗ ನಾನು ಪ್ರಸ್ತುತದಲ್ಲಿ ನನ್ನ ಮುಂದಿರುವ ಶ್ರೀಕೃಷ್ಣನೆಂಬ ಏಕೈಕ ದೇವನನ್ನು ಕುರಿತು ಧ್ಯಾನಿಸಬಲ್ಲೆ. ಏಕೆಂದರೆ ಪ್ರತಿಯೊಬ್ಬನ ಹೃದಯದಲ್ಲಿ ಅವನನ್ನು ಕುರಿತು ಇರುವ ದ್ವಂದ್ವಗಳು ಹಾಗೂ ತಪ್ಪು ಕಲ್ಪನೆಗಳನ್ನೆಲ್ಲ ನಾನು ದಾಟಿ ಬಂದಿದ್ದೇನೆ. ಅವನು ಪ್ರತಿಯೊಬ್ಬರ ಹೃದಯದಲ್ಲಿನೆಲೆಸಿದ್ದಾನೆ. ಸೂರ್ಯನು ಬೇರೆ ಬೇರೆ ರೀತಿಗಳಲ್ಲಿ ಗ್ರಾಹ್ಯವಾದರೂ ಇರುವ ಸೂರ್ಯನು ಒಬ್ಬನೇ". ಇದಾದ ನಂತರ ಯುಧಿಷ್ಠಿರನು ತನ್ನ ದೊಡ್ಡಪ್ಪ ಭೀಷ್ಮ ಪಿತಾಮಹನ ಮನ್ನಣೆ ಪಡೆದಿದ್ದ ನಿಯಮಗಳು ಹಾಗೂ ತತ್ವಗಳಿಗೆ ಅನುಸಾರವಾಗಿ ತನ್ನ ರಾಜ್ಯದಲ್ಲಿ ಆಡಳಿತವನ್ನು ಅನುಷ್ಠಾನಗೊಳಿಸಿದನು.

ಅನಂತರ ಶ್ರೀ ಕೃಷ್ಣ ಪರಮಾತ್ಮನು ಪಾಂಡವರಿಂದ ಬೀಳ್ಕೊಂಡು ದ್ವಾರಕೆಗೆ ಹೋದಾಗ ಅಲ್ಲಿನ ಜನರು ಅವನು ಹಿಂತಿರುಗಿದ್ದನ್ನು ಕಂಡು ಆನಂದಿಸಿದರು.

ಇಲ್ಲಿ, ಹಸ್ತಿನಾಪುರದಲ್ಲಿ, ಉತ್ತರೆಗೆ ಪರೀಕ್ಷಿತನು ಜನಿಸಿದನು. ಯುಧಿಷ್ಠಿರನು ದಕ್ಷತೆಯಿಂದ ರಾಜ್ಯಭಾರ ಮಾಡುತ್ತಿದ್ದು ಅವನ ಪ್ರಜೆಗಳು ಆನಂದದಿಂದಿದ್ದರು. ಅವರ ರಾಜ್ಯವು ಸಂಪದ್ಭರಿತ ಹಾಗೂ ಸಮೃದ್ಧವಾಯಿತು. ಹಿರಿಯ ಋಷಿಗಳು ಹಾಗೂ ಪ್ರಾಜ್ಞರು ಪರೀಕ್ಷಿತನ ಜಾತಕವನ್ನು ಪರೀಕ್ಷಿಸಿ ಅವನು ಪಾಂಡವರಿಗೆ ಉತ್ತರಾಧಿಕಾರಿ ಯಾಗುತ್ತಾನೆಂದು ಭವಿಷ್ಯ ನುಡಿದರು. ಆದರೆ ಅವನು ಸರ್ಪದ ಕಡಿತದಿಂದ ಸಾವಿಗೀಡಾಗುತ್ತಾನೆಂದೂ ತಿಳಿಸಿದರು.

ಯುಧಿಷ್ಠಿರನು ಅಶ್ವಮೇಧ ಯಾಗವನ್ನು ಮಾಡಬಯಸಿದನಾದರೂ ಅದಕ್ಕೆ ಅಗತ್ಯವಾದ ಸಂಪತ್ತು ಅವನಲ್ಲಿರಲಿಲ್ಲ. ಕೃಷ್ಣ ಪರಮಾತ್ಮನ ಸಲಹೆಯಂತೆ ಪಾಂಡವರು ಉತ್ತರ ದಿಕ್ಕಿಗೆ ತೆರಳಿ ಯಾಗವನ್ನು ನಡೆಸಲು ಅಗತ್ಯವಾದ ಅಪಾರ ಸಂಪತ್ತನ್ನು ತಂದುಕೊಟ್ಟರು.

ಮಹಾಭಾರತ ಯುದ್ಧಕ್ಕೆ ಮೊದಲು ಜಿಗುಪ್ಸೆಯಿಂದ ಹಸ್ತಿನಾಪುರವನ್ನು ತ್ಯಜಿಸಿ ತೀರ್ಥಯಾತ್ರೆಗೆ ತೆರಳಿದ್ದ ವಿದುರನು ಆತ್ಮದ ಗುರಿಯ ಬಗ್ಗೆ ಮೈತ್ರೇಯಿಯಿಂದ ತಿಳಿವಳಿಕೆಯನ್ನು ಪಡೆದು ಹಸ್ತಿನಾಪುರಕ್ಕೆ ಹಿಂತಿರುಗಿದನು.

(ಮಹಾಭಾರತದ ಪ್ರಮುಖ ಪಾತ್ರಗಳಲ್ಲೊಬ್ಬನಾದ ವಿದುರನು ದಾಸಿಯಾದ ಅಂಬಿಕೆಯ ಗರ್ಭದಲ್ಲಿ ವ್ಯಾಸದೇವರಿಂದ ಜನಿಸಿದನು. ವಿದುರನು ಯಮರಾಜನ ಸಾಕಾರ ರೂಪ. ಈ ಅವತಾರದಲ್ಲಿ ಅವನು ಮಾಂಡೂಕ ಮುನಿಯ ಶಾಪಕ್ಕೆ ಒಳಪಟ್ಟವನು. ಕಥೆಯೊಂದರ ಅನ್ವಯ ಮಾಂಡೂಕ ಮುನಿಯ ಕುಟೀರದಲ್ಲಿ ಕೆಲವು ಚೋರರು ಅಡಗಿ ಕೂತಿದ್ದರಿಂದ ರಾಜ್ಯದ ಭಟರು ಮುನಿಯನ್ನು ಬಂಧಿಸಿದರು. ನ್ಯಾಯಾಧೀಶನು ಮುನಿಗೆ ಮರಣದಂಡನೆ ವಿಧಿಸಿದನು. ಮುನಿಯನ್ನು ಯಮರಾಜನ ಬಳಿ ಕರೆದೊಯ್ದಾಗ ಅವನು ಯಮರಾಜನಿಂದ ತನ್ನನ್ನು ಅಲ್ಲಿಗೆ ಕರೆದೊಯ್ದ ಕಾರಣವನ್ನು ತಿಳಿಯಬಯಸಿದನು. ಬಾಲಕನಾಗಿದ್ದಾಗ ಮುನಿಯು ಮಾಡಿದ್ದ ಅಪರಾಧವೊಂದರ ಸಲುವಾಗಿ ಅವನಿಗೆ ಈ ಶಿಕ್ಷೆಯನ್ನು ವಿಧಿಸಲಾಗಿದೆಯೆಂದು ತಿಳಿಸಿದ ಯಮರಾಜ, ಬಾಲಕನಾಗಿದ್ದಾಗ ಮುನಿಯು ಚೂಪಾದ ದರ್ಭೆಯೊಂದರಿಂದ ಇರುವೆಯೊಂದನ್ನು ಚುಚ್ಚಿದ್ದನ್ನು ನೆನಸಿಸಿದನು. ಮುಗ್ಧ ಶಿಶುವಾಗಿದ್ದಾಗ ತಾನು ಮಾಡಿದ ಈ ತಪ್ಪಿಗಾಗಿ ತನ್ನನ್ನು ಈಗ ಹೀಗೆ ಶಿಕ್ಷಿಸುವುದು ವಿವೇಕವಲ್ಲ ಎಂಬುದಾಗಿ ಭಾವಿಸಿದ ಮುನಿಯು ಯಮರಾಜನಿಗೆ ಶೂದ್ರನಾಗಿ ಜನಿಸಬೇಕೆಂಬ ಶಾಪವನ್ನು ಇತ್ತಿದ್ದರಿಂದ ಯಮಸ್ವರೂಪಿ ವಿದುರನು ದಾಸಿಯೊಬ್ಬಳ ಉದರದಲ್ಲಿ ಜನಿಸಿದ).

ವಿದುರನು ಹಸ್ತಿನಾಪುರಕ್ಕೆ ಹಿಂತಿರುಗಿದಾಗ ಪ್ರತಿಯೊಬ್ಬರೂ ಹರ್ಷಗೊಂಡು ಅವನನ್ನು ಸುತ್ತುವರಿದರು.

ವಿದುರನು ರಾಜಧಾನಿಗೆ ಆಗಮಿಸಿದಾಗ ಯುಧಿಷ್ಠಿರ ಹಾಗೂ ವಿದುರನ ಮಧ್ಯೆ ಸ್ನೇಹಪೂರ್ಣ ವಿಚಾರ ವಿನಿಮಯವಾಯಿತು. ಯುಧಿಷ್ಠಿರನು ಸಮಸ್ತ ಜನರ, ಅದರಲ್ಲೂ ದ್ವಾರಕೆಯಲ್ಲಿ ಕೃಷ್ಣ ಪರಮಾತ್ಮನ ಯೋಗಕ್ಷೇಮವನ್ನು ಕುರಿತು ವಿಚಾರಿಸಿದನು. ವಿದುರನಿಗೆ ಯಾದವ ಕುಲದ ನಿರ್ನಾಮದ ಬಗ್ಗೆ ತಿಳಿದಿದ್ದರೂ .ಅವನದನ್ನು ಧೃತರಾಷ್ಟ್ರನಿಗೆ ತಿಳಿಸಲಿಲ್ಲ.

ವಿದುರ ಹಾಗೂ ಧೃತರಾಷ್ಟ್ರರು ಭೇಟಿಯಾದಾಗ ವಿದುರನು ಧೃತರಾಷ್ಟ್ರನಿಗೆ ಹಸ್ತಿನಾಪುರವನ್ನು ಬಿಟ್ಟು ಹೊರಡಲು ಇನ್ನು ವಿಳಂಬ ಮಾಡಬಾರದೆಂದು ತಿಳಿಸಿದನು. ಅವನು ತನ್ನ ಜೀವನದ ಬಹು ಭಾಗವನ್ನು ಈಗಾಗಲೇ ಕಳೆದಿರುವನೆಂದು ಧೃತರಾಷ್ಟ್ರನಿಗೆ ತಿಳಿಸಿ ಅವನ ಪುತ್ರರು ಪಾಂಡವರಿಗೆ ಮಾಡಿದ ಅವಹೇಳನಗಳನ್ನು ನೆನಪಿಸಿದನು. ಆದ್ದರಿಂದ ಭಗವಂತನ ಪಾದಾರವಿಂದಗಳಿಗಾಗಿ ಹಂಬಲಿಸಿ ಜೀವನವನ್ನು ಶಾಂತಿಯುತವಾಗಿ ಕೊನೆಗಾಣಿಸಿಕೊಳ್ಳುವಂತೆ ಅವನು ಧೃತರಾಷ್ಟ್ರನಿಗೆ ಬುದ್ಧಿವಾದ ಹೇಳಿದನು. ಧೃತರಾಷ್ಟ್ರನು ಉತ್ತರದಿಕ್ಕಿನ ಕಡೆಗೆ ಹೋಗಬೇಕೆಂದೂ ಅವನು ಸಲಹೆ ಮಾಡಿದನು. ಅವನ ಮಾತಿನಿಂದ ಸಮಾಧಾನ ಹೊಂದಿದ ಧೃತರಾಷ್ಟ್ರನು ಯಾರಿಗೂ ತಿಳಿಸದೆಯೇ ತನ್ನ ಮಡದಿ ಗಾಂಧಾರಿಯೊಂದಿಗೆ ಹಿಮಾಲಯಕ್ಕೆ ಅಭಿಮುಖವಾಗಿ ಹೊರಟನು.

ಯುಧಿಷ್ಠಿರನು ಧೃತರಾಷ್ಟ್ರನನ್ನು ಕಾಣದೆ ಹುಡುಕಾಡಿ, ಅವನ ಕಣ್ಮರೆಯಿಂದ ಚಕಿತಗೊಂಡನು. ಆ ಸಂದರ್ಭದಲ್ಲಿ ಅಲ್ಲಿ ನಾರದ ಮುನಿಯು ಕಾಣಿಸಿಕೊಂಡು

ಧೃತರಾಷ್ಟ್ರನು ಮೋಕ್ಷವನ್ನು ಅರಸಿ ತೆರಳಿರುವುದರಿಂದ ಅವನ ಬಗ್ಗೆ ಚಿಂತಿಸಕೂಡದೆಂದು ದೊರೆಗೆ ತಿಳಿಸಿದನು. ಪ್ರತಿಯೊಬ್ಬರೂ ದೈವನಿಯಮಕ್ಕೆ ಒಳಗಾಗಿರುವುದರಿಂದ ಯಾರೊಬ್ಬರ ಬಗ್ಗೆಯೂ ಕಳವಳಿಸಬಾರದೆಂದು ರಾಜನಿಗೆ ನಾರದನು ಬುದ್ಧಿವಾದ ಹೇಳಿದನು. "ಆಟಗಾರನು ತನ್ನ ಆಟಿಗೆಗಳನ್ನು ತನ್ನಿಚ್ಛೆಗೆ ಅನುಗುಣವಾಗಿ ಜೋಡಿಸುವಂತೆ ಹಾಗೂ ಚದುರಿಸುವಂತೆ, ಭಗವಂತನ ಇಚ್ಛೆಗೆ ಅನುಗುಣವಾಗಿ ಒಂದುಗೂಡುತ್ತಾರೆ ಹಾಗೂ ಪ್ರತ್ಯೇಕಗೊಳ್ಳುತ್ತಾರೆ" ನಾರದನು ಬುದ್ಧಿವಾದ ಮಾಡಿದನು : "ಎಲೈ ದೊರೆಯೇ, ಏಕಮೇವಾದ್ವಿತೀಯನಾದ, ವಿವಿಧ ಶಕ್ತಿಗಳಿಂದಾಗಿ ವಿವಿಧ ರೂಪಗಳಲ್ಲಿ ಕಾಣಿಸಿಕೊಳ್ಳುವ ಹಾಗೂ ಅಂತರ ಹಾಗೂ ಬಾಹಿರಗಳಲ್ಲಿರುವ ಪರಮಾತ್ಮನತ್ತ ನೋಟ ಹರಿಸು".

ಹಸ್ತಿನಾಪುರದಿಂದ ಹೊರಟ ಧೃತರಾಷ್ಟ್ರನು 'ಸಪ್ತಶ್ರೋತ' ಎಂಬ ಸ್ಥಳಕ್ಕೆ ತೆರಳಿ, ಪ್ರತಿ ದಿನವೂ ಮೂರು ಬಾರಿ ಮಿಂದು ಅಗ್ನಿಯಲ್ಲಿ ಅಗ್ನಿಹೋತ್ರ ಮಾಡುತ್ತ, ನೀರನ್ನು ಮಾತ್ರ ಸೇವಿಸುತ್ತ ಅಷ್ಟಾಂಗ ಯೋಗವನ್ನು ಅಭ್ಯಸಿಸಿದನು. ಈ ಯೋಗವು ಮನಸ್ಸು ಹಾಗೂ ಇಂದ್ರಿಯಗಳನ್ನು ನಿಯಂತ್ರಿಸಿ, ಕೌಟುಂಬಿಕ ಬಾಂಧ್ಯವ್ಯದ ಬಗೆಗಿನ ಆಲೋಚನೆಗಳನ್ನು ನಿಗ್ರಹಿಸುತ್ತವೆ. ನಾರದರು ದೊರೆಗೆ, ಅವನ ಚಿಕ್ಕಪ್ಪನು, ತನ್ನ ತಪಸ್ಸಿನ ಐದನೆಯ ದಿನ ಶರೀರವನ್ನು ತ್ಯಜಿಸಲಿದ್ದು ಅವನ ಶರೀರವು ಭಸ್ಮವಾಗುವುದೆಂದು ತಿಳಿಸಿದನು. ಗಾಂಧಾರಿಯು ಅಗ್ನಿಗೆ ತನ್ನನ್ನೇ ಸಮರ್ಪಿಸಿಕೊಳ್ಳುತ್ತಾಳೆ. ಅನಂತರ ವಿದುರನು ಅವರಿಬ್ಬರನ್ನು ಹಿಂಬಾಲಿಸುತ್ತಾನೆ ಎಂದು ತಿಳಿಸಿದನು. (ಸಪ್ತಶ್ರೋತವನ್ನು - ಇಲ್ಲಿ ಗಂಗೆಯು ಏಳು ಶಾಖೆಗಳಾಗಿ ಕವಲೊಡೆಯುತ್ತಾಳೆ. ಇದನ್ನು ಏಳು ಮಹಾಋುಷಿಗಳ ಸಂತೃಪ್ತಿಗಾಗಿ ಮಾಡಲಾಗಿದೆ).

ಹಸ್ತಿನಾಪುರದಲ್ಲಿ ದ್ವಾರಕೆಯಲ್ಲಿರುವ ಶ್ರೀ ಕೃಷ್ಣನನ್ನು ಕಾಣಲು ಹೊರಟಿದ್ದ ಅರ್ಜುನನು ದೀರ್ಘ ಕಾಲದ ನಂತರವೂ ಹಿಂತಿರುಗದಿದ್ದಾಗ ರಾಜನು ಧಾವಂತಕ್ಕೆ ಒಳಗಾಗಿದ್ದನು. ದ್ವಾರಕೆಯಿಂದ ಹಿಂತಿರುಗಿದ ಅರ್ಜುನ ಮಂಕಾಗಿ ದುಃಖದಿಂದ ಕೂಡಿದ್ದುದು ದೊರೆಗೆ ಕಂಡಿತು. ಅರ್ಜುನನು ಯಾದವರ ಕಲಹದ ಇಡೀ ಕಥೆಯನ್ನು ಹಾಗೂ ಭಗವಂತನು ಈ ಭೂಮಿಯಿಂದ ಕಣ್ಮರೆಯಾದದ್ದನ್ನು ತಿಳಿಸಿದನು. ಆಗ ದೊರೆಯು ರಾಜ್ಯವನ್ನು ಬಿಟ್ಟು ವಾನಪ್ರಸ್ಥಾಶ್ರಮಕ್ಕೆ ತೆರಳುವ ಬಗ್ಗೆ ಆಲೋಚಿಸಿದನು. ಪಾಂಡವರು ರಾಜ್ಯದಿಂದ ನಿರ್ಗಮಿಸಲಿಚ್ಛಿಸಿ ಹಿಮಾಲಯಕ್ಕೆ ತೆರಳಲು ನಿರ್ಧರಿಸಿದರು. ಧರ್ಮರಾಜನು ಶಾಂತಿಯನ್ನರಿಸಿ ಹೊರಟನು. ಅವನ ಸಹೋದರರೂ ಅವನನ್ನು ಅನುಸರಿಸಿದರು. ಅಡೆತಡೆಯಿಲ್ಲದೆ ಭಗವಂತನ ಪಾದಾರವಿಂದವನ್ನು ಕುರಿತು ಧ್ಯಾನಿಸಲು ಅವರು ನಿರ್ಧರಿಸಿದರು. ನಿರಂತರ ಭಕ್ತಿ ಪೂರ್ವಕ ಸ್ಮರಣೆಯಿಂದ ಉಂಟಾಗುವ ಪರಿಶುದ್ಧ ಪ್ರಜ್ಞೆಯಿಂದ ಒಡಗೂಡಿ ಶ್ರೀಮನ್ನಾರಾಯಣನೆನಿಸಿದ ಭಗವಾನ್ ಕೃಷ್ಣನಿಂದ ಆಳಲ್ಪಟ್ಟ ಪಾರಮಾರ್ಥಿಕ ಲೋಕವನ್ನು ಅವರು ಸೇರಿದರು. ವಿದುರನು 'ಪ್ರಭಾಸದಲ್ಲಿ' ತನ್ನ ದೇಹವನ್ನು ತ್ಯಜಿಸಿ ಪಿತೃಲೋಕವನ್ನು ಪ್ರವೇಶಿಸಿದನು. ದ್ರೌಪದಿ ಹಾಗೂ ಸುಭದ್ರೆ ಶ್ರೀ ಕೃಷ್ಣನನ್ನು ಸ್ಮರಿಸುತ್ತ ತಮ್ಮ ಪತಿಯರಂತೆಯೇ ಫಲಗಳನ್ನು ಪಡೆದರು. ಪರೀಕ್ಷಿತನು ದೊರೆಯಾದನು.

## ಪರೀಕ್ಷಿತ ಮಹಾರಾಜ

ಮಹಾರಾಜ ಪರೀಕ್ಷಿತನು ದೊರೆಯಾಗಿ ಜಗತ್ತನ್ನು ಆಳಿದನು. ಅವನು ಉತ್ತರನ ಮಗಳಾದ ಇರಾವತಿಯನ್ನು ವಿವಾಹವಾದನು. ಇರಾವತಿಗೆ ಮದ್ರಾವತಿಯೆಂಬ ಹೆಸರೂ ಇದ್ದು ಅವಳಿಗೆ ಜನಮೇಜಯನು ಜನಿಸಿದನು. ಅವನಿಗೆ ಜ್ಞಾನತಾನಿಕ ಹಾಗೂ ಸಂಕುಕರ್ಣರೆಂಬ ಇಬ್ಬರು ಪುತ್ರರು. ಅವನು ಕುರುಕ್ಷೇತ್ರದಲ್ಲಿ ಯಜ್ಞ ಮಾಡಿದನು. ತನ್ನ ತಂದೆ ಪರೀಕ್ಷಿತನನ್ನು ಕೊಂದ ಸರ್ಪದ ಮೇಲೆ ಸೇಡು ತೀರಿಸಿಕೊಳ್ಳಲು ಬಯಸಿದ ಜನಮೇಜಯನು ತನ್ನ ತಂದೆಯನ್ನು ಕೊಂದ ತಕ್ಷಕನನ್ನೂ ಒಳಗೊಂಡಂತೆ ಇಡೀ ಸರ್ಪ ಸಂತತಿಯನ್ನು ವಿನಾಶಗೊಳಿಸುವ ಉದ್ದೇಶದಿಂದ ಸರ್ಪಯಜ್ಞವನ್ನು ಕೈಗೊಂಡನು. ಈ ಯಜ್ಞದ ಸಂದರ್ಭದಲ್ಲಿ ವ್ಯಾಸಮುನಿಯು ಸ್ವತಃ ಕುರುಕ್ಷೇತ್ರ ಯುದ್ಧದ ಇತಿಹಾಸವನ್ನು ವಿವರಿಸಿ, ವ್ಯಾಸದೇವನ ಶಿಷ್ಯನಾದ ವೈಶಂಪಾಯನನು ಅದನ್ನು ಮುಕ್ತಾಯಗೊಳಿಸಿದ.

## ಕಲಿಯ ಪ್ರವೇಶ

ಪರೀಕ್ಷಿತ ಮಹಾರಾಜನು ಜಗತ್ತನ್ನು ಜಯಿಸುವ ಮಾರ್ಗದಲ್ಲಿದ್ದಾಗ ದೊರೆಯಂತೆ ವೇಷ ಧರಿಸಿಕೊಂಡಿದ್ದ ಒಬ್ಬಾತ ಒಂದು ಹಸು ಹಾಗೂ ಒಂದು ಹೋರಿಯ ಕಾಲುಗಳಿಗೆ ನೋವನ್ನುಂಟು ಮಾಡುತ್ತಿದ್ದ ಕಲಿಯುಗ ಪ್ರಮುಖನನ್ನು ಕಂಡನು. ಪರೀಕ್ಷಿತ ಮಹಾರಾಜನು ವೇಷಧಾರಿ ದೊರೆಗೆ ಶಿಕ್ಷೆಯನ್ನು ವಿಧಿಸುವ ಸಲುವಾಗಿ ಅವನನ್ನು ಬಂಧಿಸಿದನು. (ಪರೀಕ್ಷಿತ ಮಹಾರಾಜನ ರಾಜ್ಯದ ವ್ಯಾಪ್ತಿಯೊಳಗೆ ಕಲಿಯುಗದ ಚಿಹ್ನೆಗಳು ಆಗಾಗಲೇ ಕಂಡು ಬರಲು ಪ್ರಾರಂಭಿಸಿದ್ದವು)

ಹೋರಿಯು ಧರ್ಮವನ್ನು ಹಾಗೂ ಗೋವು ಭೂಮಿಯನ್ನು ಪ್ರತಿನಿಧಿಸುತ್ತವೆ. ಭೂಮಿಯು ಬೇಗುದಿಗೊಂಡು ಅಳುತ್ತಲಿತ್ತು. ಅದಕ್ಕೆ ಕಾರಣವೇನೆಂದು ತಿಳಿಯಲು ಪರೀಕ್ಷಿತನು ಅಪೇಕ್ಷಿಸಿದನು. ಆಗ ಗೋವು ತಾನು ಮೂರು ಕಾಲುಗಳನ್ನು ಕಳೆದುಕೊಂಡಿದ್ದು ಈಗ ಒಂಟಿ ಕಾಲಿನ ಮೇಲೆ ನಿಂತಿರುವುದಾಗಿಯೂ ಶ್ರೀ ಕೃಷ್ಣ ಪರಮಾತ್ಮನ ಕಣ್ಮರೆಯಿಂದಾಗಿ ಮನುಷ್ಯನಲ್ಲಿದ್ದ ಎಲ್ಲ ಸದ್ಗುಣಗಳೂ ಮರೆಯಾಗಿವೆಯೆಂದು ತಿಳಿಸಿತು. ಅವನ ಗೈರುಹಾಜರಿಯಲ್ಲಿ ಕಲಿಯು ಎಲ್ಲೆಡೆಯಲ್ಲೂ ತನ್ನ ಪ್ರಭಾವವನ್ನು ಹರಡಿರುವುದರಿಂದ ಈ ಪರಿಸ್ಥಿತಿಯನ್ನು ಕಾಣಲು ತನಗೆ ವಿಷಾದವಾಗಿದೆ ಎಂದಿತು.

ಇಲ್ಲಿ ಈ ಸಂಭಾಷಣೆಯು ನಡೆಯುತ್ತಿರುವ ಸಂದರ್ಭದಲ್ಲಿ ರಾಜನು ಸರಸ್ವತಿ ನದಿಯ ದಂಡೆಯನ್ನು ತಲುಪಿದಾಗ ರಾಜನಂತೆ ವೇಷಭೂಷಣಗಳನ್ನು ಧರಿಸಿದ ಒಬ್ಬ ಮನುಷ್ಯನು ಒಂದು ಹಸು ಹಾಗೂ ಹೋರಿಯನ್ನು, ಅವುಗಳಿಗೆ ಯಾರೂ ಒಡೆಯನು ಇಲ್ಲವೆನ್ನುವಂತೆ ಕೋಲೊಂದರಿಂದ ಹೊಡೆಯುತ್ತಿದ್ದ. ಹೋರಿಯು (ಧರ್ಮ) ಭಯಭೀತವಾಗಿದ್ದು ಒಂದೇ ಕಾಲಿನ ಮೇಲೆ ನಿಂತಿತ್ತು, ಹಸುವಿನ ಕಾಲುಗಳಿಗೂ ಸಹ ತುಚ್ಛ ಮಾನವನು ಬಡಿಯುತ್ತಿದ್ದ, ಅವೆರಡೂ ಸಂಕಷ್ಟಕ್ಕೆ ಒಳಗಾಗಿದ್ದವು. ರಾಜನು ಆ ಕ್ರೂರ ಮಾನವನನ್ನು ಉದ್ದೇಶಿಸಿ ಅವನೇಕೆ ಅವನ್ನು ಬಡಿಯುತ್ತಿದ್ದಾನೆಂಬುದನ್ನು

ತಿಳಿಯಲು ಬಯಸಿದ. ರಾಜನು ಆತನನ್ನು ಕೊಲ್ಲಲು ನಿರ್ಧರಿಸಿದ. ರಾಜನು ಅವನು ಯಾರು, ಹಾಗೂ ಹೋರಿಯು ಅಳುತ್ತಿರುವುದಕ್ಕೆ ಕಾರಣವೇನೆಂಬುದನ್ನು ವಿಚಾರಿಸಿದ. ಗೋವನ್ನೂ ಇದೇ ರೀತಿ ಪ್ರಶ್ನಿಸಿದ. ತನ್ನ ಪ್ರಜೆಗಳಿಗೆ ತಾನು ಮಾಡಬೇಕಾದ ಕರ್ತವ್ಯವನ್ನು ಸ್ಮರಿಸಿಕೊಂಡ ರಾಜನು ಆ ಮಾನವನನ್ನು ಕೊಲ್ಲಲು ಬಯಸಿದ. ಆಗ ಹೋರಿಯು ಉತ್ತರಿಸಿತು "ನಮಗೆ ಕಷ್ಟಗಳನ್ನು ಉಂಟು ಮಾಡಿರುವ ನಿರ್ದಿಷ್ಟ ತಪ್ಪಿತಸ್ಥನು ಯಾರು ಎಂಬುದನ್ನು ತಿಳಿಯುವುದು ಕಷ್ಟಕರ. ಏಕೆಂದರೆ ನಾವು ವಿಭಿನ್ನ ವೇದಾಂತಿಗಳ ವಿಭಿನ್ನ ಅಭಿಪ್ರಾಯಗಳಿಂದ ಭಯವಿಹ್ವಲರಾಗಿದ್ದೇವೆ. ಸಾಮಾನ್ಯವಾಗಿ ಆರು ಜನ ಹಿರಿಯ ವೇದಾಂತಿಗಳಿದ್ದಾರೆ. ಅವರೆಂದರೆ ಕಾನಡ - ವೈಶೇಷಿಕಾ ಅಧ್ಯಾತ್ಮದ ಲೇಖಕ; ಗೌತಮ - ತರ್ಕಶಾಸ್ತ್ರದ ಲೇಖಕ; ಪತಂಜಲಿ - ಅತೀಂದ್ರಿಯ ಯೋಗದ ಲೇಖಕ; ಕಪಿಲ - ಸಂಖ್ಯಾಶಾಸ್ತ್ರದ ಲೇಖಕ; ಜೈಮಿನಿ- ಕರ್ಮ ಮೀಮಾಂಸೆಯ ಲೇಖಕ; ಹಾಗೂ ವ್ಯಾಸದೇವ - ವೇದಾಂತ ದರ್ಶನದ ಲೇಖಕ.

ಕೆಲವು ವೇದಾಂತಿಗಳು ಎಲ್ಲ ಬಗೆಯ ದ್ವಂದ್ವಗಳನ್ನೂ ನಿರಾಕರಿಸಿ ಹೀಗೆಂದು ಘೋಷಿಸುತ್ತಾರೆ: "ಯಾರೊಬ್ಬಾತನ ವೈಯಕ್ತಿಕ ಸಂತೋಷ ಹಾಗೂ ದುಃಖಗಳಿಗೆ ಅವನೇ ಕಾರಣ. ಆದರೂ ಕೆಲವರು ಅವರವರ ಕರ್ಮವೇ ಕಾರಣವೆಂದು ತಿಳಿಸಿದರೆ, ಕಟ್ಟಾ ಐಹಿಕವಾದಿಗಳು ಪ್ರಕೃತಿಯೇ ಅಂತಿಮ ಕಾರಣವೆಂಬುದಾಗಿ ತಿಳಿಯುತ್ತಾರೆ". ವಾದ ವಿವಾದಗಳ ಮೂಲಕವಾಗಲಿ ಅಥವಾ ಕಲ್ಪನೆಯಿಂದಾಗಲಿ ಅಥವಾ ಮಾತಿನ ಮೂಲಕವಾಗಲಿ ಕಷ್ಟಗಳಿಗೆ ಕಾರಣಗಳನ್ನು ಯಾರೂ ನಿರ್ದಿಷ್ಟ ಪಡಿಸಲಾಗದು ಎಂದು ನಂಬಿದ್ದ ಕೆಲವರು ಚಿಂತಕರಿದ್ದರು. ಆದ್ದರಿಂದ ರಾಜನು ತನ್ನ ಸ್ವಂತ ಬುದ್ಧಿಯಿಂದ ಇವೆಲ್ಲವುಗಳ ಬಗ್ಗೆಯೂ ಚಿಂತಿಸಿ ತಾನೇ ನಿರ್ಣಯಿಸಬೇಕೆಂದು ಹೋರಿಯು ತಿಳಿಸಿತು. ಆಗ ರಾಜನು ಉತ್ತರಿಸಿದನು "ಎಲೈ ಹೋರಿಯ ರೂಪದಲ್ಲಿರುವವನೇ, ಧರ್ಮದ ಬಗೆಗಿನ ಸತ್ಯವು ನಿನಗೇ ತಿಳಿದಿದೆ. ತತ್ವಶಃ ಮಾತನಾಡುತ್ತಿರುವ ನಿನಗೆ ಅಧಾರ್ಮಿಕ ಕ್ರಿಯೆಗಳನ್ನು ಕೈಗೊಳ್ಳುವಾತನಿಗೆ ಕಾದಿರುವ ಕೊನೆ ಏನೆಂಬುದೂ ತಿಳಿದಿದೆ. ಅದ್ದರಿಂದ ಧರ್ಮದ ವ್ಯಕ್ತಿತ್ವವೇ ನೀನಾಗಿದ್ದೆ. ಹೀಗಾಗಿ ಭಗವಂತನ ಶಕ್ತಿಗಳು ಅರಿವಿಗೂ ಮೀರಿದ್ದು ಎಂಬುದು ತಿಳಿದಿದೆ. ಸತ್ಯಯುಗದಲ್ಲಿ ನಿನ್ನ ನಾಲ್ಕು ಕಾಲುಗಳು - ಸರಳತೆ, ಪರಿಶುದ್ಧತೆ, ಕರುಣ ಹಾಗೂ ಸತ್ಯವೆಂಬ ತತ್ವಗಳ ಮೂಲಕ ಸುಸ್ಥಿತಿಯಲ್ಲಿದ್ದವು. ಆದರೆ ಅಹಂಕಾರ, ಸ್ತ್ರೀ ವ್ಯಾಮೋಹ ಹಾಗೂ ಮದವೆಂಬ ವಿಫುಲ ಅಧಾರ್ಮಿಕತೆಯಿಂದಾಗಿ ನಿನ್ನ ಕಾಲುಗಳು ಮುರಿಯಲ್ಪಟ್ಟಿವೆ. ನೀನೀಗ ನಿನ್ನ ಸತ್ಯವಂತಿಕೆಯಾಗಿರುವ ಒಂಟಿ ಕಾಲಿನ ಮೇಲೆ ನಿಂತಿದ್ದೀಯೆ. ಹೇಗೋ ತಳ್ಳಿಕೊಂಡು ಮುಂದುವರಿದಿದ್ದೀಯೆ. ಆದರೆ ವಂಚನೆಯಿಂದ ಉದ್ಧಾರವಾಗುತ್ತಿರುವ ಕಾದಾಟದ ಪುರುಷನಾದ ಕಲಿಯು ಈ ಒಂದು ಕಾಲನ್ನು ವಿನಾಶಗೊಳಿಸಲು ಪ್ರಯತ್ನಿಸುತ್ತಿರುತ್ತಾನೆ. ಭಗವಂತನು ಭೂಮಿಯ ಮೇಲಿದ್ದಾಗ ಆತನ ಪವಿತ್ರ ಹೆಜ್ಜೆ ಗುರುತುಗಳಿಂದಾಗಿ ಎಲ್ಲ ಒಳಿತೂ ಸಂಭವಿಸಿತ್ತು. ಈಗ ಭೂಮಿಯ ಮೇಲೆ ಅವನಿಲ್ಲದಿರುವುದರಿಂದ ಧರ್ಮವು, ಅಳ್ವಿಕೆಗೆ ಅರ್ಹ ರಾಗುದಿರುವ ಜನರಿಂದ ಭೋಗಿಸಲ್ಪಡುತ್ತಿದೆ".

## ರಾಜನ ಅಚಾತುರ್ಯ

ರಾಜನು ಹೋರಿ ಹಾಗೂ ಹಸುಗಳಿಗೆ ಸಮಾಧಾನ ಮಾಡಿ ಅಧರ್ಮಕ್ಕೆ ಕಾರಣನಾದ ಕಲಿಯನ್ನು ಕೊಲ್ಲಲು ನಿರ್ಧರಿಸಿದ. ಇದನ್ನು ಕಂಡ ಕಲಿಯು ರಾಜನಿಗೆ ಶರಣಾಗತನಾದಾಗ ರಾಜನು ಅವನನ್ನು ಕೊಲ್ಲದೆ ಅಧರ್ಮೀಯನಾದ ಅವನು ತನ್ನ ರಾಜ್ಯವನ್ನು ತ್ಯಜಿಸಬೇಕೆಂದು ಅಪ್ಪಣೆ ಮಾಡಿದ. ಕಲಿಯು ಭಯಗೊಂಡರೂ ರಾಜನಿಗೆ ಹೇಳಿದ: "ನಾನು ಎಲ್ಲೇ ವಾಸವಾಗಿರಲಿ, ನನಗೆ ನೀನು ಬಿಲ್ಲುಬಾಣದೊಂದಿಗೇ ಕಾಣಿಸುತ್ತೀಯಾದ್ದರಿಂದ ನಾನು ನಿನ್ನ ಅಧೀನದಲ್ಲಿ ಖಾಯಂ ಹಾಗೂ ಸುರಕ್ಷಿತವಾಗಿ ವಾಸಿಸಲು ಸ್ಥಳವೊಂದನ್ನು ಸೂಚಿಸು". ಆಗ ರಾಜನು ಕಲಿಗೆ ದ್ಯೂತ, ಕುಡಿತ, ವ್ಯಭಿಚಾರ ಹಾಗೂ ಪ್ರಾಣಿಹತ್ಯೆ ನಡೆಯುವೆಡೆಗಳಲ್ಲಿ ವಾಸವಾಗಿರಲು ಅನುಮತಿ ನೀಡಿದ. ಬಂಗಾರವೆಲ್ಲಿರುವುದೋ ಅಲ್ಲಿ ಸುಳ್ಳು, ಮದ, ಮೋಹ, ಶತೃತ್ವ ಹಾಗೂ ದ್ವೇಷವಿರುವುದರಿಂದ ಅಂಥೆಡೆಗಳಲ್ಲಿ ಇರುವಂತೆಯೂ ಅನುಮತಿ ನೀಡಿದ. ಆದ್ದರಿಂದ ಕಲಿಯು ಈ ಸ್ಥಳಗಳಲ್ಲಿ ವಾಸಿಸ ತೊಡಗಿದ. ಅನಂತರ ರಾಜನು ಹೋರಿಯ ಕಳೆದುಹೋಗಿದ್ದ ಕಾಲುಗಳನ್ನು ಪುನರ್‌ಸ್ಥಾಪಿಸಿ ಭೂಮಿಯ ಪರಿಸ್ಥಿತಿಯನ್ನು ಸುಧಾರಿಸಿದ.

ಒಮ್ಮೆ ಪರೀಕ್ಷಿತ ಮಹಾರಾಜನು ಅರಣ್ಯದಲ್ಲಿ ಬಿಲ್ಲು ಬಾಣದೊಂದಿಗೆ ಬೇಟೆಯಲ್ಲಿ ತೊಡಗಿದ್ದಾಗ ತೀವ್ರ ಹಸಿವು ಹಾಗೂ ಬಾಯಾರಿಕೆಯುಂಟಾದವನಾದನು. ಜಲಾಶಯವೊಂದನ್ನು ಹುಡುಕುತ್ತಾ ಅವನು ಪ್ರಖ್ಯಾತ ಸಮಿಕ ಋಷಿಯ ಕುಟೀರವನ್ನು ಪ್ರವೇಶಿಸಿದಾಗ ಕಣ್ಮುಚ್ಚಿ ಕುಳಿತಿರುವ ಅವನನ್ನು ಕಂಡನು. ಮುನಿಯು ಸಮಾಧಿ ಸ್ಥಿತಿಯಲ್ಲಿದ್ದು ತನ್ನ ಧ್ಯಾನದಲ್ಲೇ ಪರವಶನಾಗಿದ್ದ. ರಾಜನು ನೀರಿಗಾಗಿ ಬೇಡಿದಾಗ ಅವನಿಗೆ ಯಾವ ಪ್ರತಿಕ್ರಿಯೆಯಾಗಲಿ ಅಥವಾ ಯಾವುದೇ ಔಪಚಾರಿಕ ಸ್ವಾಗತವಾಗಲಿ ದೊರೆಯಲಿಲ್ಲ. ರಾಜನು ಕೋಪಾವಿಷ್ಟನಾದ. ಹಸಿವು ಬಾಯಾರಿಕೆ ಯಿಂದಿದ್ದು ರಾಜನಿಗೆ ತನ್ನ ಮಿತಿಗಳ ಅರಿವಿರಲಿಲ್ಲ. ಕುಟೀರವನ್ನು ಬಿಡುವ ಸಂದರ್ಭದಲ್ಲಿ ರಾಜನು ಮೃತ ಸರ್ಪವೊಂದನ್ನು ಬಿಲ್ಲಿನಿಂದೆತ್ತಿ ಅದನ್ನು ಮುನಿಯ ಹೆಗಲ ಮೇಲೆಸೆದನು. ಹೊರಗಡೆ ಆಡುತ್ತಿದ್ದ ಶೃಂಗಿಯೆಂಬ ಹೆಸರಿನ ಮುನಿಯ ಮಗನಿಗೆ ತನ್ನ ತಂದೆಗೆ ಆದ ಅಪಮಾನದ ಬಗ್ಗೆ ತಿಳಿದು ಬಾಲಕನೆಂದ : "ಸೇವಕರು ಅನುಸರಿಸಬೇಕಾದ ನಿಯಮಗಳಿಗೆ ವಿರುದ್ಧವಾಗಿ ತಮ್ಮ ಒಡೆಯರ ಬಗ್ಗೆ ಪಾಪಕೃತ್ಯಗಳನ್ನು ಮಾಡುವ, ಬಾಗಿಲಲ್ಲಿ ಕಾಗೆಗಳು ಹಾಗೂ ಕಾವಲಿನ ನಾಯಿಗಳಂತೆ ನಿಲ್ಲುವ ಅಳರಸರ ಪಾಪಗಳನ್ನು ನೋಡು". ಕೋಪದಿಂದ ಕಣ್ಣುಗಳನ್ನು ಕೆಂಪಾಗಿಸಿಕೊಂಡ ಬಾಲಕನು ರಾಜನಿಗೆ ಶಾಪ ನೀಡಿದ: "ನನ್ನ ತಂದೆಯನ್ನು ಅವಮಾನಗೊಳಿಸುವ ಮೂಲಕ ಮರ್ಯಾದೆಯನ್ನು ಮೀರಿದ ಕಾರಣಕ್ಕಾಗಿ ಇಂದಿನಿಂದ ಏಳನೆಯ ದಿವಸ ಸರ್ಪಹಕ್ಕಿಯೊಂದು ಆ ವಂಶದ ಅತ್ಯಂತ ಕ್ರೂರಿಯಾದವನನ್ನು (ಮಹಾರಾಜ ಪರೀಕ್ಷಿತ) ಕಚ್ಚುತ್ತದೆ". ಬಾಲಕನು ಕುಟೀರಕ್ಕೆ ಹಿಂತಿರುಗಿದಾಗ ತನ್ನ ತಂದೆಯ ಭುಜಗಳ ಮೇಲೆ ಸತ್ತ ಹಾವನ್ನು ಕಂಡು ದುಃಖದಿಂದ ರೋದಿಸಿದ. ಮಗನ ಅಳುವನ್ನು ಕೇಳಿ ಕಣ್ತೆರೆದ ಮುನಿಯು ತನ್ನ ಕತ್ತಿನ ಸುತ್ತ ಹಾವನ್ನು ಕಂಡು ತನ್ನ ಮಗ ರಾಜನಿಗೆ ನೀಡಿದ ಶಾಪವನ್ನು ಅರಿತ. ಮುನಿಯ ಅಮುಖ್ಯ

ಅಪರಾಧವೊಂದಕ್ಕೆ ಮಗನು ಭಾರೀ ಶಿಕ್ಷೆಯನ್ನು ನೀಡಿದ್ದಾನೆಂದು ಭಾವಿಸಿ ಅವನನ್ನು ಮನ್ನಿಸುವಂತೆ ಭಗವಂತನನ್ನು ಪ್ರಾರ್ಥಿಸಿದ. ಹೀಗೆ ಮುನಿಯು ತನ್ನ ಮಗನಿಂದಲೇ ಆದ ಪಾಪದ ಬಗ್ಗೆ ವಿಷಾದಗೊಂಡನೇ ಹೊರತು ರಾಜನು ತನಗೆ ಮಾಡಿದ ಅಪರಾಧವನ್ನು ಗಂಭೀರವಾಗಿ ಪರಿಗಣಿಸಲೇ ಇಲ್ಲ.

ರಾಜನು ಅರಮನೆಗೆ ಹಿಂತಿರುಗುತ್ತಲಿದ್ದಾಗ ದೋಷರಹಿತನಾಗಿದ್ದ ಹಾಗೂ ಶಕ್ತಿವಂತನಾಗಿದ್ದ ಮುನಿಯ ಮೇಲೆ ತಾನು ಎಸಗಿದ ಕೃತ್ಯ ತುಚ್ಛವಾದದ್ದು ಹಾಗೂ ಅನಾಗರಿಕವಾದದ್ದು ಎಂದು ಭಾವಿಸಿ ಬೇಗುದಿಗೆ ಒಳಗಾದನು. ಆದರೆ ಹೇಗಾದರೂ ತಾನು ಪಾಪಕೃತ್ಯದಿಂದ ಮುಕ್ತನಾಗುವ ಸಲುವಾಗಿ ಶಾಪವನ್ನು ಅಹ್ವಾನಿಸಿದನು. ಈ ಶಾಪ ಐಹಿಕತೆಯ ಬಗ್ಗೆ ಅನಾಸಕ್ತಿಯನ್ನು ತಳೆಯುವುದಕ್ಕೂ ಕಾರಣವಾಗುವುದರಿಂದ ಅದನ್ನು ಶುಭ ವಾರ್ತೆಯೆಂದು ಆಹ್ವಾನಿಸಿದನು.

ಪ್ರೀತಿಯಿಂದ ಶ್ರೀ ಕೃಷ್ಣ ಪರಮಾತ್ಮನಿಗೆ ಸಲ್ಲಿಸಿದ ಸೇವೆ ಇನ್ನಿತರ ಎಲ್ಲ ವಿಧಾನಗಳನ್ನೂ ಮೀರಿದ ಅತ್ಯುನ್ನತ ಸಾಧನೆ ಎನ್ನಿಸುವುದರಿಂದ ರಾಜನು ಶ್ರೀ ಕೃಷ್ಣ ಪರಮಾತ್ಮನಲ್ಲಿ ಮನಸ್ಸನ್ನಿಟ್ಟು ಗಂಗೆಯ ದಂಡೆಯಲ್ಲಿ ಸ್ಥಿರವಾಗಿ ಕೂತನು. ರಾಜನು ಒಮ್ಮಿಂದೊಮ್ಮೆಲೇ ಆಮರಣಾಂತ ಉಪವಾಸವನ್ನು ನಿರ್ಧರಿಸಿ ಮೋಕ್ಷವನ್ನು ದಯಪಾಲಿಸಲು ಶಕ್ತನಾದ ಏಕೈಕ ವ್ಯಕ್ತಿಯಾದ ಶ್ರೀ ಕೃಷ್ಮ ಪರಮಾತ್ಮನ ಪದ್ಮ ಚರಣಗಳಿಗೆ ತನ್ನನ್ನೇ ಅರ್ಪಿಸಿಕೊಂಡನು. ಹೀಗೆ ತನ್ನನ್ನೇ ಎಲ್ಲ ಬಗೆಯ ಸಂಬಂಧಗಳು ಹಾಗೂ ವ್ಯಾಮೋಹಗಳಿಂದ ವಿಮುಕ್ತಗೊಳಿಸಿಕೊಂಡು ಅವನು ಋಷಿಯೊಬ್ಬನ ಪ್ರಮಾಣಗಳನ್ನು ಅಂಗೀಕರಿಸಿದನು. ಆ ಸಂದರ್ಭದಲ್ಲಿ ಎಲ್ಲ ಹಿರಿಯ ಮೇಧಾವಿಗಳು ಹಾಗೂ ಚಿಂತಕರು ಗಂಗಾನದಿಯ ತೀರಕ್ಕೆ ಬಂದರು. ಅತ್ರಿ, ಚ್ಯವನ, ಶರದ್ವನ, ಅರಿಷ್ಟನೇಮಿ, ಭೃಗು, ವಸಿಷ್ಠ, ಪರಾಶರ, ವಿಶ್ವಾಮಿತ್ರ, ಅಂಗೀರ, ಪರಶುರಾಮ, ಉತಥ್ಯ, ಇಂದ್ರ ಪ್ರಮಾದ, ನಾರದ, ಗೌತಮ ಹಾಗೂ ಇತರರು ಆಗಮಿಸಿದರು.

(ಪರೀಕ್ಷಿತ ಮಹಾರಾಜನು ಈಗಿನ ದೆಹಲಿಯಾದ ಹಸ್ತಿನಾಪುರದಲ್ಲಿನ ಗಂಗಾತೀರದಲ್ಲಿ ಕುಳಿತಿದ್ದನೆಂಬುದು ಸ್ವಾರಸ್ಯಕರವಾದ ಅಂಶ. ದೆಹಲಿಯಲ್ಲಿರುವ ನದಿಯು ಯಮುನೆಯೇ ಹೊರತು ಗಂಗೆಯಲ್ಲ. ಈ ಸಂಬಂಧವಾಗಿ ಟೈಂಸ್ ಆಫ್ ಇಂಡಿಯಾ ಪತ್ರಿಕೆಯಲ್ಲಿ ಪ್ರಕಟವಾಗಿರುವ ಸಂಶೋಧನಾ ಪ್ರಬಂಧವೊಂದು "ಗಂಗಾ, ಯುಮುನಾ ನದಿಗಳು ದೆಹಲಿಯಲ್ಲಿ ಸಂಗಮವಾದವು ಎಂದಿದೆ. ಅದನ್ನು ಈ ಮುಂದೆ ಉಲ್ಲೇಖಿಸಲಾಗಿದೆ. ಪತ್ರಿಕೆಯಲ್ಲಿ ಪ್ರಕಟವಾಗಿರುವ ಸುದ್ದಿಯ ಶೀರ್ಷಿಕೆ :" ದೆಹಲಿಯಲ್ಲಿ ಗಂಗೆ, ಯುಮನೆಯ ಸಂಗಮ". ಅದರ ಲೇಖಕರು "ದಿ ಟೈಂಸ್ ಆಫ್ ಇಂಡಿಯಾ" (31.3.93) ಸುದ್ದಿ ವಿಭಾಗದ ತಾರೀಖ್ ಹುಸೇನ್. ಇಲ್ಲಿ ಪ್ರಕಟವಾಗಿರುವ ವಿವರಗಳು ಹೀಗಿವೆ: "ಇಲ್ಲಿನ ಪರೋಕ್ಷ ಗ್ರಹಿಕೆ ಅಲಿಘಡ ಹಾಗೂ ಭೂ ಎಂಜಿನಿಯರಿಂಗ್ ಕೇಂದ್ರದ ವಿಜ್ಞಾನಿಗಳು ಗಂಗೆ ಮತ್ತು ಯುಮುನಾ ನದಿಗಳ ಮೂಲ ಸಂಗಮವು ದೆಹಲಿಯಲ್ಲಿ ಉಂಟಾಯಿತೆಂದು ಅಭಿಪ್ರಾಯಪಟ್ಟಿದ್ದು ಅಲಹಾಬಾದಿನಲ್ಲಿರುವ "ಸಂಗಮ" ಭೌಗೋಳಿಕ ಅಂಶಗಳ ಅನ್ವಯ "ಇತ್ತೀಚಿನ ತಿಳಿವಳಿಕೆ" ಎಂದಿದ್ದಾರೆ. *

* ಅನುಬಂಧ ನೋಡಿರಿ

"ಉಪಗ್ರಹಗಳ ಮೂಲಕ ಸಂಗ್ರಹಿಸಲಾದ ಕಂಪ್ಯೂಟರ್ ಆಧಾರಿತ ದೃಶ್ಯಗಳು ಹಾಗೂ ಡಿಜಿಟಲ್ ಮಾಹಿತಿಗಳ ನೆರವಿನಿಂದ ಮೂರನೇ ಭೂ ಯುಗದ ಸ್ತರದ ಮೇಲಿನ ಮತ್ತು ಅತ್ಯಂತ ನೂತನ ಸ್ತರದ ಕೆಳಗಿನ ಸಂಶೋಧಕರು ಗಂಗೆಯ ಮಾರ್ಗವನ್ನು ಗುರುತಿಸುವುದನ್ನು ಸಾಧ್ಯವಾಗಿಸಿಕೊಂಡಿದ್ದಾರೆ. ಕೇಂದ್ರದ ನಿರ್ದೇಶಕ ಡಾ. ಇಕ್ಬಾಲುದ್ದೀನ್ ಅವರ ಅನ್ವಯ ಗಂಗೆಯ ಮಾರ್ಗದಲ್ಲಾದ ಬದಲಾವಣೆ ಕ್ರಿ. ಪೂ. 10,000 ದಲ್ಲಿ ಸಂಭವಿಸಿತು. ಈ ಭಾಗದಲ್ಲಿನ ಹೊಸ ಕಟ್ಟಡಗಳು ಹಾಗೂ ರಚನೆಗಳು ನದಿಯ ಮಾರ್ಗ ಬದಲಾವಣೆಗೆ ಕಾರಣವಾಗಿದೆ.

ಸಾವಿರಾರು ವರ್ಷಗಳ ಹಿಂದೆ ಇದು ಹೀಗೇ ಇದ್ದಿರಬಹುದಾದ್ದರಿಂದ ಈ ಸಂಶೋಧಕರು ಭೂಮಿಯ ತಳಭಾಗದ ಛಾಯಾಚಿತ್ರಗಳನ್ನು ತೆಗೆಯುವಲ್ಲಿ ಯಶಸ್ವಿಯಾಗಿದ್ದಾರೆ.

"ವಿಜ್ಞಾನಿಗಳು ಪರೋಕ್ಷ ಮಾಹಿತಿ ಉಪಕರಣಗಳನ್ನು ಹವಾಮಾನದ ಮುನ್ಸೂಚನೆ ಹಾಗೂ ಭೂ ಬಳಕೆ, ಬಂಜರು ಭೂಮಿ ಹಾಗೂ ಅಂತರ್ಜಲ ಅಧ್ಯಯನಗಳಿಗಾಗಿ ಬಳಸುತ್ತಿದ್ದಾರೆ. ಈ ಸೌಲಭ್ಯವನ್ನು ಭೂಮಿಯ ಮೇಲಿರುವ ವಸ್ತುಗಳ ಬಗ್ಗೆ ಮಾಹಿತಿಯನ್ನು ಉಪಗ್ರಹಗಳಿಗೆ ಜೋಡಿಸಲಾದ ರೇಡಿಯೋ ಮೀಟರ್ ನೆರವಿನಿಂದ ಸಂಗ್ರಹಿಸಡಲಾಗುತ್ತದೆ."

"ಇದು ಇನ್ನೂ ಆರಂಭಿಕ ಹಂತದಲ್ಲಿದ್ದರೂ, ಈ ಪರೋಕ್ಷ ತಿಳಿವಳಿಕೆ ಕ್ರಮವು ದೆಹಲಿಯ ಸತತ ನೀರಿನ ಕೊರತೆಯನ್ನು ನಿವಾರಿಸುವ ಸಲುವಾಗಿ, ಗಂಗಾನದಿಯ ಮೂಲ ನಾಲೆಗಳ ಕೆಲವು ಭಾಗಗಳನ್ನು ಪುನಃಶ್ಚೇತನಗೊಳಿಸುವ ಸಲುವಾಗಿ ಕೇಂದ್ರಕ್ಕೆ ಸಲಹೆಯೊಂದನ್ನು ತಾವು ನೀಡಲಿದ್ದೇವೆಂಬುದಾಗಿ ಡಾ. ಇಕ್ಬಾಲುದ್ದೀನ್ ಅವರು ಟೈಮ್ಸ್ ಆಫ್ ಇಂಡಿಯಾದ ಸುದ್ದಿ ವಿಭಾಗಕ್ಕೆ ತಿಳಿಸಿದ್ದಾರೆ.

"ಪ್ರಸ್ತುತ ದೆಹಲಿಗೆ ಗಂಗೆಯ ನೀರನ್ನು ಘಜಿಯಾಬಾದ್ ಬಳಿಯಿರುವ ಹಿಂದೋನ ನದಿಯ ಸಮತೋಲನ ಜಲಾಶಯದ ಮಾರ್ಗವಾಗಿ ಮೇಲ್ದಂಡೆ ಗಂಗಾ ನಾಲೆಯ ಕವಲು ಹೊಳೆಯ ಮುಖಾಂತರ ಸರಬರಾಜು ಮಾಡಲಾಗುತ್ತಿದೆಯೆಂದು ಡಾ. ಇಕ್ಬಾಲುದ್ದೀನ್ ತಿಳಿಸಿದರು. ವಾಸ್ತವವಾಗಿ, ಹಿಂದೋನವನ್ನು ಗಂಗೆಯ ಪ್ರಾಚೀನ ಪ್ರವಾಹ ಬಯಲಿನಿಂದ ಹರಿಯುತ್ತಿರುವ ಅನುಪಯುಕ್ತ ತೊರೆ ಎಂಬುದಾಗಿ ವಿವರಿಸಲಾಗಿದೆ. ಆದರೆ ಈ ಜಲಾಶಯವು ಸೀಮಿತವಾದ ಸಂಗ್ರಹ ಸಾಮರ್ಥ್ಯವನ್ನು ಹೊಂದಿದೆ.

"ಈ ಸಲಹೆಯ ಪ್ರಕಾರ ಹಿಂದೋನ್ ಹಾಗೂ ಬಿಜನೂರು ಪಟ್ಟಣದ ಪಶ್ಚಿಮಕ್ಕಿರುವ ಮಧ್ಯೆ ಗಂಗೆಯ ಮೂಲ ಪ್ರಾಚೀನ ಅಣೆಕಟ್ಟನ್ನು ಸೇರಿಸುವ ಮೂಲಕ ಹಿಂದೋನ್ 40 ಕಿ.ಮೀ. ಉದ್ದದ ಸ್ಥಳವು ಗಂಗೆಯ ಹೆಚ್ಚಿನ ನೀರನ್ನು ಸಂಗ್ರಹಿಸಲು ಒದಗುತ್ತದೆ".)

ಬ್ರಹ್ಮನು ಯಾಗವೊಂದನ್ನು ನಡೆಸುತ್ತಿದ್ದಾಗ ವರುಣನ ಪರವಾಗಿ ಭೃಗುವು ಯಜ್ಞಕುಂಡದಿಂದಲೇ ಜನಿಸಿದ. (ಭೃಗುವಿನ ಪತ್ನಿಯ ಹೆಸರು ಪ್ರಲೋಮ). ಅವನು ದೂರ್ವಾಸ, ನಾರದ ಮೊದಲಾದವರಂತೆಯೇ ಅಂತರಿಕ್ಷದಲ್ಲಿ ಪಯಣಿಸಬಲ್ಲವನಾಗಿದ್ದು ಅವನು ಭಾರದ್ವಾಜ ಮುನಿಗೆ ಖಗೋಳ ವಿವರಗಳನ್ನು ತಿಳಿಸಿದ್ದು, ಖಗೋಳ ವಿಜ್ಞಾನವನ್ನೊಳಗೊಂಡ "ಭೃಗು ಸಂಹಿತೆಯ" ಕರ್ತೃ. ಹೊಟ್ಟೆಯೊಳಗಿರುವ ಗಾಳಿಯು ಹೇಗೆ ತನ್ನ ಕೆಲಸದ ಮೂಲಕ ಜಠರವನ್ನು ಸುಸ್ಥಿತಿಯಲ್ಲಿಡುತ್ತದೆ ಎಂಬುದನ್ನು ಅವನು ವಿವರಿಸಿದ್ದಾನೆ. ಉನ್ನತ ವೇದಾಂತಿಯಾಗಿ ಅವನು ಜೀವಂತ ಅಸ್ತಿತ್ವದ ಶಾಶ್ವತತೆಯನ್ನು ತರ್ಕಬದ್ಧವಾಗಿ ಸ್ಥಾಪಿಸಿದ್ದಾನೆ. ಅವನು ಪುರಾತನೂ ಶಾಸ್ತ್ರಜ್ಞನೂ ಆಗಿದ್ದೂ ಭೂ ಇತಿಹಾಸದ ವಿಕಾಸವನ್ನು ವಿವರಿಸಿದ್ದಾನೆ. ಮಾನವ ಸಮಾಜದ ನಾಲ್ಕು ವಿಭಾಗಗಳನ್ನು ವೈಜ್ಞಾನಿಕವಾಗಿ ವಿವರಿಸಿರುವವನೂ ಇವನೇ.

ಅಂಗೀರನು ಬ್ರಹ್ಮನ ಆರನೆಯ ಮಾನಸ ಪುತ್ರನಾಗಿದ್ದು ಬೃಹಸ್ಪತಿಯ ಪಿತನು. ಉತಥ್ಯ ಮತ್ತು ಸಂವರ್ತರು ಅವನ ಪುತ್ರರು.

ಇವರೆಲ್ಲರೂ ಸಮಾವೇಶಗೊಂಡಿದ್ದಾಗ ಪರೀಕ್ಷಿತ ರಾಜನು ಅವರನ್ನು ಗೌರವದಿಂದ ಬರಮಾಡಿಕೊಂಡನು. ರಾಜನು ಹೇಳಿದನು : " ಉನ್ನತಾತ್ಮಗಳಿಂದ ಬಳುವಳಿಗಳನ್ನು ಪಡೆಯಲು ತರಬೇತಿಗೊಂಡ ನಾವು ದೊರೆಗಳಲ್ಲೆಲ್ಲ ಅತ್ಯಂತ ಕೃತಾರ್ಥರು". ತನ್ನನ್ನು ಸಂಪೂರ್ಣವಾಗಿ ಶರಣಾಗತಿಯಾದ ಆತ್ಮವೆಂದು ಅಂಗೀಕರಿಸಬೇಕೆಂದು ಅವನು ಋಷಿಗಳನ್ನು ವಿನಂತಿಸಿಕೊಂಡನು. ವಿಷ್ಣುವಿನ ವೈಭವವನ್ನು ಹಾಡಿ ಹೊಗಳುವುದನ್ನು ಮುಂದುವರಿಸುವಂತೆ ಅವನು ಅವರಿಗೆ ವಿನಂತಿಸಿಕೊಂಡನು. ಹೀಗೆ ದೊರೆಯು ಆಮರಣ ನಿರಶನಕ್ಕಾಗಿ ಕೂತನು.

ಅಧ್ಯಾಯ - 1

# ಶ್ರೀ ಶುಕಾಚಾರ್ಯರ ಆಗಮನ

(ಈ ಅಧ್ಯಾಯವು ವ್ಯಕ್ತಗೊಂಡ ವಿಶ್ವದ ಸೃಷ್ಟಿ, ಸೃಷ್ಟಿಯ ಪರಿಷ್ಕರಣೆ, ವಿರಾಟ ಪುರುಷನ ದರ್ಶನ ಮತ್ತು ಭಗವಂತನ ವಿವಿಧ ರೂಪಗಳನ್ನು ಕುರಿತದ್ದಾಗಿದೆ)

ರಾಜನು ಋಷಿಗಳನ್ನು ಪ್ರಶ್ನಿಸಿದನು : "ಎಲ್ಲ ಪರಿಸ್ಥಿತಿಗಳಲ್ಲೂ ಪ್ರತಿಯೊಬ್ಬನೂ ಮಾಡಬೇಕಾದ ಹಾಗೂ ನಿರ್ದಿಷ್ಟವಾಗಿ ಇನ್ನೇನು ಸಾಯಲಿರುವವರು ಮಾಡಬೇಕಾದ ನಿಷ್ಕಲ್ಮಷ ಕರ್ತವ್ಯದ ಬಗ್ಗೆ ದಯವಿಟ್ಟು ಯೋಚನೆ ಮಾಡಿ ಹೇಳಿ" . ಆ ಸಂದರ್ಭದಲ್ಲಿ ವ್ಯಾಸಮುನಿಯ ಮಗನಾದ ಶ್ರೀ ಶುಕಾಚಾರ್ಯರು ಕಾಣಿಸಿಕೊಂಡರು. ಅವರಿಗೆ ಆಗ ಇನ್ನೂ ಹದಿನಾರು ವರ್ಷ ವಯಸ್ಸಾಗಿದ್ದು ಅತ್ಯಂತ ಸುಂದರ ಶರೀರವನ್ನು ಹೊಂದಿದ್ದರು. ಋಷಿಗಳೆಲ್ಲರೂ ಶ್ರೀ ಶುಕಾಚಾರ್ಯರನ್ನು ಸುತ್ತುವರಿದರು. ರಾಜನು ಅವರ ಬಳಿಗೆ ತೆರಳಿ ತನ್ನ ಗೌರವವನ್ನು ಸಲ್ಲಿಸಿದನು. "ನೀವು ಮುನಿಗಳು ಹಾಗೂ ಭಕ್ತಾದಿಗಳೆಲ್ಲರಿಗೂ ಅಧ್ಯಾತ್ಮಿಕ ಗುರು" ಎಂಬುದಾಗಿ ರಾಜನು ಅವರಿಗೆ ಹೇಳಿ ಎಲ್ಲ ಜನರಿಗೆ ಅದರಲ್ಲೂ ಇನ್ನೇನು ಸಾಯಲಿರುವವರಿಗೆ ಪರಿಶುದ್ಧಗೊಳ್ಳುವ ಮಾರ್ಗವನ್ನು ತೋರಬೇಕೆಂದು ವಿನಂತಿಸಿಕೊಂಡನು. ರಾಜನು ಮುಂದುವರಿದು ಶ್ರೀ ಶುಕಾಚಾರ್ಯರಿಗೆ "ಮನುಷ್ಯನೊಬ್ಬ ಯಾವುದನ್ನು ಆಲಿಸಬೇಕು, ಪಠಿಸಬೇಕು, ಸ್ಮರಣೆಯಲ್ಲಿಡಬೇಕು ಹಾಗೂ ಆರಾಧಿಸಬೇಕು ಮತ್ತು ಯಾವುದನ್ನು ಅವನು ಮಾಡಬಾರದು ಎಂಬುದನ್ನು ಕೃಪೆಯಿಟ್ಟು ತಿಳಿಸಿ" ಎಂದನು.

ಶ್ರೀ ಸುತನಿಂತೆಂದನು: ರಾಜನು ಹೀಗೆ ಪ್ರಿಯವಾದ ಮಾತಿನಿಂದ ಮುನಿಯೊಂದಿಗೆ ಮಾತನಾಡಿ ಅವರನ್ನು ಪ್ರಶ್ನಿಸಿದನು. ಆಗ ವ್ಯಾಸದೇವನ ಪುತ್ರರಾದ ಹಾಗೂ ಧಾರ್ಮಿಕ ತತ್ವಗಳನ್ನು ಬಲ್ಲ ಉನ್ನತ ಹಾಗೂ ಶಕ್ತಿಯುತ ವ್ಯಕ್ತಿತ್ವವುಳ್ಳವರು ತಮ್ಮ ಉತ್ತರವನ್ನು ಹೇಳತೊಡಗಿದರು.

## ವ್ಯಕ್ತಗೊಂಡ ವಿಶ್ವ

ನಾವೀಗ ಸೃಷ್ಟಿಯ ನಂತರದ್ದನ್ನು ಹಾಗೂ ವ್ಯಕ್ತಗೊಂಡಿರುವ ವಿಶ್ವವನ್ನು ಕುರಿತ ವಿವರಣೆಯನ್ನು ನೀಡಲಿದ್ದೇವೆ.

ಪರೀಕ್ಷಿತ ಮಹಾರಾಜನು ಕೇಳಲಾದ ಪ್ರಶ್ನೆಗೆ ಉತ್ತರಿಸುತ್ತಾ ಶ್ರೀ ಶುಕಾಚಾರ್ಯರು ಐಹಿಕ ಆಲೋಚನೆಗಳಲ್ಲಿ ಮುಳುಗಿರುವ, ಪರಮ ಸತ್ಯದ ತಿಳಿವಳಿಕೆಯ ಬಗ್ಗೆ ಕುರುಡಾಗಿರುವಂಥವರು ಮಾನವ ಸಮಾಜದಲ್ಲಿ ಕೇಳುವಂಥಾ ಅನೇಕ ವಿಷಯಗಳನ್ನು ಹೊಂದಿದ್ದಾರೆ. ಅವರು ತಮ್ಮ ಕಾಲವನ್ನು ವ್ಯರ್ಥವಾಗಿ ಕಳೆದಿದ್ದು ತಮ್ಮ ಶರೀರ, ಮಕ್ಕಳು ಹಾಗೂ ಪತ್ನಿಯ ಬಗ್ಗೆ ವ್ಯಾಮೋಹವನ್ನಿರಿಸಿಕೊಂಡು ತಮ್ಮದೇ ವಿನಾಶವನ್ನು ಕಾಣದವರಾಗಿದ್ದಾರೆ. ಎಲ್ಲ ಸಂಕಷ್ಟಗಳಿಂದ ವಿಮುಕ್ತಗೊಳ್ಳಲು ಬಯಸುವವರು ಅತ್ಯದ್ಭುತ

ಆತ್ಮನಾದ ದೇವಪ್ರಮುಖನ ವೈಭವವನ್ನು ಹಾಗೂ ಆತನ ವ್ಯಕ್ತಿತ್ವವನ್ನು ಸ್ಮರಿಸಬೇಕು. ಶ್ರೀ ಶುಕಾಚಾರ್ಯರು ಎಲ್ಲ ವೇದಗಳಿಗೂ ಸಮನಾದ ಶ್ರೀಮದ್ಭಾಗವತವೆಂಬ ವೈದಿಕ ಸಾಹಿತ್ಯವನ್ನು ತಾವು ತಮ್ಮ ತಂದೆಯಾದ ಶ್ರೀ ದ್ವೈಪಾಯನ ವ್ಯಾಸದೇವರಿಂದ ಕಲಿತಿರುವುದಾಗಿ ತಿಳಿಸಿದರು. ಆದ್ದರಿಂದ ಶ್ರೀ ಶುಕಾಚಾರ್ಯರು ಪರೀಕ್ಷಿತ ಮಹಾರಾಜನಿಗೆ ಭಾಗವತವನ್ನು ಬೋಧಿಸಲು ನಿರ್ಧರಿಸಿದರು.

ಶ್ರೀ ಶುಕಾಚಾರ್ಯರು ನುಡಿದರು : "ನೀನು ಶ್ರೀ ಕೃಷ್ಣ ಪರಮಾತ್ಮನ ಅತ್ಯಂತ ನಿಷ್ಠಾವಂತ ಭಕ್ತನಾದ್ದರಿಂದ ನಾನು ನಿನ್ನ ಮುಂದೆ ಶ್ರೀಮದ್ಭಾಗವತವನ್ನು ಪಠಿಸುತ್ತೇನೆ". ಶ್ರೀಮದ್ಭಾಗವತವನ್ನು ಸಂಪೂರ್ಣ ನಿಷ್ಠೆ ಹಾಗೂ ಭಕ್ತಿಯಿಂದ ಯಾರು ಪಠಿಸುತ್ತಾರೋ ಅವರು ಮೋಕ್ಷವನ್ನೊದಗಿಸುವ ಅತ್ಯುನ್ನತ ದೇವನ ಬಗ್ಗೆ ಅವಿಚ್ಛಿನ್ನವಾದ ನಂಬಿಕೆಯನ್ನು ಗಳಿಸುತ್ತಾರೆ. ಭಗವಂತನ ನಿರಂತರ ಪವಿತ್ರ ನಾಮಸ್ಮರಣೆ ಮಾತ್ರ ಯಶಸ್ಸಿಗೆ ಏಕೈಕ ಹಾದಿ. ವ್ಯರ್ಥವಾಗಿ ವರ್ಷಗಳು ಕಳೆದರೂ ಅನನುಭವಗೊಂಡ ಸುದೀರ್ಘ ಜೀವನ ಒಳಿತಲ್ಲ.

ಋಷಿಸದೃಶ ದೊರೆಯಾದ ಖಟವಾಂಗನು ತನ್ನ ಜೀವಿತ ಕಾಲ ಕೇವಲ ಇನ್ನೊಂದು ಕ್ಷಣ ಮಾತ್ರ ಎಂದು ತಿಳಿದಾಗ ಎಲ್ಲ ಐಹಿಕ ಚಟುವಟಿಕೆಗಳಿಂದಲೂ ತನ್ನನ್ನೇ ಮುಕ್ತಗೊಳಿಸಿಕೊಂಡ. (ಮಹಾರಾಜ ಖಟವಾಂಗನು ಮೇಲಿನ ಉಪಗ್ರಹಗಳಲ್ಲಿದ್ದ ಉಪದೇವತೆಗಳಿಂದ, ರಾಕ್ಷಸರೊಂದಿಗೆ ಕಾದಾಡಲು ಆಹ್ವಾನಿಸಲ್ಪಟ್ಟಾಗ ದೊರೆಯಾದ ಅವನು ಉಪದೇವತೆಗಳ ಸಂಪೂರ್ಣ ತೃಪ್ತಿಗಾಗಿ ಸಮರಗಳಲ್ಲಿ ಕಾದಾಡಿದ. ಉಪದೇವತೆಗಳು ಅವನಿಗೆ ಐಹಿಕ ಸಂತೋಷಕ್ಕಾಗಿ ಹೆಚ್ಚಿನ ಆಯುಷ್ಯವನ್ನು ನೀಡುತ್ತೇವೆಂದಾಗ ಅವನು ಅಲ್ಪವಾದ ಆ ಆಮಿಷವನ್ನು ತಿರಸ್ಕರಿಸಿದ. ಅವನು ಎಲ್ಲ ಐಹಿಕ ಸಂತೋಷಗಳನ್ನೂ ತ್ಯಜಿಸಿ ದೇವರಿಗೆ ಮೊರೆ ಹೋಗಲು ತನ್ನನ್ನೇ ಸನ್ನದ್ಧಗೊಳಿಸಿಕೊಂಡ). ಆದ್ದರಿಂದ ಶ್ರೀ ಶುಕಾಚಾರ್ಯರು ಪರೀಕ್ಷಿತನಿಗೆ ಅವನ ಬದುಕು ಇನ್ನೂ ಏಳು ದಿನಗಳಿಗೆ ಮಾತ್ರ ಸೀಮಿತವಾಗಿರುವುದರಿಂದ ಅತ್ಯುತ್ತಮ ಉದ್ದೇಶಗಳಿಗಾಗಿ ಧಾರ್ಮಿಕ ಕ್ರಿಯೆಗಳನ್ನು ನೆರವೇರಿಸಬೇಕೆಂದು ತಿಳಿಸಿದ.

ಒಬ್ಬರು ಜೀವನದ ಕಡೆಯ ಹಂತದಲ್ಲಿ ಸಾವಿನ ಬಗ್ಗೆ ಭಯಪಡದಿರುವಷ್ಟು ಧೈರ್ಯವಂತರಾಗಿರಬೇಕು. ಆದರೆ ಯಾರೇ ಆದರೂ ಐಹಿಕ ಶರೀರದ ಬಗ್ಗೆ ಹಾಗೂ ಅದಕ್ಕೆ ಸಂಬಂಧಿಸಿದ ಪ್ರತಿಯೊಂದರ ಬಗ್ಗೆ ಹಾಗೂ ಇನ್ನಿತರ ಆಸೆಗಳ ಬಗ್ಗೆ ಸಂಪರ್ಕವನ್ನು ಕಳೆದುಕೊಳ್ಳಬೇಕು. ಸ್ವಯಂ ನಿಯಂತ್ರಣವನ್ನು ಅಭ್ಯಸಿಸಿ "ಓಂ" ಎಂಬ ಪದದ ಬಗ್ಗೆ ಧ್ಯಾನಮಗ್ನರಾಗುವಷ್ಟು ಉಸಿರಾಟವನ್ನು ಹಾಗೂ ಮನಸ್ಸನ್ನು ನಿಯಂತ್ರಿಸಿಕೊಳ್ಳಲು ಏಕಾಂತ ಸ್ಥಳದಲ್ಲಿ ಕೂತು ಮನಸ್ಸನ್ನು ಕೇಂದ್ರಿಕರಿಸಬೇಕು. ಹೀಗೆ ಮಾಡುವಾಗ ಬೀಜ ಮಂತ್ರವನ್ನು ಮರೆಯಬಾರದು. ('ಓಂ'ಕಾರ ಅಥವಾ 'ಪ್ರಣವ' ಎಂಬುದು ಧ್ಯಾನ ಸಾಕ್ಷಾತ್ಕಾರದ ಮೂಲವಾಗಿದ್ದು ಅದನ್ನು ಉಸಿರಾಟ ಕ್ರಿಯೆಗೆ ಸಂಬಂಧಿಸಿದಂತೆ ಪಠಿಸಬೇಕು. ಅದು ಧ್ಯಾನದ ಸಂಕೇತ. ಉನ್ನತ ದಾರ್ಶನಿಕರಿಂದ ರೂಪಗೊಂಡ ಈ ತಾಂತ್ರಿಕ ಮಾರ್ಗ ಮಗ್ನತೆಗೆ ನೆರವಾಗುವಂಥದ್ದು. ಇದರಿಂದಾಗಿ ಲೌಕಿಕ ವಿಷಯಗಳಲ್ಲೇ

ಕೇಂದ್ರೀಕೃತಗೊಂಡಿರುವ ಮನಸ್ಸನ್ನು ನಿಯಂತ್ರಣಕ್ಕೆ ಒಳಪಡಿಸಬಹುದು. ಇದಾದ ನಂತರ ಒಬ್ಬರು ವಿಷ್ಣುವಿನ ಇಡೀ ಶರೀರವನ್ನೇ ಗಮನಿಸದೆ ಅವನ ಒಂದೊಂದು ಅವಯುವವನ್ನು ಕುರಿತು ಧ್ಯಾನಿಸಬೇಕು. ಶ್ರೀ ಶುಕಾಚಾರ್ಯರು ಹೇಳಿದರು: "ಎಲೈ ದೊರೆಯೇ, ಈ ರೀತಿಯ ಸ್ಮರಣೆಯಿಂದ ಹಾಗೂ ಭಗವಂತನ ಶುಭದಾಯಕ ಗುಣಗಳನ್ನು ಕಾಣಲು ಅಭ್ಯಾಸ ಮಾಡಿಕೊಳ್ಳುವುದರಿಂದಾಗಿ ಒಬ್ಬಾತ ಭಗವಂತನ ನೇರ ಸಮ್ಮುಖದಲ್ಲಿ ಭಕ್ತಿ ಮಾರ್ಗವನ್ನು ಕಂಡುಕೊಳ್ಳಬಹುದು".

ಪರೀಕ್ಷಿತ ಮಹಾರಾಜನು ಕೇಳಿದನು: "ಎಲೈ ಬ್ರಾಹ್ಮಣನೇ, ಮನಸ್ಸನ್ನು ಹೇಗೆ ಹಾಗೂ ಎಲ್ಲಿ ಕೇಂದ್ರೀಕರಿಸಬೇಕೆಂಬುದನ್ನು ಹಾಗೂ ಮಾನವನ ಮನಸ್ಸಿನಲ್ಲಿರುವ ಕಲ್ಮಶವನ್ನು ಹೇಗೆ ನಿರ್ಮೂಲಗೊಳಿಸಬೇಕು ಎಂಬುದನ್ನು ದಯವಿಟ್ಟು ವಿವರಿಸು".

ಶ್ರೀ ಶುಕಾಚಾರ್ಯರು ಉತ್ತರಿಸಿದರು: "ಕುಳಿತಿರುವ ಭಂಗಿಯಲ್ಲಿ ಒಬ್ಬಾತನು ಪ್ರಾಣಾಯಾಮದ ಮೂಲಕ ಉಸಿರಾಟದ ಕ್ರಿಯೆಯನ್ನು ಕ್ರಮಬದ್ಧಗೊಳಿಸಿಕೊಂಡು ಮನಸ್ಸನ್ನು ನಿಯಂತ್ರಿಸಿಕೊಳ್ಳುವುದಲ್ಲದೆ ಬುದ್ಧಿಶಕ್ತಿಯನ್ನು ಬಳಸಿಕೊಳ್ಳುವ ಮೂಲಕ ಇಂದ್ರಿಯಗಳನ್ನು ನಿಯಂತ್ರಿಸಿ ವಿರಾಟರೂಪನೆಂದು ಹೆಸರಾದ ಭಗವಂತನ ಸಾಮರ್ಥ್ಯವನ್ನು ತಿಳಿದುಕೊಳ್ಳಬೇಕು." ಭೂಮಂಡಲದ ಚಿಪ್ಪಿನೊಳಗೆ ಅಡಗಿದ ಏಳು ವಿಧದ ಐಹಿಕ ಅಂಶಗಳಿಂದ ಕೂಡಿರುವ ಭಗವಂತನ ಬೃಹತ್ ಸ್ವರೂಪವು ವಿರಾಟ ಕಲ್ಪನೆಯ ವಿಷಯವಾಗಿದೆ. ಅವುಗಳೆಂದರೆ : ಪಾತಾಳ - ಭಗವಂತನ ಪಾದಗಳ ಕೆಳಭಾಗ; ರಸಾತಳ - ಹಿಮ್ಮಡಿಗಳು ಹಾಗೂ ಕಾಲಬೆರಳುಗಳು; ಮಹಾತಳ - ಮೀನುಖಂಡ, ತಲಾತಳ - ಮೊಣಕಾಲು; ಮಂಡಿಗಳು - ಸುತಳ ಎಂಬುದಾಗಿ ಹೆಸರಾದ ಗ್ರಹಗಳ ವ್ಯವಸ್ಥೆ. ವಿತಳ ಮತ್ತು ಅತಳ ಎನ್ನುವುದು ಎರಡು ತೊಡೆಗಳು. ಅಂಡುಗಳು ಮಹೀತಳ. ಬಾಹ್ಯಾಕಾಶವೆನ್ನುವುದು ಅವನ ಹೊಕ್ಕಳು. ಕೊರಳು ಮಹರಗ್ರಹ. ಬಾಯಿ ಎನ್ನುವುದು ಜಾನುಗ್ರಹ. ಹಣೆ ಎನ್ನುವುದು ತಪಸ್ ಗ್ರಹ; ಸತಳ ಲೋಕ ಎನ್ನುವುದು ಒಂದು ಸಾವಿರ ಶಿರಗಳನ್ನೊಳಗೊಂಡ ಭಗವಂತನ ಮಸ್ತಕ. ಅವನ ಬಾಹುಗಳು ಇಂದ್ರನ ನೇತೃತ್ವದಲ್ಲಿರುವ ಉಪದೇವತೆಗಳು. ಅವನ ಕಿವಿಗಳು ದಶದಿಕ್ಕುಗಳು. ಭೌತಿಕ ಶಬ್ದಗಳು ಅವನ ಗ್ರಹಣ ಶಕ್ತಿ. ಅವನ ಮೂಗಿನ ಹೊಳ್ಳೆಗಳು ಅಶ್ವಿನಿ ಕುಮಾರರು, ಐಹಿಕ ಸುವಾಸನೆಯು ಅವನ ಅಘ್ರಾಣ ಶಕ್ತಿ. ಅವನ ಬಾಯಿ ಉರಿಯುವ ಅಗ್ನಿ. ಅವನ ಕಣ್ಣಿನ ಆಳಗಳು ಬಾಹ್ಯಾಕಾಶದಿಂದ ಕೂಡಿದ್ದು, ಕಣ್ಣಿನ ಗುಡ್ಡೆಗಳು ನೋಟದ ಶಕ್ತಿಯನ್ನುಳ್ಳ ಸೂರ್ಯ. ಅವನ ಕಣ್ಣಿನ ರೆಪ್ಪೆಗಳು ದಿನರಾತ್ರಿಗಳಾಗಿದ್ದು ಅವನ ಹುಬ್ಬುಗಳಲ್ಲಿ ಬ್ರಹ್ಮ ಮತ್ತು ಅವನಂಥ ಅತ್ಯುನ್ನತ ದೇವತೆಗಳು ಅಡಗಿದ್ದಾರೆ. ಅವನ ನಾಲಿಗೆ ವರುಣನನ್ನು ನಿರ್ದೇಶಿಸುವುದಾಗಿದ್ದು ಎಲ್ಲದರ ಸಾರಸರ್ವಸ್ವವೂ ಅವನ ನಾಲಿಗೆಯಲ್ಲಿ ಅಡಗಿದೆ. ವೈದಿಕ ಮಂತ್ರಗಳು ಭಗವಂತನ ಬೌದ್ಧಿಕ ಮಾರ್ಗವಾಗಿದ್ದು, ಅವನ ದಂತದಲ್ಲಿ ಪಾಪಿಗಳನ್ನು ಶಿಕ್ಷಿಸುವಂಥ ಸಾವಿನ ದೇವತೆಯಾದ ಯಮನಿದ್ದಾನೆ. ಅವನ ದಂತಪಂಕ್ತಿಯಲ್ಲಿ ಪ್ರೀತಿಯ ತಲೆ ಇದ್ದು, ಅವನ ಮುಗುಳ್ನಗೆ ಮೋಹಕತೆಯಿಂದ ಕೂಡಿದ ಶಕ್ತಿಯಾಗಿದೆ. ಐಹಿಕ ಸೃಷ್ಟಿಯ ಈ ಮಹಾಸಾಗರ ಅವನು ನಮ್ಮೆಡೆಗೆ ಬೀರುವ ನೋಟವಾಗಿದೆ.

ವಿನಯವೆನ್ನುವುದು ಅವನ ತುಟಿಗಳ ಮೇಲ್ಭಾಗದಲ್ಲಿದ್ದು, ಅವನ ಗಲ್ಲವು ಹಂಬಲವಾಗಿದೆ. ಅವನ ವಕ್ಷಸ್ಥಲವು ಧರ್ಮವಾಗಿದ್ದು, ಅಧಾರ್ಮಿಕತೆ ಎನ್ನುವುದು ಅವನ ಬೆನ್ನು. ಬ್ರಹ್ಮ ಅವನ ಶಿಶ್ನವಾಗಿದ್ದು, ಮಿತ್ರ ವರುಣರು ಅವನ ವೃಷಣ. ಸಾಗರವೇ ಅವನ ಸೊಂಟ. ಬೆಟ್ಟ ಪರ್ವತಗಳು ಅವನ ಮೂಳೆಗಳು. ನದಿಗಳು ಈ ಬೃಹತ್ ಶರೀರದ ನಾಳಗಳು. ವೃಕ್ಷಗಳು ಅವನ ಶರೀರದಲ್ಲಿನ ರೋಮಗಳು. ವಾಯುವೇ ಅವನ ಉಸಿರಾಟ. ಉರುಳುತ್ತಿರುವ ಯುಗಗಳು ಅವನ ಚಲನೆಗಳಾಗಿದ್ದು ಅವನ ಚಟುವಟಿಕೆಗಳು ಪ್ರಕೃತಿಯ ಪ್ರತಿಕ್ರಿಯೆಯ ಮೂರು ವಿಧಾನಗಳು. ವಿವಿಧ ಪಕ್ಷಿ ಸಮೂಹಗಳು ಅವನ ಕಲಾತ್ಮಕ ಪ್ರಜ್ಞೆಯ ಪ್ರತೀಕಗಳು. ಮಾನವ ಕುಲದ ಪಿತಾಮಹನೆನಿಸಿದ ಮನುವು ಅವನ ಬುದ್ಧಿಶಕ್ತಿಯ ಚಿಹ್ನೆಯಾಗಿದ್ದು, ಮಾನವ ಕುಲವೇ ಅವನ ಆವಾಸ ಸ್ಥಾನ. ದೇವಲೋಕದಲ್ಲಿನ ಜೀವಿಗಳು ಅವನ ಸಂಗೀತ ಮಮತೆಯನ್ನು ಪ್ರತಿನಿಧಿಸುತ್ತಿದ್ದು, ರಾಕ್ಷಸ ಜೀವಿಗಳು ಅವನ ಶಕ್ತಿಯನ್ನು ಪ್ರತಿನಿಧಿಸುತ್ತಾರೆ. ಇದು ದೇವ ಪ್ರಮುಖನ ವ್ಯಕ್ತಿತ್ವವನ್ನು ರೂಪಿಸಿರುವಂಥ ವಿರಾಟ್ ಕಲ್ಪನೆ. ಲೌಕಿಕ ಜಗತ್ತಿನಲ್ಲಿ ಇದಕ್ಕಿಂತಲೂ ಹೆಚ್ಚಿನದು ಯಾವುದೂ ಇಲ್ಲವಾದ್ದರಿಂದ ಮೋಕ್ಷವನ್ನು ಅಪೇಕ್ಷಿಸುವವನು ಭಗವಂತನ ಈ ರೂಪದ ಮೇಲೆ ಮನಸ್ಸನ್ನು ಕೇಂದ್ರೀಕರಿಸುತ್ತಾನೆ.

"ಪ್ರಾರಂಭದಲ್ಲಿ ವಿಶ್ವವು ವ್ಯಕ್ತಗೊಳ್ಳುವುದಕ್ಕೆ ಮೊದಲು ಬ್ರಹ್ಮದೇವನು ವಿರಾಟ್ ರೂಪವನ್ನು ಕುರಿತು ಧ್ಯಾನಿಸುತ್ತ, ಭಗವಂತನನ್ನು ಸಂತೃಪ್ತಿಗೊಳಿಸುವ ಮೂಲಕ ಕಳೆದುಕೊಂಡಿದ್ದ ತನ್ನ ಪ್ರಜ್ಞೆಯನ್ನು ಮತ್ತೆ ಪಡೆದುಕೊಂಡನು. ಜ್ಞಾನೋದಯವನ್ನು ಹೊಂದಿರುವವರು ಜೀವನದಲ್ಲಿ ಕನಿಷ್ಠ ಅಗತ್ಯಗಳನ್ನು ಪೂರೈಸಿಕೊಳ್ಳಲು ಶ್ರಮಿಸಬೇಕು. ಒಬ್ಬರು ಉನ್ನತ ಆತ್ಮಕ್ಕೆ ಸೇವೆಯನ್ನು ಸಲ್ಲಿಸಬೇಕು. ಅವನು ಜೀವನದ ಅಂತಿಮ ಗುರಿಯಾಗಿದ್ದು ಅವನನ್ನು ಆರಾಧಿಸುವ ಮೂಲಕ ಒಬ್ಬನು ಷರತ್ತುಗಳಿಂದ ಒಡಗೂಡಿದ ಅಸ್ತಿತ್ವದ ಕಾರಣವನ್ನು ಅಂತ್ಯಗೊಳಿಸಬಹುದು.

"ಒಬ್ಬರು ದೇವರನ್ನು ಧ್ಯಾನಿಸಬೇಕಾಗಿದ್ದು ಅದು ಭಗವಂತನ ಕಮಲಾರವಿಂದ ದಿಂದ ಪ್ರಾರಂಭವಾಗಿ ಅವನ ನಗುಮುಖದತ್ತ ಸಾಗಬೇಕು. ಧ್ಯಾನಿಸುವಾಗ ಅವನ ಪದ್ಮಚರಣಗಳಲ್ಲಿ ಚಿತ್ತವನ್ನಿರಿಸಿ , ಅನಂತರ ದೃಷ್ಟಿಯನ್ನು ಮೀನುಖಂಡಗಳತ್ತ, ನಂತರ ತೊಡೆಗಳಿಗೆ, ಹೀಗೆ ಮೇಲ್ಮೇಲಕ್ಕೆ ನೋಟವನ್ನು ಕೊಂಡೊಯ್ಯಬೇಕು".

"ಎಲೈ ದೊರೆಯೆ, ಯೋಗಿಯು ಮನುಷ್ಯರಿಂದೊಡಗೂಡಿದ ಈ ಭೂಮಿಯನ್ನು ಬಿಡಲು ಇಚ್ಛಿಸುವಾಗಲೆಲ್ಲ ಸಮಯ ಅಥವಾ ಸ್ಥಳದ ಬಗ್ಗೆ ವಿಚಲಿತನಾಗದೆ ಯಾರ ಗೊಂದಲಕ್ಕೂ ಸೆಳೆಯಲ್ಪಡದೆ ಜೀವ ಗಾಳಿಯನ್ನು ಕ್ರಮಬದ್ಧಗೊಳಿಸಿಕೊಂಡು ಆರಾಮವಾಗಿ ಕೂತು ಮನಸ್ಸನ್ನು ನಿಯಂತ್ರಣಕ್ಕೆ ಒಳಪಡಿಸಬೇಕು. ಅನಂತರ ಯೋಗಿಯು ಜೀವಿತ ಅಸ್ತಿತ್ವದಲ್ಲಿ ತನ್ನ ಮನಸ್ಸನ್ನು ಮುಳುಗಿಸಿ ನಂತರ ಜೀವಿಯನ್ನು ಅತ್ಯುನ್ನತ ಆತ್ಮನಲ್ಲಿ ಮುಳುಗಿಸಬೇಕು. ಧ್ಯಾನಮಗ್ನತೆಯಲ್ಲಿ ಭಕ್ತನು ನಿಧಾನವಾಗಿ ನಾಭಿಯಿಂದ ಜೀವದುಸಿರನ್ನು ಹೃದಯಕ್ಕೆ , ಎದೆಗೆ ನಾಲಗೆಯ ಮೂಲಕ ತಳ್ಳಿ ಅನಂತರ ಭಕ್ತಿಯೋಗದ ಮೂಲಕ

ಜೀವದುಸಿರನ್ನು ಮೇಲಕ್ಕೆ ಎರಡು ಹುಬ್ಬುಗಳ ಮಧ್ಯಕ್ಕೆ ತಳ್ಳಿ ಜೀವದ ಉಸಿರಿನ ಏಳು ದ್ವಾರಗಳನ್ನು ಮುಚ್ಚಿ ಅದು ಪ್ರಮುಖನನ್ನು ಸೇರಿಕೊಳ್ಳಬೇಕು. ಅವನು ಐಹಿಕ ಸಂತೋಷವನ್ನು ಕುರಿತಂತೆ ಎಲ್ಲ ಆಸೆಗಳಿಂದ ಸಂಪೂರ್ಣವಾಗಿ ಮುಕ್ತಗೊಂಡಿದ್ದರೆ ಅವನು ಮಿದುಳಿನ ರಂಧ್ರವನ್ನು ಮುಚ್ಚಿ ತನ್ನ ಐಹಿಕ ಸಂಪರ್ಕವನ್ನು ತ್ಯಜಿಸಿ ಅತ್ಯುನ್ನತದೆಡೆಗೆ ಸಾಗಬೇಕು.

"ಸಂಪೂರ್ಣ ಭೂಮಂಡಲದ ಅಂತಿಮ ವಿನಾಶದ ಸಂದರ್ಭದಲ್ಲಿ (ಬ್ರಹ್ಮನ ಬದುಕಿನ ಆಯುಷ್ಯದ ಕೊನೆ), ಅಗ್ನಿಯ ಒಂದು ನಾಲಗೆ ಅನಂತನಿಂದ ಹೊರಟಿತು. (ಬ್ರಹ್ಮಾಂಡದ ತಳದಿಂದ). ಯೋಗಿಯು ಬ್ರಹ್ಮಾಂಡದ ಎಲ್ಲ ಗ್ರಹಗಳೂ ಸುಟ್ಟು ಭಸ್ಮವಾಗುವುದನ್ನು ಕಂಡು ಬ್ರಹ್ಮನು ಸತ್ಯಲೋಕವನ್ನು ತ್ಯಜಿಸುತ್ತಾನೆ.

"ಪರಿಶುದ್ಧ ಅತ್ಮಗಳು ಮಾತ್ರ ದೇವ ಪ್ರಮುಖನ ವ್ಯಕ್ತಿತ್ವದೊಂದಿಗೆ ಸಂಪೂರ್ಣ ಅಹ್ಲಾದತೆ ಹಾಗೂ ಅವನ ಅಂಗಾಂಗ ಸ್ಥಿತಿಯೊಂದಿಗೆ ತೃಪ್ತಿ ಪಡೆಯುವ ಮೂಲಕ ಪರಿಶುದ್ಧತೆಯನ್ನು ಸಾಧಿಸಬಹುದು. ಅಂಥ ಭಕ್ತಿಪೂರ್ವಕ ಪರಿಶುದ್ಧತೆಯನ್ನು ನವೀಕರಿಸಲು ಯಾರಿಗೆ ಸಾಧ್ಯವಾಗುವುದೋ ಅವರು ಈ ಐಹಿಕ ಜಗತ್ತಿನ ಬಗ್ಗೆ ಎಂದೂ ಆಕರ್ಷಣೆಗೊಳ್ಳಲಾರರು ಹಾಗೂ ಅದಕ್ಕೆ ಹಿಂತಿರುಗಲಾರರು. ಇನ್ನೂ ಸ್ಪಷ್ಟವಾಗಿ ಹೇಳಬೇಕೆಂದರೆ ದೈವ ಪ್ರಮುಖನನ್ನು ಪ್ರೀತಿಸುವ ಮಟ್ಟವನ್ನು ಯಾರಾದರೂ ಮುಟ್ಟಬೇಕಾದರೆ ಅಂಥವರು ಐಹಿಕ ಸಂತಸದ ಬಗೆಗಿನ ಎಲ್ಲ ಆಸೆಗಳನ್ನು ಬಿಟ್ಟು ಕೊಡಬೇಕು. ಇನ್ನಾವುದೇ ಉಪದೇವತೆಗಳನ್ನು ಪೂಜಿಸುವುದನ್ನು ತಪ್ಪಿಸಬೇಕು ಹಾಗೂ ದೈವ ಪ್ರಮುಖನ ಅತ್ಯುನ್ನತ ವ್ಯಕ್ತಿತ್ವವನ್ನು ಪೂಜಿಸುವದಕ್ಕಾಗಿಯೇ ತನ್ನನ್ನು ಮೀಸಲಿಟ್ಟುಕೊಳ್ಳಬೇಕು. ಪರಿಶುದ್ಧ ಭಕ್ತನು ಯಾವುದೇ ಲಾಭದ ನಿರೀಕ್ಷೆ ಯಿಲ್ಲದೆಯೇ ದೇವರ ಸೇವೆಯಲ್ಲಿ ತೊಡಗಿರುತ್ತಾನೆ. ಇದರಿಂದಾಗಿ ಅವನಿಗೆ ಭಗವಂತನ ಬಗ್ಗೆ ಪ್ರೀತಿಯನ್ನು, ಅಂದರೆ ಶಾಂತಿ ಹಾಗೂ ಆನಂದವನ್ನು ತಂದುಕೊಳ್ಳಲು ಸಾಧ್ಯವಾಗುತ್ತದೆ".

ಪರೀಕ್ಷಿತ ರಾಜನು ಕೇಳಿದ ಪ್ರಶ್ನೆಗಳಿಗೆಲ್ಲ ತಾನು ವೇದಗಳು ನೀಡಿರುವ ವ್ಯಾಖ್ಯಾನಗಳಿಗೆ ಅನುಗುಣವಾಗಿ ಉತ್ತರಿಸಿರುವುದಾಗಿ ಶ್ರೀ ಶುಕಾಚಾರ್ಯರು ವಿವರಿಸಿದರಲ್ಲದೆ ಅದೇ ಶಾಶ್ವತ ಸತ್ಯವೆಂದೂ, ಇದು ಶ್ರೀ ಕೃಷ್ಣಪರಮಾತ್ಮನೇ ಸ್ವತಃ ಬ್ರಹ್ಮದೇವನಿಗೆ ವಿವರಿಸಿರುವಂಥದ್ದು, ಬ್ರಹ್ಮನು ವೇದಗಳನ್ನು ಮೂರು ಬಾರಿ ಅಧ್ಯಯನ ಮಾಡಿ ಅವುಗಳನ್ನು ಪರೀಕ್ಷಿಸಿದ ನಂತರ ಶ್ರೀ ಕೃಷ್ಣ ಪರಮಾತ್ಮನ ಅತ್ಯುನ್ನತ ವ್ಯಕ್ತಿತ್ವವನ್ನು ಯಾವುದು ಆಕರ್ಷಿಸುವುದೋ ಅದೇ ಧರ್ಮದ ಅತ್ಯುನ್ನತ ಪರಿಶುದ್ಧತೆ ಎಂದು ಸಮರ್ಥಿಸಿದರು. ಶ್ರೀ ಕೃಷ್ಣ ಪರಮಾತ್ಮನು ವೈಯಕ್ತಿಕ ಆತ್ಮದೊಂದಿಗೆ ಪ್ರತಿಯೊಬ್ಬರಲ್ಲೂ ಜೀವಿಸುತ್ತಾನೆ. ಈ ಅಂಶವು ನಮ್ಮ ಮೇಲಾದ ಕ್ರಿಯೆಯಲ್ಲಿ ಹಾಗೂ ಬುದ್ಧಿಶಕ್ತಿಯ ನೆರವನ್ನು ಪಡೆಯುವಂತೆ ನಮ್ಮ ಇನ್ನಿತರ ಚಟುವಟಿಕೆಗಳಲ್ಲಿ ಮುಂದುವರಿದಿದೆ ಹಾಗೂ ಕಲ್ಪಿಸಲ್ಪಟ್ಟಿದೆ. ಆದ್ದರಿಂದ ಶ್ರೀ ಶುಕಾಚಾರ್ಯರು ರಾಜನಿಗೆ "ಪ್ರತಿಯೊಬ್ಬ ಮಾನವ ಜೀವಿಯೂ ಭಗವಂತನ ಬಗ್ಗೆ ಕೇಳಿ, ವೈಭವೀಕರಿಸಿ ಅವನನ್ನು ಸ್ಮರಿಸುತ್ತಾನೆ" ಎಂದರು.

ಮುಂದೆ ಶ್ರೀ ಶುಕಾಚಾರ್ಯರು ಹೇಳಿದರು: "ಪರೀಕ್ಷಿತ ಮಹಾರಾಜನೇ, ಬುದ್ಧಿಶಕ್ತಿಯುಳ್ಳ ಮನುಷ್ಯನ ಅಂದರೆ ಸಾವಿನ ಹೊಸ್ತಿಲಲ್ಲಿರುವಾತನ ಕರ್ತವ್ಯಗಳೇನು ಎಂಬುದಾಗಿ ನೀನು ನನ್ನನ್ನು ಪ್ರಶ್ನಿಸಿದ್ದರಿಂದಾಗಿ ನಾನು ನಿನಗೆ ಉತ್ತರಿಸಿದ್ದೇನೆ. ಒಬ್ಬರು ಬುದ್ಧಿಶಕ್ತಿಯಲ್ಲಿ ಆಧ್ಯಾತ್ಮಿಕತೆಯನ್ನು ಬೆಳೆಸಿಕೊಳ್ಳಲು ಹಾಗೂ ಕುಲವನ್ನು ರಕ್ಷಿಸಿಕೊಳ್ಳಲು ಹಾಗೂ ಮುಂದುವರಿಸಿಕೊಂಡು ಹೋಗಲು ಅಗತ್ಯವಾದ ನೆರವನ್ನು ಪಡೆದುಕೊಳ್ಳಲು ವಿವಿಧ ಉಪದೇವತೆಗಳನ್ನು ಆರಾಧಿಸಬೇಕು".

## ಸೃಷ್ಟಿಯ ಪ್ರಕ್ರಿಯೆ

ಉನ್ನತರಾದ ಉಪದೇವತೆಗಳ ಕಲ್ಪನೆಗೂ ಮೀರಿದಂಥ ಈ ವಿಶಿಷ್ಟ ಜಗತ್ತುಗಳನ್ನು ಅವುಗಳಿದ್ದಂತೆಯೇ ತನ್ನ ವ್ಯಕ್ತಿಗತ ಶಕ್ತಿಯ ಮೂಲಕ ಪಡೆದಿರುವಂಥ ಭಗವಂತನ ವ್ಯಕ್ತಿತ್ವವು ಎಂಥದ್ದಾಗಿದೆ ಎಂಬುದಾಗಿ ಪರೀಕ್ಷಿತ ರಾಜನು ತಿಳಿಯ ಬಯಸಿದನು. ಭಗವಂತನು ತನ್ನ ವಿವಿಧ ಶಕ್ತಿಗಳನ್ನು ಹಾಗೂ ವಿವಿಧ ವಿಸ್ತರಣೆಗಳನ್ನು ಹೇಗೆ ಬಳಸಿಕೊಳ್ಳುತ್ತಾನೆ ಮತ್ತು ಆಟಗಾರನ ಕ್ರೀಡಾ ಮನೋಭಾವದಿಂದ ವಿಶ್ವವನ್ನು ಕಾಪಾಡುವಲ್ಲಿ ಹಾಗೂ ನಿರ್ನಾಮಗೊಳಿಸುವಲ್ಲಿ ಅವನು ಹೇಗೆ ಉಪಯೋಗಿಸಿಕೊಳ್ಳುತ್ತಾನೆ ಎನ್ನುವುದನ್ನು ದೊರೆಯು ತಿಳಿಯ ಬಯಸಿದನು.

ಶ್ರೀ ಶುಕಾಚಾರ್ಯರು ಹೇಳಿದರು: "ವಿಷ್ಣುವೇ ವೇದಗಳು, ಧಾರ್ಮಿಕ ಗ್ರಂಥಗಳು ಹಾಗೂ ಸರಳತೆಯ ಸಾಕಾರ ರೂಪ. ಅವನು ಬ್ರಹ್ಮದೇವ ಹಾಗೂ ಶಿವನಿಂದ ಆರಾಧಿಸಲ್ಪಟ್ಟವನು. ಪ್ರಪ್ರಥಮವಾಗಿ ಜನಿಸಿದ ಬ್ರಹ್ಮನು, ಜನನದಿಂದಲೂ ವೈದಿಕ ಜ್ಞಾನವನ್ನು ಆವಿರ್ಭವಿಸಿಕೊಂಡಿದ್ದ. ಅವನಿಗೆ ಭಗವಂತನು ನೇರವಾಗಿ ಇದನ್ನು ತಿಳಿಸಿದ್ದನು. ನಾರದನು ತನ್ನನ್ನು ಪ್ರಶ್ನಿಸಿದಾಗ ಬ್ರಹ್ಮದೇವನು ಹೇಳಿದನು: "ತನ್ನ ಸ್ವಂತ ಬ್ರಹ್ಮಜ್ಯೋತಿಯಿಂದ ಭಗವಂತನು ಸೃಷ್ಟಿಸಿದ ನಂತರ ನಾನು ಸೃಷ್ಟಿಸುತ್ತೇನೆ. ಸೂರ್ಯನು ತನ್ನ ಜ್ವಾಲೆಯನ್ನು ಉದ್ದೀಪನಗೊಳಿಸಿದಾಗ ಚಂದ್ರ, ಕುಲುಮೆಗಳು, ಪ್ರಭಾವಶಾಲಿ ಗ್ರಹಗಳು ಹಾಗೂ ಮಿನುಗುವ ನಕ್ಷತ್ರಗಳೂ ಸಹ ತಮ್ಮ ಪ್ರಕಾಶವನ್ನು ಬೆಳಗಿಸುತ್ತವೆ. ಸೃಷ್ಟಿಯ ಪಂಚಭೂತಗಳು, ಅವುಗಳಿಂದ ಉಂಟಾದ ಪ್ರಕ್ರಿಯೆ, ಶಾಶ್ವತ ಕಾಲ ಮತ್ತು ವ್ಯಕ್ತಿ ಜೀವನದ ಸ್ವಭಾವ ಅಥವಾ ಪ್ರಲೋಭನೆ ಇವೆಲ್ಲ ವಾಸುದೇವನ ವಿಭಿನ್ನ ಭಾಗಗಳು ಹಾಗೂ ಅಂಶಗಳಾಗಿವೆ.

ವೈದಿಕ ಸಾಹಿತ್ಯ, ಉಪದೇವತೆಗಳು ಮತ್ತು ವಿವಿಧ ಗ್ರಹಗಳು ಭಗವಂತನಿಗಾಗಿ ಉಂಟಾದುವಾಗಿದ್ದು ಅವನನ್ನು ಮುಗ್ಧಗೊಳಿಸುವ ಸಲುವಾಗಿ ವಿವಿಧ ಯಜ್ಞಗಳನ್ನು ಮಾಡಲಾಗಿದೆ. ಅವನಿಂದ ಸ್ಫೂರ್ತಿಗೊಂಡ ಬ್ರಹ್ಮನು ಅವನ ದರ್ಶನದಿಂದ ಈಗಾಗಲೇ ಸೃಷ್ಟಿಸಲ್ಪಟ್ಟಿರುವಂಥ ಸರ್ವವ್ಯಾಪಿಯಾದ ಅತ್ಯುನ್ನತ ಆತ್ಮನಾಗಿದ್ದು ಅದೂ ಸಹ ಅವನಿಂದಲೇ ಸೃಷ್ಟಿಗೊಂಡವು ಎಂಬುದನ್ನು ಪತ್ತೆ ಮಾಡಿದ. ಐಹಿಕ ಸ್ವಭಾವದ ಮೂರು ವಿಧಾನಗಳು ಭೌತದ್ರವ್ಯ, ಜ್ಞಾನ ಹಾಗೂ ಚಟುವಟಿಕೆಯಾಗಿ ರೂಪಾಂತರಗೊಂಡು,

ನಿರಂತರವಾಗಿ ಅತಿಶಯ ಜೀವಿಯನ್ನು ಇಡಿಯಾಗಿ, ಕಾರಮ ಪರಿಣಾಮಗಳ ಪರಿಸ್ಥಿತಿಗಳ ಕೆಳಗೆ ತಂದು, ಅಂಥ ಚಟುವಟಿಕೆಗಳಿಗೆ ಅವನನ್ನು ಹೊಣೆಯಾಗಿಸಿತು. ಅವನು, ಸತ್ಯವನ್ನೂ ಒಳಗೊಂಡಂತೆ ಸರ್ವರ ನಿಯಂತ್ರಕನು. ಹೀಗೆ ಅವನು ತನ್ನದೇ ಶಕ್ತಿಯಿಂದ ಶಾಶ್ವತ ಕಾಲ ಜೀವಿಗಳ ಕರ್ಮ ಹಾಗೂ ಅವರನ್ನು ಯಾವುದಕ್ಕಾಗಿ ಸೃಷ್ಟಿಸಿ ಮತ್ತೆ ಸ್ವತಂತ್ರವಾಗಿ ಅವನ್ನು ಸೇರಿಸುತ್ತಾನೆ. ಪ್ರಥಮ ಪುರುಷನ ಮೊದಲ ಅವತಾರದ ನಂತರ ಮಹತ್ ತತ್ವ ಅಥವಾ ಐಹಿಕ ಸೃಷ್ಟಿಯ ತತ್ವಗಳು ರಚಿತಗೊಂಡು ಅನಂತರ ಕಾಲವು ಪ್ರಕಟಗೊಂಡು ಕಾಲ ಕ್ರಮೇಣ ತ್ರಿಗುಣಗಳು ಕಾಣಿಸಿಕೊಂಡವು. ಗುಣವೆಂಬುದರ ಅರ್ಥ ಮೂರು ಮೌಲಿಕ ಗುಣಗಳ ಗೋಚರಿಸುವಿಕೆ. ಅವು ಚಟುವಟಿಕೆಗಳಾಗಿ ರೂಪಾಂತರಗೊಳ್ಳುತ್ತವೆ. ಮಹತ್ ತತ್ವಗಳು ಪ್ರಲೋಭನೆಗೊಂಡಾಗ ಐಹಿಕ ಚಟುವಟಿಕೆಗಳು ಸಂಭವಿಸುತ್ತವೆ. ಮೊದಲು ಒಳಿತು ಹಾಗೂ ಕಾಮದ ವಿಧಾನಗಳು ರೂಪಾಂತರಗೊಳ್ಳುತ್ತವೆ. ಮಹತ್ ತತ್ವಗಳು ಪ್ರಲೋಭನೆಗೊಂಡಾಗ ಐಹಿಕ ಚಟುವಟಿಕೆಗಳು ಸಂಭವಿಸುತ್ತವೆ. ಮೊದಲು ಒಳಿತು ಹಾಗೂ ಕಾಮದ ವಿಧಾನಗಳು ರೂಪಾಂತರಗೊಳ್ಳುತ್ತವೆ. ಮಹತ್ ತತ್ವಗಳು ಪ್ರಲೋಭನೆಗೊಂಡಾಗ ಐಹಿಕ ಚಟುವಟಿಕೆಗಳು ಸಂಭವಿಸುತ್ತವೆ. ಮೊದಲು ಒಳಿತು ಹಾಗೂ ಅನಂತರ ಮೌಢ್ಯದ ವಿಧಾನದಿಂದಾಗಿ ಭೌತದ್ರವ್ಯ, ಜ್ಞಾನ ಮತ್ತು ಐಹಿಕ ತಿಳಿವಳಿಕೆಯ ವಿವಿಧ ಚಟುವಟಿಕೆಗಳು ಸಂಭವಿಸುತ್ತವೆ. (ಪ್ರತಿಯೊಂದು ವಿವರಣೆಯ ಲೌಕಿಕ ಸೃಷ್ಟಿಗಳು ಹೆಚ್ಚು ಕಮ್ಮಿ ಕಾಮ (ರಜಸ್)ದ ವಿಧಾನದ ಅಭಿವೃದ್ಧಿಯಿಂದ ಉಂಟಾದ್ದು. ಮಹತ್ ತತ್ವವು ಲೌಕಿಕ ಸೃಷ್ಟಿಯ ತತ್ವವಾಗಿದ್ದು ಪ್ರಲೋಭನೆಗೊಂಡಾಗ ಮೊದಲು ಕಾಮ ವಿಧಾನ, ವಿವಿಧ ರೀತಿಗಳ ಲೌಕಿಕ ಚಟುವಟಿಕೆಗಳು ಪ್ರಾಮುಖ್ಯತೆಗೆ ಬಂದದ್ದರಿಂದ ಜೀವಿಗಳು ಹೆಚ್ಚೆಚ್ಚು ಮೌಢ್ಯದಲ್ಲಿ ಮುಳುಗಿದರು).

ಸುಳ್ಳು ಅಹಂಮಿಕೆಯ ಕಾರ್ಗತ್ತಲಿನಿಂದ ಪ್ರಾರಂಭದಲ್ಲಿ ಗಗನವೆಂಬ ಪಂಚಭೂತಗಳು ಸೃಷ್ಟಿಗೊಂಡವು. ಅದರ ಸೂಕ್ಷ್ಮ ಆಕಾರವು ಶಬ್ದದ ಗುಣವಾಗಿದ್ದು 'ನೋಟ' ಹಾಗೂ 'ನೋಟಕನ' ಮಧ್ಯದಲ್ಲಿನ ಸಂಬಂಧವಾಗಿತ್ತು. ಗಗನವು ರೂಪಾಂತರಗೊಂಡಿದ್ದ ಸ್ಪರ್ಶಕ್ರಿಯೆಯಿಂದ ಗಾಳಿಯು ಸೃಷ್ಟಿಗೊಂಡು ಮೊದಲಿನ ವ್ಯವಸ್ಥೆಯಿಂದಾಗಿ ಗಾಳಿಯೂ ಶಬ್ದಗಳಿಂದ ಹಾಗೂ ಜೀವಿತ ಕಾಲದ ಮೂಲಭೂತ ತತ್ವಗಳು, ಸ್ಪರ್ಶ, ಮಾನಸಿಕ ಹಾಗೂ ಶಾರೀರಿಕ ಶಕ್ತಿ ಇವುಗಳಿಂದ ಕೂಡಿದ್ದಿತು. ಗಾಳಿಯು ಪರಿವರ್ತನೆಗೊಂಡಾಗ ಅಗ್ನಿಯು ಸೃಷ್ಟಿಯಾಗಿ ಸ್ಪರ್ಶ ಹಾಗೂ ಶಬ್ದದ ತಿಳಿವಳಿಕೆಯಿಂದ ಆಕಾರವನ್ನು ಪಡೆದುಕೊಂಡಿತು. ಅಗ್ನಿಯೂ ರೂಪಾಂತರಗೊಂಡಿದ್ದ ಜಲ, ರಸ ಹಾಗೂ ರುಚಿಯನ್ನು ತುಂಬಿಕೊಂಡು ಪ್ರಕಟವಾಯಿತು. ಇದೂ ಸಹ ಸ್ಪರ್ಶ ಹಾಗೂ ಶಬ್ಧದ ರೂಪವನ್ನು ಹೊಂದಿತ್ತು. ಭೂಮಿಯ ಮೇಲಿನ ಎಲ್ಲ ವೈವಿಧ್ಯತೆಯಿಂದಾಗಿ ನೀರು ರೂಪಾಂತರಗೊಂಡಿದ್ದರಿಂದ ಮೊದಲಿನ ಹಾಗೇ ರಸ, ಸ್ಪರ್ಶ, ಶಬ್ದ ಮತ್ತು ಆಕಾರವನ್ನು ಪಡೆದುಕೊಂಡಿತು.

ಒಳಿತಿನ ವಿಧಾನದಿಂದ ಬುದ್ಧಿಯು ಸೃಷ್ಟಿಗೊಂಡು ಶಾರೀರಿಕ ಕ್ರಿಯೆಗಳನ್ನು ನಿಯಂತ್ರಿಸುವ ಹತ್ತು ಉಪದೇವತೆಗಳಾಗಿ ಸಾಕಾರಗೊಂಡಿತು. ಇಂಥ ಉಪದೇವತೆಗಳು, ದಿಕ್ಕುಗಳು, ಗಾಳಿ, ಸೂರ್ಯರ ನಿಯಂತ್ರಕರು, ದಕ್ಷ ಪ್ರಜಾಪತಿ, ಅಶ್ವಿನಿ ಕುಮಾರರು,

ಅಗ್ನಿ ಹಾಗೂ ಇಂದ್ರ. ಸ್ವರ್ಗದೊಡೆಯನಾದ ಇಂದ್ರ, ಆದಿತ್ಯರ ಮುಖ್ಯಸ್ಥ ಹಾಗೂ ಪ್ರಜಾಪತಿ ಬ್ರಹ್ಮನ ಪಿತನೆಂದು ಹೆಸರಾಗಿದ್ದಾನೆ. ಇವೆಲ್ಲವು ಅಸ್ತಿತ್ವಕ್ಕೆ ಬಂದವು. (ವೈಚಾರಿಕತೆಯು ಸೃಷ್ಟಿಯ ತಟಸ್ಥ ಘಟ್ಟವಾಗಿದ್ದು ತೇಜಸ್ಸು ಸೃಷ್ಟಿಯ ಪ್ರೇರಣೆ. ಮೌಢ್ಯದ ಕಗ್ಗತ್ತಲೆಯ ಜಾಲದ ಕೆಳಗೆ ಐಹಿಕ ಸೃಷ್ಟಿಯನ್ನು ಸಂಪೂರ್ಣವಾಗಿ ಪ್ರದರ್ಶಿಸಿದ ತಮಸ್).

ಕಾಮದ ವಿಧಾನದ ಹೆಚ್ಚಿನ ರೂಪಾಂತರದಿಂದಾಗಿ ಕಿವಿ, ತ್ವಚೆ, ನಾಸಿಕ, ನೇತ್ರಗಳು, ಜಿಹ್ವೆ, ಬಾಯಿ, ಬಾಹುಗಳು, ಜನನೇಂದ್ರಿಯಗಳು ಹಾಗೂ ಅವೆಲ್ಲವನ್ನೂ ಒಟ್ಟುಗೂಡಿಸುವ ದ್ವಾರಗಳು, ಬುದ್ಧಿ ಹಾಗೂ ಜೀವಶಕ್ತಿಯೊಂದಿಗೆ ರೂಪಗೊಂಡವು. ಈ ಪಂಚಭೂತಗಳು, ಇಂದ್ರಿಯಗಳು, ಬುದ್ಧಿಶಕ್ತಿ ಮತ್ತು ಪ್ರಕೃತಿಯ ವಿಧಾನಗಳು ಎಲ್ಲಿಯವರೆಗೂ ಒಟ್ಟುಗೂಡಿಸಲ್ಪಡದೆ ಉಳಿದಿತ್ತೋ ಅಲ್ಲಿಯವರೆಗೆ ಶರೀರದ ಆಕಾರವನ್ನು ಸೃಷ್ಟಿಸಲಾಗಲಿಲ್ಲ. ಹೀಗೆ ಇವೆಲ್ಲವೂ ಭಗವಂತನ ಶಕ್ತಿಯ ಪ್ರಭಾವದಿಂದಾಗಿ ಒಟ್ಟುಗೂಡಿದಾಗ ವಿಶ್ವದ ಸೃಷ್ಟಿಯ ಪ್ರಾಥಮಿಕ ಹಾಗೂ ಮಾಧ್ಯಮಿಕ ಕಾರಣಗಳನ್ನು ಒಪ್ಪಿಕೊಳ್ಳುವ ಮೂಲಕ ಅಸ್ತಿತ್ವಕ್ಕೆ ಬಂದಿತು. ಹೀಗೆ ಎಲ್ಲ ವಿಶ್ವಗಳೂ ನೀರಿನೊಳಗೆ (ಕಾರಣೀಭೂತ ಸಾಗರ) ಸಾವಿರಾರು ಮನ್ವಂತರಗಳಾಗಿ ನೀರಿನೊಳಗೆ ಉಳಿದು ಜೀವಿಗಳ ಒಡೆಯನು ಪ್ರತಿಯೊಂದರಲ್ಲೂ ಪ್ರವೇಶಿಸಿ ಸಂಪೂರ್ಣವಾಗಿ ಅವನ್ನು ಉಜ್ಜೀವನಗೊಳಿಸಿದನು. ಭಗವಂತನು ಕಾರಣೀಭೂತ ಸಾಗರದಿಂದ ಹೊರಬಂದು ಹಿರಣ್ಯಗರ್ಭನಾಗಿ ತನ್ನನ್ನೇ ವಿಭಜಿಸಿಕೊಳ್ಳುವ ಮೂಲಕ ಪ್ರತಿಯೊಂದು ವಿಶ್ವವನ್ನೂ ಹೊಕ್ಕು ವಿರಾಟ್ ರೂಪವನ್ನು ತಳೆದನು. (ಋಗ್ವೇದದ ಶ್ಲೋಕ X-111 ಹಿರಣ್ಯಗರ್ಭವನ್ನು ಸೃಷ್ಟಿಯ ಕಾಲದಿಂದ ಗಗನ ಭೂಮಿಗಳು ಯಾವವನ್ನು ಅಧರಿಸಿವೆಯೋ ಅಂಥ ಎಲ್ಲವುಗಳ ಒಡೆಯನ ಕಾಲದಿಂದಲೂ ಅಸ್ತಿತ್ವದಲ್ಲಿ ಇದೆಯೆಂಬುದಾಗಿ ವಿವರಿಸಿವೆ - ದಿ ವೇದಾಂತ - ಬ್ರಹ್ಮಸೂತ್ರದ ಅಧ್ಯಯನ - ಲೇ. ಡಾ. ವಿ. ಎಸ್. ಘಾಟೆ).

(ಸುವರ್ಣ ಗರ್ಭವನ್ನು ಹೊಂದಿದಂಥ ಹಿರಣ್ಯ ಗರ್ಭನು ಸುವರ್ಣ ಮೊಟ್ಟೆ ಅಥವಾ ಸುವರ್ಣ ಬೀಜದ ಮೂಲವೆನ್ನಲಾಗಿದೆ) - ಮನುಶಾಸನ, ಹದಿನಾಲ್ಕರಲ್ಲಿ ಏಳು ಗ್ರಹಮಂಡಲಗಳಿವೆ. ಮೊದಲನೆಯದು - ಅತಲ (ಸೊಂಟ); ವಿತಳ (ತೊಡೆಗಳು); ಸುತಳ (ಮಂಡಿಗಳು); ತಲಾತಳ (ಮೀನುಖಂಡಗಳು), ಮಹಾತಳ (ಮಣಿಕಟ್ಟು); ರಸಾತಲ (ಪಾದದ ಮೇಲ್ಭಾಗ); ಪಾತಾಳ (ಪಾದಗಳ ಹಿಮ್ಮಡಿಗಳು).

## ವಿರಾಟ್ ಪುರುಷ

ವಿರಾಟ್ ಪುರುಷನ (ಭಗವಂತನ ವಿಶ್ವರೂಪ) ಬಾಯಿಯು ದನಿಯನ್ನು ಹೊಮ್ಮಿಸುವ ಕೇಂದ್ರವಾಗಿದ್ದು ಅಗ್ನಿ ದೇವರನ್ನು ನಿಯಂತ್ರಿಸುವುದಾಗಿದೆ ಎಂಬುದಾಗಿ ಬ್ರಹ್ಮನು ಹೇಳಿದ್ದಾನೆ. ಅವನ ತ್ವಚೆ ಹಾಗೂ ಇತರ ಆರು ಪದರಗಳು ವೈದಿಕ ಮಂತ್ರಗಳನ್ನು ಹೊಮ್ಮಿಸುವ ಕೇಂದ್ರಗಳು, ಅವನ ನಾಲಗೆಯು ಉಪದೇವತೆಗಳು, ಪಿತೃಗಳು ಹಾಗೂ ಜನಸ್ತೋಮಕ್ಕೆ ಒದಗಿಸುವಂಥ ವಿವಿಧ ಆಹಾರ ಪದಾರ್ಥಗಳು

ಹಾಗೂ ರುಚಿಕರ ತಿನಸುಗಳನ್ನು ನೀಡುವಂಥ ಉತ್ಪಾದನಾ ಕೇಂದ್ರಗಳು. ಅವನ ಮೂಗಿನ ಹೊಳ್ಳೆಗಳು ನಮ್ಮ ಉಸಿರಾಟ ಹಾಗೂ ಇನ್ನಿತರ ವಾಯುಗಳನ್ನು ಹೊಮ್ಮಿಸುವ ಕೇಂದ್ರಗಳು. ಅವನ ಆಘ್ರಾಣ ಶಕ್ತಿಗಳು ಅಶ್ವಿನಿ ಕುಮಾರರನ್ನು ಸೃಷ್ಟಿಸಿ ಅವನ ಉಸಿರಾಟದಿಂದ ಹೊರಡುವ ಶಕ್ತಿಗಳು ವಿವಿಧ ರೀತಿಯ ಸುವಾಸನೆಯನ್ನು ಹೊಮ್ಮಿಸುತ್ತವೆ. ಅವನ ಚಕ್ಷುಗಳು ಎಲ್ಲ ಬಗೆಯ ರೂಪಗಳನ್ನು ಹೊರಡಿಸುವಂಥವಾಗಿದ್ದು ಅವು ಹೊಳೆಯುತ್ತವೆ ಹಾಗೂ ಪ್ರಕಾಶಮಾನವಾಗಿರುತ್ತವೆ. ಅವನ ಕಣ್ಣಿನ ಗುಡ್ಡೆಗಳು ಸೂರ್ಯ ಹಾಗೂ ಇನ್ನಿತರ ಸ್ವರ್ಗಸಮಾನ ಗ್ರಹಗಳಾಗಿವೆ. ಅವನ ಕಿವಿಗಳು ಎಲ್ಲ ಕಡೆಗಳಿಂದಲೂ ಆಲಿಸಿ ಎಲ್ಲಾ ವೇದಗಳಿಗೂ ಪ್ರತಿಕ್ರಿಯಿಸುವಂಥವಾಗಿದ್ದು ಅವನ ಶ್ರವಣ ಶಕ್ತಿ ಗಗನ ಹಾಗೂ ಎಲ್ಲ ಬಗೆಯ ಶಬ್ದಗಳನ್ನು ಹೊರಡಿಸುವ ಕೇಂದ್ರವಾಗಿದೆ. ಅವನ ಶಾರೀರಿಕ ಸ್ಥಳ ಪ್ರತಿಯೊಂದರ ಬಗೆಗಿನ ಸಕ್ರಿಯ ತತ್ತ್ವಗಳು ಹಾಗೂ ಎಲ್ಲ ವಿಧದ ಪವಿತ್ರತಮ ಅವಕಾಶಗಳನ್ನು ಕಲ್ಪಿಸುವಂಥ ತಾಣವಾಗಿದೆ. ಅವನ ತ್ವಚೆಯು ಸಂಚರಿಸುವ ವಾಯುವಿನಂತೆಯೇ ಎಲ್ಲ ಬಗೆಯ ಸ್ಪರ್ಶಗಳನ್ನೂ ಸೃಷ್ಟಿಸುವಂಥ ಕೇಂದ್ರವಾಗಿದ್ದು ಎಲ್ಲ ರೀತಿಯ ಯಜ್ಞವನ್ನು ನಡೆಸುವಂಥ ಕೇಂದ್ರವಾಗಿದೆ. ಅವನ ಶರೀರದಲ್ಲಿನ ರೋಮಗಳು, ಎಲ್ಲ ಬೆಳೆಗಳು, ಅದರಲ್ಲೂ ಮುಖ್ಯವಾಗಿ ಯಜ್ಞ ಯಾಗಾದಿಗಳಿಗೆ ಅಗತ್ಯವಾದ ಉತ್ಪನ್ನಗಳನ್ನು ಹೊಮ್ಮಿಸುವಂಥ ವೃಕ್ಷಗಳಿಗೆ ಅಗತ್ಯವಾಗಿದೆ. ಅವನ ಶಿರ ಹಾಗೂ ವದನದ ಮೇಲಿನ ರೋಮಗಳು ಮೋಡಗಳ ಸಂಗ್ರಹಾಲಯವಾಗಿದ್ದು ಅವನ ಉಗುರುಗಳು ವಿದ್ಯುಚ್ಛಕ್ತಿ, ಕಲ್ಲು ಹಾಗೂ ಕಬ್ಬಿಣವನ್ನು ಹುಟ್ಟಿಸುವಂಥ ತಾಣ. ಭಗವಂತನ ಬಾಹುಗಳು ಉಪದೇವತೆಗಳಿಗೆ ಉತ್ಪನ್ನದಾಯಕ ಕ್ಷೇತ್ರಗಳು. ಹೀಗೆ ಭಗವಂತನ ಮುಂದಿನ ಹೆಜ್ಜೆಗಳು ಮೇಲಿನ, ಕೆಳಗಿನ ಹಾಗೂ ಸ್ವರ್ಗ ಸಮಾನ ಗ್ರಹಗಳಿಗೆ ಹಾಗೂ ನಮಗೆ ಅಗತ್ಯವಿರುವವಕ್ಕೆಲ್ಲ ಆಶ್ರಯ ಸ್ಥಾನ. ಅವನ ಕಮಲಾರವಿಂದ ಎಲ್ಲ ಬಗೆಯ ಭಯಗಳನ್ನೂ ನಿವಾರಿಸುವಂಥ ರಕ್ಷೆ. ಭಗವಂತನ ಜನನೇಂದ್ರಿಯಗಳಿಂದ ಜನರು, ವೀರ್ಯದಿಂದ ಸಂತತಿಗಳು, ಮಳೆ ಹಾಗೂ ಮುಂದಿನ ಜನಾಂಗಗಳು ಹುಟ್ಟಿಕೊಳ್ಳುತ್ತವೆ. ಅವನ ಜನನಾಂಗಗಳು ಸಂತತಿಯನ್ನು ಸೃಷ್ಟಿಸುವ ಸಂಕಷ್ಟಗಳನ್ನು ನಿವಾರಿಸುವಂಥ ಸಂತಸಕ್ಕೆ ಕಾರಣವಾಗುತ್ತದೆ. ಭಗವಂತನ ವಿಶ್ವರೂಪದ ವಿಸರ್ಜನೆಯ ಅಂಗಗಳು ವರುಣ, ಮಿತ್ರರಂಥ ನಿಯಂತ್ರಕ ದೇವತೆಗಳ ಆವಾಸಸ್ಥಾನ. ಭಗವಂತನ ಗುದನಾಳವು ಶತೃತ್ವ, ದುರದೃಷ್ಟ, ಮರಣ, ನರಕ, ಇತ್ಯಾದಿಗಳ ತಾಣ. ಭಗವಂತನ ಬೆನ್ನು ಎಲ್ಲ ವಿಧದ ಬೇಗುದಿ ಮತ್ತು ಮೌಢ್ಯಗಳು ಹಾಗೂ ಅನೈತಿಕತೆಯ ಸ್ಥಳ. ಅವನ ರಕ್ತನಾಳಗಳಿಂದ ದೊಡ್ಡ ದೊಡ್ಡ ನದಿಗಳು, ತೊರೆಗಳು ಹರಿಯುತ್ತಿದ್ದು ಅವನ ಮೂಳೆಗಳಲ್ಲಿ ದೊಡ್ಡ ಬೆಟ್ಟ ಗುಡ್ಡಗಳು ಅಡಗಿವೆ. ಭಗವಂತನ ನಿರ್ವಿಕಾರ ಭಾವವು ದೊಡ್ಡ ಸಾಗರಗಳ ಆಶ್ರಯಧಾಮವಾಗಿದ್ದು ಅವನ ಹೊಟ್ಟೆಯು ಲೌಕಿಕವಾಗಿ ವಿಮುಕ್ತಿಗೊಂಡಂಥ ಜೀವಿಗಳ ಆಶ್ರಯ ಸ್ಥಾನ. ಅವನ ಹೃದಯವು ಜೀವಂತ ವ್ಯಕ್ತಿಗಳ ಸೂಕ್ಷ್ಮಲೌಕಿಕ ಶರೀರದ ವಾಸಸ್ಥಾನ. ಉನ್ನತ ವ್ಯಕ್ತಿತ್ವದ ಒಟ್ಟು ಆಕೃತಿ ಧಾರ್ಮಿಕ ತತ್ತ್ವಗಳ ಸಮ್ಮಿಳನ ಹಾಗೂ ಕುಮಾರರ ಬುದ್ಧಿಯ ಆವಾಸ ಸ್ಥಾನ. ಇದು ಸತ್ಯ ಹಾಗೂ ಅತಿಶಯ ಬುದ್ಧಿಶಕ್ತಿಯ ನಿವಾಸ. ದೈವ ಪ್ರಮುಖನ ಉನ್ನತ ವ್ಯಕ್ತಿತ್ವವು ಅನೈತಿಕತೆ ಹಾಗೂ ಭಯ ರಾಹಿತ್ಯವನ್ನು ನಿಯಂತ್ರಣಗೊಳಿಸುವಂಥದ್ದು. ಅದುದರಿಂದಲೇ ಭಗವಂತನ ವೈಭವಗಳನ್ನು ಅಳತೆ ಮಾಡುವುದು ಕಷ್ಟಕರ".

ಬ್ರಹ್ಮನು ನಾರದನಿಗೆ ಹೇಳಿದನು: "ನಾನು ಭಗವಂತನ, ಔನ್ನತ್ಯ ಪುರುಷನ ನಾಭಿ ಕಮಲಪುಷ್ಪದಿಂದ ಜನಿಸಿದಾಗ, ಭಗವಂತನ ಶಾರೀರಿಕ ಅವಯವಗಳಲ್ಲದೆ ಯಜ್ಞವನ್ನು ಕೈಗೊಳ್ಳಲು ನನ್ನಲ್ಲಿ ಯಾವ ಪರಿಕರಗಳೂ ಇರಲಿಲ್ಲ. ನಾನು ಈ ಎಲ್ಲ ಪರಿಕರಗಳನ್ನೂ ಭಗವಂತನ ಶರೀರದ ಅಂಗಾಂಗಗಳಿಂದ ವ್ಯವಸ್ಥೆಗೊಳಿಸಬೇಕಾಯಿತು. ಹೀಗೆ ನಾನು ಯಜ್ಞಕ್ಕೆ ಬೇಕಾದ ಪರಿಕರಗಳನ್ನು ಹಾಗೂ ಇನ್ನಿತರ ಸಾಮಗ್ರಿಗಳನ್ನು ಭಗವಂತನ ಶಾರೀರಿಕ ಅಂಶಗಳಿಂದ ಸೃಷ್ಟಿಸಿ ಭಗವಂತನನ್ನು ಸಂಪ್ರೀತಗೊಳಿಸಲು ಯಜ್ಞವನ್ನು ಕೈಗೊಂಡೆ. ನಿನ್ನ (ನಾರದನ) ಒಂಬತ್ತು ಸಹೋದರರು, ಜೀವಿಗಳಿಗೆ ಒಡೆಯರಾಗಿರುವವರು ಹಾಗೂ ಅನತಿಶಯ ವ್ಯಕ್ತಿಗಳನ್ನು ತೃಪ್ತಿಪಡಿಸಲೋಸುಗ ಕ್ರಮಬದ್ಧ ವಿಧಿಗಳ ಮೂಲಕ ಯಜ್ಞವನ್ನು ನೆರವೇರಿಸಿದರು. ಮನುಕುಲದ ಪಿತನಾದ ಮನುವು, ಹಿರಿಯ ಮುನಿಗಳು, ಪಿತೃಗಳು, ದೈತ್ಯರು ಹಾಗೂ ಮಾನವರು ಭಗವಂತನನ್ನು ಸಂಪ್ರೀತಗೊಳಿಸಲು ಯಜ್ಞವನ್ನು ಕೈಗೊಂಡರು. ವಿಶ್ವದ ಎಲ್ಲ ಐಹಿಕ ಸಾಕಾರ ರೂಪಗಳೂ, ಭಗವಂತನು ಅವನ ಐಹಿಕ ವಿಧಾನಗಳಿಂದ ಬೇರ್ಪಟ್ಟ ರೂಪದಲ್ಲಿ ಸ್ವೀಕರಿಸುತ್ತಾನಾದರೂ ಅವನ ಪ್ರಭಾವಶಾಲಿ ಲೌಕಿಕ ಶಕ್ತಿಯಲ್ಲೇ ಎಲ್ಲವೂ ಅಡಗಿವೆ. ಅವನ ಇಚ್ಛೆಯಿದ್ದರೆ ಮಾತ್ರ ನಾನು ಸೃಷ್ಟಿಸುತ್ತೇನೆ; ಮಹೇಶ್ವರನು ನಿರ್ನಾಮಗೊಳಿಸುತ್ತಾನೆ ಹಾಗೂ ಭಗವಂತನಾಗಿ ತನ್ನ ಶಾಶ್ವತ ಆಕಾರದಿಂದಲೇ ಪ್ರತಿಯೊಂದನ್ನು ನಡೆಸುತ್ತಾನೆ. ಅವನು ಈ ಮೂರು ಶಕ್ತಿಗಳ ಪ್ರಭಾವಶಾಲಿ ನಿಯಂತ್ರಕ".

ಬ್ರಹ್ಮನು ಕೊನೆಯದಾಗಿ ಹೇಳಿದನು: "ಏನೇ ಇದ್ದರೂ (ಕಾರಣ ಅಥವಾ ಪರಿಣಾಮವಾಗಿ, ಲೌಕಿಕ ಹಾಗೂ ಅಲೌಕಿಕ ಜಗತ್ತುಗಳಲ್ಲಿ) ಅದು ಭಗವಂತನನ್ನೇ ಅವಲಂಬಿಸಿದೆ. ಬ್ರಹ್ಮನು ಯಾವುದನ್ನೇ ಮಾಡಿದರೂ ಅದು ಭಗವಂತನ ಇಚ್ಛೆಯಿಂದ ಮಾಡಿದಂಥದಾಗಿದೆ. ಆದ್ದರಿಂದ ಸಂಕಷ್ಟಗಳು, ಮರುಹುಟ್ಟು ಮತ್ತು ಸಾವಿನಿಂದ ಮುಕ್ತಗೊಳಿಸಬಲ್ಲಂಥ ಅವನ ಪಾದಾರವಿಂದಗಳಿಗೆ ಶರಣಾಗುವುದು ಅತ್ಯುತ್ತಮ. ಅಂಥ ಶರಣಾಗತಿ ಸರ್ವರೀತಿಯಲ್ಲಿ ಪವಿತ್ರವಾದದ್ದು", "ಭಗವಂತನ ವ್ಯಕ್ತಿತ್ವ ಪರಿಶುದ್ಧವಾಗಿದ್ದು, ಐಹಿಕ ವಸ್ತುಗಳ ಎಲ್ಲ ಕಲ್ಮಶಗಳಿಂದಲೂ ಮುಕ್ತವಾದದ್ದು. ಅವನು ಪರಮ ಸತ್ಯವಾಗಿದ್ದು, ಸಂಪೂರ್ಣ ಹಾಗೂ ಪರಿಶುದ್ಧ ಜ್ಞಾನದ ಸಾಕಾರರೂಪ. ಅವನು ಆದಿ ಅಥವಾ ಅಂತ್ಯರಹಿತನಾದ ಸರ್ವವ್ಯಾಪಿ. ಲೌಕಿಕದ ಎಲ್ಲ ಹಂಬಲಗಳಿಂದಲೂ ಸಂಪೂರ್ಣವಾಗಿ ಅಭಾಧಿತರಾಗಿ ಬಾಧೆ ರಹಿತ ಪರಿಸ್ಥಿತಿಗಳಲ್ಲಿ ಆಶ್ರಯ ಪಡೆದ ಎಲ್ಲ ಉನ್ನತ ಚಿಂತಕರೂ ಅವನನ್ನು ಅರ್ಥವಾಗಿಸಿಕೊಳ್ಳಬಹುದು".

## ಭಗವಂತನ ವಿವಿಧ ರೂಪಗಳು

ಬ್ರಹ್ಮದೇವನು ಇಂತೆಂದನು : "ಶಕ್ತಿಶಾಲಿ ಭಗವಂತನು ಭೂಮಂಡಲದ ದೊಡ್ಡ ಸಮುದ್ರದಲ್ಲಿ ಮುಳುಗಿ ಹೋಗಿದ್ದ ಭೂಮಿಯನ್ನು ಎತ್ತಲು ಮೋಜಿಗಾಗಿ ವರಾಹ ರೂಪವನ್ನು ಧರಿಸಿದಾಗ ಪ್ರಥಮ ರಾಕ್ಷಸನಾದ ಹಿರಣ್ಯಾಕ್ಷನು ಕಾಣಿಸಿಕೊಳ್ಳುತ್ತಿದ್ದಂತೆಯೇ ಅವನನ್ನು ತನ್ನ ಕೊಂಬಿನಿಂದ ಕೊಂದನು.

"ಪ್ರಜಾಪತಿಯು ತನ್ನ ಪತ್ನಿಯಾದ ಆಕುತಿಯಿಂದ ಸುಯಜ್ಞನನ್ನು ಪಡೆದನು. ಅನಂತರ ಸುಯಜ್ಞನು ತನ್ನ ಪತ್ನಿ ದಾಕ್ಷಿಣೆಯಿಂದ ಸುಯಮನ ನೇತೃತ್ವದಲ್ಲಿದ್ದ ಉಪದೇವತೆಗಳನ್ನು ಪಡೆದನು. ಸುಯಜ್ಞನು ಇಂದ್ರದೇವನಾಗಿ ಮೂರುಗ್ರಹ ಮಂಡಲಗಳಲ್ಲಿನ ಕಷ್ಟಗಳನ್ನು ನಿವಾರಿಸಿದ ಕಾರಣಕ್ಕಾಗಿ ಅನಂತರ ಸ್ವಯಂಭು ಮನುವಿನಿಂದ ಹರಿಯೆಂದು ಕರೆಯಲ್ಪಟ್ಟನು. ಭಗವಂತನು ಕರ್ದಮ ಮತ್ತು ದೇವಾಹುತಿಯಲ್ಲಿ ಒಂಬತ್ತು ಸಹೋದರಿಯರೊಂದಿಗೆ ಕಪಿಲನೆಂಬ ಹೆಸರಿನ ಪುತ್ರನಾಗಿ ಕಾಣಿಸಿಕೊಂಡ. ಕಪಿಲನು ತನ್ನ ತಾಯಿ ದೇವಾಹುತಿಯೊಂದಿಗೆ ಆತ್ಮ ಸಾಕ್ಷಾತ್ಕಾರದ ಬಗ್ಗೆ ಮಾತನಾಡಿ ಮೋಕ್ಷವನ್ನು ಪಡೆದನು. ಅತ್ರಿ ಋಷಿಯು ಸಂತಾನಕ್ಕೆ ಪ್ರಾರ್ಥಿಸಿದಾಗ ದತ್ತಾತ್ರೇಯನು ಜನಿಸಿದ".

ವಿವಿಧ ಗ್ರಹ ಮಂಡಲಗಳನ್ನು ಸೃಷ್ಟಿಸಲು ತಾನು ತ್ಯಾಗ ತಪಸ್ಸುಗಳನ್ನು ಕೈಗೊಳ್ಳಬೇಕಾಯಿತೆಂದೂ, ಆಗ ಭಗವಂತನು ತನ್ನ ನಾಲ್ಕು ಮಕ್ಕಳನ್ನು - ಸನಕ, ಸನತ್ಕುಮಾರ, ಸನಂದನ ಮತ್ತು ಸನಾತನರನ್ನು ಸೃಷ್ಟಿಸಿದನೆಂದು ಬ್ರಹ್ಮನು ಮುಂದೆ ತಿಳಿಸಿದ. ಆಗ ಭಗವಂತನು ಧರ್ಮನ ಪತ್ನಿ ಮತ್ತು ದಕ್ಷನ ಮಗಳಾದ ಮೂರ್ತಿಯ ಗರ್ಭದಲ್ಲಿ ತ್ಯಾಗ ತಪಸ್ಸುಗಳ ಬಗ್ಗೆ ತನ್ನ ವೈಯುಕ್ತಿಕ ಮಾರ್ಗವನ್ನು ಪ್ರದರ್ಶಿಸುವ ಸಲುವಾಗಿ ನಾರಾಯಣ ಮತ್ತು ನರರೆಂಬ ದ್ವಿರೂಪಗಳಲ್ಲಿ ಕಾಣಿಸಿಕೊಂಡನು. ಶಿವನು ತನ್ನ ತಪಸ್ಸಿನಲ್ಲಿ ತೊಡಗಿದ್ದಾಗ ಮನ್ಮಥನು ಶಿವನನ್ನು ವಿನಾಶಗೊಳಿಸಲು ಬಯಸಿದಾಗ ಶಿವನು ತನ್ನ ಮೂರನೇ ಕಣ್ಣಿನಿಂದ ಮನ್ಮಥನನ್ನೇ ನಾಶಪಡಿಸುತ್ತಾನೆ. ವಿಷ್ಣುವು ಇಂಥವುಗಳ ಮೇಲಿರುವುದರಿಂದ ಕ್ರೋಧವನ್ನು ಪ್ರದರ್ಶಿಸುವುದಿಲ್ಲ. ಬಾಲಕ ಧ್ರುವನು ತನ್ನ ಮಲತಾಯಿಯ ಬಿರುನುಡಿಗಳಿಂದ ಅವಹೇಳನಕ್ಕೆ ಒಳಗಾಗಿ ತಪಸ್ಸಿಗಾಗಿ ಕಾಡಿಗೆ ಹೋದಾಗ ಸಂತೃಪ್ತಗೊಂಡ ಭಗವಂತನು ಅವನಿಗೆ ಗ್ರಹವೊಂದನ್ನೇ ಉಡುಗೊರೆಯಾಗಿ ನೀಡುತ್ತಾನೆ. ಮಹಾರಾಜ ವೇಣನು ಸರಿಯಾದ ಹಾದಿಯಿಂದ ದೂರ ಸರಿದು ಬ್ರಾಹ್ಮಣರು ಅವನಿಗೆ ಸಿಡಿಲಿನೋಪಾದಿಯ ಶಾಪವಿತ್ತಾಗ ವೇಣನು ಭಸ್ಮಗೊಂಡು ನರಕ ಮಾರ್ಗವಾಗಿ ನಡೆದಿರುತ್ತಾನೆ. ಆಗ ಭಗವಂತನು ವೇಣನ ಮಗ ಪೃಥುವಾಗಿ ಜನಿಸಿ ಖಂಡನೆಗೊಳಗಾದ ದೊರೆಯನ್ನು ವಿಮುಕ್ತಗೊಳಿಸಿ ಎಲ್ಲ ಬಗೆಯ ಬೆಳೆಗಳನ್ನು ಉತ್ಪನ್ನ ಮಾಡುವ ಮೂಲಕ ಭೂಮಿಯನ್ನು ಬಳಸಿಕೊಳ್ಳುತ್ತಾನೆ. ಭಗವಂತನು ಋಷಭ ದೇವನೆಂದೂ ಹೆಸರುಳ್ಳ ನಭಿ ದೊರೆಯ ಹೆಂಡತಿಯಾದ ಸುದೇವಿಯ ಮಗನಾಗಿ ಕಾಣಿಸಿಕೊಳ್ಳುತ್ತಾನೆ. ಬುದ್ಧಿಯನ್ನು ಸಮತೋಲನದಲ್ಲಿ ಇಟ್ಟುಕೊಳ್ಳುವ ಸಲುವಾಗಿ ಅವನು ಲೌಕಿಕ ಯೋಗವನ್ನು ಮಾಡುತ್ತಾನೆ. ಬ್ರಹ್ಮನು ನೆರವೇರಿಸಿದ ಯಜ್ಞವೊಂದರಲ್ಲಿ ಭಗವಂತನು ಹಯಗ್ರೀವ ಅವತಾರವಾಗಿ ಕಾಣಿಸಿಕೊಳ್ಳುತ್ತಾನೆ. ಅವನು ಯಜ್ಞದ ಸಾಕ್ಷಾತ್ಕಾರವಾಗಿದ್ದು ಅವನ ಶರೀರ ಸುವರ್ಣಮಯ. ಅವನು ಉಸಿರಾಡುವಾಗ, ವೈದಿಕ ಮಂತ್ರಗಳ ಮಧುರ ಶಬ್ದಗಳು ಅವನ ಹೊಳ್ಳೆಗಳಿಂದ ಚಿಮ್ಮುತ್ತವೆ. ಯುಗದ ಅಂತ್ಯದಲ್ಲಿ ಸತ್ಯವ್ರತನೆಂಬ ಹೆಸರಿನಲ್ಲಿ ಮುಂದೆ ಬರುವ ವೈವಸ್ವತ ಮನುವು ಭಗವಂತನು ಮೀನಿನ

ನಕ್ಷತ್ರಗಳು, ಪರ್ವತಗಳು, ನದಿಗಳು, ಸಾಗರಗಳು ಹಾಗೂ ಪರ್ಯಾಯ ದ್ವೀಪಗಳು ಮತ್ತು ವಿವಿಧ ಬಗೆಯ ವಾಸಗಳು, ವಿಶ್ವದ ಒಳಗಿನ ಹಾಗೂ ಹೊರಗಿನ ಅಳತೆ; ಸೃಷ್ಟಿಯ ಸಂದರ್ಭದಲ್ಲಿನ ವಿವಿಧ ಯುಗಗಳು; ವಿವಿಧ ಯುಗಗಳಲ್ಲಿ ಭಗವಂತನ ವಿವಿಧ ಲೀಲೆಗಳು; ಮಾನವ ಸಮಾಜದಲ್ಲಿನ ಸಾಮಾನ್ಯ ಧಾರ್ಮಿಕ ಸಂಪರ್ಕಗಳು; ಇತಿಹಾಸ ಮತ್ತು ಪೂರಕ ಪುರಾಣಗಳ ಶಾಖೆಗಳನ್ನೂ ಒಳಗೊಂಡಂತೆ ವೈದಿಕ ಸಾಹಿತ್ಯದ ಮೂಲಜ್ಞಾನ; ಜೀವಿಗಳು ಹೇಗೆ ಸೃಷ್ಟಿಗೊಂಡರು, ಸಂರಕ್ಷಿಸಲ್ಪಟ್ಟರು ಹಾಗೂ ಬಿಡುಗಡೆ ಹೊಂದಿದರು; ಭಗವಂತನಿಗೆ ಭಕ್ತಿಪೂರ್ವಕ ಸೇವೆಯನ್ನು ಸಲ್ಲಿಸುವ ಮೂಲಕ ಉಂಟಾಗುವ ಅನುಕೂಲ ಅನಾನುಕೂಲತೆಗಳು; ಪೂರಕ ವೈದಿಕ ಕ್ರಿಯೆಗಳ ವೈದಿಕ ವಿಧಿಗಳು ಹಾಗೂ ಕಟ್ಟಳೆಗಳು; ಧರ್ಮ, ಅರ್ಥ, ಇಂದ್ರಿಯ ಸಂತೃಪ್ತಿಯ ವಿಧಾನಗಳು: ಭಗವಂತ ಹಾಗೂ ಜೀವಿಗಳ ಶರೀರಗಳು ಹೇಗೆ ಸೃಷ್ಟಿಗೊಂಡವು ಮತ್ತು ಜಗತ್ತಿನಲ್ಲಿ ಹೇಗೆ ಅನೈತಿಕತೆ ಕಾಣಿಸಿಕೊಳ್ಳುತ್ತದೆ; ನಿರ್ಬಂಧನೆಯಿಲ್ಲದೆ ಜೀವಿಗಳು ಹೇಗೆ ಅಸ್ತಿತ್ವದಲ್ಲಿರುತ್ತಾರೆ; ಭಗವಂತನು ತನ್ನ ಅಂತಃಶಕ್ತಿಯಿಂದ ತನ್ನ ಬಿಡುವಿನ ಸಮಯವನ್ನು ಹೇಗೆ ಅನುಭವಿಸುತ್ತಾನೆ ಮತ್ತು ಮೋಕ್ಷದ ಸಮಯದಲ್ಲಿ ಅವನು ಹೇಗೆ ಹೊರಗಿನ ಶಕ್ತಿಗಳಿಗೆ ನೀಡುತ್ತಾನೆ, ಇವೆಲ್ಲವನ್ನೂ ದೊರೆಯು ಶುಕಾಚಾರ್ಯರಿಂದ ತಿಳಿದುಕೊಳ್ಳಲು ಬಯಸಿದನು.

## ಪರಮಾತ್ಮನನ್ನು ಕುರಿತ ವಿಜ್ಞಾನ

ಶ್ರೀ ಶುಕಾಚಾರ್ಯರು ಉತ್ತರಿಸಿದರು: "ಬ್ರಹ್ಮನು ಮೊದಲು ಜನಿಸಿದಾಗ ಭಗವಂತನೇ ಬ್ರಹ್ಮನಿಗೆ ಮೊದಲಿಗೆ ದೇವ ಪ್ರಮುಖನನ್ನು ಕುರಿತ ವಿಜ್ಞಾನವನ್ನು ತಿಳಿಸಿದ. ಭಾಗವತವು ವೈದಿಕ ಸಾಹಿತ್ಯಕ್ಕೆ ಪೂರಕವಾಗಿದ್ದು ಅದು ವೇದಗಳ ಮುಂದುವರಿಕೆಯಷ್ಟೆ. ಯಾರೊಬ್ಬರೂ ಭಗವಂತನ ಶಕ್ತಿಯಿಂದ ಪ್ರಭಾವಿತರಾಗದಿದ್ದಲ್ಲಿ ಲೌಕಿಕ ಶರೀರದೊಂದಿಗೆ ಪರಿಶುದ್ಧ ಜ್ಞಾನದಲ್ಲಿ ಪರಿಶುದ್ಧ ಆತ್ಮದ ಸಂಬಂಧಕ್ಕೆ ಯಾವ ಅರ್ಥವೂ ಇಲ್ಲ. ಭ್ರಮೆಯಿಂದ ಒಡಗೂಡಿದ ಜೀವಿತ ಶಕ್ತಿಯು ಲೌಕಿಕ ಸ್ವಭಾವದೊಂದಿಗಿನ ಮಾರ್ಗವನ್ನು ಅನುಸರಿಸುತ್ತಿರುವಾಗ "ನಾನು" ಮತ್ತು "ನನ್ನದು" ಎಂಬುದಾಗಿ ಆಲೋಚಿಸುತ್ತಿರುತ್ತಾನೆ. ಲೌಕಿಕ ಶಕ್ತಿಯು ಅನುಭವಿಸುವುದನ್ನು ಪ್ರಾರಂಭಿಸುವ ಕ್ಷಣದಲ್ಲೇ ಧ್ಯಾನಮಗ್ನ ಶಕ್ತಿಯು "ನಾನು" ಮತ್ತು "ನನ್ನದು" ಎಂಬುದನ್ನು ಕುರಿತಾದ ಜೀವನದ ಅಪಾರ್ಥವನ್ನು ಬಿಟ್ಟುಕೊಟ್ಟು ಹೀಗೆ ಪರಿಶುದ್ಧ ಆತ್ಮವಾಗಿ ಸಾಕಾರಗೊಳ್ಳುತ್ತದೆ.

ಬ್ರಹ್ಮನ ಬಗ್ಗೆ ಸಂಪ್ರೀತನಾದ ಭಗವಂತನು ಅವನಿಗೆ ತನ್ನ ಶಾಶ್ವತ ಧ್ಯಾನಸ್ವರೂಪ ವನ್ನು ದಯಪಾಲಿಸಿದ. ಅಧ್ಯಾತ್ಮಿಕತೆಯ ಮೂಲ ಒಡೆಯನಾದ ಬ್ರಹ್ಮನು, ಜಗತ್ತಿನಲ್ಲಿ ಔನ್ನತ್ಯವೆನಿಸಿದನು, ಅವನ ಪದ್ಮಪಾದದ ಮೂಲವನ್ನು ಹುಡುಕಲಾಗದೆ, ಕ್ರಿಯಾತ್ಮಕ ಕಾರ್ಯಗಳಿಗೆ ಸರಿಯಾದ ದಿಕ್ಕನ್ನು ಅರಿತುಕೊಳ್ಳಲಾಗದೆ, ಅಂಥ ಸೃಷ್ಟಿಗೆ ಅಗತ್ಯವಾದ ಕ್ರಿಯೆಯನ್ನು ಕಂಡು ಹಿಡಿಯಲಾರದಾದ. ಹೀಗೆ ಆಲೋಚನೆಯಲ್ಲಿ ಮುಳುಗಿದ್ದಾಗ ಅವನಿಗೆ 'ತಪ' ವೆಂಬ - ದೇವನಾಗರಿ ಲಿಪಿಯಿಂದ ಆಯಲ್ಪಟ್ಟಂಥ - ಆರನೆಯ

ಹಾಗೂ ಇಪ್ಪತ್ತೊಂದನೆಯ ಅಕ್ಷರಗಳು ಕೇಳಿಸಿದವು. ಬ್ರಹ್ಮನಿಗೆ ಈ ಶಬ್ದವು ಕೇಳಿಸಿದಾಗ ಶ್ರಮವಹಿಸಿದರೂ ಅದನ್ನು ಹೇಳಿದಾತನನ್ನು ಪತ್ತೆ ಹಚ್ಚಲಾಗಲಿಲ್ಲ. ಆದ್ದರಿಂದ ಅವನು ನಿಗದಿಯಾದಂತೆ ತಪಸ್ಸನ್ನು ಪ್ರಾರಂಭಿಸಿದ. ಅವನು ತಪಸ್ಸನ್ನು ಸಾವಿರ ವರ್ಷಗಳ ಕಾಲ (ಉಪದೇವತೆಗಳ ಲೆಕ್ಕಾಚಾರದಂತೆ) ನಡೆಸಿದನು. ಅವನು ತನ್ನ ಬುದ್ಧಿ ಹಾಗೂ ಇಂದ್ರಿಯಗಳನ್ನು ನಿಯಂತ್ರಿಸಿ ಅವನು ನಡೆಸಿದ ತಪಸ್ಸು ಜೀವಿಗಳಿಗೆ ಉನ್ನತವಾದ ಪಾಠ. ಹೀಗಾಗಿ ಅವನು ತಪಸ್ವಿಗಳಲ್ಲೆಲ್ಲ ಅತ್ಯಂತ ಉನ್ನತನಾದವನೆಂದು ಹೆಸರುವಾಸಿಯಾದ.

ಬ್ರಹ್ಮನ ತಪಸ್ಸಿನಿಂದ ಸುಪ್ರೀತನಾದ ಭಗವಂತನು ಇನ್ನಿತರ ಗ್ರಹಗಳಿಗಿಂತಲೂ ಉನ್ನತವಾದ ತನ್ನ ವೈಯಕ್ತಿಕ ಆವಾಸಸ್ಥಾನವಾದ ವೈಕುಂಠವನ್ನು ಸಾಕಾರಗೊಳಿಸಿದನು. ವೈಕುಂಠದಲ್ಲಿ ಐಹಿಕ ವಿಧಾನಗಳು, ಮೌಢ್ಯತೆ ಹಾಗೂ ಕಾಮಕ್ಕೆ ಸ್ಥಳವಿಲ್ಲ. ಇಲ್ಲಿನ ನಿವಾಸಿಗಳು ಯೌವ್ವನದಿಂದ ಒಡಗೂಡಿದ ವರ್ಣವನ್ನು ಹೊಂದಿದ್ದು ಅವರ ಕಣ್ಣುಗಳ ಕಮಲವನ್ನು ಹೋಲುತ್ತಿದ್ದು, ನಾಲ್ಕು ಕೈಗಳನ್ನು ಹೊಂದಿರುತ್ತದೆ. ಇಲ್ಲಿನ ಸ್ತ್ರೀಯರೆಲ್ಲರೂ ಸುಂದರಿಯರು. ಐಶ್ವರ್ಯದ ಅಧಿದೇವತೆಯಾದ ಲಕ್ಷ್ಮಿಯ ಆವಾಸಸ್ಥಾನವಿದು. ಭಗವಂತನು ನಾಲ್ಕು, ಹದಿನಾರು, ಐದು ಹಾಗೂ ಆರು ಸಹಜ ಸಮೃದ್ಧವಾಗಿರುವ ವಿವಿಧ ಶಕ್ತಿಗಳಿಂದ ಆವೃತನಾಗಿದ್ದಾನೆ. (ನಾಲ್ಕು ಐಹಿಕ ಶಕ್ತಿಗಳು - ಪ್ರಕೃತಿ, ಪುರುಷ, ಮಹತ್‌ತತ್ತ್ವ ಹಾಗೂ ಆಹಂಮಿಕೆ). ಹದಿನಾರು: ಪಂಚಭೂತಗಳು, ಭೂಮಿ, ನೀರು, ವಾಯು, ಅಗ್ನಿ ಮತ್ತು ಆಕಾಶ: ಐದು ಇಂದ್ರಿಯಗಳು - ಕಣ್ಣು, ಕಿವಿ, ಮೂಗು, ನಾಲಗೆ ಮತ್ತು ಚರ್ಮ; ಐದು ಕಾರ್ಯನಿರತ ಇಂದ್ರಿಯಗಳು - ಕೈ, ಕಾಲು, ವಿಸರ್ಜನೆಯ ಮಾರ್ಗ, ಜನನೇಂದ್ರಿಯಗಳು, ನಾಲಗೆ, ಅಂದರೆ ಮಾತು ಹಾಗೂ ಬುದ್ಧಿ, ಇವು ಇಂದ್ರಿಯ ವಿಷಯಗಳನ್ನು ಒಳಗೊಂಡಿವೆ. ಆದರೆ ಆಕಾರ, ರುಚಿ, ವಾಸನೆ, ಶಬ್ಧ ಹಾಗೂ ಸ್ಪರ್ಶ. ಭಗವಂತನನ್ನು ಕಂಡ ನಾರದನು ಅತೀವ ಹರ್ಷಗೊಂಡನು. ಬ್ರಹ್ಮನನ್ನು ಕಂಡ ಭಗವಂತನೂ ಹರ್ಷಗೊಂಡು ಅವನ ತಪಸ್ಸು ಹಾಗೂ ಸೃಷ್ಟಿಸುವ ಬಯಕೆಯ ಬಗ್ಗೆ ಮುದಗೊಂಡಿರುವುದಾಗಿ ತಿಳಿಸಿದ. ಭಗವಂತನು ಬ್ರಹ್ಮನಿಗೆ ತನ್ನ ಆಸೆಯನ್ನು ತಿಳಿಸಬೇಕೆಂದು ಹೇಳಿದ. ತಪಸ್ಸಿಗೆ ತೆರಳಬೇಕೆಂದು ಬ್ರಹ್ಮನಿಗೆ ಆಜ್ಞೆಯನ್ನು ಅವನೇ ಮೊದಲು ಮಾಡಿದವನೆಂಬುದಾಗಿ ಹೇಳಿದಾಗ ಬ್ರಹ್ಮನು ಚಕಿತಗೊಂಡನು.

ಭಗವಂತನು ಹೇಳಿದನು: " ನಾನು ತಪಸ್ಸಿನ ಮೂಲಕ ಈ ವಿಶ್ವವನ್ನು ಸೃಷ್ಟಿಸುತ್ತೇನೆ. ಆ ಶಕ್ತಿಯಿಂದಲೇ ಅದನ್ನು ನಡೆಸುತ್ತೇನೆ ಮತ್ತು ಅದೇ ಶಕ್ತಿಯಿಂದ ಅದನ್ನು ಹಿಂತೆಗೆದುಕೊಳ್ಳುತ್ತೇನೆ. ಅಂತಸ್ಥ ಶಕ್ತಿಯು ತಪಸ್ಸಾಗಿರುತ್ತದೆ".

ಧ್ಯಾನಮಗ್ನ ಆಕಾರವಿದ್ದಾಗ್ಯೂ, ಅವನಿಗೆ ಅಂಥ ಆಕಾರಗಳು ಇಲ್ಲದಿದ್ದಾಗ್ಯೂ ಅವನು ಸಾಮಾನ್ಯ ಆಕಾರಗಳನ್ನು ತಳೆಯುವುದು ಹೇಗೆ ಸಾಧ್ಯವೆಂಬುದಾಗಿ ; ತನ್ನದೇ ಆತ್ಮದ ಮೂಲಕ ವಿವಿಧ ಶಕ್ತಿಗಳನ್ನು ನಾಶ, ಸಂತತಿ, ಸ್ವೀಕಾರ ಮತ್ತು ಮುನ್ನಡೆಯನ್ನು ವಿವಿಧ ಸಮ್ಮಿಶ್ರಣಗಳ ಮೂಲಕ ಸಾಕಾರಗೊಳಿಸಿಕೊಳ್ಳಲು ಹೇಗೆ ಸಾಧ್ಯವೆಂಬುದಾಗಿ ಬ್ರಹ್ಮನು ಭಗವಂತನನ್ನು ಕೇಳಿದನು.

ಅದಕ್ಕೆ ಭಗವಂತನು ಧರ್ಮ ಗ್ರಂಥಗಳಲ್ಲಿ ವಿವರಿಸಲಾದ ತನ್ನ ಬಗೆಗಿನ ವಿಷಯಗಳು ಅತ್ಯಂತ ಗೋಪ್ಯವಾಗಿದ್ದು ಅವನ್ನು ಭಕ್ತಿಯ ಮೂಲಕ ಮಾತ್ರ ಅರಿವಾಗಿಸಿಕೊಳ್ಳಬೇಕೆಂದನು. ಅವನಲ್ಲದೆ ಬೇರೇನೂ ಇರದಿದ್ದಾಗ ಸೃಷ್ಟಿಗೆ ಮುಂಚೆ ಅಸ್ತಿತ್ವದಲ್ಲಿದ್ದವನು ತಾನೊಬ್ಬನೇ ಎಂಬುದಾಗಿ ಅವನು ಹೇಳಿದನು. ಪ್ರಳಯದ ನಂತರ ಉಳಿಯುವವನೂ ತಾನೊಬ್ಬನೇ ಎಂದನು. ಸೃಷ್ಟಿಸಲ್ಪಟ್ಟ ಎಲ್ಲದರಲ್ಲೂ ಅವನು ಅಸ್ತಿತ್ವದಲ್ಲಿದ್ದು ಅದೇ ಕಾಲಕ್ಕೆ ಅವನು ಪ್ರತಿಯೊಂದರ ಹೊರಗಿದ್ದಾನೆ. ಬ್ರಹ್ಮನಿಗೆ ತನ್ನ ಅತಿಶಯ ರೂಪವನ್ನು ತೋರಿದ ನಂತರ ಅವನು ಕಣ್ಮರೆಯಾದನು. ಹೀಗೆ ಬ್ರಹ್ಮನು ಮೊದಲಿನಂತೆಯೇ ಜೀವಿಗಳಿಂದ ಒಡಗೂಡಿದ ಜಗತ್ತನ್ನು ಸೃಷ್ಟಿಸಲು ಪ್ರಾರಂಭಿಸಿದನು. ಬ್ರಹ್ಮನು ನಾರದನಿಗೆ ಶ್ರೀಮದ್ಭಾಗವತವನ್ನು ಕುರಿತು ಹೇಳಿದನು. ನಂತರದಲ್ಲಿ, ನಾರದನು ಸರಸ್ವತಿ ನದಿಯ ತೀರದ ಮೇಲೆ ವ್ಯಾಸ ದೇವರಿಗೆ ಅದನ್ನೇ ಬೋಧಿಸಿದನು.

## ಅಧ್ಯಾಯ - 2

# ಶ್ರೀಮದ್ಭಾಗವತಮ್

(ಈ ಮಹಾ ಪುರಾಣದಲ್ಲಿನ ವಿವಿಧ ವಿಷಯಗಳನ್ನು ಈ ಅಧ್ಯಾಯ ಒಳಗೊಂಡಿದೆ. ಶರತ್ತುಗಳಿಂದ ಒಡಗೂಡಿದ ಆತ್ಮ ಜಗತ್ತು, ಉನ್ನತ ಕಾಲ, ಆಕಾಶ ಇವನ್ನೊಳಗೊಂಡಂತೆ ಮೈತ್ರೇಯಿಯು ವಿದುರನಿಗೆ ನೀಡಿದ ಉಪನ್ಯಾಸವನ್ನು ಇದು ಒಳಗೊಂಡಿದೆ)

ಶ್ರೀ ಶುಕಾಚಾರ್ಯರು ಹೇಳಿದರು: ಭಾಗವತದಲ್ಲಿ ಹೇಳಿಕೆಗಳ ಹತ್ತು ವಿಭಾಗಗಳಿವೆ. ಅವುಗಳೆಂದರೆ ಜಗತ್ತಿನ ಸೃಷ್ಟಿ; ಉಪಸೃಷ್ಟಿ; ಗ್ರಹಮಂಡಲ ವ್ಯವಸ್ಥೆ; ಭಗವಂತನಿಂದ ಸಂರಕ್ಷಣೆ; ಸೃಷ್ಟಿಗೆ ಪ್ರಲೋಭನೆ; ಮನುಗಳ ಬದಲಾವಣೆ; ಭಗವಂತನನ್ನು ಕುರಿತ ವಿಜ್ಞಾನ; ಮೂಲಸ್ಥಾನಕ್ಕೆ ಹಿಂತಿರುಗುವಿಕೆ; ದೈವಕ್ಕೆ ಹಿಂತಿರುಗುವಿಕೆ; ಮೋಕ್ಷ ಹಾಗೂ ಪ್ರಮುಖ ಅಥವಾ ಉನ್ನತ ಸಾಧಕನು. ಈ ಉನ್ನತನ ಅತಿಶಯತೆಯನ್ನು ಪ್ರತ್ಯೇಕಗೊಳಿಸಲು, ಇನ್ನಿತರವುಗಳ ಚಿಹ್ನೆಗಳನ್ನು ಕೆಲವೊಮ್ಮೆ ವೇದಗಳ ಪ್ರಸ್ತಾಪದ ಮೂಲಕ, ಕೆಲವೊಮ್ಮೆ ನೇರ ವಿವರಣೆಯೊಂದಿಗೆ ಮತ್ತು ಕೆಲವೊಮ್ಮೆ ಹಿರಿಯ ಮುನಿಗಳ ಸಾರಾಂಶ ವಿವರಣೆಗಳ ಮೂಲಕ ಮಾಡಲಾಗಿದೆ.

ಹದಿನಾರರ ಮೂಲಭೂತ ಸೃಷ್ಟಿ : ಅಗ್ನಿ, ಜಲ, ಭೂಮಿ, ವಾಯು ಮತ್ತು ಆಕಾಶ ; ಶಬ್ಧ, ಆಕಾರ, ರುಚಿ , ವಾಸನೆ, ಸ್ಪರ್ಶ ಮತ್ತು ಕಣ್ಣುಗಳು; ಕಿವಿಗಳು, ಮೂಗು, ನಾಲಗೆ, ತ್ವಚೆ ಮತ್ತು ಬುದ್ಧಿ ಇವು ಸರ್ಗವೆಂಬುದಾಗಿ ತಿಳಿದಿದ್ದು. ಐಹಿಕ ಸ್ಪರ್ಶದ ವಿಧಾನಗಳ ಅಂತರಪ್ರಕ್ರಿಯೆಯ ಪರಿಣಾಮಗಳನ್ನು ವಿಸರ್ಗವೆಂದು ಕರೆಯಲಾಗಿದೆ. ಮನುಷ್ಯನೊಬ್ಬನು ಅನುಸರಿಸಬೇಕಾದ ಸೂಕ್ತ ಪರಿಸ್ಥಿತಿಯೆಂದರೆ ಭಗವಂತನ ನಿಯಮಗಳನ್ನು ಪಾಲಿಸಿ ಚಿತ್ತಶಾಂತಿಯನ್ನು ಉಳಿಸಿಕೊಳ್ಳುವುದಾಗಿದೆ. ಭಗವಂತನನ್ನು ಕುರಿತ ವಿಜ್ಞಾನ ಅವನ ಅವತಾರವನ್ನು ವಿವರಿಸುವುದಾಗಿದೆ. ಜೀವಂತ ಅಸ್ತಿತ್ವವನ್ನು, ಮಹಾವಿಷ್ಣುವಿನ ಅತೀಂದ್ರಿಯ ಶಕ್ತಿಯೊಂದಿಗೆ ಬೆರೆಸುವುದನ್ನು ವ್ಯಕ್ತಗೊಂಡ ವಿಶ್ವ, ಸಮಾಪ್ತಿಗೊಳ್ಳುತ್ತದೆ ಎನ್ನಲಾಗಿದೆ. ಜೀವಿಯು ಬದಲಾಗಬಲ್ಲ ಹಾಗೂ ಸೂಕ್ಷ್ಮ ಐಹಿಕ ಶರೀರವನ್ನು ಬಿಟ್ಟುಕೊಟ್ಟಾಗ ಮೋಕ್ಷಹೊಂದುತ್ತಾನೆ. ಉನ್ನತ ಜೀವಿ ಅಥವಾ ಉನ್ನಾತಾತ್ಮನಾದ ವಿಶ್ವದ ಸಾಕಾರ ರೂಪಿ ಅದರ ಆಗರ ಹಾಗೂ ಸಮಾಪ್ತಿಯ ಮೂಲ. ಹೀಗೆ ಅವನು. ಪರಮ ಸತ್ಯ. ವಿವಿಧ ರೀತಿಯ ಬುದ್ಧಿ ಶಕ್ತಿಯನ್ನು ಹೊಂದಿರುವವನು. ಅಧ್ಯಾತ್ಮ ಜೀವಿಯಾಗಿದ್ದು ಇಂದ್ರಿಯಗಳ ದೇವತೆಯನ್ನು ನಿಯಂತ್ರಿಸುವ ವ್ಯಕ್ತಿಯನ್ನು ಅಧಿದೈವನೆಂದು ಕರೆಯಲಾಗುತ್ತದೆ. (ಸ್ಥಿಮಿತದಲ್ಲಿರುವ ಜೀವಿಯು ಅಧ್ಯಾತ್ಮಿಕ ವ್ಯಕ್ತಿಯೆಂಬುದಾಗಿ ಕರೆಯಲ್ಪಡುತ್ತಿದ್ದು ನಿಯಂತ್ರಕನನ್ನು ಅಧಿ ದೈವಿಕ ವ್ಯಕ್ತಿಯೆಂದು ಕರೆಯಲಾಗುತ್ತದೆ. ನಿಯಂತ್ರಕ ಹಾಗೂ ನಿಯಂತ್ರಣಕ್ಕೆ ಒಳಪಟ್ಟವನನ್ನು, ಅಂದರೆ ಐಹಿಕ ಶರೀರದ ಮೂಲಕ ಗುರುತಿಸಲ್ಪಡುವವನನ್ನು ಆಧಿ ಭೌತಿಕ ಪುರುಷನೆಂದು ಕರೆಯಲಾಗುತ್ತದೆ. ಮೇಲೆ ಚರ್ಚಿಸಲಾದ ಮೂರು ಹಂತಗಳೂ ಒಂದನ್ನೊಂದು

ಅವಲಂಬಿಸಿದಂಥವು. ಆದರೆ ಎಲ್ಲವನ್ನೂ ನೋಡುವ ಭಗವಂತನು ಎಲ್ಲದರಿಂದಲೂ ಸ್ವತಂತ್ರನಾಗಿದ್ದು, ಅದರಿಂದಾಗಿ ಅವನು ಉನ್ನತ ಆಶ್ರಯದಾತನು. ವಿವಿಧ ಜಗತ್ತುಗಳನ್ನು ಪ್ರತ್ಯೇಕಿಸಿದ ನಂತರ ಮಹಾವಿಷ್ಣುವು ಕಾರಣ (ಮೊದಲ ಪುರುಷ ಅವತಾರಿಯು ಕಾಣಿಸಿಕೊಂಡ ಸ್ಥಳವಾದ) ಸಾಗರದಿಂದ ಹೊರಬಂದು ಬೇರೆ ಬೇರೆ ಜಗತ್ತುಗಳೆಲ್ಲವನ್ನೂ ಪ್ರವೇಶಿಸಿ ಸೃಷ್ಟಿಗೊಂಡ ಅತಿಶಯ ಜಲದಲ್ಲಿ ಮಲಗಲು ಬಯಸಿದ. ಉನ್ನತ ವ್ಯಕ್ತಿಯು ಅವ್ಯೆಯಕ್ತಿಕನಾಗಿರುವುದರಿಂದ ಅವನು "ನರ" ಅಥವಾ ವ್ಯಕ್ತಿ. ಅದ್ದರಿಂದ ಉನ್ನತ "ನರನಿಂದ" ಸೃಷ್ಟಿಗೊಂಡ ಅತಿಶಯ ಜಲವು "ನಾರಾ" ಎಂದು ಹೆಸರಾಗಿದೆ. ಅವನ್ನು ಆ ನೀರಿನಲ್ಲಿ ಮಲಗುವುದರಿಂದಾಗಿ ಅವನು ನಾರಾಯಣನೆಂದು ಹೆಸರಾಗಿದ್ದಾನೆ. ಎಲ್ಲ ಐಹಿಕ ಸಾಮಗ್ರಿಗಳು, ಚಟುವಟಿಕೆಗಳು, ಕಾಲ ಹಾಗೂ ವಿಧಾನಗಳು ಮತ್ತು ಅವನ್ನು ಅನುಭವಿಸುವಂಥ ಜೀವಿಗಳು ಅವನ ಕರುಣೆಯಿಂದಾಗಿ ಮಾತ್ರ ಅಸ್ತಿತ್ವದಲ್ಲಿದ್ದು ಅವನು ಯಾವಾಗ ಅವರ ಬಗ್ಗೆ ಕಾಳಜಿ ವಹಿಸುವುದಿಲ್ಲವೋ ಆಗ ಪ್ರತಿಯೊಂದೂ ಅಸ್ತಿತ್ವವನ್ನು ಕಳೆದುಕೊಳ್ಳುತ್ತದೆ. ತನ್ನಿಂದಲೇ ಜೀವಿಗಳ ವೈವಿಧ್ಯಮಯ ರೂಪಗಳನ್ನು ಸೃಷ್ಟಿಸುವ ಬಯಕೆಯಿಂದ ಬಾಹ್ಯ ಜಗತ್ತಿನ ಮೂಲಕ ರೂಪಗಳನ್ನು ಸೃಷ್ಟಿಸಿದ್ದಾನೆ.

ಮಹಾವಿಷ್ಣುವಿನಲ್ಲಿ ಸಾಕಾರಗೊಂಡಿರುವ ಅತಿಶಯ ಶರೀರದೊಳಗೆ ಇರುವಂಥ ಆಕಾಶದಲ್ಲಿ, ಅರಿವಿನ ಶಕ್ತಿ, ಬೌದ್ಧಿಕ ಶಕ್ತಿ ಮತ್ತು ಶಾರೀರಿಕ ಶಕ್ತಿ ಇವೆಲ್ಲವೂ ಉಗಮವಾಗಿರುವುದಲ್ಲದೆ ಇಡೀ ಜೀವಂತ ಸಮೂಹದ ಚಿಲುಮೆಯ ಶಕ್ತಿಯ ಸಾರ ಸಂಗ್ರಹವಿದೆ. ಇಡೀ ಶಕ್ತಿಯು ಚಲನೆಯಲ್ಲಿರುವಾಗ ಮಿಕ್ಕೆಲ್ಲ ಜೀವಿಗಳು ಚಲನಶೀಲವಾಗಿ, ಅದು ನಿಂತಾಗ ಎಲ್ಲವೂ ನಿಲ್ಲುತ್ತವೆ. ವಿರಾಟ್ ಪುರುಷನಿಂದ ಪ್ರಚೋದಿಸಲ್ಪಟ್ಟ ಜೀವಂತ ಶಕ್ತಿಯು ಹಸಿವು ಹಾಗೂ ಬಾಯಾರಿಕೆಯನ್ನುಂಟು ಮಾಡಿ ಅವನು ಕುಡಿಯಲು ಹಾಗೂ ತಿನ್ನಲು ಬಯಸಿದಾಗ ಬಾಯಿ ತೆರೆಯಿತು. ಬಾಯಿಂದ ನಾಲಗೆ ರೂಪಗೊಂಡು ವಿವಿಧ ರುಚಿಗಳು ಅಸ್ತಿತ್ವಕ್ಕೆ ಬಂದವು. ಮಹಾಮಹಿಮನು ಮಾತನಾಡಲು ಬಯಸಿದಾಗ ಬಾಯಿಂದ ಮಾತುಗಳು ಧ್ವನಿಸಿದವು. ನಂತರ ನಿಯಂತ್ರಕ ದೇವತೆಯಾದ ಅಗ್ನಿಯು ಅವನ ಬಾಯಿಂದ ರೂಪುಗೊಂಡನು. ಆದರೆ ಅವನು ನೀರಿನಲ್ಲಿ ಮಲಗಿದ್ದಾಗ ಈ ಎಲ್ಲ ಕ್ರಿಯೆಗಳೂ ಸ್ಥಗಿತಗೊಂಡವು. ಭಗವಂತನು ವಾಸನೆಗಳನ್ನು ಆಘ್ರಾಣಿಸಲು ಬಯಸಿದಾಗ, ಹೊಳ್ಳೆಗಳು ಮತ್ತು ಉಸಿರಾಟವು ರೂಪುಗೊಂಡು, ಆಘ್ರಾಣಿಸುವ ಅವಯವ ಹಾಗೂ ವಾಸನೆಗಳು ಅಸ್ತಿತ್ವಕ್ಕೆ ಬಂದವು. ಹೀಗೆ ಪ್ರತಿಯೊಂದೂ ಕತ್ತಲೆಯಲ್ಲಿ ಉಳಿದಿದ್ದಾಗ ಭಗವಂತನು ತನ್ನನ್ನು ಮತ್ತು ಸೃಷ್ಟಿಯಾದವುಗಳನ್ನೆಲ್ಲ ನೋಡಲು ಬಯಸಿದನು. ಆಗ ಕಣ್ಣುಗಳು, ಪ್ರಕಾಶಮಯತೆಯನ್ನುಂಟು ಮಾಡುವಂಥ ಸೂರ್ಯದೇವನು, ದೃಷ್ಟಿಯು ಶಕ್ತಿಯು ಮತ್ತು ನೋಡುವ ಕಣ್ಣುಗಳು ವಿವಿಧ ಚಟುವಟಿಕೆಗಳಾಗಿ ರೂಪುಗೊಂಡವು. ಭಗವಂತನು ಬಯಸಿದಾಗಲೆಲ್ಲ ಕಿವಿಗಳು, ತ್ವಚೆ, ಕೈಕಾಲುಗಳು, ಜನನೇಂದ್ರಿಯಗಳು, ವಿಸರ್ಜನೆ ರಂಧ್ರಗಳು, ಆಸನ ದ್ವಾರ, ಹೊಕ್ಕಳು, ಹೊಟ್ಟೆ, ಹೃದಯ (ಬುದ್ಧಿಯ ಸ್ಥಾನ) ಇವೆಲ್ಲ ಕಾಣಿಸಿಕೊಂಡವು. ಶರೀರದ ಏಳು ಅಂಶಗಳು ತ್ವಚೆಯ ಮೇಲಿನ ತೆಳುಪದರ, ಮಾಂಸ, ರಕ್ತ, ಕೊಬ್ಬು, ಎಲುಬು,

ಮತ್ತು ಮೂಳೆ ಇವನ್ನು ಭೂಮಿ, ನೀರು ಹಾಗೂ ಅಗ್ನಿಯಿಂದ ಮಾಡಲಾಯಿತು. ಜೀವದ ಉಸಿರಾಟ ನೀರು ಮತ್ತು ಗಾಳಿಯಿಂದ ಉಂಟಾದವು. ಇಂದ್ರಿಯ ಅವಯವಗಳು ಐಹಿಕ ಸ್ವಭಾವ ವಿಧಾನಗಳಿಗೆ ಸೇರ್ಪಡೆಯಾಗಿದ್ದು ಐಹಿಕ ಸ್ವಭಾವ ವಿಧಾನಗಳು ಸುಳ್ಳು ಅಹಂಮಿಕೆಯ ಉತ್ಪನ್ನಗಳು. ಬುದ್ಧಿಯು ಎಲ್ಲ ಬಗೆಯ ಐಹಿಕ ಅನುಭವಗಳಿಗೆ (ಸಂತಸ ಮತ್ತು ದುಗುಡ) ಈಡಾಗಿದ್ದು ಬುದ್ಧಿ ಶಕ್ತಿಯು ಬುದ್ಧಿಯ ನಡಾವಳಿಗಳ ಗುಣ. ಹೀಗೆ ಇವೆಲ್ಲವುಗಳಿಂದ ಭಗವಂತನ ಬಾಹ್ಯ ರೂಪುರೇಖೆಗಳು ಗ್ರಹಗಳ ವಿಚಾರದಲ್ಲಿನಂತೆಯೇ ಒಟ್ಟು ಆಕೃತಿಗಳಿಂದ ಕೂಡಿವೆ. ಭಗವಂತನು ಧ್ಯಾನಾಸಕ್ತ ರೂಪದಲ್ಲಿ ತನ್ನನ್ನೇ ತೋರಿಸಿಕೊಳ್ಳುತ್ತಾನೆ. ಬೇರ್ಯಾವ ಚಟುವಟಿಕೆಗಳಿಂದಲೂ ಅವನು ಪ್ರಭಾವಿತನಾಗುವುದಿಲ್ಲ.

ಶ್ರೀ ಶುಕಾಚಾರ್ಯರು ಹೇಳಿದರು: "ಎಲೈ ದೊರೆಯೇ, ತಮ್ಮ ಹಿಂದಿನ ಕರ್ಮಗಳಿಗೆ ಅನುಸಾರವಾಗಿ ಎಲ್ಲ ಜೀವಿಗಳೂ ಪರಮಾತ್ಮನಿಂದ ಸೃಷ್ಟಿಗೊಂಡಿದ್ದಾರೆ ಎಂಬುದನ್ನು ನನ್ನಿಂದ ಅರಿತುಕೊಳ್ಳುವಂಥವನಾಗು. ಇದು ಬ್ರಹ್ಮ ಹಾಗೂ ಅವನ ಪುತ್ರರು, ಮನುಗಳು, ಉಪದೇವತೆಗಳು, ಉನ್ನತ ಮುನಿಗಳು ಹಾಗೂ ಮಿಕ್ಕೆಲ್ಲರನ್ನೂ ಹೊಂದಿದೆ. ಐಹಿಕ ಸ್ವಭಾವದ ವಿವಿಧ ವಿಧಾನಗಳಿಗೆ ಅನುಗುಣವಾಗಿ ಒಳಿತಿನ, ಕಾಮನ ಹಾಗೂ ಕತ್ತಲಿನ ವಿಧಾನಗಳಲ್ಲದೆ, ಉಪದೇವತೆಗಳು, ಮಾನವರು ಹಾಗೂ ನರಕ ಜೀವಿಗಳಿದ್ದಾರೆ. ಸೃಷ್ಟಿಯನ್ನು ಸ್ಥಾಪಿಸಿದ ನಂತರ ಭಗವಂತನು ವಿವಿಧ ರೂಪಗಳಲ್ಲಿ ಕಾಣಿಸಿಕೊಳ್ಳುತ್ತಿದ್ದು. ಹೀಗೆ ಅವನು ಮಾನವರು, ಮಾನವೇತರ ಹಾಗೂ ಉಪದೇವತೆಗಳ ಮಧ್ಯೆ ಎಲ್ಲ ವಿಧಗಳ ನಿಯಮಕ್ಕೊಳಪಟ್ಟು ಆತ್ಮಗಳನ್ನು ಪುನಃಶ್ಚೇತನಗೊಳಿಸುತ್ತಾನೆ. ಅನಂತರ ಯುಗದ ಕೊನೆಯಲ್ಲಿ ಭಗವಂತನು ರುದ್ರ ಅಥವಾ ವಿನಾಶಕನ ರೂಪದಲ್ಲಿ ಬಿರುಗಾಳಿಯು ಮೋಡಗಳನ್ನು ಚದುರಿಸುವಂತೆ ಇಡೀ ಸೃಷ್ಟಿಯನ್ನು ನಿರ್ನಾಮಗೊಳಿಸುತ್ತಾನೆ. ಇವೆಲ್ಲವೂ ಬ್ರಹ್ಮನ ಒಂದು ದಿನದ ಕ್ರಿಯೆಯಲ್ಲಿ ನಡೆಯುವಂಥವು.

ವಿದುರನು ತನ್ನ ಸಂಪದ್ಭರಿತ ಗೃಹವನ್ನು ತ್ಯಜಿಸಿ ಅರಣ್ಯವನ್ನು ಪ್ರವೇಶಿಸಿದಾಗ ಶ್ರೀ ಕೃಷ್ಣ ಪರಮಾತ್ಮನ ಬಗ್ಗೆ ಮೈತ್ರೇಯಿ ಮುನಿಗೆ ಪ್ರಶ್ನೆಯೊಂದನ್ನು ಕೇಳಿದನೆಂದು ಶ್ರೀ ಶುಕಾಚಾರ್ಯರು ತಿಳಿಸಿದರು. ಇದಕ್ಕೆ ಪರೀಕ್ಷಿತ ಮಹಾರಾಜನು ಶ್ರೀ ಶುಕಾಚಾರ್ಯರನ್ನು ವಿದುರನು ಮೈತ್ರೇಯಿ ಮುನಿಯನ್ನು ಹೇಗೆ, ಎಲ್ಲಿ ಸಂಧಿಸಿದನೆಂದು ಕೇಳಿದನು. ಅದಕ್ಕೆ ಶ್ರೀ ಶುಕಾಚಾರ್ಯರು ಯುದ್ಧ ಮುಗಿದ ನಂತರ ಧೃತರಾಷ್ಟ್ರನು ಯುಧಿಷ್ಠಿರನೊಂದಿಗೆ ತಂಗಿದ್ದನೆಂದೂ ವಿದುರನೂ ಸಹ ಅಲ್ಲಿಗೆ ತೆರಳಿ ಧೃತರಾಷ್ಟ್ರನ ಬಗ್ಗೆ ಅಸಂತುಷ್ಟವಾಗಿ ಅವನು ಜಗತ್ತನ್ನು ತ್ಯಜಿಸಿ ಇನ್ನುಳಿದ ಜೀವಿತಕ್ಕಾಗಿ ಅರಣ್ಯವನ್ನು ಪ್ರವೇಶಿಸಬೇಕೆಂದು ಸಲಹೆ ಮಾಡಿದನೆಂದನು. ಶ್ರೀ ಕೃಷ್ಣ ಪರಮಾತ್ಮನ ಶಾಂತಿ ಸಂಧಾನದ ಸಂದರ್ಭದಲ್ಲಿ ದುರ್ಯೋಧನನಿಂದ ಅವಹೇಳನಗೊಂಡಿದ್ದ ವಿದುರನು ಹಸ್ತಿನಾಪುರವನ್ನು ಬಿಟ್ಟು ಹೊರಟಿದ್ದನು. ಆದ್ದರಿಂದ ಕುರುಕುಲದವರ ಮಧ್ಯೆ ಯುದ್ಧ ಸಂಭವಿಸಿದಾಗ ವಿದುರನು ಅಲ್ಲಿರಲಿಲ್ಲ. ಹಸ್ತಿನಾಪುರದಿಂದ ಹೊರಟ ವಿದುರನು ಅನೇಕ ತೀರ್ಥ ಕ್ಷೇತ್ರಗಳನ್ನು ಸಂದರ್ಶಿಸಿದನು. ಅವನು "ಪ್ರಭಾಸ" ಕ್ಷೇತ್ರದಲ್ಲಿದ್ದಾಗ ಅವನಿಗೆ ಯುದ್ಧ ಮುಗಿಯಿತೆಂದೂ, ಯುಧಿಷ್ಠಿರನು ದೊರೆಯಾಗಿದ್ದಾನೆಂದೂ ಹಾಗೂ ಕೌರವ ಸೋದರರು ಯುದ್ಧದಲ್ಲಿ

ಮಡಿದರೆಂದೂ ತಿಳಿಯಿತು. ತೀರ್ಥ ಯಾತ್ರೆಯ ಸಂದರ್ಭದಲ್ಲಿ ವಿದುರನು ತ್ರಿತ, ಉಷಾಸ, ಮನು, ಪೃಥು ಮುಂತಾದವರನ್ನು ಭೇಟಿಯಾಗಿದ್ದನು. ಅನೇಕ ತೀರ್ಥ ಕ್ಷೇತ್ರಗಳು ಹಾಗೂ ದೇಶದ ಸಮೃದ್ಧ ಸ್ಥಳಗಳ ಮೂಲಕ ಹಾದು ಹೋದ ನಂತರ ಅವನು ಯಮುನಾ ನದಿಯ ದಂಡೆಗೆ ಆಗಮಿಸಿ ಅಲ್ಲಿ ಶ್ರೀ ಕೃಷ್ಣ ಪರಮಾತ್ಮನ ಅವಿಚ್ಛಿನ್ನ ಭಕ್ತನಾದ ಉದ್ಧವನನ್ನು ಭೇಟಿಯಾದನು. ಅವನನ್ನು ಕಂಡು ಸಂತುಷ್ಟನಾದ ವಿದುರ, ಅವನನ್ನಪ್ಪಿಕೊಂಡು ಭಗವಂತನ ಕುಟುಂಬದ ಬಗ್ಗೆ ವಿಚಾರಿಸಿದನು. ಭಗವಂತನ ಸ್ಮರಣೆಯಿಂದ ಉಕ್ಕಿ ಬಂದ ಧಾವಂತದಿಂದ ಉದ್ಧವನು ಅವನಿಗೆ ಉತ್ತರಿಸಲಾರದಾದನು.

## ಉದ್ಧವ

ಉದ್ಧವನು ತನ್ನ ಚಿಕ್ಕಂದಿನಿಂದಲೂ ಭಗವಂತನ ಸೇವೆಯಲ್ಲಿದ್ದು ಪರಮಾತ್ಮನ ಬಗ್ಗೆ ವಿದುರನು ಕೇಳಿದಾಗ ಅವನನ್ನು ಸ್ಮರಿಸಿಕೊಂಡನು. ಉದ್ಧವನೆಂದನು : "ಜಗತ್ತಿನ ಸೂರ್ಯ, ಶ್ರೀ ಕೃಷ್ಣ ಪರಮಾತ್ಮನು ಅಸ್ತಂಗತನಾಗಿದ್ದು ನಮ್ಮ ಮನೆಯನ್ನೀಗ ಕಾಲ ಸರ್ಪವು ನುಂಗಿ ಹಾಕಿದೆ. ನಮ್ಮ ಯೋಗಕ್ಷೇಮದ ಬಗ್ಗೆ ನಾನೇನು ಹೇಳಲಿ ? ಭೂಮಿಯ ಮೇಲಿನ ಎಲ್ಲರ ದೃಷ್ಟಿಗೂ ತನ್ನ ಶಾಶ್ವತ ಮೂರ್ತಿಯನ್ನು ತೋರಿಸಿದ್ದ ಶ್ರೀ ಕೃಷ್ಣ ಪರಮಾತ್ಮನು ಅಗತ್ಯ ತಪಸ್ಸನ್ನು ನಡೆಸದೆ ಅವನನ್ನು ಕಾಣಲು ಅಸಮರ್ಥರಾದವರ ದೃಷ್ಟಿಯಿಂದ ತನ್ನ ಜೀವಂತ ಆಕೃತಿಯನ್ನು ಮಾಯಾವಾಗಿಸಿದನು". ಉದ್ಧವನು ಶ್ರೀ ಕೃಷ್ಣ ಪರಮಾತ್ಮನ ಇಡೀ ಜೀವನ ವೃತ್ತಾಂತ, ಕುರುಕ್ಷೇತ್ರ ಸಮಯದಲ್ಲಿ ಅವನ ಪಾತ್ರ ಹಾಗೂ ಯಾದವೀ ಕಲಹವನ್ನು ಕುರಿತು ಹೇಳಿದನು. ಕೊನೆಗೆ ಉದ್ಭವನೆಂದನು: "ಶ್ರೀ ಕೃಷ್ಣ ಪರಮಾತ್ಮನ ವ್ಯಕ್ತಿತ್ವವು ಅಂತ್ಯವನ್ನು ಕಂಡನಂತರ ತನ್ನ ಆಂತರಿಕ ಶಕ್ತಿಯಿಂದಾಗಿ ಸರಸ್ವತಿ ನದಿಯ ತೀರಕ್ಕೆ ಹೋಗಿ ನೀರನ್ನು ಕುಡಿದು ಮರದ ಕೆಳಗೆ ಕೂತನು. ಭಗವಂತನು ನನಗೆ ಬದರೀಕಾಶ್ರಮಕ್ಕೆ ತೆರಳುವಂತೆ ಸೂಚಿಸಿದನು. ಅವನು ಸಲಹೆ ಮಾಡಿದಾಗಲೆಲ್ಲ ನಾನು ಅವನನ್ನು ಬಿಟ್ಟು ಹೊರಡಲಾರದವನಾದೆ. ನಾನು ಅವನನ್ನು ಹಿಂಬಾಲಿಸಿದಾಗ ಅವನು ಮರದ ಕೆಳಗೆ ಆಳವಾದ ಚಿಂತನೆಯಲ್ಲಿ ಕುಳಿತಿದ್ದನ್ನು ಕಂಡೆ. ಭಗವಂತನ ಶರೀರ ಶ್ಯಾಮವರ್ಣದ್ದಿದ್ದು, ಆಹ್ಲಾದಕರ ಹಾಗೂ ಅತ್ಯಂತ ಸುಂದರವಾಗಿತ್ತು. ತನ್ನ ಬಲ ಪದ್ಮ ಪಾದವನ್ನು ಎಡಗಡೆಯ ತೊಡೆಯ ಮೇಲಿರಿಸಿಕೊಂಡು ಚಿಕ್ಕ ಆಲದ ಮರಕ್ಕೊರಗಿ ವಿಶ್ರಮಿಸುತ್ತಿದ್ದ ಶ್ರೀ ಕೃಷ್ಣನು ತನ್ನ ಗೃಹಸೌಖ್ಯಗಳೆಲ್ಲವನ್ನೂ ತ್ಯಜಿಸಿದ್ದರೂ ಆ ಭಂಗಿಯಲ್ಲಿ ಆಕರ್ಷಕನಾಗಿದ್ದ. ಆ ಸಮಯದಲ್ಲಿ ಜಗತ್ತಿನ ಅನೇಕ ಭಾಗಗಳಲ್ಲಿ ಪ್ರವಾಸ ಮಾಡಿದ್ದ ಶ್ರೀ ಕೃಷ್ಣ ಪರಮಾತ್ಮನ ಮಹಾನ್ ಭಕ್ತ ಹಾಗೂ ಮಿತ್ರ ಮತ್ತು ಕೃಷ್ಣ ದ್ವೈಪಾಯನ ವ್ಯಾಸಮುನಿಯ ಹಿರಿಯ ಹಿತಚಿಂತಕನಾದ ಮೈತ್ರೇಯಿ ಮುನಿಯು ಸ್ವೇಚ್ಛೆಯಿಂದ ಅಲ್ಲಿಗೆ ಆಗಮಿಸಿದನು. ಮೈತ್ರೇಯಿ ಮುನಿಯು ಅವನಿಗೆ ಅತ್ಯಂತ ನಿಕಟವರ್ತಿ. ಭಗವಂತನು ನಕ್ಕು ನನ್ನತ್ತ ನಿರ್ದಿಷ್ಟ ನೋಟ ಬೀರಿ ಪೂರ್ವಜನ್ಮದಲ್ಲಿ "ವಸು" ವಾಗಿದ್ದ ನಾನು ಭಗವಂತನೊಂದಿಗೆ ಸೇರ್ಪಡೆಯಾಗಬೇಕೆಂಬ ನನ್ನ ಹಂಬಲವನ್ನು ನೆನಪಿಸಿ ನನಗೆ ಅವನೊಳಗೇ ಸ್ಥಾನವನ್ನು ದಯಪಾಲಿಸಿದನು. ಭಗವಂತನು ನನಗೆ

ಮೋಕ್ಷವನ್ನು ನೀಡಿದನು. ಉದ್ಧವನು ಮುಂದೆ ಭಗವಂತನು ತನಗೆ ಹೀಗೆ ತಿಳಿಸಿದನೆಂಬುದಾಗಿ ಹೇಳಿದನು: "ಎಲೈ ಉದ್ಧವನೇ, ಪದ್ಮ ಯುಗದಲ್ಲಿ, ಪೌರಾಣಿಕ ದಿನಗಳಲ್ಲಿ, ಸೃಷ್ಟಿಯ ಆದಿಯಲ್ಲಿ ನನ್ನ ಹೊಕ್ಕಳಿನಿಂದ ಉಗಮಿಸಿದ ಕಮಲದಲ್ಲಿ ರೂಪುಗೊಂಡ ಬ್ರಹ್ಮನೊಂದಿಗೆ ನಾನು ನನ್ನ ಅತಿಶಯ ವೈಭವವನ್ನು, ಹಿರಿಯ ಮುನಿಗಳು ಯಾವುದನ್ನು ಶ್ರೀಮದ್ಭಾಗವತವೆಂದು ಕರೆಯುತ್ತಾರೋ, ಅದನ್ನು ಕುರಿತು ಮಾತನಾಡಿದೆ".

ತನ್ನ ಜೀವನದ ಪ್ರತಿಯೊಂದು ಕ್ಷಣದಲ್ಲೂ ಭಗವಂತನ ಕೃಪಾಕಟಾಕ್ಷಕ್ಕೆ ಪಾತ್ರನಾಗಿದ್ದ ಉದ್ಧವನು ಭಗವಂತನ ಸೇವೆಯಲ್ಲಿ ನಿರತನಾಗಲು ತಾನು ಅಪೇಕ್ಷಿಸುವುದಾಗಿ ಆತನನ್ನು ಪ್ರಾರ್ಥಿಸಿದನು. ಕೊನೆಗೆ ಉದ್ಧವನು, ಭಗವಂತನು ಬ್ರಹ್ಮನಿಗೆ ವಿವರಿಸಿದಂಥ ವಿವರಗಳೊಂದಿಗೆ ತನಗೆ ಜ್ಞಾನೋದಯವನ್ನು ಉಂಟು ಮಾಡಬೇಕೆಂದು ಕೇಳಿಕೊಂಡ. ಈ ಕೋರಿಕೆಯ ಮೇರೆಗೆ ಅವನು ಉದ್ಧವನಿಗೆ ತನ್ನ ಅತಿಶಯತೆಯ ಬಗ್ಗೆ ವಿವರಿಸಿದನು. ತನ್ನ ಆಧ್ಯಾತ್ಮಿಕ ಗುರುವಾದ ಭಗವಂತನಿಂದ ಸ್ವಯಂ ಜ್ಞಾನವನ್ನು ಅರ್ಥಮಾಡಿಕೊಳ್ಳುವ ಮಾರ್ಗವನ್ನು ಕುರಿತು ಅಧ್ಯಯನ ಮಾಡಿದ ನಂತರ ಅಗಲಿಕೆಯ ದುಃಖದಿಂದ ತಾನು ಯಮುನಾ ತೀರಕ್ಕೆ ಬಂದಿರುವುದಾಗಿ ಉದ್ಧವನು ತಿಳಿಸಿದನು. ತನ್ನ ದುಃಖವನ್ನು ಹೋಗಲಾಡಿಸಿಕೊಳ್ಳಲು, ಭಗವಂತನ ಅನುಜ್ಞೆಯಂತೆ ತಾನು ಬದರೀಕಾಶ್ರಮದ ಮಾರ್ಗವಾಗಿ ಹೊರಟಿರುವೆನೆಂದನು. ಬದರೀಕಾಶ್ರಮದಲ್ಲಿ ಭಗವಂತನು "ನರ" ಹಾಗೂ "ನಾರಾಯಣನೆಂಬ" ಋಷಿಗಳ ಅವತಾರದಲ್ಲಿ ದೊಡ್ಡ ತಪಸ್ಸನ್ನು ಸ್ನೇಹಪರ ಜೀವಿಗಳ ಕಲ್ಯಾಣಕ್ಕಾಗಿ ಅನೇಕಾನೇಕ ವರ್ಷಗಳಿಂದ ಮಾಡುತ್ತಿದ್ದಾನೆಂದನು".

ವಿದುರನು ಉದ್ಧವನಿಂದ ತನ್ನ ಬಂಧು ಬಳಗದವರ ಮೋಕ್ಷದ ಬಗ್ಗೆ ಕೇಳಿ ತನ್ನ ಆಂತರಿಕ ಬುದ್ಧಿಶಕ್ತಿ ಮೂಲಕ ತನ್ನನ್ನು ಆವರಿಸಿಕೊಂಡಿದ್ದ ದುಃಖವನ್ನು ಪರಿಹರಿಸಿಕೊಂಡನು ಎಂಬುದಾಗಿ ಶ್ರೀ ಶುಕಾಚಾರ್ಯರು ತಿಳಿಸಿದರು.

ಉದ್ಧವನು ಬದರೀಕಾಶ್ರಮಕ್ಕೆ ಹೋಗುತ್ತಿದ್ದಾಗ ವಿದುರನು ಅವನನ್ನು ಪ್ರಶ್ನಿಸಿ ಭಗವಂತನಿಂದಲೇ ಜ್ಞಾನೋದಯ ಪಡೆದ ಉದ್ಧವನನ್ನು ಆತ್ಮ ಬುದ್ಧಿಶಕ್ತಿಯ ಬಗ್ಗೆ ವಿವರಿಸಬೇಕೆಂದು ಕೇಳಿಕೊಂಡನು. ಉದ್ಧವನು ಅದಕ್ಕೆ ಉತ್ತರವಾಗಿ ಈ ಅಶಾಶ್ವತ ಜಗತ್ತನ್ನು ತ್ಯಜಿಸುವ ಸಂದರ್ಭದಲ್ಲಿ ಭಗವಂತನಿಂದ ನೇರವಾಗಿ ಸೂಚನೆಗಳನ್ನು ಪಡೆದಿರುವ ಮೈತ್ರೇಯಿ ಮುನಿಯಿಂದ ಪ್ರವಚನಗಳನ್ನು ತೆಗೆದುಕೊಳ್ಳಬೇಕೆಂದು ತಿಳಿಸಿದ. ಅನಂತರ ಉದ್ಧವನು ಸೂಚಿಸಿದಂತೆ ಬದರೀಕಾಶ್ರಮಕ್ಕೆ ಹೊರಟು ಆ ಸ್ಥಳವನ್ನು ಸೇರಿದಾಗ ಭಗವಂತನನ್ನು ಒಲಿಸಿಕೊಳ್ಳಲು ಧ್ಯಾನದಲ್ಲಿ ತೊಡಗಿದ. ಭಗವಂತನು ಕಣ್ಮರೆಯಾದ ಬಗ್ಗೆ ವಿಹ್ವಲನಾದ ವಿದುರನು ಗಟ್ಟಿಯಾಗಿ ರೋದಿಸುತ್ತ ಹಿರಿಯ ಮುನಿ ಮೈತ್ರೇಯಿ ವಾಸವಾಗಿದ್ದ ಗಂಗಾ ತೀರಕ್ಕೆ ಅವನನ್ನು ಕಾಣಲು ಹೊರಟನು. ಕುರುಕುಲದ ಅತ್ಯಂತ ಶ್ರೇಷ್ಠನಾದ ವಿದುರನು ಮುನಿಯಿಂದ ತಿಳಿವಳಿಕೆ ಪಡೆಯಲು ಹರಿದ್ವಾರಕ್ಕೆ ತೆರಳಿದನೆಂದು ಶ್ರೀ ಶುಕಾಚಾರ್ಯರು ಪರೀಕ್ಷಿತ ರಾಜನಿಗೆ ತಿಳಿಸಿದರು.

## ಮೈತ್ರೇಯಿಯೊಂದಿಗೆ ವಿದುರನ ಭೇಟಿ

ಗಂಗಾ ನದಿಯ ತೀರವನ್ನು ತಲುಪಿದ ನಂತರ ವಿದುರನು ಮೈತ್ರೇಯಿಗೆ "ಓ ಉನ್ನತ ಮುನಿಯೇ, ಈ ಜಗತ್ತಿನಲ್ಲಿ ಪ್ರತಿಯೊಬ್ಬರೂ ಫಲಪ್ರದ ಚಟುವಟಿಕೆಗಳಲ್ಲಿ ತೊಡಗಿದ್ದರೂ ಯಾರೊಬ್ಬರೂ ತೃಪ್ತಿಯನ್ನಾಗಲಿ ಅಥವಾ ಸಂಕಷ್ಟಗಳಿಗೆ ಪರಿಹಾರವನ್ನಾಗಲಿ ಕಂಡುಕೊಳ್ಳುವುದಿಲ್ಲ. ತದ್ವಿರುದ್ಧವಾಗಿ ಒಬ್ಬನಿಗೆ ಅಂಥ ಚಟುವಟಿಕೆಗಳು ತೀವ್ರ ಕ್ಷೋಭೆಯನ್ನುಂಟು ಮಾಡುತ್ತವೆ. ಆದ್ದರಿಂದ ಕೃಪೆಯಿಟ್ಟು ಒಬ್ಬರು ನಿಜವಾದ ಆನಂದದಲ್ಲಿ ಹೇಗೆ ಬದುಕಬೇಕು ಎಂಬ ಬಗ್ಗೆ ಸೂಚನೆಯನ್ನು ನೀಡು. ಭಕ್ತಿಪೂರ್ವಕ ಸೇವೆಯ ಪರಿಷ್ಕಾರದಿಂದ ಶುದ್ಧೀಕರಣಗೊಂಡಂಥವರಿಗೆ ಮಾತ್ರ, ನೀಡಲಾಗುವ ವೈದಿಕ ತತ್ತ್ವಗಳಿಗೆ ಅನುಗುಣವಾದ ಸಂಪೂರ್ಣ ಸತ್ಯದ ಬಗ್ಗೆ ತಿಳಿಸು. ಜ್ಞಾನವನ್ನು ಆಂತರ್ಯದೊಳಗೆ ಇಟ್ಟುಕೊಂಡಂಥ ಭಗವಂತನನ್ನು ಸಂಪ್ರೀತಗೊಳಿಸಲು ಅಗತ್ಯವಾದ ಭಕ್ತಿಪೂರ್ವಕ ಸೇವೆಯ ಬಗ್ಗೆ ಸೂಚನೆ ನೀಡು" ಎಂದನು.

## ಮೈತ್ರೇಯನ ಉಪನ್ಯಾಸ

ಮೈತ್ರೇಯನು ವಿದುರನಿಗೆ ಹೀಗೆ ಹೇಳಿದನು : "ನೀನು ಮಾಂಡವ್ಯ ಮುನಿಯ ಶಾಪದಿಂದ ಈಗ ವಿದುರನಾಗಿದ್ದು ಈ ಮೊದಲು ಸಾವಿನ ನಂತರ ಜೀವಿಗಳ ಉನ್ನತ ನಿಯಂತ್ರಕನಾಗಿದ್ದ ಯಮರಾಜನಾಗಿದ್ದೆ ಎಂಬುದನ್ನು ನಾನು ಬಲ್ಲೆ. ನೀನು ಸತ್ಯವತಿಯ ಮಗನಾದ ವ್ಯಾಸದೇವನಿಂದ ಅವನ ಸಹೋದರನ ದಾಸಿಗೆ ಜನಿಸಿದವ. ನಿನ್ನಂಥ ಒಳ್ಳೆಯ ಮನುಷ್ಯನು ಭಗವಂತನ ಶಾಶ್ವತ ಅನುಯಾಯಿಗಳಲ್ಲಿ ಒಬ್ಬನಾಗಿದ್ದು ನಿನಗೋಸ್ಕರವಾಗಿಯೇ ಭಗವಂತನು ತನ್ನ ವಾಸಸ್ಥಾನಕ್ಕೆ ಹಿಂತಿರುಗುವ ಮೊದಲು ನನಗೆ ಸೂಚನೆಗಳನ್ನು ಬಿಟ್ಟು ತೆರಳಿದ್ದಾನೆ". ಮುನಿಯು ಮುಂದೆ ಹೇಳಿದನು " ಜೀವಿಗಳೆಲ್ಲರ ಒಡೆಯನಾದ ಭಗವಂತನು ಅದ್ವಿತೀಯನಾಗಿ ಸೃಷ್ಟಿಗೂ ಮೊದಲು ಅಸ್ತಿತ್ವದಲ್ಲಿದ್ದನು. ಅವನ ಇಚ್ಛೆಗೆ ಅನುಗುಣವಾಗಿಯೇ ಸೃಷ್ಟಿಯು ಸಾಧ್ಯವಾಗಿದ್ದು ಮತ್ತೆ ಪ್ರತಿಯೊಂದು ಅವನಲ್ಲೇ ಸೇರಿ ಹೋಗುತ್ತದೆ. ಭಗವಂತನನ್ನು ನಾನಾ ಹೆಸರುಗಳಿಂದ ಕರೆಯಲಾಗಿದೆ. ಭಗವಂತನು ಕೇವಲ ಏಕೈಕ ದಾರ್ಶನಿಕನಾಗಿದ್ದನು. ಆ ಸಮಯದಲ್ಲಿ ವಿಶ್ವವಿನ್ನೂ ವ್ಯಕ್ತವಾಗಿರದಿದ್ದು ವಿಶ್ವ ತನ್ನ ನಿರುಪಾಧಿಕ ಗ್ರಹಗಳು, ಪ್ರತ್ಯೇಕ ಅಂಗಗಳು ಹಾಗೂ ಅಂಶಗಳೆಲ್ಲವನ್ನೂ ಹೊಂದಿದ್ದರೂ ಅವನಿಗೆ ಅದು ಅಪರಿಪೂರ್ಣವೆನ್ನಿಸಿತು. ಐಹಿಕ ಶಕ್ತಿಯು ಸ್ಥಗಿತವಾಗಿದ್ದರೂ ಆಂತರಿಕ ಶಕ್ತಿಯು ರೂಪುಗೊಂಡಿತ್ತು". ಮುನಿಯು ಮುಂದುವರಿದು ಹೇಳಿದನು : "ಬಾಹ್ಯ ಶಕ್ತಿಯು ವ್ಯಕ್ತಗೊಂಡ ವಿಶ್ವದಲ್ಲಿ ಕಾರಣ ಹಾಗೂ ಫಲಿತಾಂಶಗಳೆರಡಾಗಿಯೂ ಕಾರ್ಯವೆಸಗುತ್ತದೆ. ಬಾಹ್ಯಶಕ್ತಿಯನ್ನು "ಮಾಯೆ" ಅಥವಾ ಭ್ರಮೆಯೆಂದು ಕರೆಯಲಾಗಿದ್ದು ಆ ಮಾಯೆಯ ಮೂಲಕ ಮಾತ್ರವೇ ಐಹಿಕ ಆಕಾರವು ಸಾಧ್ಯವಾಗುತ್ತದೆ. ಭಗವಂತನು ಮೂರು ವಿಧವಾದ ಐಹಿಕ ಸ್ವಭಾವವನ್ನು ಹೊಂದಿದವನಾಗಿದ್ದು ಹೀಗೆ ಶಾಶ್ವತ ಕಾಲದ ಪ್ರಭಾವ ಮತ್ತು ಜೀವಿಗಳು ಕಾಣಿಸಿಕೊಳ್ಳುತ್ತವೆ.

ಶಾಶ್ವತ ಕಾಲದಿಂದ ಪ್ರಭಾವಿತಗೊಂಡು ಮಹತ್ ತತ್ವನು (ದ್ರವ್ಯಗಳ ಸಾರ) ರೂಪುಗೊಂಡು, ಅಂದರೆ ದೋಷರಹಿತನಾಗಿ, ಭಗವಂತನು ತನ್ನದೇ ಶರೀರದಿಂದ ಜಗತ್ತಿನ ಆಕಾರದ ಬೀಜಗಳನ್ನು ಬಿತ್ತಿದನು. (ಮಹತ್ ತತ್ವನು ದ್ರವ್ಯ ಹಾಗೂ ಚೈತನ್ಯದ ಸಮ್ಮಿಶ್ರಣವಾಗಿದ್ದು ಜೀವಿಯ ಸುಳ್ಳು ಅಹಂಕಾರವು ಉತ್ಪತ್ತಿಯಾಗುತ್ತದೆ). ಎಲ್ಲ ಜೀವಿಗಳು ಭಗವಂತನ (ಪ್ರತ್ಯೇಕವಾಗಿ ಕಾಣುವಂಥ) ಅಂಗಗಳು ಹಾಗೂ ಭಾಗಗಳು. ಸುಳ್ಳು ಅಹಂಮಿಕೆಯ ಒತ್ತಡದ ಕೆಳಗೆ ನಿಯಂತ್ರಣಕ್ಕೊಳಗಾದ ಆತ್ಮಗಳು ಭಗವಂತನ ಅಂಗಾಂಗಗಳೇ ಆಗಿದ್ದರೂ ಲೌಕಿಕ ಸ್ವಭಾವದ ಅನುಭವಗಳು ಎಂಬುದಾಗಿ ಹೇಳಿಕೊಳ್ಳುತ್ತಾನೆ. ಈ ಮಹತ್ ತತ್ವವು ಸುಳ್ಳು ಅಹಂಮಿಕೆಯನ್ನು ಪರಿವರ್ತಿಸಿ ಮೂರು ಘಟ್ಟಗಳಲ್ಲಿ ರೂಪು ತಳೆಯುತ್ತದೆ. ಅವೆಂದರೆ ಕಾರಣ, ಪರಿಣಾಮ ಮತ್ತು ಕರ್ತೃ. ಸುಳ್ಳು ಅಹಂಮಿಕೆಯು ಒಳಿತು, ಕಾಮ ಮತ್ತು ಮೌಢ್ಯವೆಂಬ ಮೂರು ವಿಧಾನಗಳಲ್ಲಿ ಪ್ರತಿನಿಧಿಸಲ್ಪಟ್ಟಿದೆ. ಸುಳ್ಳು ಅಹಂಮಿಕೆಯನ್ನು ಒಳಿತಿನ ವಿಧಾನದ ವ್ಯಾಖ್ಯಾನದ ಮೂಲಕ ಬುದ್ಧಿಗೆ ರವಾನಿಸಲಾಗುತ್ತದೆ. ಎಲ್ಲ ಉಪದೇವತೆಗಳೂ ಒಂದು ತತ್ವದ ಅಂದರೆ ಸುಳ್ಳು ಅಹಂಮಿಕೆ ಮತ್ತು ಒಳಿತಿನ ವಿಧಾನದ ಅಂತರ್ ಪ್ರಕ್ರಿಯೆಯ ಉತ್ಪನ್ನಗಳು. ಸುಳ್ಳು ಅಹಂಮಿಕೆಯ ಮೂಲಕ್ರಿಯೆ ನಾಸ್ತಿಕತೆ.

ಅಂತರಿಕ್ಷವು ಭಗವಂತನ ಸಾಂಕೇತಿಕ ಪ್ರತಿನಿಧಿ. ಅವನು ಶಾಶ್ವತವಾದ ಕಾಲ ಮತ್ತು ಶಾಶ್ವತನಾದ ಶಕ್ತಿಯ ಸ್ವಲ್ಪ ಭಾಗವನ್ನು ಮಿಶ್ರಣ ಮಾಡಿ ಅಂತರಿಕ್ಷದತ್ತ ನೋಟ ಬೀರಿದಾಗ ಸ್ಪರ್ಶೇಂದ್ರಿಯ ಅಭಿವೃದ್ಧಿಗೊಂಡಿತು. ಅದರಿಂದ ಆಕಾಶದಲ್ಲಿನ ವಾಯುವು ಉತ್ಪಾದನೆಗೊಂಡಿತು. ಅನಂತರ ಅಂತರಿಕ್ಷದೊಂದಿಗೆ ಪ್ರಕ್ರಿಯಿಸುತ್ತಿದ್ದ ಶಕ್ತಿಶಾಲಿ ವಾಯುವು ಗ್ರಹಿಕೆಯ ಆಕಾರವನ್ನುಂಟು ಮಾಡಿ, ಅದು ಗ್ರಹಿಕೆ ವಿದ್ಯುತ್ತಾಗಿ ಜಗತ್ತನ್ನು ನೋಡುವ ಬೆಳಕಾಗಿ ಪರಿವರ್ತನೆ ಹೊಂದಿತು. ವಿದ್ಯುತ್ ಗಾಳಿಯಲ್ಲಿ ಬಿಡುಗಡೆ ಹೊಂದಿ ಭಗವಂತನು ಅದರ ಮೇಲೆ ದೃಷ್ಟಿ ಬೀರಿದಾಗ ಜಲ ಹಾಗೂ ರುಚಿಯು ಸೃಷ್ಟಿಯಾಯಿತು. ಹೀಗೆ ಉತ್ಪಾದನೆಗೊಂಡು ಭೂಮಿಯಾಗಿ ಪರಿವರ್ತನೆಗೊಂಡು ಅದು ಮೂಲಭೂತವಾಗಿ ವಾಸನೆಯ ಗುಣವನ್ನು ಹೊಂದಿತು. ಅಂತರಿಕ್ಷದಿಂದ ಭೂಮಿಯವರೆಗೆ ಎಲ್ಲ ಭೌತಿಕ ಅಂಶಗಳೂ, ಎಲ್ಲ ನಿಕೃಷ್ಟ ಹಾಗೂ ಉತ್ಕೃಷ್ಟ ಗುಣಗಳೂ, ಭಗವಂತನ ನೋಟಕ್ಕೆ ಸಿಲುಕಿದ್ದರಿಂದಲೇ ಉಂಟಾದವು ಎಂಬುದಾಗಿ ಮುನಿಯು ಹೇಳಿದನು. ಈ ಭೌತಿಕ ಅಂಶಗಳನ್ನು ನಿಯಂತ್ರಿಸುತ್ತಿರುವ ದೇವತೆಗಳು ಅಧಿಕಾರವನ್ನು ಹೊಂದಿದ ಭಗವಂತನ ವಿಸ್ತರಣೆಗಳು. ತನಗೊಪ್ಪಿಸಲಾದ ಕ್ರಿಯೆಗಳನ್ನು ನಡೆಸಲು ಅಸಮರ್ಥರಾದ ಈ ದೇವತೆಗಳು ಭಗವಂತನಿಗೆ ಪ್ರಾರ್ಥನೆಯನ್ನು ಸಲ್ಲಿಸಿದರು. ಪ್ರಾರ್ಥನೆಯಲ್ಲಿ ಅವರೆಂದರು: "ಎಲೈ ಪರಮಾತ್ಮನೇ, ನಿನ್ನ ಪದ್ಮಪಾದವು ಶರಣಾಗತಿ ಹೊಂದಿದ ಆತ್ಮಗಳಿಗೆ ಐಹಿಕ ಅಸ್ತಿತ್ವದ ಸಂಕಷ್ಟಗಳಿಂದ ಸಂರಕ್ಷಿಸುವಂಥದ್ದಾಗಿದೆ. ಈ ಆಶ್ರಮದಲ್ಲಿರುವ ಮುನಿಗಳೆಲ್ಲರೂ ಎಲ್ಲ ಐಹಿಕ ಸಂಕಷ್ಟಗಳನ್ನೂ ತೊಡೆದು ಹಾಕುತ್ತಾರೆ". ಉಪದೇವತೆಗಳು ತಾವು ಅತ್ಯುತ್ತಮ ರೀತಿಯಲ್ಲಿ ಪ್ರಾರ್ಥಿಸುವುದು ಹೇಗೆಂಬ ತಿಳಿವಳಿಕೆ ನೀಡಬೇಕೆಂದು ಪರಮಾತ್ಮನನ್ನು ಕೋರಿದರು.

ಮೈತ್ರೇಯಿ ಮುನಿಯು ಹೇಳಿದನು: "ಮಹತ್ ತತ್ತ್ವದಂಥ ಉನ್ನತ ಶಕ್ತಿಗಳು ಸಮ್ಮಿಶ್ರಣವಾಗದಿದ್ದ ಕಾರಣ ಜಗತ್ತಿನ ಉದ್ಧಾರಕ ಕ್ರಿಯಾತ್ಮಕ ಚಟುವಟಿಕೆಗಳು ನಿಂತು ಹೋಗಿರುವುದರ ಬಗ್ಗೆ ಭಗವಂತನಿಗೆ ತಿಳಿಯಿತು. ಆಗ ಭಗವಂತನು ಕಾಳಿ ದೇವಿಯೊಂದಿಗೆ ಇಪ್ಪತ್ತೂರು ಮೂಲಾಂಶಗಳನ್ನು ಹೊಂದಿ ಪ್ರವೇಶಿಸಿದನು. ಈ ಇಪ್ಪತ್ತೂರು ಮೂಲಾಂಶಗಳೆಂದರೆ : ಸಂಪೂರ್ಣ ಐಹಿಕ ಶಕ್ತಿ , ಸುಳ್ಳು ಅಹಂಮಿಕೆ, ಶಬ್ಧ, ಸ್ಪರ್ಶ ಆಕಾರ, ರುಚಿ, ವಾಸನೆ, ಭೂಮಿ, ಜಲ, ಅಗ್ನಿ, ವಾಯು, ಆಕಾಶ, ಕಣ್ಣು, ಕಿವಿ, ನಾಸಿಕ, ನಾಲಗೆ, ತ್ವಚೆ, ಹಸ್ತ, ಪಾದ, ವಿಸರ್ಜನೆಯ ಅಂಗ, ಜನನೇಂದ್ರಿಯ, ಮಾತು ಮತ್ತು ಬುದ್ಧಿ. ಎಲ್ಲವೂ ಕಾಲದ ಪ್ರಭಾವದಿಂದಾಗಿ ಒಟ್ಟುಕೂಡಿದ್ದು ಮತ್ತೆ ಕಾಲಕ್ರಮೇಣ ಕರಗಿ ಹೋಗುತ್ತವೆ. ಕಾಲವು ಭಗವಂತನ ಶಕ್ತಿ. ಈ ಶಕ್ತಿಯನ್ನೇ ಕಾಲವೆಂದು ಕರೆಯಲಾಗುತ್ತದೆ. ಭಗವಂತನು, ಅರ್ಜುನನಿಗೆ ಹೇಳುತ್ತಾನೆ : (ಭಗವದ್ಗೀತೆ 10.42): "ಎಲೈ ಅರ್ಜುನನೇ, ನನ್ನ ವಿವಿಧ ರೀತಿಗಳಲ್ಲಿ ಕ್ರಿಯೆಗೈಯ್ಯುವ ಅಗಣಿತ ಶಕ್ತಿಗಳ ಬಗ್ಗೆ ನೀನು ತಿಳಿಯುವ ಅವಶ್ಯಕತೆಯಿಲ್ಲ. ನಾನು ಲೌಕಿಕ ಸೃಷ್ಟಿಯನ್ನು ಪರಮಾತ್ಮನೆಂಬ ಭಾಗಶಃ ನಿರುಪಾಧಿಕ ವಿಸ್ತರಣೆಯ ಮೂಲಕ ಎಲ್ಲ ಜಗತ್ತುಗಳನ್ನೂ ಪ್ರವೇಶಿಸುತ್ತೇನೆ. ಮತ್ತು ಹೀಗೆ ಸೃಷ್ಟಿ ಕಾರ್ಯವು ಮುಂದುವರಿಯುತ್ತದೆ". ಹೀಗೆ ಭಗವಂತನು ಶಕ್ತಿಯ ಮೂಲಾಂಶಗಳ ಒಳಗೆ ಪ್ರವೇಶಿಸಿದಾಗ ಎಲ್ಲ ಜೀವಿಗಳೂ ವಿವಿಧ ಚಟುವಟಿಕೆಗಳಲ್ಲಿ ಉದ್ದೀಪನಗೊಂಡವು. ಭಗವಂತನ ಇಚ್ಛೆಯಿಂದ ಇಪ್ಪತ್ತೂರು ಪ್ರಮುಖ ಮೂಲಾಂಶಗಳು ಕ್ರಿಯೆಯನ್ನು ಪ್ರಾರಂಭಿಸಿದಾಗ ದೈತ್ಯಾಕಾರದ ಜಗತ್ತಿನ ಆಕಾರ ಅಥವಾ ಭಗವಂತನ ವಿಶ್ವರೂಪ ಶರೀರವು ಅಸ್ತಿತ್ವಕ್ಕೆ ಬಂದಿತು. ಭಗವಂತನು ತನ್ನ ನಿರುಪಾಧಿಕ ಭಾಗದಿಂದ ಜಗತ್ತಿನ ಸೃಷ್ಟಿಯ ಮೂಲಾಂಶಗಳಲ್ಲಿ ಪ್ರವೇಶ ಮಾಡಿದಾಗ ಅವು ದೈತ್ಯಾಕಾರದ ಆಕೃತಿಯಾಗಿ ಪರಿವರ್ತನೆ ಹೊಂದಿ ಅದರೊಳಗೆ ಎಲ್ಲ ಗ್ರಹ ವ್ಯವಸ್ಥೆ ಮತ್ತು ಎಲ್ಲ ಸ್ಥಾವರ ಹಾಗೂ ಜಂಗಮ ಸೃಷ್ಟಿಗಳು ಅಡಗುತ್ತವೆ. ಒಂದು ಸಾವಿರ ವರ್ಷಗಳ ಕಾಲ ಜಗತ್ತಿನ ನೀರಿನಲ್ಲಿ ವಾಸವಾಗಿ ಹಾಗೂ ಎಲ್ಲ ಜೀವಿಗಳನ್ನೂ ತನ್ನ ಜತೆಗೆ ಮಲಗಿಸಿಕೊಂಡ ವಿರಾಟ ಪುರುಷನ ಹೆಸರು ಹಿರಣ್ಮಯ. ಈ ಆಕೃತಿಯು ಭಗವಂತನನ್ನು ತನ್ನಿಂದಲೇ ಜೀವಿಗಳ ಪ್ರಜ್ಞೆ, ಜೀವನ ಚಟುವಟಿಕೆ ಹಾಗೂ ಸ್ವಯಂ ಗುರುತಿಸಿಕೊಳ್ಳುವಿಕೆಯಲ್ಲಿ ವಿಭಜಿಸಲ್ಪಟ್ಟು ಅವು ಮತ್ತೆ ಒಂದು, ಹತ್ತು ಹಾಗೂ ಮೂರು ವಿಭಾಗಗಳಾಗಿ ವಿಭಜಿತಗೊಂಡವು.

(ಪ್ರಜ್ಞೆಯನ್ನು ಮೂರು ವಿಧಗಳಾಗಿ ವಿಭಜಿಸಲಾಗಿದೆ. ಅಧ್ಯಾತ್ಮಿಕ - ಶರೀರ ಮತ್ತು ಬುದ್ಧಿಯೊಂದಿಗೆ ಸ್ವಯಂ ಗುರುತಿಸಿಕೊಳ್ಳುವಿಕೆ, ಅದಿ ಭೌತಿಕ - ಐಹಿಕ ವಸ್ತುಗಳೊಂದಿಗೆ ಗುರುತಿಸಿಕೊಳ್ಳುವಿಕೆ; ಅದಿ ದೈವಿಕ - ಭಗವಂತನ ಸೇವಕನಂತೆ ಸ್ವಯಂ ಗುರುತಿಸಿಕೊಳ್ಳುವಿಕೆ. ಈ ಮೂರರಲ್ಲಿ ಅದಿ ದೈವಿಕವು ಭಗವಂತನ ಇಚ್ಛೆಯನ್ನು ಮುಂದುವರಿಸುವ ಪ್ರಜ್ಞಾಪೂರ್ವಕ ಪ್ರಯತ್ನದ ಪ್ರಾರಂಭವು. ಭಗವಂತನ ಬೃಹದಾಕಾರದ ವಿಶ್ವ ರೂಪವು ಮೊದಲು ಸೃಷ್ಟಿಯಾಗಿದ್ದ ನಿರುಪಾಧಿಕ ಭಾಗದ ಉನ್ನತಾತ್ಮ, ಅಸಂಖ್ಯಾತ ಜೀವಿಗಳ ಆತ್ಮ ಅವನಾಗಿದ್ದು, ಅವನಲ್ಲಿ ಹೀಗೆ ಪ್ರಬುದ್ಧಮಾನಗೊಳ್ಳುವ ಒಟ್ಟು ಸೃಷ್ಟಿಯು ಅಡಗಿರುತ್ತದೆ).

ಬೃಹದಾಕಾರದ ವಿಶ್ವ ರೂಪನು ಪ್ರಜ್ಞೆಯಲ್ಲಿ ಮೂರು, ಹತ್ತು ಮತ್ತು ಒಂದರ ಮೂಲಕ ಪ್ರತಿನಿಧಿಸಲ್ಪಡುತ್ತಾನೆ - ಅವನು ಶರೀರ, ಮನಸ್ಸು ಹಾಗೂ ಅವಯವ ಗಳಾಗಿದ್ದಾನೆ. ಅವನು ಜೀವ ಶಕ್ತಿಯ ಹತ್ತರಷ್ಟು ಚಟುವಟಿಕೆಗಳಲ್ಲಿ ಅದ್ಭುತ ಶಕ್ತಿಯಾಗುತ್ತಾನೆ. ಜೀವಶಕ್ತಿ ಉತ್ಪಾದನೆಗೊಳ್ಳುವ ಎಡೆಯಲ್ಲಿ ಅವನು ಹೃದಯ. (ಶರೀರದ ಚಲನೆಗಳು ಮೊದಲು ಹೃದಯದಿಂದ ಪ್ರಾರಂಭವಾಗುತ್ತಿದ್ದು ಶರೀರದ ಎಲ್ಲ ಚಟುವಟಿಕೆಗಳನ್ನು ಪ್ರಜ್ಞೆಗಳನ್ನು ಸಾಧ್ಯವಾಗಿಸುವಂಥದು). ಶರೀರದೊಳಗಿನ ಹತ್ತು ವಿಧದ ವಾಯುವಿನಿಂದ ಅದು ಶಕ್ತಿಯನ್ನು ಪಡೆದಿರುತ್ತದೆ. ಎರಡು ವಿಧವಾದ ವಾಯು : ಪ್ರಾಣ - ನಾಸಿಕದ ಮೂಲಕ ಸಾಗುವ ಮುಖ್ಯ ವಾಯು; ಅಪಾನಾ - ಮೇಲೆತ್ತಲ್ಪಟ್ಟ ಶಾರೀರಿಕ ವಾಯುವಾಗಿ ಗುದನಾಳದ ಮೂಲಕ ಹಾದು ಹೋಗುವುದು; ಸಮಾನ - ಉದರದೊಳಗೆ ಆಹಾರವನ್ನು ಹೊಂದಾಣಿಕೆ ಮಾಡುವಂಥ ವಾಯು ಹಾಗೂ ಕೆಲವೊಮ್ಮೆ ತೇಗಿನಂತೆ ತೋರುವಂಥದ್ದು; ಉದಾನ - ಗಂಟಲಿನ ಮೂಲಕ ಹಾಯುವಂಥ ಹಾಗೂ ಯಾವುದು ನಿಂತಲ್ಲಿ ಉಸಿರುಗಟ್ಟುವುದೋ ಅಂಥದ್ದು. ಶರೀರದಲ್ಲಿ ಹರಿಯುವುದು ಸಮಗ್ರ ವಾಯು, ವ್ಯಾನ. ಕಣ್ಣು, ಬಾಯಿ ಮುಂತಾದವಗಳನ್ನು ತೆರೆಯುವಲ್ಲಿ ಅನುವಾಗುವುದು ನಾಗಾ ವಾಯು. ಹಸಿವನ್ನು ಉಂಟು ಮಾಡುವುದು ಕರ್ಕರ ವಾಯು. ಸಂಕುಚಿತಗೊಳಿಸುವುದು ಕೂರ್ಮ ವಾಯು. ಬಾಯನ್ನು ಅಗಲವಾಗಿ ತೆರೆಯುವ ಮೂಲಕ (ಆಕಳಿಸುವುದು) ಆಲಸ್ಯ ಪರಿಹಾರವನ್ನು ಉಂಟು ಮಾಡುವುದು ದೇವದತ್ತ ವಾಯುವಾಗಿದ್ದು ಉಳಿಯಲು ಅನುವಾಗುವುದು ಧನಂಜಯ ವಾಯು. ಈ ಎಲ್ಲ ವಾಯುಗಳೂ ಏಕ ಮಾತ್ರವಾದ ಹೃದಯದ ಕೇಂದ್ರದಿಂದ ಹೊಮ್ಮುವಂಥದ್ದು.

ವ್ಯಕ್ತಗೊಂಡ ವಿಶ್ವವನ್ನು ನಿರ್ಮಿಸುವ ಕಾರ್ಯದಲ್ಲಿ ತೊಡಗಿರುವ ಹೊಣೆ ಹೊತ್ತಿರುವ ಉಪದೇವತೆಗಳೆಲ್ಲರಿಗೂ ಭಗವಂತನೇ ಉನ್ನತಾತ್ಮ. ಹೀಗೆ ಉಪದೇವತೆ ಗಳಿಂದ ಪ್ರಾರ್ಥಿಸಲ್ಪಟ್ಟವನಾಗಿ ಅವನು ತನ್ನಲ್ಲೇ ಯೋಚಿಸಿ, ಅವರಿಗೆ ಅರಿವುಂಟು ಮಾಡುವ ಸಲುವಾಗಿ ಬೃಹತ್ ರೂಪವನ್ನು ಸಾಕಾರಗೊಳಿಸಿದ.

ಮೈತ್ರೇಯಿ ಮುನಿಯು ವಿವರಣೆಯನ್ನು ಮುಂದುವರಿಸಿ ಭಗವಂತನು ಬೃಹದಾಕಾರವನ್ನು ಸೃಷ್ಟಿಸಿದ ನಂತರ ವಿವಿಧ ಉಪದೇವತೆಗಳಾಗಿ ತನ್ನನ್ನೇ ಹೇಗೆ ಪ್ರತ್ಯೇಕಿಸಿಕೊಂಡ ಎಂಬುದನ್ನು ಹೇಳಿದನು. ಬೃಹದಾಕಾರನು ವಿವಿಧ ರೂಪಗಳಾಗಿ ತನ್ನನ್ನೇ ವಿಭಜಿಸಿಕೊಂಡಾಗ ಉಪದೇವತೆಗಳು ಜಗತ್ತಿನ ವಿವಿಧ ಕಾರ್ಯಗಳಾದ ಅಭಿವ್ಯಕ್ತಿ, ನಾಲಗೆ, ಕಣ್ಣು, ತ್ವಚೆ, ಜನನೇಂದ್ರಿಯ, ಹಸ್ತ, ಪಾದ, ಬುದ್ಧಿ ಇತ್ಯಾದಿಯನ್ನು ವಹಿಸಿಕೊಂಡರು.

ಮೈತ್ರೇಯಿ ಮುನಿಯು ಹೇಳಿದನು : "ವೈದಿಕ ಜ್ಞಾನವು ಬೃಹದಾಕಾರನಾದ ವಿರಾಟನ ಬಾಯಿಯಿಂದ ರೂಪು ತಾಳಿತು . ಈ ವೈದಿಕ ತಿಳಿವಳಿಕೆಯತ್ತ ಒಲಿದವರನ್ನು ಬ್ರಾಹ್ಮಣರೆಂದು ಕರೆಯಲಾಗಿದ್ದು ಅವರು ಸ್ವಾಭಾವಿಕ ಶಿಕ್ಷಕರು ಹಾಗೂ ಸಮಾಜದ ಎಲ್ಲ

ವ್ಯವಸ್ಥೆಗಳ ಅಧ್ಯಾತ್ಮಿಕ ಒಡೆಯರಾಗಿದ್ದಾರೆ. ಕ್ಷತ್ರಿಯರು ಸಂರಕ್ಷಣೆಗಾಗಿ ಬಾಹುಗಳಿಂದ ಹೊರಬಂದರು. ವೈಶ್ಯರು ತೊಡೆಗಳಿಂದ ಉದ್ಭವಿಸಿ; ಸೇವೆಯು ಕಾಲುಗಳ ಮೂಲಕ ಸಾಕಾರಗೊಂಡಿತು. ಹೀಗೆ ನಾಲ್ಕು ವರ್ಣಗಳು ಭಗವಂತನ ಅಂಗಾಂಗಗಳಾದವು. ಈ ಎಲ್ಲ ವಿವಿಧ ಸಾಮಾಜಿಕ ವಿಭಜನೆಗಳು ತಮ್ಮ ವೃತ್ತಿಪರ ಕರ್ತವ್ಯಗಳು ಹಾಗೂ ಜೀವಿತ ಪರಿಸ್ಥಿತಿಗಳಿಗೆ ಹುಟ್ಟಿಕೊಂಡವು. ಭಗವಂತನ ಅಂತರಿಕ ಸಾಮರ್ಥ್ಯದಿಂದ ರೂಪುಗೊಂಡವು. ಬೃಹದಾಕಾರದ ಕೆಲಸ ಮತ್ತು ಸಾಮರ್ಥ್ಯವನ್ನು ಅಂದಾಜು ಮಾಡುವುದು ಅಥವಾ ಅಳೆಯುವುದು ಸಾಧ್ಯವಿಲ್ಲ.

"ಬ್ರಹ್ಮ ಒಂದು ಸಾವಿರ ಸ್ವರ್ಗೀಯ ವರ್ಷಗಳ ಕಾಲ ಪ್ರಬುದ್ಧನಾಗಿ ಧ್ಯಾನಿಸಿದ ನಂತರವೂ ಭಗವಂತನ ವೈಭವಗಳು ತಿಳಿಯಲು ಅಸಾಧ್ಯವಾದವು ಎಂಬುದನ್ನು ಅರಿಯಲು ಮಾತ್ರ ಸಾಧ್ಯವಾಯಿತು. ಮಾತು, ಬುದ್ಧಿ ಮತ್ತು ಅಹಂ ಇವು ತಮ್ಮನ್ನು ನಿಯಂತ್ರಿಸುವ ಉಪದೇವತೆಗಳಿದ್ದಾಗ್ಯೂ ಭಗವಂತನನ್ನು ಅರಿತುಕೊಳ್ಳುವಲ್ಲಿ ಯಶಸ್ಸನ್ನು ಗಳಿಸಿಕೊಡಲು ವಿಫಲವಾಗಿದೆ. ಆದ್ದರಿಂದ ನಾವು ಪವಿತ್ರ ವಿಷಯದೋಪಾದಿಯಲ್ಲಿ ಕೇವಲ ಅವನಿಗೆ ನಮ್ಮ ಗೌರವ ಪೂರ್ವಕ ಪ್ರಮಾಣಗಳನ್ನು ಮಾತ್ರ ಸಲ್ಲಿಸಬೇಕು."

ವಿದುರನು ಮೈತ್ರೇಯಿ ಮುನಿಗೆ ಮತ್ತೊಂದು ಪ್ರಶ್ನೆಯನ್ನು ಕೇಳಿದನು: "ಭಗವಂತನು ಸಂಪೂರ್ಣ ಅಧ್ಯಾತ್ಮಿಕತೆಯನ್ನು ಹೊಂದಿದ್ದು ಬದಲಾಗದವನಾದ್ದರಿಂದ ಅವನು ಹೇಗೆ ಪ್ರಕೃತಿಯ ಐಹಿಕ ವಿಧಾನಗಳು ಹಾಗೂ ಅವುಗಳ ಚಟುವಟಿಕೆಗಳೊಂದಿಗೆ ಸಂಬಂಧವನ್ನು ಏರ್ಪಡಿಸಿಕೊಂಡಿದ್ದಾನೆ? ಇವು ಅವನ ಹವ್ಯಾಸವಾಗಿದ್ದರೆ ಬದಲಾಗದಂಥವುಗಳ ಚಟುವಟಿಕೆಗಳು ಹೇಗೆ ಸಂಭವಿಸುತ್ತವೆ ಹಾಗೂ ಪ್ರಕೃತಿಯ ವಿಧಾನಗಳಿಲ್ಲದೆಯೇ ಗುಣಗಳನ್ನು ಹೇಗೆ ಪ್ರದರ್ಶಿಸುತ್ತಾನೆ ? ಭಗವಂತನು ಪ್ರತಿಯೊಬ್ಬ ಜೀವಿಯ ಹೃದಯದಲ್ಲಿ ವಾಸವಾಗಿದ್ದಾನೆ. ಹೀಗಿದ್ದಾಗ ಜೀವಿಗಳ ಚಟುವಟಿಕೆಗಳು ಹೇಗೆ ನತದೃಷ್ಟತೆ ಮತ್ತು ಸಂಕಷ್ಟಗಳಲ್ಲಿ ಪರಿಣಮಿಸುತ್ತವೆ?"

## ದುರಾದೃಷ್ಟ ಮತ್ತು ಸಂಕಷ್ಟಗಳು

ಕೆಲವೊಮ್ಮೆ ನಿಯಂತ್ರಿತ ಆತ್ಮಗಳು, ಭಗವಂತನ ಮಾಯೆಗೆ ಸಿಲುಕಿದ್ದರೂ ಅದೇ ಕಾಲಕ್ಕೆ ಅವು ಅನಿಯಂತ್ರಿತ ಎಂಬುದಾಗಿ ಭಾವಿಸುತ್ತವೆ ಎಂಬುದಾಗಿ ಮೈತ್ರೇಯಿ ಮುನಿಯು ತಿಳಿಸಿದನು. ಇದು ತರ್ಕಶಾಸ್ತ್ರಕ್ಕೆ ವಿರುದ್ಧವಾದದ್ದು. ಜೀವಿಯು ತನ್ನ ಸ್ವಯಂ ಗುರುತಿಸಿಕೊಳ್ಳುವಿಕೆಗೆ ಸಂಬಂಧಿಸಿದಂತೆ ಗೊಂದಲಗೊಂಡಿವೆ. ತನ್ನ ಶಿರಚ್ಛೆದನ ವಾಯಿತೆಂಬುದಾಗಿ ಕನಸು ಕಾಣುವ ಒಬ್ಬ ವ್ಯಕ್ತಿಯಂತೆ ಅದಕ್ಕೆ ಯಾವ ವಾಸ್ತವಿಕ ಹಿನ್ನೆಲೆಯೂ ಇಲ್ಲ. ನೀರಿನ ಗುಣದಿಂದಾಗಿ ಅದರಲ್ಲಿನ ಚಂದ್ರನ ಪ್ರತಿಬಿಂಬ ಅಲುಗಾಡುತ್ತಿರುವ ಹಾಗೆ ಕಾಣಿಸುವಂತೆ ಭೌತದ್ರವ್ಯದೊಂದಿಗೆ ಸಂಪರ್ಕ ಹೊಂದಿದ ಸ್ವಯಂ ದ್ರವ್ಯದಿಂದ ಪರಿಮಾಣಾತ್ಮಕವಾಗಿರುವಂತೆ ತೋರುತ್ತದೆ. ಈ ತಪ್ಪು ಕಲ್ಪನೆಯು

ನಿರ್ವ್ಯಾಮೋಹದ ಭಾಗದ ಮೂಲಕ ದೇವರಲ್ಲಿ ಭಕ್ತಿ ಪೂರ್ವಕ ಸೇವೆಯನ್ನು ಹೆಚ್ಚಿಸಿಕೊಳ್ಳುವ ಮೂಲಕ ಕುಗ್ಗುತ್ತವೆ. ಇಂದ್ರಿಯಗಳು ಅವನೊಳಗೆ ಬೆರೆತು ಹೋದಾಗ ಎಲ್ಲ ಸಂಕಷ್ಟಗಳೂ ಮರೆಯಾಗುತ್ತವೆ. ಭಗವಂತನ ನಾಮಸ್ಮರಣೆಯನ್ನು ಕೇವಲ ಪಠಿಸುವುದು ಹಾಗೂ ಆಲಿಸುವುದರ ಮೂಲಕ ಮಾನವರ ಸಂಕಷ್ಟ ಪರಿಸ್ಥಿತಿಗಳು ನಿವಾರಣೆಯಾಗುತ್ತವೆ. ಹೀಗಿರುವಾಗ ಅವನಲ್ಲಿಯೇ ಕರಗಿ ಹೋಗುವವರ ಬಗ್ಗೆ ಮಾತನಾಡುವುದೇನಿದೆ ?

ಉತ್ತರಗಳಿಂದ ತೃಪ್ತಿ ಪಡೆದ ವಿದುರನ ಮನಸ್ಸು ನಿಶ್ಚಿಂತಗೊಂಡಿತು. ನಿಯಂತ್ರಿತ ಆತ್ಮಕ್ಕೆ ಲಭ್ಯವಾದ ಗೊಂದಲಗಳಿಗೆ ಭಗವಂತನ ಶಾಶ್ವತ ಶಕ್ತಿಯ ಕ್ಷಣಕ್ಕಿಂತಲೂ ಬೇರ್ಯಾವ ಗೊಂದಲವೂ ಇಲ್ಲ ಎಂಬುದಾಗಿ ಅವನೆಂದನು. ಮೂರ್ಖರಲ್ಲೆಲ್ಲ ಅತಿ ಮೂರ್ಖನಾದವನು ಹಾಗೂ ಎಲ್ಲ ಬುದ್ಧಿಶಕ್ತಿಗೂ ಅತಿಶಯನೆನ್ನಿಸಿದವನು ಸಂತೋಷವನ್ನು ಅನುಭವಿಸಿದರೂ ಇವುಗಳ ಮಧ್ಯದಲ್ಲಿನ ವ್ಯಕ್ತಿಗಳು ಮಾತ್ರ ಐಹಿಕ ನೋವುಗಳನ್ನು ಪಡೆಯುತ್ತಾರೆ. ಆದ್ದರಿಂದ ಲೌಕಿಕ ಸಂಕಷ್ಟಗಳನ್ನೆಲ್ಲ ಮರೆಸುವಂಥ ಭಗವಂತನನ್ನು ಮಾತ್ರ ಸೇವಿಸಬೇಕು.

ಸಂಪೂರ್ಣ ಲೌಕಿಕ ಶಕ್ತಿಯನ್ನು- ಮಹತ್ ತತ್ವವನ್ನು ಸೃಷ್ಟಿಸಿದ ನಂತರ ಹಾಗೂ ಆ ಮೂಲಕ ಇಂದ್ರಿಯಗಳು ಮತ್ತು ಇಂದ್ರಿಯಾಂಗಗಳನ್ನು ಹೊಂದಿದಂಥ ಬೃಹದಾಕಾರದ ವಿರಾಟರೂಪ ಮತ್ತು ಅವನ ಇಂದ್ರಿಯಗಳನ್ನು, ಇಂದ್ರಿಯ ವಿಷಯಗಳನ್ನು ಮತ್ತು ಮೂರು ವಿಧದ ಜೀವಶಕ್ತಿಯೊಂದಿಗಿನ ಹತ್ತು ವಿಧವಾದ ಜೀವ ವಾಯು ಇವುಗಳನ್ನು ಕುರಿತು ಅರಿತ ನಂತರ ವಿದುರನು ನಿರ್ದಿಷ್ಟ ವಿಭಾಗಗಳ ವಿವಿಧ ಶಕ್ತಿಗಳನ್ನು ಕುರಿತು ವಿವರಗಳನ್ನು ಪಡೆಯಲು ಬಯಸಿದನು. ಪ್ರಜಾಪತಿ ಬ್ರಹ್ಮನು ಯುಗಗಳ ಮುಖ್ಯಸ್ಥರಾದ ವಿವಿಧ ಮನುಗಳನ್ನು ಸ್ಥಾಪಿಸಲು ಹೇಗೆ ನಿರ್ಧರಿಸಿದನೆಂಬುದನ್ನು ವಿದುರನು ತಿಳಿಯಲು ಬಯಸಿದನು. ಮನುವಿನ ಉತ್ತರಾಧಿಕಾರಿಗಳ ಬಗ್ಗೆಯೂ ಅವನು ಅರಿತುಕೊಳ್ಳಲು ಇಚ್ಛಿಸಿದನು. ಗ್ರಹಗಳು, ಜೀವಿಗಳು, ಉಪಜೀವಿಗಳು, ಮಾನವರು, ಭ್ರೂಣದಿಂದ ಹುಟ್ಟಿದವರು, ಬೆವರಿನಿಂದ ಹುಟ್ಟಿದವರು, ಎರಡು ಬಾರಿ ಜನಿಸಿದವರು (ದ್ವಿಜರು) ಮತ್ತು ಅವುಗಳ ಉತ್ಪತ್ತಿ ಹಾಗೂ ಉಪ ವಿಭಾಗಗಳೊಂದಿಗೆ ತರಕಾರಿಗಳು ಇವನ್ನು ಕುರಿತೂ ವಿದುರನು ತಿಳಿಯಲು ಅಪೇಕ್ಷಿಸಿದನು. ಅದಲ್ಲದೆ ಪ್ರಕೃತಿಯ ಐಹಿಕ ವಿಧಾನಗಳ ಅವತಾರಗಳ ಬಗ್ಗೆ - ಬ್ರಹ್ಮ ವಿಷ್ಣು ಮತ್ತು ಮಹಾದೇವ ಹಾಗೂ ಪರಮಾತ್ಮನ ಹಾಗೂ ಅವನ ಚಟುವಟಿಕೆಗಳ ಸಾಕಾರ ರೂಪಗಳ ಬಗ್ಗೆ ತಿಳಿದುಕೊಳ್ಳಬೇಕೆಂದನು. ಮಾನವ ಸಮಾಜದ ವಿವಿಧ ವಿಭಾಗಗಳು ಹಾಗೂ ಸ್ತರಗಳು, ವರ್ತನೆ, ಮಾನಸಿಕ ಸಮತೋಲನ, ಹಿರಿಯ ಋಷಿಗಳ ಹುಟ್ಟು ಮತ್ತು ವೇದಗಳ ಶ್ರೇಣಿಯುತ ವಿಭಜನೆಗಳು, ವಿವಿಧ ವಿಧಿ ವಿಧಾನಗಳ ವಿಸ್ತರಣೆ, ಅತೀಂದ್ರಿಯ ಶಕ್ತಿಗಳ ಮಾರ್ಗಗಳು, ಜ್ಞಾನದ ಕ್ರಮಬದ್ಧ ಅಧ್ಯಯನ, ಭಕ್ತಿಪೂರ್ವಕ ಸೇವೆ, ನಾಸ್ತಿಕರ ಅಪರಿಶುದ್ಧತೆ ಹಾಗೂ ದ್ವಂದ್ವಗಳು, ಆತ್ಮ ತಳಿಗಳ ಪರಿಸ್ಥಿತಿಗಳು, ಧಾರ್ಮಿಕತೆಯ ಕಾರಣಗಳು, ಆರ್ಥಿಕತೆ, ಇಂದ್ರಿಯ ಸಾರ್ಥಕತೆ

ಮತ್ತು ಪರಿಹಾರ, ಕಾನೂನು ಮತ್ತು ಶಿಸ್ತಿನ ವಿವಿಧ ಪರಿಷ್ಕರಣೆಗಳು, ಪಿತೃಗಳಿಗೆ ಗೌರವಗಳನ್ನು ಸಲ್ಲಿಸುವಾತನ ನಿಯಮಗಳು, ಪಿತೃಲೋಕದ ಸೃಷ್ಟಿ ಮತ್ತು ಇನ್ನಿತರ ವಿಷಯಗಳಿಗೆ ಸಂಬಂಧಿಸಿದ ಇನ್ನೂ ಅನೇಕ ವಿಷಯಗಳನ್ನು ಅವನು ತಿಳಿದುಕೊಳ್ಳಲು ಬಯಸಿದನು.

ಮೈತ್ರೇಯಿ ಮುನಿಯು ಹೇಳಿದನು: "ಪ್ರತಿಯೊಂದು ಸಣ್ಣ ಸಂತಸದ ಸಲುವಾಗಿ ಅತ್ಯಂತ ಸಂಕಷ್ಟಗಳಲ್ಲಿ ಸಿಲುಕಿ ಹಾಕಿಕೊಂಡಂಥವರ ಪ್ರಯೋಜನಕ್ಕಾಗಿ ಭಗವಂತನು ಉನ್ನತ ಋಷಿಗಳಿಗೆ ನೇರವಾಗಿ ಹೇಳಿದಂಥ ಭಾಗವತ ಪುರಾಣದ ಬಗ್ಗೆ ನಾನೀಗ ಮಾತನಾಡಲು ಆರಂಭಿಸುತ್ತೇನೆ. ಈ ಮೊದಲು ಸನತ್ಕುಮಾರರು ಹಾಗೂ ಇತರ ಮುನಿಗಳು ಜಗತ್ತಿನ ತಳದಲ್ಲಿ ಕುಳಿತಿರುವ ಭಗವಾನ್ ಸಂಕರ್ಷಣನ ಬಗ್ಗೆ ವಿಚಾರಿಸಿದರು. ಭಗವಾನ್ ಸಂಕರ್ಷಣನು ಶ್ರೀ ಮದ್ಭಾಗವತದ ಸಾರವನ್ನು ಸನತ್ಕುಮಾರರಿಗೆ ತಿಳಿಸಿ ಅವರು ಅದನ್ನು ಅತಿಶಯಿಗಳ ಮುಖ್ಯಸ್ಥನಾದ ಸಾಂಖ್ಯಾಯನ ಮುನಿಗೆ ವಿವರಿಸಿದನು. ಸಾಂಖ್ಯಾಯನ ಮುನಿಯು ಭಾಗವತಕ್ಕೆ ಸಂಬಂಧಿಸಿದಂತೆ ಭಗವಂತನ ಲೀಲೆಗಳನ್ನು ವಿವರಿಸುತ್ತಿರುವ ಸಂದರ್ಭದಲ್ಲಿ ಪರಾಶರ ಹಾಗೂ ಬ್ರಹಸ್ಪತಿಯೂ ಅದನ್ನು ಆಲಿಸಿದರು. ಪುಲಸ್ತ್ಯನ ಉಪದೇಶದಂತೆ ಪರಾಶರನು ನನಗೆ ತಿಳಿಸಿದನು".

## ಸೃಷ್ಟಿಯ ಉಗಮ

ಮೂರು ಜಗತ್ತುಗಳು ನೀರಿನಲ್ಲಿ ಮುಳುಗಡೆಯಾದ ಸಮಯದಲ್ಲಿ ವಿಷ್ಣುವೊಬ್ಬನೇ ತನ್ನ ಹಾಸಿಗೆಯಾದ ಮಹಾನ್ ಅನಂತನ ಮೇಲೆ ಪವಡಿಸಿದ್ದನು. ಅವನ ಕಣ್ಣುಗಳು ಸಂಪೂರ್ಣವಾಗಿ ಮುಚ್ಚಿಕೊಂಡಿರದೇ ಇದ್ದುದರಿಂದ ಅವನು ನಿದ್ರಿಸುತ್ತಿರಲಿಲ್ಲ. ಕಟ್ಟಿಗೆಯಲ್ಲಿ ಅಡಗಿಕೊಂಡಿರುವ ಅಗ್ನಿಯ ಶಕ್ತಿಯಂತೆ ಭಗವಂತನು ನಿರ್ನಾಮದ ಜಲದೊಳಗೆ ಉಳಿದಿದ್ದನು. ಅವನು ಸ್ವಯಂ ಪ್ರೇರಿತ ಶಕ್ತಿಯಾದ ಕಾಲನೆಂಬುವನಲ್ಲಿ ಉಳಿದಿದ್ದನು. ಸೃಷ್ಟಿ ಕ್ರಿಯೆಯಂಥ ಸೂಕ್ಷ್ಮ ವಿಷಯದ ಬಗ್ಗೆ ಭಗವಂತನು ಇರಿಸಿದ್ದ ಗಮನವು ಕಾಮುಕತೆಯ ಐಹಿಕ ವಿಧಾನದಿಂದ ಗೊಂದಲಗೊಂಡು ಅನಂತರ ಪರಮಾತ್ಮನ ಉದರದ ಮೂಲಕ ಸೃಷ್ಟಿಯ ಸೂಕ್ಷ್ಮ ಆಕಾರವು ಹೊರಹೊಮ್ಮಿತು. ಜೀವಿಯ ವ್ಯರ್ಥ ಚಟುವಟಿಕೆಯ ಸಮಗ್ರ ರೂಪವು ಭಗವಂತನಿಂದ ಹೊಮ್ಮಿಸಲ್ಪಟ್ಟ ಒಂದು ಕಮಲ ಪುಷ್ಪದ ಮೊಗ್ಗಿನ ರೂಪವನ್ನು ಪಡೆದುಕೊಂಡಿತು. ಮತ್ತು ಅವನ ಉನ್ನತ ಇಚ್ಛೆಯಿಂದಾಗಿ ಅದು ಸೂರ್ಯನಂತೆ ಪ್ರತಿಯೊಂದನ್ನೂ ಉದ್ದೀಪನಗೊಳಿಸಿ ವಿನಾಶದ ವಿಸ್ತಾರ ಜಲವನ್ನು ಒಣಗಿಸಿತು. ಆ ಮೊಗ್ಗಿನೊಳಗೆ ಭಗವಂತನು ಅತ್ಯುನ್ನತ ಆತ್ಮವಾಗಿ ಪ್ರವೇಶಿಸಿದನು. ಅದು ಲೌಕಿಕ ಪ್ರಕೃತಿಯ ಎಲ್ಲ ವಿಧಾನಗಳಾಗಿಯೂ ಶ್ರೀಮಂತಗೊಂಡಾಗ ನಾವು ಸ್ವಯಂ ಜನ್ಯವೆಂದು ಕರೆಯುವ ವೈದಿಕ ವಿವೇಕವು ಹೊರಹೊಮ್ಮಿತು. ಕಮಲ ಪುಷ್ಪದಿಂದ ಜನಿಸಿದ ಬ್ರಹ್ಮನಿಗೆ ಜಗತ್ತನ್ನು ನೋಡಲಾಗಲಿಲ್ಲ. ಆದ್ದರಿಂದ ಅವನು ಇಡೀ ಬಾಹ್ಯಾಕಾಶವನ್ನೇ ಪ್ರದಕ್ಷಿಣೆ ಮಾಡಿ ತನ್ನ ಕಣ್ಣುಗಳನ್ನು ಎಲ್ಲ ದಿಕ್ಕುಗಳಿಗೂ ಹರಿಸುತ್ತಿದ್ದಾಗ ಅವನು ನಾಲ್ಕು ದಿಕ್ಕುಗಳಿಗೆ ಸಂಬಂಧಿಸಿದಂತೆ ನಾಲ್ಕು ಶಿರಗಳನ್ನು ಪಡೆದುಕೊಂಡನು.

ಬ್ರಹ್ಮದೇವನಿಗೆ ಸೃಷ್ಟಿಯ ಬಗ್ಗೆ ಸಂಪೂರ್ಣವಾಗಿ ಅರ್ಥಮಾಡಿಕೊಳ್ಳಲಾಗಲಿಲ್ಲ. ಯುಗದ ಅಂತ್ಯದಲ್ಲಿ ವಿನಾಶದ ವಾಯುವು ನೀರನ್ನು ಹಾಗೂ ಕಮಲವನ್ನು ದೊಡ್ಡ ಸುಳಿಗಳನ್ನುಳ್ಳ ಅಲೆಗಳು ಕದಡಲು ಪ್ರಾರಂಭಿಸಿತು. ಬ್ರಹ್ಮದೇವನು ತನ್ನ ಮೇಲೇ ಧ್ಯಾನವಿರಿಸಿ ತಾನು ಯಾರು ಮತ್ತು ಕಮಲವು ಹೇಗೆ ಹುಟ್ಟಿಕೊಂಡಿತು ಎಂಬುದನ್ನು ತಿಳಿಯಲಾರದೆ ಹೋದನು. ಅವನು ಕಮಲದ ಬೇರಿನ ನಾಳದ ಮೂಲಕ ಮತ್ತೆ ನೀರನ್ನು ಪ್ರವೇಶಿಸಿದರೂ ಅಲ್ಲೂ ಬೇರಿನ ಮೂಲವನ್ನು ಕಂಡು ಹಿಡಿಯಲಾಗಲಿಲ್ಲ. ಕೊನೆಯಲ್ಲಿ ಬ್ರಹ್ಮನು ಜೀವಿಗಳಲ್ಲಿ ಭಯವನ್ನು ಉತ್ಪಾದಿಸುವಂಥ ವಿಷ್ಣುವಿನ ಕೈಯಲ್ಲಿರುವ "ಶಾಶ್ವತ ಚಕ್ರವಾದ" ಅಂತಿಮ ಕಾಲವನ್ನು ಪ್ರವೇಶಿಸಿದನು. ಅನಂತರ ಅವನು ಭಗವಂತನಲ್ಲಿ ಗಮನವನ್ನು ಕೇಂದ್ರೀಕರಿಸಿದನು. ಅಲ್ಲಿ ಅವನು ತನ್ನ ಅಭರಣಗಳ ಮೂಲಕ ಜಗತ್ತನ್ನು ಪ್ರಕಾಶಮಾನಗೊಳಿಸಿದ ಶೇಷನಾಗನನ್ನು ಕಂಡನು. ಲೌಕಿಕ ಕಲ್ಮಶದಿಂದ ಮುಕ್ತನಾಗಿ ಭಕ್ತಿಪೂರ್ವಕ ಸೇವೆಯಿಂದ ಸಾಧಿಸಲಾದ ಪ್ರಶಸ್ತಿಗಳ ಮೂಲವಾದ ಬ್ರಹ್ಮನಿಗೆ ಪರಮಾತ್ಮನ ಪದ್ಮಪಾದಗಳನ್ನು ತೋರಿಸಿದಂಥ ಭಗವಂತನ ಬೃಹತ್ ರೂಪವನ್ನು ಕಂಡನು. ಭಗವಂತನು ತನ್ನ ಸೌಂದರ್ಯ ಮತ್ತು ವೈಭವದೊಂದಿಗೆ ಬ್ರಹ್ಮನಿಗೆ ಕಾಣಿಸಿಕೊಂಡನು. ಬ್ರಹ್ಮನು ಭಗವಂತನನ್ನು ಕಂಡಾಗ ಅವನು ಅದೇ ಕಾಲಕ್ಕೆ ಸೃಷ್ಟಿಯತ್ತ ನೋಟ ಬೀರಿದನು. ಅವನು ವಿಷ್ಣುವಿನ ಹೊಕ್ಕಳಿನಲ್ಲಿ ಸರೋವರವನ್ನು ಹಾಗೂ ಕಮಲದ ಹೂ ಮತ್ತು ನಿರ್ನಾಮದ ನೀರನ್ನು, ಒಣಗಿಸುವ ಗಾಳಿಯನ್ನು ಮತ್ತು ಆಕಾಶವನ್ನೂ ಕಂಡನು. ಎಲ್ಲವೂ ಅವನ ನೋಟಕ್ಕೆ ಸಿಕ್ಕಿದವು. ಬ್ರಹ್ಮದೇವನು ಹೀಗೆ ಅಭಿಪ್ಸೆಯ ವಿಧಾನದಿಂದ ಸೃಷ್ಟಿಸುವತ್ತ ಗಮನವನ್ನು ಹರಿಸಿ ಪರಮಾತ್ಮನು ಸೂಚಿಸಿದ ಸೃಷ್ಟಿಯ ಐದು ಕಾರಣಗಳನ್ನು ಕಂಡು ಸೃಷ್ಟ್ಯಾತ್ಮಕ ಮನೋಭಾವದ ಮಾರ್ಗದತ್ತ ಪ್ರಾರ್ಥನೆಯನ್ನು ಸಲ್ಲಿಸಿದನು.

ಬ್ರಹ್ಮನು ಭಗವಂತನನ್ನು ಉದ್ದೇಶಿಸಿ ಹೇಳಿದನು : "ಎಲೈ ಪರಮಾತ್ಮನೇ, ಇಂದು ಅನೇಕಾನೇಕ ವರ್ಷಗಳ ಕಾಲದ ತಪಸ್ಸಿನ ನಂತರ ನಾನು ನಿನ್ನನ್ನು ಅರಿಯಬಲ್ಲವನಾಗಿದ್ದೇನೆ. ನಿನ್ನ ವ್ಯಕ್ತಿತ್ವವನ್ನು ನೋಡಲು ಅಸಮರ್ಥರಾದವರು ನತದೃಷ್ಟರು. ದ್ರವ್ಯದ ಕ್ರಿಯಾತ್ಮಕ ಶಕ್ತಿಯನ್ನು ಪ್ರದರ್ಶಿಸುವ ಮೂಲಕ ನೀನು ಮಹೋನ್ನತನಾಗಿ ಉಳಿದಿದ್ದೀಯೆ. ನಿನ್ನ ಅವತಾರವು ಇನ್ನೂ ಅನೇಕ ಅವತಾರಗಳಿಗೆ ಮೂಲವಾಗಿದ್ದು ನಿನ್ನ ನಾಭಿ ಗ್ರಹದಿಂದ ಹೊರಟ ಕಮಲ ಪುಷ್ಪದಲ್ಲಿ ನಾನು ಜನಿಸಿದ್ದೇನೆ. ಭಗವಂತನಾದ ನೀನು ವ್ಯಕ್ತಗೊಂಡ ಅವತಾರಕ್ಕೆ ಕಾರಣನಾಗಿದ್ದರೂ ದ್ರವ್ಯದಿಂದ ಸ್ಪರ್ಶಿಸಲ್ಪಡದೆ ಇರುವುದರಿಂದ ಐಹಿಕ ಶರೀರ ಮತ್ತು ಇಂದ್ರಿಯಗಳ ಬಗ್ಗೆ ಹೆಮ್ಮೆಯನ್ನು ತಳೆದಿರುವ ನಾನು ನಿನಗೆ ಶರಣಾಗತನಾಗುತ್ತಿದ್ದೇನೆ. ನೀನು ನಿನ್ನ ಕರುಣೆಯನ್ನು ತೋರಿಸುವುದಕ್ಕಾಗಿಯೇ ಪ್ರತಿಯೊಬ್ಬರ ಹೃದಯದಲ್ಲಿದ್ದೀಯೆ. ಹಾಗೂ ನೀನು ಶಾಶ್ವತವಾದ ಹಿತೈಷಿಯಾಗಿದ್ದರೂ ಭಕ್ತರಲ್ಲದವರಿಗೆ ಲಭ್ಯವಿಲ್ಲ. ವೈದಿಕ ಕರ್ಮಗಳು, ದಾನ, ಪವಿತ್ರ ತಪಸ್ಸುಗಳು ಹಾಗೂ ನಿನ್ನ ಆರಾಧನೆ, ನಿನ್ನ ಸಂತೃಪ್ತಿಗಾಗಿ ಫಲಪ್ರದ ಪರಿಣಾಮಗಳನ್ನು ನೀಡುವ ಮೂಲಕ ಮಾಡಲಾಗುವ ಅತಿಶಯ ಸೇವೆಯು ಕೂಡ ಲಾಭದಾಯಕ. ಇಂಥ ಧಾರ್ಮಿಕ ಕ್ರಿಯೆಗಳು ಎಂದಿಗೂ ವ್ಯರ್ಥವಾಗುವುದಿಲ್ಲ".

ಮೈತ್ರೇಯಿ ಮುನಿಯು ವಿದುರನಿಗೆ ಹೇಳಿದನು: "ತಾನು ಗೋಚರಕ್ಕೆ ಮೂಲವನ್ನು ಅಂದರೆ ಪರಮಾತ್ಮನ ವ್ಯಕ್ತಿತ್ವವನ್ನು ಗಮನಿಸಿದ ನಂತರ ಬ್ರಹ್ಮನು ಪರಮಾತ್ಮನ ಮನಸ್ಸು ಮತ್ತು ಶಬ್ದಗಳು ಅವಕಾಶ ನೀಡುವವರೆಗೆ ಪರಮಾತ್ಮನ ಕರುಣೆಗಾಗಿ ಪ್ರಾರ್ಥಿಸಿದನು ಎಂದು ಹೇಳಿದನು. ಪ್ರಾರ್ಥನೆ ಸಲ್ಲಿಸಿದ ನಂತರ ಬ್ರಹ್ಮನು ಮೌನವಾದನು. ಬ್ರಹ್ಮನ ಉದ್ದೇಶಗಳನ್ನು ಅರ್ಥಮಾಡಿಕೊಂಡಂಥ ಭಗವಂತನು, " ಎಲೈ ಬ್ರಹ್ಮನೇ, ವಿವೇಕದ ಆಳವು ಸೃಷ್ಟಿಯ ಕಾರ್ಯಾಚರಣೆಯ ಬಗ್ಗೆ ಹತಾಶೆ ಅಥವಾ ಆತಂಕಗೊಳ್ಳುವುದಲ್ಲ. ನೀನು ನನ್ನಿಂದ ಅಪೇಕ್ಷಿಸುತ್ತಿರುವುದನ್ನು ಈಗಾಗಲೇ ದಯಪಾಲಿಸಲಾಗಿದೆ". ಆದ್ದರಿಂದ ಭಗವಂತನು ಬ್ರಹ್ಮನಿಗೆ ತಪಸ್ಸು ಹಾಗೂ ಧ್ಯಾನದಲ್ಲಿ ತನ್ನನ್ನೇ ಇರಿಸಿಕೊಂಡು ತನ್ನ ದಯೆಯನ್ನು ಪಡೆಯಲು ಜ್ಞಾನದ ತತ್ವವನ್ನು ಅನುಸರಿಸಬೇಕೆಂದು ತಿಳಿಸಿದನು. ಇದರಿಂದಾಗಿ ಪ್ರತಿಯೊಂದನ್ನೂ ಅವನ ಹೃದಯದಾಳದಿಂದ ಅರ್ಥ ಮಾಡಿಕೊಳ್ಳಲು ನೆರವಾಗಿದೆ. ಭಗವಂತನು ಮುಂದೆ ತನ್ನೊಳಗೆ ಹಾಗೂ ಜಗತ್ತಿನಾದ್ಯಂತ ತನ್ನನ್ನು ನೋಡಿಕೊಳ್ಳಲಿದ್ದು ಬ್ರಹ್ಮನು ಜಗತ್ತು ಹಾಗೂ ಜೀವಿಗಳನ್ನು, ಹೀಗೆ ಪ್ರತಿಯೊಂದನ್ನೂ ಭಗವಂತನಲ್ಲೇ ನೋಡುತ್ತಾನೆಂದನು. ಭಗವಂತನು ಪ್ರತಿಯೊಂದರಲ್ಲಿ ಹಾಗೂ ಮಾನಸಿಕ ಸ್ಥಿತಿಯಲ್ಲಿ ಕಾಣಿಸಲಿದ್ದು ಬ್ರಹ್ಮನು ಎಲ್ಲ ವಿಧವಾದ ಭ್ರಮೆಗಳಿಂದ ಮುಕ್ತಗೊಳ್ಳುತ್ತಾನೆ. ಈ ಪರಿಸ್ಥಿತಿಯು ಬ್ರಹ್ಮನನ್ನು ಪರಿಶುದ್ಧ ಪ್ರಜ್ಞೆಯಲ್ಲಿ ಇರಿಸುತ್ತದೆ. ಭಗವಂತನು ಬ್ರಹ್ಮನಿಗೆ ಸೃಷ್ಟಿಯಲ್ಲಿ ಹಾಗೂ ಜನಸಂಖ್ಯೆಯನ್ನು ಹೆಚ್ಚಿಸುವಲ್ಲಿ ನೆರವಾಗಿ ಬ್ರಹ್ಮನ ಮೇಲಿನ ಅವನ ಕರುಣೆಯು ಸದಾ ಹೆಚ್ಚುತ್ತದೆ. ಬ್ರಹ್ಮನು ಮೂಲ ಋಷಿಯಾಗಿದ್ದು ಅಭೀಪ್ಸೆಯ ಕೆಡುಕಿನ ವಿಧಾನವು ಬ್ರಹ್ಮನನ್ನೆಂದೂ ಹಾಯುವುದಿಲ್ಲ. ತಾನು ಐಹಿಕವಾದ ಯಾವುದರಿಂದಲೂ ಹಾಗೂ ನಿರ್ದಿಷ್ಟವಾಗಿ ಐದು ಜಡ ಮತ್ತು ಮೂರು ಸೂಕ್ಷ್ಮ ಅಂಶಗಳಿಂದ ರೂಪಿಸಲ್ಪಟ್ಟ ಎಂಬುದು ಬ್ರಹ್ಮನಿಗೆ ತಿಳಿಯುತ್ತದೆ ಎಂಬುದಾಗಿ ಭಗವಂತನು ಸ್ಪಷ್ಟಪಡಿಸಿದನು.

ಭಗವಂತನೆಂದನು: "ಬ್ರಹ್ಮನಂತೆ ಪ್ರಾರ್ಥಿಸುವ ಹಾಗೂ ಅವನಂತೆ ನನ್ನನ್ನು ಪೂಜಿಸುವ ಯಾವುದೇ ಮಾನವನು ಶೀಘ್ರದಲ್ಲೇ ತನ್ನ ಆಸೆಗಳು ಪೂರೈಕೆ ಯಾಗುವುದರಿಂದಾಗಿ ಹರ್ಷಗೊಳ್ಳುತ್ತಾನೆ ಮತ್ತು ಆಶೀರ್ವಾದಕ್ಕೆ ಒಳಗಾಗುತ್ತಾನೆ".

ಸಾಂಪ್ರದಾಯಿಕವಾದ ಒಳ್ಳೆಯ ಕೆಲಸಗಳು, ತಪಸ್ಸುಗಳು, ತ್ಯಾಗಗಳು, ದಾನಗಳು, ಅತೀಂದ್ರಿಯ ಚಟುವಟಿಕೆಗಳು, ಧ್ಯಾನ, ಇತ್ಯಾದಿ ಭಗವಂತನನ್ನು ತೃಪ್ತಿಪಡಿಸುವುದಾಗಿದೆ. ಅವನು ಪ್ರತಿಯೊಬ್ಬ ವ್ಯಕ್ತಿಯ ಉನ್ನತಾತ್ಮನು. ಅವನು ಮಹಾನ್ ನಿರ್ದೇಶಕ ಹಾಗೂ ಪ್ರಿಯನಾದವನು. ಜನರು ಜಡ ಮತ್ತು ಸೂಕ್ಷ್ಮ ಶರೀರಗಳೊಂದಿಗೇ ತಪ್ಪಾಗಿ ವ್ಯಾಮೋಹಗೊಂಡಿರುತ್ತಾರೆ. ಆದರೆ ಅವರು ಭಗವಂತನ ಬಗೆಗೆ ಮಾತ್ರ ನಿಜವಾದ ವ್ಯಾಮೋಹವನ್ನು ಹೊಂದಿರುತ್ತಾರೆ.

ಆದ್ದರಿಂದ ಪರಮಾತ್ಮನು ಬ್ರಹ್ಮನಿಗೆ ತನ್ನ ಸೂಚನೆಗಳನ್ನು ಅನುಸರಿಸಿ ಜೀವಿಗಳನ್ನು ಉತ್ಪಾದಿಸಬೇಕೆಂದನು.

ವಿದುರನು ಮೈತ್ರೇಯಿ ಮುನಿಯಿಂದ, ಬ್ರಹ್ಮನು ತನ್ನದೇ ಶರೀರ ಹಾಗೂ ಮನಸ್ಸಿನ ಮೂಲಕ ಭಗವಂತನು ಮಾಯವಾದ ನಂತರ ಜೀವಿಗಳನ್ನು ಹೇಗೆ ಸೃಷ್ಟಿಸಿದ ಎಂಬುದನ್ನು ತಿಳಿದುಕೊಳ್ಳಲು ಬಯಸಿದನು.

ಮೈತ್ರೇಯಿ ಮುನಿಯು, ಬ್ರಹ್ಮನು ಒಂದು ನೂರು ಸ್ವರ್ಗೀಯ ವರ್ಷಗಳ ಕಾಲ ತಪಸ್ಸಿನಲ್ಲಿ ತೊಡಗಿದ್ದು ಭಗವಂತನ ಭಕ್ತಿಪೂರ್ವಕ ಸೇವೆಯಲ್ಲಿ ತೊಡಗಿದ್ದನು ಎಂದು ತಿಳಿಸಿದನು. ಅನಂತರ ಬ್ರಹ್ಮನಿಗೆ ತಾನು ಕುಳಿತಿದ್ದಂಥ ಕಮಲ ಹಾಗೂ ಯಾವ ನೀರಿನಿಂದ ಕಮಲವು ಬೆಳೆಯುತ್ತಿತ್ತೋ ಆ ನೀರು ಪ್ರಬಲವಾದ ಕ್ರೂರ ಬಿರುಗಾಳಿಯಿಂದಾಗಿ ಅಲುಗಾಡುತ್ತಿರುವುದು ಕಂಡಿತು. ತಪಸ್ಸು ಬ್ರಹ್ಮನಿಗೆ ವಾಸ್ತವ ಜ್ಞಾನವನ್ನು ನೀಡಿದ್ದರಿಂದಾಗಿ ಅವನು ಗಾಳಿಯನ್ನು ಸಂಪೂರ್ಣವಾಗಿ ನೀರಿನೊಂದಿಗೆ ಕುಡಿದು ಬಿಟ್ಟನು. ಕಮಲವು ಇಡೀ ಜಗತ್ತಿನಲ್ಲಿ ಹರಡಿಕೊಂಡಿರುವುದನ್ನು ಅವನು ಕಂಡು ಅದೇ ಕಮಲದಲ್ಲಿ ಆ ಮೊದಲು ಮುಳುಗಿದ್ದಂಥ ಗ್ರಹಗಳನ್ನು ಹೇಗೆ ಸೃಷ್ಟಿಸುತ್ತದೆಂಬುದರ ಬಗ್ಗೆ ಧ್ಯಾನಿಸಿದನು. ಬ್ರಹ್ಮನು ಕಮಲದ ಸುರುಳಿಯನ್ನು ಪ್ರವೇಶಿಸುತ್ತಿದ್ದಂತೆ ಹಾಗೂ ಅದನ್ನು ಜಗತ್ತಿನಲ್ಲಿ ಹರಡುತ್ತಿದ್ದಂತೆ ಅವನು ಮೂರು ಜಗತ್ತುಗಳ ವಿಧಾನಗಳಾಗಿ ಮತ್ತು ಅನಂತರ ಹದಿನಾಲ್ಕು ವಿಭಾಗಗಳಾಗಿ ವಿಭಜನೆ ಹೊಂದಿದನು.

ವಿದುರನು ಮೈತ್ರೇಯಿಯನ್ನು ಶಾಶ್ವತ ಕಾಲದ - ಭಗವಂತನ ಮತ್ತೊಂದು ಸ್ವರೂಪದ ಬಗ್ಗೆ ಹಾಗೂ ಶಾಶ್ವತ ಕಾಲದ ಚಿಹ್ನೆಗಳ ಬಗ್ಗೆ ವಿಚಾರಿಸಿದನು. ಶಾಶ್ವತ ಕಾಲವೆಂಬುದು ಲೌಕಿಕ ಸ್ವಭಾವದ ಮೂರು ವಿಧಾನಗಳ ಅಂತರ್ವಿಭಾಗೀಯದ ಅನಾದಿ ಕಾಲದ ಮೂಲವಾಗಿದೆ. ಅದು ಬದಲಾಗದಂಥದ್ದು ಮತ್ತು ಮಿತಿಯಿಲ್ಲದಂಥದ್ದು ಹಾಗೂ ಐಹಿಕ ಸೃಷ್ಟಿಯಲ್ಲಿ ಭಗವಂತನಿಗೆ ಹವ್ಯಾಸಗಳ ಅಸ್ತ್ರವಾಗಿ ಕೆಲಸ ಮಾಡುತ್ತದೆ. (ಹೀಬ್ರೂ ಸಾಹಿತ್ಯದಲ್ಲಿ ಕಾಲವನ್ನು ಭಗವಂತನ ಪ್ರಾತಿನಿಧ್ಯವೆಂಬ ಭಾವನೆಯಲ್ಲೇ ಅಂಗೀಕರಿಸಲಾಗಿದೆ. ಅದರಲ್ಲಿ ಹೀಗೆ ಹೇಳಲಾಗಿದೆ : "ಭಗವಂತನು ವಿರಾಮ ಕಾಲದಲ್ಲಿ ಅಮುಖ್ಯ ಮತ್ತು ವಿವಿಧ ರೀತಿಗಳಲ್ಲಿ ಪ್ರವಾದಿಗಳಿಂದ ಪಾದ್ರಿಗಳಿಗೆ ವರ್ಗಾಯಿಸಲ್ಪಟ್ಟಿತು ಎಂಬುದಾಗಿ ತಿಳಿಸಿದ್ದಾನೆ). ವ್ಯಕ್ತಗೊಳ್ಳುವ ಕಾಲ ಮತ್ತು ಭಗವಂತನ ನಿರ್ವಿಕಾರ ರೂಪುರೇಷೆಗಳ ಮೂಲಕ ಐಹಿಕ ಶಕ್ತಿಯಾಗಿ ವ್ಯಕ್ತಗೊಂಡ ವಿಶ್ವವು ಭಗವಂತನಿಂದ ಪ್ರತ್ಯೇಕಗೊಳ್ಳುತ್ತದೆ. ಈ ವ್ಯಕ್ತಗೊಂಡ ವಿಶ್ವವು, ಈಗಿರುವಂತೆಯೇ ಆಗಲೂ ಇದ್ದಿತಲ್ಲದೆ ಭವಿಷ್ಯದಲ್ಲಿಯೂ ಅದರಂತೆಯೇ ಇರುತ್ತದೆ.

ವಿಧಾನಗಳ ಪರಸ್ಪರ ಪ್ರಕ್ರಿಯೆಯಿಂದ ಸ್ವಾಭಾವಿಕವಾಗಿಯೇ ಉಂಟಾಗುವ ಸೃಷ್ಟಿಯಲ್ಲದೆ ಇನ್ನೂ ಒಂಬತ್ತು ವಿಧದ ಸೃಷ್ಟಿಗಳಿವೆ. ಶಾಶ್ವತ ಕಾಲದ ಕಾರಣದಿಂದಾಗಿ ಮೂರು ವಿಧವಾದ ವಿನಾಶಗಳು, ಐಹಿಕ ಅಂಶಗಳು ಮತ್ತು ಕಾರ್ಯದ ಗುಣಾತ್ಮಕತೆಯಿದೆ.

ಒಂಬತ್ತು ಸೃಷ್ಟಿಗಳೆಂದರೆ : ಮಹತ್ ತತ್ವ (ಅಂದರೆ ಪರಮಾತ್ಮನ ಅಸ್ತಿತ್ವದಿಂದಾಗಿ ಆಕಾರಗಳ ಪರಸ್ಪರ ಪ್ರತಿಕ್ರಿಯೆಗಳಿಂದ ಉಂಟಾಗುವಂಥ ಐಹಿಕ ಸಾಮಗ್ರಿಗಳ ಒಟ್ಟು ಸಾರಾಂಶ); ಸುಳ್ಳು ಅಹಂಮಿಕೆ (ಐಹಿಕ ಸಾಮಗ್ರಿ, ಐಹಿಕ ಜ್ಞಾನ ಮತ್ತು ಐಹಿಕ ಚಟುವಟಿಕೆಗಳು ಮೇಲೇಳುವಂಥದ್ದು) ಇಂದ್ರಿಯ ಗ್ರಹಿಕೆಗಳು ಮೂರನೇ ಅವತಾರದಲ್ಲಿ

ಸೃಷ್ಟಿಗೊಂಡು ಇವುಗಳಿಂದ ಮೂಲಾಂಶಗಳು ಹುಟ್ಟಿಕೊಳ್ಳುತ್ತವೆ ; ಜ್ಞಾನದ ಮತ್ತು ಕಾರ್ಯಸಾಮರ್ಥ್ಯದ ಸೃಷ್ಟಿ; ಬುದ್ಧಿಯ ಒಟ್ಟು ಸಾರವಾದಂಥ ಒಳಿತಿನ ವಿಧಾನದ ಅಂತರಪ್ರಕ್ರಿಯೆಯ ಮೂಲಕ ನಿಯಂತ್ರಿಸುವ ದೇವತೆಗಳ ಸೃಷ್ಟಿ; ಭೌತದ್ರವ್ಯಗಳ ವರ್ತನೆಗಳಿಂದ ಉಂಟಾಗುವ ಮೌಢ್ಯದ ಕತ್ತಲು. ಈ ಆರೂ ಸೃಷ್ಟಿಗಳೂ ಭಗವಂತನ ಬಾಹ್ಯ ಶಕ್ತಿಗಳು. ಏಳನೇ ಸೃಷ್ಟಿಯು ಆರು ವಿಧಗಳಾಗಿರುವ ಅಚಲವಾದ ಇರುವಿಕೆಗಳು. ಹೂವಿಲ್ಲದ ಫಲಭರಿತ ವೃಕ್ಷಗಳು; ಹಣ್ಣು ಮಾಗುವವರೆಗೂ ಅಸ್ತಿತ್ವದಲ್ಲಿರುವ ವೃಕ್ಷಗಳು ಹಾಗೂ ಸಸ್ಯಗಳು; ಬಳ್ಳಿಗಳು, ಕೊಳವೆ ಗಿಡಗಳು, ಪರಾವಲಂಬಿಗಳಲ್ಲದ ಹೂವು ಮತ್ತು ಹಣ್ಣುಗಳನ್ನೊಳಗೊಂಡ ವೃಕ್ಷಗಳು. ಈ ಎಲ್ಲ ಅಚಲ ವೃಕ್ಷಗಳು ಹಾಗೂ ಸಸ್ಯಗಳು ತಮ್ಮ ಅಸ್ತಿತ್ವವನ್ನು ಮೇಲ್ಮುಖವಾಗಿ ಹುಡುಕುತ್ತವೆ. ಅವು ಪ್ರಜ್ಞಾರಹಿತವಾಗಿದ್ದರೂ ತಮ್ಮೊಳಗೇ ಭಾವನೆಗಳನ್ನು ಹೊಂದಿರುವಂಥವು. ಎಂಟನೆಯದು ಜೀವನದ ಕೆಳಸ್ತರಕ್ಕೆ ಸಂಬಂಧಿಸಿದಂಥ ಇಪ್ಪತ್ತೆಂಟು ಸೃಷ್ಟಿಗಳು. ಅವು ಮೌಢ್ಯ ಮತ್ತು ಮೂರ್ಖತನದಿಂದ ಕೂಡಿರುವಂಥವು. ಅವು ವಾಸನೆಯ ಮೂಲಕ ತಮಗೆ ಅಪೇಕ್ಷಣೀಯವಾದವು. ಏನೆಂಬುದನ್ನು ತಿಳಿದರೂ ಹೃದಯದಾಳದಿಂದ ಯಾವುದನ್ನೇ ಆಗಲಿ ನೆನಪಿನಲ್ಲಿಟ್ಟು ಕೊಳ್ಳಲು ಅಸಾಮರ್ಥ್ಯವಾದವು. ಕೆಳಸ್ತರದ ಪ್ರಾಣಿಗಳು - ಹಸು, ಎಮ್ಮೆ, ಕೃಷ್ಣಮೃಗ, ಹಂದಿ, ಜಿಂಕೆ, ಮೇಕೆ ಮತ್ತು ಎರಡು ಕೊಂಬುಗಳುಳ್ಳ ಮೇಕೆ, ಕುದುರೆ, ಹೇಸರಗತ್ತೆ, ಕತ್ತೆ, ಕೋಣ, ಶರಭ, ಒಂದು ಕೊಂಬಿನ ಕಾಡು ಹಸು, ನಾಯಿ, ನರಿ, ಹುಲಿ, ಬೆಕ್ಕು, ಮೊಲ, ಸಿಂಹ, ಕೋತಿ, ಆನೆ, ಆಮೆ - ತಮ್ಮ ಪಾದಗಳಲ್ಲಿ ಐದು ಉಗುರುಗಳನ್ನು ಹೊಂದಿರುವಂಥವು. ರಣಹದ್ದು, ಬಕ, ನವಿಲು, ಹಂಸ, ಸರಸ, ಚಕ್ರವಾಕ, ಕಾಗೆ, ಗೂಬೆ ಮುಂತಾದವು ಪಕ್ಷಿಗಳು. ಒಂಬತ್ತನೇ ಸೃಷ್ಟಿಯಲ್ಲಿ ಹೊಟ್ಟೆಯಲ್ಲಿ ತಮ್ಮ ಆಹಾರವನ್ನು ಸಂಗ್ರಹಿಸಿಟ್ಟು ಕೊಳ್ಳುವಂಥ ಮಾನವ ಜೀವಿಗಳಿದ್ದಾರೆ.

ಮೈತ್ರೇಯಿಯು ನುಡಿದನು : "ಕಡೆಯ ಈ ಮೂರು ಸೃಷ್ಟಿಗಳು ಹಾಗೂ ಉಪದೇವತೆಗಳ ಸೃಷ್ಟಿ (ಹತ್ತನೇ ಸೃಷ್ಟಿಯು) ವೈಕೃತ ಸೃಷ್ಟಿಗಳಾಗಿದ್ದು, ಅವು ಮೊದಲು ವಿವರಿಸಲಾದ ಪ್ರಾಕೃತ (ಸ್ವಾಭಾವಿಕ) ಸೃಷ್ಟಿಗಳಿಗಿಂತಲೂ ಭಿನ್ನವಾದವು. ಕುಮಾರರ ಕಾಣಿಸಿಕೊಳ್ಳುವಿಕೆ ಎರಡೂ ರೀತಿಯದು.

ಬ್ರಹ್ಮನು ಎಂಟು ವಿಧವಾದ ಉಪದೇವತೆಗಳನ್ನು ಸೃಷ್ಟಿಸಿದನು; ಉಪದೇವತೆಗಳು; ಪಿತೃಗಳು; ಅಸುರರು ಅಥವಾ ದಾನವರು; ಗಂಧರ್ವರು; ಅಪ್ಸರರು ಹಾಗೂ ಅಪ್ಸರೆಯರು; ಯಕ್ಷರು ಮತ್ತು ರಾಕ್ಷಸರು; ಸಿದ್ಧರು, ಕರುಣರು ಮತ್ತು ವಿಧ್ಯಾಧರರು; ಭೂತಗಳು; ಪ್ರೇತಗಳು ಮತ್ತು ಪಿಶಾಚಿಗಳು ಹಾಗೂ ಉನ್ನತ ಮಾನವ ಜೀವಿಗಳು, ದೇವಲೋಕದ ಗಾಯಕರು, ಮುಂತಾದವರು.

## ಮಹಾನ್ ಕಾಲ

ಅವಿಭಾಜ್ಯವಾದ ಹಾಗೂ ಶರೀರದಂತೆ ರೂಪುಗೊಳ್ಳದಿರುವಂಥ ಅಂತಿಮ ಕಣವನ್ನು ಅಣುವೆಂದು ಕರೆಯಲಾಗುತ್ತದೆ ಎಂಬುದಾಗಿ ಮೈತ್ರೇಯಿ ಹೇಳಿದನು.

ಭಾಗವತದಲ್ಲಿ ಅಣುವಿಗೆ ಸಂಬಂಧಪಟ್ಟ ವಿವರಣೆಯು ಅಣುವಿಜ್ಞಾನಕ್ಕೆ ಸಂಬಂಧಿಸಿದಂತೆ ಆಧುನಿಕ ವಿಜ್ಞಾನವು ಹೇಳಿದ ರೀತಿಯದೇ ಆಗಿದ್ದು ಇವನ್ನು ಮುಂದೆ ಕಾಣಲಿರುವ "ಪರಮಾಣು ವಾದ"ದಲ್ಲಿ ವಿವರಿಸಲಾಗಿದೆ. ಎಲ್ಲ ರೂಪಗಳೂ ಕರಗಿದ ನಂತರವೂ ಅದು ಅಗೋಚರ ಅಸ್ತಿತ್ವವಾಗಿ ಸದಾ ಕಾಲವೂ ಉಳಿದಿರುತ್ತದೆ. ಐಹಿಕ ಶರೀರವು ಇಂಥ ಅಣುಗಳ ಸಮ್ಮಿಶ್ರಣ. ವ್ಯಕ್ತವಿಶ್ವದ ಅಂತಿಮ ಸ್ಥಿತಿಯೇ ಅಣುಗಳು. ಬೇರೆ ಬೇರೆ ಶರೀರಗಳಾಗಿ ರೂಪುಗೊಳ್ಳದೇ ಅವು ತಮ್ಮದೇ ಆಕಾರದಲ್ಲಿ ಉಳಿದಾಗ ಅವನ್ನು ಅನಿಯಮಿತ ಏಕತೆಯೆಂದು ಕರೆಯಲಾಗುತ್ತದೆ. ಅವು ನಿಶ್ಚಿತವಾಗಿಯೂ ಭೌತಿಕ ರೂಪಗಳ ಬೇರೆ ಬೇರೆ ಶರೀರಗಳಾಗಿದ್ದರೂ ಅಣುಗಳು ತಾವಾಗಿಯೇ ಪರಿಪೂರ್ಣ ವಿಶ್ವವನ್ನು ರೂಪಿಸುತ್ತವೆ. ಶರೀರಗಳ ಅಣುಗಳ ಸಮ್ಮಿಶ್ರಣದ ಚಲನೆಯನ್ನು ಮಾಪನ ಮಾಡುವ ಮೂಲಕ ಒಬ್ಬರು ಕಾಲವನ್ನು ಅಂದಾಜು ಮಾಡಲಾಗದು. ಕಾಲವು ಭಗವಂತನ ಅಂತಃಶಕ್ತಿ. ಒಂದು ನಿರ್ದಿಷ್ಟ ಅಣುವಿನ ಬಾಹ್ಯವಲಯವನ್ನು ಅಣು ಕಾಲವು ಆಕ್ರಮಿಸಿಕೊಳ್ಳುವ ರೀತಿಯನ್ನು ಈ ಮಾಪನ ಅವಲಂಬಿಸಿರುತ್ತದೆ. ಅಣುಗಳ ಅವ್ಯಕ್ತ ಮೊತ್ತವನ್ನು ಒಳಗೊಳ್ಳುವಂಥ ಕಾಲವನ್ನು "ಮಹಾಕಾಲ" ಎಂದು ಕರೆಯಲಾಗುತ್ತದೆ.

ಮೊತ್ತ ಕಾಲದ ವಿಭಜನೆಯನ್ನು ಈ ರೀತಿಯಾಗಿ ಎಣಿಕೆ ಮಾಡಲಾಗುತ್ತದೆ. ಎರಡು ಅಣುಗಳು ಒಂದು ದ್ವಿಅಣುವನ್ನು ರೂಪಿಸುತ್ತಿದ್ದು ಮೂರು ದ್ವಿಅಣುಗಳು ಒಂದು ಷಟ್ ಅಣುವನ್ನು ರೂಪಿಸುತ್ತದೆ. ಕಿಟಕಿಯ ಪರದೆಯ ಮೂಲಕ ಪ್ರವೇಶಿಸುವ ಸೂರ್ಯನ ಪ್ರಕಾಶದಲ್ಲಿ ಈ ಷಟ್ ಅಣು ಗೋಚರಿಸುತ್ತದೆ. ಷಟ್ ಅಣು ಗಗನದತ್ತ ಸಾಗುವುದನ್ನು ಒಬ್ಬರು ಸ್ಪಷ್ಟವಾಗಿ ನೋಡಬಹುದು. ಮೂರು ತ್ರಸರೇಣುಗಳ ಸಮಗ್ರತೆಗೆ ಅಗತ್ಯವಾದ ಕಾಲ ಪರಿಮಿತಿಯನ್ನು ತೃತಿ ಎಂದು ಕರೆಯಲಾಗುತ್ತದೆ (ಒಂದು ಸೆಕೆಂಡನ್ನು 1687.5 ಭಾಗಗಳಾಗಿ ವಿಭಜಿಸಿದರೆ ಪ್ರತಿಯೊಂದು ಭಾಗವೂ ಒಂದು ತೃತಿಯಾಗಿದ್ದು ಅದು 18 ಅಣು ಕಣಗಳ ಏಕತೆಯಲ್ಲಿ ಆಕ್ರಮಿಸಿಕೊಂಡಂಥ ಕಾಲವಾಗಿದೆ ಎಂಬುದನ್ನು ಎಣಿಕೆ ಮಾಡಲಾಗುತ್ತದೆ). ಒಂದು ನೂರು ತೃತಿಗಳು ಒಂದು ವೇದವಾಗುತ್ತದೆ. ಮೂರು ವೇದಗಳು ಒಂದು ಲವವಾಗುತ್ತದೆ, ಮೂರು ಲವಗಳ ಕಾಲ ಪರಿಮಿತಿಯು ಒಂದು ನಿಮಿಷಕ್ಕೆ ಸಮನಾಗಿದ್ದು, ಮೂರು ನಿಮಿಷಗಳು ಒಂದು ಕ್ಷಣ. ಐದು ಕ್ಷಣಗಳು ಒಂದು ಕಸ್ತ ಮತ್ತು ಹದಿನೈದು ಕಸ್ತಗಳು ಒಂದು ಲಘುವಾಗುತ್ತದೆ (ಒಂದು ಲಘು=ಎರಡು ಕ್ಷಣಗಳು). ಹದಿನೈದು ಲಘುಗಳು ಒಂದು ನಾದಿಕವಾಗಿದ್ದು ಅದನ್ನು ದಂಡವೆಂದೂ ಕರೆಯಲಾಗುತ್ತದೆ. ಎರಡು ದಂಡಗಳು ಒಂದು ಮಹೂರ್ತವನ್ನಾಗಿಸಿ, ಆರು ಅಥವಾ ಏಳು ದಂಡಗಳು, ಮಾನವರ ಲೆಕ್ಕಾಚಾರಕ್ಕೆ ಅನುಗುಣವಾಗಿ ಒಂದು ದಿನ ಅಥವಾ ರಾತ್ರಿಯ 1/4ನೇ ಒಂದು ಭಾಗವಾಗುತ್ತದೆ.

ಒಂದು ನಾದಿಕ ಅಥವಾ ದಂಡವನ್ನು ಮಾಪನ ಮಾಡಲು ಅಗತ್ಯವಾದ (ಕುಂಡವನ್ನು) ಆರು ಪಾಲ ತೂಕದ (ಅಂದರೆ ಹದಿನಾಲ್ಕು ಔನ್ಸುಗಳು) ತಾಮ್ರದಿಂದ ತಯಾರಿಸಬೇಕಾಗಿದ್ದು ಅದರಲ್ಲೂ ನಾಲ್ಕು ಮಾಸ ತೂಕದ ಒಂದು ಚಿನ್ನದ ತಂತುವಿನಿಂದ ನಾಲ್ಕು ಬೆರಳುಗಳಷ್ಟು ಉದ್ದನೆಯ ರಂಧ್ರವನ್ನು ಮಾಡಬೇಕು. ಕುಂಡವನ್ನು ನೀರಿನ

ಮೇಲಿಟ್ಟಾಗ ನೀರು ಅದರಿಂದ ತುಳುಕುವುದಕ್ಕೂ ಮುಂಚಿನ ಸಮಯವನ್ನು ಒಂದು ದಂಡವೆಂದು ಕರೆಯಲಾಗುತ್ತದೆ. ಮಾನವರ ಬದುಕಿನಲ್ಲಿ ಯಮ ಎಂದೂ ಕರೆಯಲಾಗುವ ನಾಲ್ಕು ಪ್ರಹರಗಳು. ದಿನದಲ್ಲಿನ ನಾಲ್ಕು ಪ್ರಹರಗಳು ರಾತ್ರಿಯಲ್ಲೂ ಇರುತ್ತವೆ. ಹದಿನೈದು ದಿನಗಳು ಒಂದು ಪಕ್ಷವಾಗಿದ್ದು, ಎರಡು ಪಕ್ಷಗಳು ಒಂದು ತಿಂಗಳಾಗುತ್ತವೆ. ಎರಡು ಸೂರ್ಯ ಚಲನೆಗಳು ಉಪದೇವತೆಗಳ ಒಂದು ದಿನ ಹಾಗೂ ರಾತ್ರಿಯಾಗಿದ್ದು, ದಿನ ರಾತ್ರಿಗಳ ಈ ಮಿಶ್ರಣವು ಮಾನವರ ಒಂದು ಪಂಚಾಂಗ ವರ್ಷವಾಗಿರುತ್ತದೆ. ಮಾನವರು ಒಂದು ನೂರು ವರ್ಷಗಳ ಕಾಲಾವಧಿಯನ್ನು ಹೊಂದಿರುತ್ತಾರೆ. ಪ್ರಭಾವೀ ನಕ್ಷತ್ರಗಳು, ಗ್ರಹಗಳು, ತೇಜಸ್ವಿ ವಸ್ತುಗಳು, ಅಣುಗಳು ಜಗತ್ತಿನಾದ್ಯಂತ ಪರಮಾತ್ಮನ ನಿರ್ದೇಶನದ ಅನ್ವಯ ತಮ್ಮ ಕಕ್ಷೆಗಳಲ್ಲಿ ಸುತ್ತುತ್ತಿರುತ್ತವೆ.

ಕಲ್ಪದ ಶ್ರೇಣಿಗೂ ಅತೀತರಾದಂಥ ಉನ್ನತ ಪ್ರಾಜ್ಞತೆಯಿರುವಂಥವರ ಆಯುಷ್ಯವನ್ನು ವಿದುರನು ತಿಳಿಯಲು ಬಯಸಿದ. ಮೈತ್ರೇಯಿಯೆಂದನು: "ನಾಲ್ಕು ಯುಗಗಳನ್ನು ಸತ್ಯ, ತ್ರೇತ, ದ್ವಾಪರ ಮತ್ತು ಕಲಿಯುಗಗಳೆಂದು ಕರೆಯಲಾಗಿದ್ದು ಎಲ್ಲದರ ಒಟ್ಟು ಆಯುಷ್ಯ ಉಪದೇವತೆಗಳ ಹನ್ನೆರಡು ಸಾವಿರ ವರ್ಷಗಳಿಗೆ ಸರಿಸಮನಾದ್ದು, ಸತ್ಯಯುಗ - ನಾಲ್ಕು ಸಾವಿರದ ಎಂಟು ನೂರು ವರ್ಷಗಳು, ತ್ರೇತ - ಮೂರು ಸಾವಿರದ ಆರು ನೂರು ವರ್ಷಗಳು; ದ್ವಾಪರ - ಎರಡು ಸಾವಿರದ ನಾನೂರು ವರ್ಷಗಳು; ಮತ್ತು ಕಲಿ - ಒಂದು ಸಾವಿರದ ಇನ್ನೂರು ವರ್ಷಗಳು.

ಪ್ರತಿಯೊಂದು ಯುಗದ ಮುಂಚಿನ ಹಾಗೂ ಅನಂತರದ ಪರಿವರ್ತನೆಯ ಅವಧಿಯನ್ನು ಯುಗ ಸಂಧ್ಯ ಅಥವಾ ಎರಡು ಯುಗಗಳ ಸಂಧಿಕಾಲವೆನ್ನಲಾಗಿದೆ. ಸತ್ಯಯುಗದಲ್ಲಿ ಮಾನವ ಕೋಟಿಯು ಧಾರ್ಮಿಕ ತತ್ವಗಳನ್ನು ಅನುಸರಿಸಲಿದ್ದರೂ ಇನ್ನುಳಿದ ಯುಗಗಳಲ್ಲಿ ಧರ್ಮವು ಕ್ಷೀಣಿಸುತ್ತದೆ. ಮೂರು ನಿರುಪಾಧಿಕ ವ್ಯವಸ್ಥೆಗಳ ಹೊರಗೆ (ಸ್ವರ್ಗ, ಮರ್ತ್ಯ ಮತ್ತು ಪಾತಾಳ) ಒಂದು ಸಾವಿರದಿಂದ ಗುಣಿಸಲ್ಪಟ್ಟ ನಾಲ್ಕು ಯುಗಗಳು ಬ್ರಹ್ಮನ ಗ್ರಹದ ಮೇಲೆ ಒಂದು ಹಗಲಾಗಿರುತ್ತದೆ. ಜಗತ್ತಿನ ಸೃಷ್ಟಿಕರ್ತನು ನಿದ್ರಿಸುತ್ತಿರುವಾಗ ಇದೇ ಅವಧಿಯ ಕಾಲವು ಒಂದು ರಾತ್ರಿಯಾಗುತ್ತದೆ. ಬ್ರಹ್ಮನ ರಾತ್ರಿ ಕೊನೆಗೊಂಡ ನಂತರ ಮೂರು ಜಗತ್ತುಗಳ ಸೃಷ್ಟಿಯು ಬ್ರಹ್ಮನ ಹಗಲಿನ ಕಾಲದಲ್ಲಿ ಮತ್ತೆ ಪ್ರಾರಂಭವಾಗಿ ಅವು ಹದಿನಾಲ್ಕು ಅನುಕ್ರಮಿಕ ಮನುಗಳು ಅಥವಾ ಮಾನವ ಕುಲದ ಪಿತೃಗಳ ಜೀವಿತ ಕಾಲದುದ್ದಕ್ಕೂ ಅಸ್ತಿತ್ವದಲ್ಲಿರುತ್ತದೆ. ಪ್ರತಿಯೊಬ್ಬ ಮನುವೂ ನಾಲ್ಕು ಯುಗಗಳ ಎಪ್ಪತ್ತೊಂದು ಜೋಡಿಗಳಿಗಿಂತಲೂ ಸ್ವಲ್ಪ ಹೆಚ್ಚಿನ ಜೀವನವನ್ನು ಅನುಭೋಗಿಸುತ್ತಾನೆ. ಪ್ರತಿಯೊಬ್ಬ ಮನುವಿನ ಅಂತ್ಯದ ನಂತರ ಸರದಿಯ ಅನ್ವಯ ಮುಂದಿನ ಮನುವು ತನ್ನ ಸಂತತಿಯೊಂದಿಗೆ ಆಗಮಿಸಿ ಅವರು ವಿವಿಧ ಗ್ರಹಗಳನ್ನು ಆಳುತ್ತಾರಾದರೂ ಏಳು ಪ್ರಖ್ಯಾತ ಮುನಿಗಳು ಹಾಗೂ ಇಂದ್ರನಂಥ ಉಪದೇವತೆ ಮತ್ತು ಗಂಧರ್ವರಂಥ ಅವರ ಅನುಯಾಯಿಗಳು ಮನುವಿನೊಂದಿಗೇ ಏಕಕಾಲದಲ್ಲಿ ಕಾಣಿಸಿಕೊಳ್ಳುತ್ತಾರೆ. ಮನುವಿಗೆ ಸಂಬಂಧಿಸಿದ ಪ್ರತಿಯೊಂದು ಬದಲಾವಣೆಯಲ್ಲೂ ಭಗವಂತನು ತನ್ನ ಆಂತರಿಕ ಸಾಮರ್ಥ್ಯದಿಂದಾಗಿ ಮನು ಮತ್ತು ಇತರರ ವಿವಿಧ

ಅವತಾರಗಳಲ್ಲಿ ಕಾಣಿಸಿಕೊಳ್ಳುತ್ತಾನೆ. ಹೀಗೆ ಪರಮಾತ್ಮನು ಸಂಶೋಧಿಸುವ ಶಕ್ತಿಯೊಂದರಿಂದಾಗಿ ಜಗತ್ತನ್ನು ಪಾಲಿಸುತ್ತಾನೆ. ಸಂಕರ್ಷಣನ ಬಾಯಿಂದ ಹೊರಡುವ ಅಗ್ನಿಯಿಂದಾಗಿ ವಿನಾಶ ಸಂಭವಿಸಿ ಭೃಗುವಿನಂಥ ಉನ್ನತ ಮುನಿಗಳು ಜನಲೋಕಕ್ಕೆ ತೆರಳುತ್ತಾರೆ.

## ವಿನಾಶದ ಚಿಹ್ನೆಗಳು

ವಿನಾಶದ ಪ್ರಾರಂಭದಲ್ಲಿ ಸಮುದ್ರಗಳೆಲ್ಲವೂ ತುಂಬಿ ಹರಿದು, ಅಲೆಗಳು ಕ್ರೂರವಾಗಿ ಮೂರು ಜಗತ್ತುಗಳಲ್ಲೂ ಪ್ರವಾಹವುಂಟಾಗುತ್ತದೆ. ಪರಮಾತ್ಮನು ಅನಂತಶಾಯಿಯಾಗಿ ನೀರಿನಲ್ಲಿ ಮಲಗಿದಾಗ ಜನಲೋಕವಾಸಿಗಳು ತಮ್ಮ ಪ್ರಾರ್ಥನೆಯನ್ನು ಸಲ್ಲಿಸುತ್ತಾರೆ.

ಬ್ರಹ್ಮನ ಜೀವನವು ಎರಡು ಭಾಗಗಳಾಗಿ ವಿಭಜಿಸಲ್ಪಟ್ಟಿದೆ. ಮೊದಲರ್ಧ ಬ್ರಹ್ಮದೇವನು ಕಾಣಿಸಿಕೊಂಡಂಥ ಲೋಕಕ್ಕೆ ಬ್ರಹ್ಮಲೋಕವೆನ್ನಲಾಗಿದೆ. ವೇದಗಳ ಜನನವೂ ಬ್ರಹ್ಮನ ಕಾಲದಲ್ಲೇ ಸಂಭವಿಸಿತು. ದ್ವಿತೀಯಾರ್ಧದ ಅವಧಿಯಲ್ಲಿ ಹೊಕ್ಕಳಿನಿಂದ ಜಗತ್ತಿನ ಕಮಲ ಪುಷ್ಪವು ಬೆಳೆಯುವುದರಿಂದ ಅದಕ್ಕೆ ಪದ್ಮಕಲ್ಪವೆಂದು ಹೆಸರು. ದ್ವಿತೀಯಾರ್ಧದ ಮೊದಲ ಯುಗವನ್ನು ವರಾಹ ಯುಗ ಎಂಬುದಾಗಿ ಹೆಸರಿಸಿರುವುದಕ್ಕೆ ಕಾರಣ-ಭಗವಂತನು ವರಾಹಾವತಾರದಲ್ಲಿ ಕಾಣಿಸಿಕೊಂಡದ್ದು. ಬ್ರಹ್ಮನ ಜೀವನದ ಎರಡು ಭಾಗಗಳ ಅವಧಿಯನ್ನು ಭಗವಂತನ ಒಂದು ನಿಮಿಷವೆಂಬುದಾಗಿ ಲೆಕ್ಕ ಮಾಡಲಾಗಿದೆ. ಶಾಶ್ವತ ಕಾಲವು ನಿಶ್ಚಿತವಾಗಿಯೂ ವಿವಿಧ ಪ್ರಮಾಣಗಳ ನಿಯಂತ್ರಕನಾದ ಭಗವಂತನಿಂದ ನಿಯಂತ್ರಿಸಲ್ಪಟ್ಟಿರುವಂಥದ್ದು. ವಿಶಿಷ್ಟ ಲೌಕಿಕ ಜಗತ್ತಿಗೆ ನಾಲ್ಕು ದಶಲಕ್ಷ ಮೈಲಿಗಳ ಸುತ್ತಳತೆಯು ಇದ್ದು ಒಳಗೆ ಹಾಗೂ ಹೊರಗೆ ಇನ್ನೂ ಹದಿನಾರು ಶ್ರೇಣಿಗಳಾಗಿ ಪರಿವರ್ತನೆಗೊಂಡ ಎಂಟು ಐಹಿಕ ಮೂಲಾಂಶಗಳ ಸಮ್ಮಿಶ್ರಣವಾಗಿದೆ. ಜಗತ್ತುಗಳನ್ನು ಸುತ್ತುವರಿದಿರುವ ಮೂಲಾಂಶಗಳ ಪದರುಗಳಲ್ಲಿ ಈ ಹಿಂದಿನದಕ್ಕಿಂತಲೂ ಹತ್ತರಷ್ಟು ದಪ್ಪನಾಗಿದ್ದು ಜಗತ್ತುಗಳೆಲ್ಲವೂ ಒಟ್ಟಿಗೆ ಸಮೂಹಗೊಂಡಾಗ ಒಂದು ಭಾರಿಯಾದ ಮಿಶ್ರಣದಲ್ಲಿನ ಅಣುಗಳಾಗಿ ತೋರುತ್ತವೆ. ಆದ್ದರಿಂದ ಉನ್ನತ ಸ್ವರೂಪನಾದ ಪರಮಾತ್ಮ-ಅಂದರೆ ಶ್ರೀ ಕೃಷ್ಣಪರಮಾತ್ಮನು ಎಲ್ಲ ಕಾರಣಗಳ ಮೂಲ ಕಾರಣೀಭೂತನು. ಹೀಗೆ ವಿಷ್ಣುವಿನ ದೈವೀಕ ವಾಸಸ್ಥಾನವು ನಿಸ್ಸಂಶಯವಾಗಿಯೂ ಶಾಶ್ವತವಾದ್ದು ಮತ್ತು ಅದು ಎಲ್ಲ ಅವತಾರಗಳಿಗೂ ಮೂಲವಾದ ಮಹಾ ವಿಷ್ಣುವಿನ ವಾಸಸ್ಥಾನವೂ ಸಹ.

## ಅಧ್ಯಾಯ-3

# ಬ್ರಹ್ಮನ ಸೃಷ್ಟಿ

(ಈ ಅಧ್ಯಾಯವು ಬ್ರಹ್ಮ ಮನು ಮತ್ತು ಶತರೂಪರು ಕಾಣಿಸಿಕೊಂಡ ಬಗೆಯನ್ನು ಒಳಗೊಂಡಿದೆ).

ಮೈತ್ರೇಯಿಯು ಮುಂದೆ ಹೇಳಿದನು: ಇಲ್ಲಿಯವರೆಗೂ ನಾನು ಕಾಲನ ರೂಪದಲ್ಲಿನ ಭಗವಂತನ ವೈಭವಗಳನ್ನು ವಿವರಿಸಿದ್ದೇನೆ. ನಾನೀಗ ವೇದಜ್ಞಾನದ ಆಗರನಾದ ಬ್ರಹ್ಮನ ಸೃಷ್ಟಿಯನ್ನು ಕುರಿತು ತಿಳಿಸುತ್ತೇನೆ. ಬ್ರಹ್ಮನು ಮೊದಲು ಸ್ವಯಂ ವಂಚನೆಗೊಳ್ಳುವಿಕೆ, ಮೃತ್ಯುವಿನ ಪ್ರಜ್ಞೆ, ಬೇಗುದಿಯ ನಂತರದ ರೋಷ, ಹುಸಿ ಒಡೆತನದ ಪ್ರಜ್ಞೆ ಮತ್ತು ಶಾರೀರಕ ಭಾವನೆಯ ಬಗೆಗಿನ ಭ್ರಮೆ ಅಥವಾ ಒಬ್ಬನ ನಿಜವಾದ ಗುರುತಿನ ಬಗೆಗಿನ ಮರೆವು ಮುಂತಾದ ಅಜ್ಞೇಯ ಚಟುವಟಿಕೆಗಳನ್ನು ಸೃಷ್ಟಿಸಿದನು. ಬ್ರಹ್ಮನಿಗೆ ಈ ಸೃಷ್ಟಿಯು ಸಂತೋಷವನ್ನು ಉಂಟುಮಾಡಲಿಲ್ಲವಾದ್ದರಿಂದ ತಪಸ್ಸಿನ ಮೂಲಕ ತನ್ನನ್ನೇ ಪರಿಶುದ್ಧಗೂಳಿಸಿಕೊಂಡನು. ಅವನು ಸೃಷ್ಟಿಯ ಮತ್ತೊಂದು ಅವಧಿಯನ್ನು ಪ್ರಾರಂಭಿಸಿದ. ಬ್ರಹ್ಮನು ಇನ್ನೊಂದು ಅವಧಿಯಲ್ಲಿ ಜ್ಞಾನದ ನಾಲ್ಕು ತತ್ವಗಳನ್ನು ಸೃಷ್ಟಿಸಿದ. ಅವೆಂದರೆ 1. ಸಾಂಖ್ಯ - ವಿಭಜನ ಮಾರ್ಗದ ಅಧ್ಯಯನ; 2. ಯೋಗ - ಮೋಕ್ಷಕ್ಕಾಗಿ ಅತೀಂದ್ರಿಯ ಜ್ಞಾನ 3. ವೈರಾಗ್ಯ - ಜೀವನದ ಐಹಿಕ ಆನಂದದಿಂದ ಸಂಪೂರ್ಣ ವಿರಕ್ತಿಯ ಸ್ವೀಕಾರ ; 4. ತಪಸ್ಸು - ದೈಹಿಕ ಪರಿಶುದ್ಧತೆಗಾಗಿ ನಡೆಸಲಾಗುವ ವಿವಿಧ ರೀತಿಯ ಸ್ವಯಂಪ್ರೇರಿತ ಸರಳತೆ. ಬ್ರಹ್ಮನು ಅಧ್ಯಾತ್ಮಿಕ ಮುನ್ನಡೆಯ ಜವಾಬ್ದಾರಿಯನ್ನು ನಿರ್ವಹಿಸಲು ಸನಕ, ಸನಾತನ, ಸಾನಂದ ಮತ್ತು ಸನತ್ಕುಮಾರ ಎಂಬ ನಾಲ್ವರು ಉನ್ನತ ಮುನಿಗಳನ್ನು ಸೃಷ್ಟಿಸಿದನು. ಅವರು ತಮ್ಮದೇ ಆದ ಅಧ್ಯಾತ್ಮಿಕ ಅಥವಾ "ಕುಮಾರ ಸಂಪ್ರದಾಯದವೆಂದು ಹೆಸರಾದ" ಅಥವಾ ಅನಂತರ ಭಕ್ತಿಯ ಮುನ್ನಡೆಗಾಗಿ "ನಿಂಬಾರ್ಕ" ಸಂಪ್ರದಾಯವೆಂದು ಹೆಸರಾದ ಸಂಪ್ರದಾಯವನ್ನು ಪ್ರಾರಂಭಿಸಿದರು. ಈ ಕುಮಾರರು ಊರ್ಧ್ವಮುಖವಾಗಿ ಹರಿಯುತ್ತಿದ್ದ ವೀರ್ಯವನ್ನು ಹೊಂದಿದ್ದರಿಂದ ಅಥವಾ ಊರ್ಧ್ವರೇತರಾಗಿ ಮೇಲ್ಮಟ್ಟಕ್ಕೆ ತರಲ್ಪಟ್ಟವರಾದ್ದರಿಂದ ಐಹಿಕ ಚಟುವಟಿಕೆಗಳನ್ನು ಅಳವಡಿಸಿಕೊಳ್ಳಲು ಸಿದ್ಧರಾಗಿರಲಿಲ್ಲ. ಕುಮಾರರು ಸಂತತಿಯನ್ನು ಸೃಷ್ಟಿಸಲು ಸಿದ್ಧರಾಗಿರಲಿಲ್ಲವಾದರೂ ಮುಕ್ತಿಯಲ್ಲಿ ಆಸಕ್ತರಾಗಿದ್ದರು. ಆದ್ದರಿಂದ ಸಂತತಿಯನ್ನು ಸೃಷ್ಟಿಸಲು ಅವರು ತಮ್ಮ ಅನಿಚ್ಛೆಯನ್ನು ವ್ಯಕ್ತಪಡಿಸಿದರು. ಅನಂತರ ಬ್ರಹ್ಮನು ತುಸು ಕೋಪಗೊಂಡು ಅದನ್ನು ನಿಯಂತ್ರಿಸಿಕೊಳ್ಳಲು ಪ್ರಯತ್ನಿಸಿದನು. ಅವನು ತನ್ನ ಕೋಪವನ್ನು ಹತ್ತಿಕ್ಕಲು ಪ್ರಯತ್ನಿಸಿದರೂ ಅದು ಅವನ ಹುಬ್ಬುಗಳ ಮಧ್ಯದಿಂದ ಹೊರಬಂದು ಆ ಕ್ಷಣದಲ್ಲೇ ನೀಲಿ ಮತ್ತು ಕೆಂಪು ಬಣ್ಣಗಳ ಮಿಶ್ರಣದ ಶಿಶುವೊಂದು ಹೊರಬಂದಿತು. "ನೀಲಿ" ಮಾಧ್ಯ ಪ್ರತಿನಿಧಿಸಿದರೆ "ಕೆಂಪು" ಕಾಮದ ಪ್ರತೀಕ. ಹೀಗೆ ರುದ್ರನ ಜನನವಾಯಿತು. ತನ್ನ ಜನನದ ನಂತರ ರುದ್ರನು ಹೀಗೆ ಪರಿತಪಿಸಲು ಪ್ರಾರಂಭಸಿದನು; ಎಲೈ ಕರ್ಮದೈವನೇ, ಜಗತ್ತಿನ ಗುರುವೇ, ನನ್ನ ನಾಮಧೇಯ ಮತ್ತು ಸ್ಥಳವನ್ನು ಸೂಚಿಸುವಂಥವನಾಗು. ಬ್ರಹ್ಮನೆಂದ : "ರೋದಿಸದಿರು.

ನಾನು ನಿಶ್ಚಯವಾಗಿಯೂ ನಿನ್ನ ಇಚ್ಛೆಯಂತೆಯೇ ಮಾಡುತ್ತೇನೆ. ನೀನು ಇಷ್ಟು ಆತಂಕದಿಂದ ರೋದಿಸಿರುವುದರಿಂದ ಸರ್ವ ಜನರು ನಿನ್ನನ್ನು ರುದ್ರನೆಂದು ಕರೆಯುತ್ತಾರೆ. ಬ್ರಹ್ಮನು ಮುಂದೆ ರುದ್ರನ ವಾಸಕ್ಕಾಗಿ ಸ್ಥಳಗಳನ್ನು ಆಯ್ಕೆ ಮಾಡಲಾಯಿತೆಂದು ಹೇಳಿದನು. ಅವೆಂದರೆ : ಹೃದಯ, ಇಂದ್ರಿಯಗಳು, ಜೀವವಾಯು, ಗಗನ, ಗಾಳಿ, ಅಗ್ನಿ, ಜಲ, ಭೂಮಿ, ಸೂರ್ಯ, ಚಂದ್ರ ಮತ್ತು ಸರಳತೆ. ರುದ್ರನಿಗೆ ಇತರ ಹೆಸರುಗಳನ್ನು ನೀಡಲಾಯಿತು. ಅವೆಂದರೆ ಮನು, ಮಹಿನಾಸ, ಮಹಾನ್, ಶಿವ, ಋತಧ್ವಜ, ಉಗ್ರರೇತ, ಭಾವ, ಕಾಲ, ವಾಮದೇವ ಮತ್ತು ಧೃತವುತ. ಅವನಿಗೆ ಹನ್ನೆರಡು ಪತ್ನಿಯರಿರುತ್ತಾರೆ. ಜನಸಂಖ್ಯೆಯನ್ನು ಹೆಚ್ಚಿಸುವಂತೆ ರುದ್ರನಿಗೆ ತಿಳಿಸಲಾಯಿತು. ಅವನು ರೂಪ ಹಾಗೂ ಶಕ್ತಿಯಲ್ಲಿ ನಿಖರವಾಗಿ ತನ್ನನ್ನೇ ಹೋಲುವಂಥ ಅನೇಕ ಮಕ್ಕಳನ್ನು ಸೃಷ್ಟಿಸಿದನು. ಮಕ್ಕಳು ಒಟ್ಟಿಗೆ ಕಲೆತಾಗ ಜಗತ್ತನ್ನು ಮುಕ್ಕಲು ಪ್ರಯತ್ನಿಸಿದರು. ಆದ್ದರಿಂದ ಬ್ರಹ್ಮನು ಮೊದಲು ಸೃಷ್ಟಿಸಿದಂಥ ಜೀವಿಗಳನ್ನು ಸೃಷ್ಟಿಸದಿರುವಂತೆ ರುದ್ರನಿಗೆ ಸಲಹೆ ಮಾಡಿದನು. ಆದ್ದರಿಂದ ರುದ್ರನಿಗೆ ತಪಸ್ಸನ್ನು ಆಚರಿಸುವಂತೆ ತಿಳಿಸಿ ಅದರ ಮೂಲಕ ಮೊದಲಿದ್ದ ಜಗತ್ತನ್ನು ಸೃಷ್ಟಿಸಲು ಸಾಧ್ಯವಾಯಿತು. ಅನಂತರ ರುದ್ರನು ಕಠಿಣ ತಪಸ್ಸುಗಳನ್ನು ಆಚರಿಸಿಲು ಅರಣ್ಯವನ್ನು ಪ್ರವೇಶಿಸಿದನು.

ಭಗವಂತನಿಂದ ಅಧಿಕಾರವನ್ನು ಪಡೆದ ಬ್ರಹ್ಮನಿಗೆ ಜೀವಿಗಳನ್ನು ಸೃಷ್ಟಿಸುವ ಆಲೋಚನೆಯುಂಟಾದಾಗ ಮುಂದಿನ ಸಂತತಿಗಾಗಿ ಹತ್ತು ಪುತ್ರರನ್ನು ಪಡೆದನು. ಅವರೆಂದರೆ: ಮರೀಚಿ, ಅತ್ರಿ, ಅಂಗೀರ, ಪುಲಸ್ತ್ಯ, ಪುಲಹ, ಕೃತ, ಭೃಗು, ವಸಿಷ್ಠ, ದಕ್ಷ ಹಾಗೂ ಹತ್ತನೆಯವನಾದ ನಾರದ. ನಾರದನು ಅವನ ಶರೀರದ ಅತ್ಯುತ್ತಮ ಭಾಗವಾದ ನಡಾವಳಿಗಳಿಂದ ಜನಿಸಿದನು. ಮರೀಚಿಯು ಬುದ್ಧಿಯಿಂದ, ಅತ್ರಿಯು ನೇತ್ರಗಳಿಂದ, ಅಂಗೀರನು ಬಾಯಿಯಿಂದ, ಪುಲಸ್ತ್ಯನು ಕಿವಿಗಳಿಂದ, ಪುಲಹನು ಹೊಕ್ಕಳಿನಿಂದ, ಕೃತನು ಹಸ್ತದಿಂದ, ಭೃಗು ಸ್ಪರ್ಶದಿಂದ, ವಸಿಷ್ಠನು ಉಸಿರಾಟದಿಂದ ಹಾಗೂ ದಕ್ಷನು ಹೆಬ್ಬೆರಳಿನಿಂದ ಜನಿಸಿದರು. ಧರ್ಮವು ಭಗವಂತನ ಪ್ರೀತವಾದ ಬ್ರಹ್ಮನ ಎದೆಯಿಂದ ಸಾಕಾರಗೊಂಡು ಅಧರ್ಮವು ಬೆನ್ನಿನಿಂದುಂಟಾಯಿತು. ಹೃದಯದಿಂದ ಕಾಮ ಮತ್ತು ಆಸೆ, ಹಲ್ಲುಗಳಿಂದ ಕೋಪ, ತುಟಿಗಳ ಮಧ್ಯದಿಂದ ದುರಾಸೆ, ಬಾಯಿಯಿಂದ ವಾಕ್‌ಶಕ್ತಿ, ಶಿಶ್ನದಿಂದ ಸಾಗರಗಳು ಮತ್ತು ಅಸನ ದ್ವಾರದಿಂದ ಕೀಳು ಹಾಗೂ ಬಾಹಿರ ಚಟುವಟಿಕೆಗಳು ಕಾಣಿಸಿಕೊಂಡವು. ದೇವಾಹುತಿಯ ಪತಿಯಾದ ಕರ್ದಮ ಮುನಿಯು ಬ್ರಹ್ಮನ ನೆರಳಿನಿಂದ ರೂಪು ತಳೆದನು. ಎಲ್ಲರೂ ಬ್ರಹ್ಮನ ಶರೀರ ಅಥವಾ ಬುದ್ಧಿಯಿಂದ ಹುಟ್ಟಿಕೊಂಡವರು. ಬ್ರಹ್ಮನಿಗೆ ತನ್ನ ಶರೀರದಿಂದ ಹುಟ್ಟಿದ ವಾಕ್ ಎಂಬ ಪುತ್ರಿಯಿದ್ದು ಅವಳು ಲೈಂಗಿಕತೆಯ ಬಗ್ಗೆ ಅವನ ಬುದ್ಧಿಯನ್ನು ಆಕರ್ಷಿಸಿದಳಾದರೂ ವಾಕ್ ಒಪ್ಪಲಿಲ್ಲ. ಹೀಗೆ ತಮ್ಮ ತಂದೆ ಅನೈತಿಕವಾದೊಂದು ಕಾರ್ಯದಲ್ಲಿ ಮುಳುಗಿದ್ದನ್ನು ಕಂಡಾಗ, ಮರೀಚಯ ನೇತೃತ್ವದಲ್ಲಿನ ಮುನಿಗಳು ಬ್ರಹ್ಮನ ಕ್ರಿಯೆಯನ್ನು ಖಂಡಿಸುವಂಥ ಭಾಷೆಯಲ್ಲಿ ಅವನೊಂದಿಗೆ ಮಾತನಾಡಿದರು. ಬ್ರಹ್ಮನು ನಾಚಿಕೆಗೊಂಡು ತಾನು ಅಂಗೀಕರಿಸದಂಥ ತನ್ನ ಶರೀರವನ್ನು ಬಿಟ್ಟುಕೊಟ್ಟನು. ಅನಂತರ ಶರೀರವು ಕತ್ತಲಿನಲ್ಲಿ ಅಪಾಯಕಾರಿ ಮಂಜಿನಂತೆ ಎಲ್ಲ ದಿಕ್ಕುಗಳಲ್ಲೂ ಕಾಣಿಸಿಕೊಂಡಿತು.

ಬ್ರಹ್ಮನ ನಾಲ್ಕು ಬಾಯಿಗಳಿಂದ ನಾಲ್ಕು ವೇದಗಳು ಹುಟ್ಟಿಕೊಂಡವು. ವೇದಗಳು ಮೊದಲು ಬ್ರಹ್ಮನಿಗೆ ವೇದ್ಯವಾದವು. ಬ್ರಹ್ಮನ ಮುಂದಿನ ಮುಖದಿಂದ ಪ್ರಾರಂಭವಾಗಿ ಕ್ರಮೇಣ ನಾಲ್ಕು ವೇದಗಳು ರೂಪು ತಳೆದವು. ವೇದಗಳು ಜ್ಞಾನದ ಮೂಲ, ಅನಂತರ ಪೌರೋಹಿತ್ಯ ವಿಧಿಗಳಿಗೆ ಮುನ್ನ ಪಠಿಸದೆ ಇರದಿದ್ದಂಥ ವೇದಗಳು - ಪಠನದ ಪಠ್ಯಗಳು ಮತ್ತು ಅತಿಶಯ ಚಟುವಟಿಕೆಗಳು ಒಂದಾದ ಮೇಲೊಂದರಂತೆ ಸ್ಥಾಪಿತಗೂಂಡವು. ಬ್ರಹ್ಮನು ನಾಲ್ಕು ವೇದಗಳನ್ನು ಸ್ಥಾಪಿಸಿದ ರೀತಿಯನ್ನು ಕುರಿತು ವಿದುರನ ಪ್ರಶ್ನೆಗೆ ಉತ್ತರವಾಗಿ ಮೈತ್ರೇಯಿ ಈ ಮಾಹಿತಿಯನ್ನು ನೀಡಿದನು. ಬ್ರಹ್ಮನು ವೇದಗಳ ಮೂಲಕವೇ ವೈದ್ಯಕೀಯ ವಿಜ್ಞಾನ, ಸೈನ್ಯಕಲೆ, ಸಂಗೀತ ಕಲೆ ಹಾಗೂ ವಾಸ್ತುಶಿಲ್ಪ ವಿಜ್ಞಾನವನ್ನು ಸೃಷ್ಟಿಸಿದನು. ಅವೆಲ್ಲವೂ ಒಂದಾದನಂತರ ಒಂದರಂತೆ ಮುಂಭಾಗದ ಮುಖದಿಂದ ಹೊಮ್ಮಿತು, ಅನಂತರ ಅವನು ಭೂತ, ವರ್ತಮಾನ ಹಾಗೂ ಭವಿಷ್ಯತ್ ಕಾಲಗಳನ್ನು ಕಾಣಬಲ್ಲವನಾದ್ದರಿಂದ ಪುರಾಣಗಳನ್ನು ಮತ್ತು ಇತಿಹಾಸಗಳನ್ನು-ಐದನೇ ವೇದವೆಂದು ಕರೆಯಲ್ಪಟ್ಟದ್ದನ್ನು ತನ್ನೆಲ್ಲ ಬಾಯಿಗಳಿಂದ ಸೃಷ್ಟಿಸಿದ. ಪೂರ್ವದಿಕ್ಕಿನ ಬಾಯಿಯಿಂದ ಅಗ್ನಿವಿಧಿಗಳು ರೂಪು ತಳೆದವು.

ಶಿಕ್ಷಣ, ದಾನ, ತಪಸ್ಸು ಮತ್ತು ಸತ್ಯವನ್ನು ಧರ್ಮದ ನಾಲ್ಕು ಕಾಲುಗಳೆಂದು ಹೇಳಲಾಗಿದ್ದು ಇದನ್ನು ಕಲಿಯಲು ವೃತ್ತಿಗೆ ಅನುಸಾರವಾಗಿ ವಿವಿಧ ಜಾತಿಗಳ ಶ್ರೇಣಿಗಳ ಕೆಳಗೆ ನಾಲ್ಕು ವ್ಯವಸ್ಥೆಗಳಿವೆ.

ಬ್ರಹ್ಮನು ಅನಂತರ ಬ್ರಾಹ್ಮಣರಿಗಾಗಿ ಉಪನಯನ ಮಹೋತ್ಸವದ ಆಚರಣೆಯನ್ನು ಸೃಷ್ಟಿಸಿದನು. ಅಲ್ಲದೆ ವೇದಗಳನ್ನು ಅಂಗೀಕರಿಸಿದ ನಂತರ ಕನಿಷ್ಟಪಕ್ಷ ಒಂದು ವರ್ಷದ ಕಾಲ ಆಚರಿಸಬೇಕಾದ ನಿಯಮಗಳು, ವೈದಿಕ ಕಟ್ಟಳೆಗಳಿಗೆ ಸಂಬಂಧಿಸದಂತೆ ವೃತ್ತಿಗಳು, ಗೃಹಸ್ತ ಜೀವನದಲ್ಲಿ ಕೈಗೊಳ್ಳಬೇಕಾದ ವಿವಿಧ ವೃತ್ತಿಪರ ಕರ್ತವ್ಯಗಳು, ನಿರಾಕರಿಸಲ್ಪಟ್ಟ ಧಾನ್ಯಗಳನ್ನು ಆರಿಸಿಕೊಳ್ಳುವ ಮೂಲಕ ಯಾರ ಸಹಕಾರವೂ ಇಲ್ಲದೆ ಜೀವನೋಪಾಯವನ್ನು ಕಲ್ಪಿಸಿಕೊಳ್ಳುವ ವಿಧಾನ ಇವನ್ನೂ ಸೃಷ್ಟಿಸಿದನು. ಪರಿತ್ಯಕ್ತ ಜೀವನದ ವಿಧಾನಗಳೆಂದರೆ ಕುಟಿಚಕಾಸ, ಬಹವೋದಾಸ, ಹಂಸಾಸ ಮತ್ತು ನಿಷ್ಕ್ರೀಯಾಸ. ಇವೆಲ್ಲವೂ ಬ್ರಹ್ಮನಿಂದ ರೂಪುಗೊಂಡವು. ತರ್ಕಶಾಸ್ತ್ರ, ಜೀವನದ ವೈದಿಕ ಗುರಿಗಳು, ಕಾನೂನು ಮತ್ತು ವ್ಯವಸ್ಥೆ, ನೈತಿಕ ನಿಯಮಗಳು ಹಾಗೂ ಭೂ, ಭುವಹ ಮತ್ತು ಸ್ವಾಹಾ - ಈ ಪವಿತ್ರ ಮಂತ್ರಗಳು, ಬ್ರಹ್ಮನ ಬಾಯಿಯಿಂದ ಸಾಕಾರಗೊಂಡ ಪ್ರಣವ "ಓಂಕಾರ" ಅಂದರೆ "ಓಂ" ಅವನ ಹೃದಯದಿಂದ ಜನಿಸಿತು. ಸರ್ವಶಕ್ತ ಪ್ರಜಾಪತಿಯ ಶರೀರದ ಮೇಲಿನ ರೋಮದಿಂದ ಉಸ್ನಿಕ ಅಂದರೆ ಅಕ್ಷರ ವಿದ್ಯೆ ಹೊಮ್ಮಿತು. ಪ್ರಮುಖ ವೈದಿಕ ಮಂತ್ರವಾದ ಗಾಯತ್ರಿಯು ತ್ವಚೆಯಿಂದ, ಮಾಂಸದಿಂದ ತ್ರಿಷ್ಟುಪ, ನಾಳಗಳಿಂದ ಅನುಷ್ಟುಪ ಮತ್ತು ಜೀವಿಗಳ ಒಡೆಯ ಪ್ರಜಾಪತಿಯ ಮೂಳೆಗಳಿಂದ ಜಾಗತಿಯು ಹುಟ್ಟಿಕೊಂಡಿತು. ಬ್ರಹ್ಮನ ಆತ್ಮವು ಸ್ಪರ್ಶಾಕ್ಷರಗಳಾಗಿ-ಅಂದರೆ 'ಕಾ' ದಿಂದ 'ಮಾ' ವರೆಗಿನ ಅಕ್ಷರಗಳು-ರೂಪುಗೊಂಡವು. ಅವನ ಶರೀರವು ಸ್ವರಗಳಾಗಿ, ಅವನ ಇಂದ್ರಿಯಗಳು ಊಷ್ಮ ಅಕ್ಷರಗಳಾಗಿ ಹಾಗೂ

ಅವನ ಶಕ್ತಿಯು ಮಧ್ಯದಲ್ಲಿನ ಅಕ್ಷರಗಳಾಗಿ ಹಾಗೂ ಅವನ ಇಂದ್ರಿಯ ಚಟುವಟಿಕೆಗಳು ಸಂಗೀತದ ತಾಳ ನುಡಿಗಳಾದವು.

ಸಮಾಸಗಳಲ್ಲಿ ಮೂರು 'ಸ' ಗಳಿದ್ದು ಅವನ್ನು ತಾಳವ್ಯ, ಮೂರ್ಧವ್ಯ ಮತ್ತು ದಂತವ್ಯವೆಂದು ಕರೆಯಲಾಗಿದೆ. ಸಂಗೀತ ನುಡಿಗಳೆಂದರೆ ಸ,ರಿ,ಗ,ಮ,ಪ ಮುಂತಾದವು. ಈ ಎಲ್ಲ ಶಬ್ದ ತರಂಗಗಳನ್ನು ಮೂಲವಾಗಿ ಶಬ್ದ ಬ್ರಹ್ಮ ಅಥವ ದೈವಿಕ ಶಬ್ಧಗಳೆಂಬುದಾಗಿ ಕರೆಯಲಾಗಿತ್ತು. ಮಹಾಕಲ್ಪದಲ್ಲಿ ಬ್ರಹ್ಮನನ್ನು ದೈವೀಕ ನಾದದ ಅವತಾರವೆಂದು ಕರೆಯಲಾಗಿದೆ. ಬ್ರಹ್ಮನು ಭಗವಂತನ ವೈಯಕ್ತಿಕ ಪ್ರತಿನಿಧಿ. ಅವನು ಸಂಪೂರ್ಣ ಸತ್ಯದ ಸಂಪೂರ್ಣ ರೂಪ ಮತ್ತು ವೈವಿಧ್ಯಮಯ ಶಕ್ತಿಗಳನ್ನು ಹೊಂದಿರುವವನು. ಅನಂತರ ಬ್ರಹ್ಮನು ಮತ್ತೊಂದು ಶರೀರವನ್ನು ಅಂಗೀಕರಿಸಿ ಅದರಲ್ಲಿ ಲೈಂಗಿಕ ಜೀವನಕ್ಕೆ ನಿಷೇಧವಿರದದ್ದರಿಂದ ಅವನು ಮುಂದಿನ ಸೃಷ್ಟಿಯಲ್ಲಿ ತೊಡಗಿದನು. ಬ್ರಹ್ಮನಿಗೆ ಸೃಷ್ಟಿಯ ವೇಗದ ಬಗ್ಗೆ ಸಂತೋಷವಾಗಲಿಲ್ಲ. ಅವನು ಆಲೋಚನಾ ಮಗ್ನನಾಗಿದ್ದಾಗ ಧ್ಯಾನ ಮಧ್ಯದಲ್ಲಿ ಹಾಗೂ ಅತೀಂದ್ರಿಯ ಶಕ್ತಿಯನ್ನು ಅನುಸರಿಸಿದಾಗ ಅವನ ಶರೀರದಿಂದ ಇನ್ನೆರಡು ರೂಪಗಳು ಸೃಷ್ಟಿಗೊಂಡವು (ಬ್ರಹ್ಮನ ಶರೀರದಿಂದ ಎರಡು ಶರೀರಗಳು ಹೊರಬಂದವು. ಒಂದಕ್ಕೆ ಮೀಸೆಯಿದ್ದು ಮತ್ತೊಂದಕ್ಕೆ ಉಬ್ಬಿದ ಮೊಲೆಗಳಿದ್ದವು. ಅವೆರಡನ್ನು ಜೋಡಿಸಿದಾಗ ಲೈಂಗಿಕ ಸಂಬಂಧವೇರ್ಪಟ್ಟಿತು. ಅವೆರಡರಲ್ಲಿ ಒಂದನ್ನು ಸ್ವಯಂಭುವೆಂದು ಹೆಸರಿಸಲಾಗಿದ್ದು ಮತ್ತೊಂದು ಮನುವಿನ ಉನ್ನತಾತ್ಮಕ ಅರಸಿಯಾದ ಶತರೂಪಳೆಂದು ಹೆಸರಾದ ಸ್ತ್ರೀ).

ಮನು ಹಾಗು ಶತರೂಪರಿಗೆ ಇಬ್ಬರು ಪುತ್ರರು ಹಾಗು ಮೂವರು ಪುತ್ರಿಯರು ಜನಿಸಿದರು. ಅವರೆಂದರೆ ಪ್ರಿಯವ್ರತ ಮತ್ತು ಉತ್ತಾನಪಾದನೆಂಬ ಪುತ್ರರು ಹಾಗೂ ಅಕುತಿ, ದೇವಾಹುತಿ ಮತ್ತು ಪ್ರಸೂತಿಯೆಂಬ ಪುತ್ರಿಯರು. ಈ ಪುತ್ರಿಯರು ಕ್ರಮವಾಗಿ ರುಚಿ, ಕರ್ದಮ ಮತ್ತು ದಕ್ಷರೆಂಬುವರನ್ನು ವಿವಾಹವಾದರು. ಅವರಿಂದ ಜಗತ್ತು ಜನರಿಂದ ತುಂಬಿಹೋಯಿತು.

ಅತ್ಯಂತ ಒಲವಿನ ಪತ್ನಿಯನ್ನು ಪಡೆದ ನಂತರ ಸ್ವಯಂಭು ಏನು ಮಾಡಿದನೆಂಬುಧಾಗಿ ಅರಸನು ತಿಳಿಯ ಬಯಸಿದನು. ಅವನು ಮೈತ್ರೇಯಿಯನ್ನು ಮನುವಿನ ಉದಾತ್ತಗುಣ ಮತ್ತು ಚಟುವಟಿಕೆಗಳನ್ನು ವಿವರಿಸುವಂತೆ ವಿನಂತಿಸಿಕೊಂಡನು.

## ಮನು ಮತ್ತು ಶತರೂಪ

ಸ್ವಯಂಭು ಮನು ಮತ್ತು ಶತರೂಪರು ಬ್ರಹ್ಮನನ್ನು ಉದ್ದೇಶಿಸಿ ಬ್ರಹ್ಮನಿಗೆ ತಾವು ಹೇಗೆ ಸೇವೆ ಸಲ್ಲಿಸಬೇಕೆಂಬುದರ ಬಗ್ಗೆ ಹಾಗೂ ತಮ್ಮ ಕಾರ್ಯ ಸಾಮರ್ಥ್ಯಕ್ಕೆ ಅನುಗುಣವಾಗಿ ನಡೆಸಬಹುದಾದ ಸೇವೆಯನ್ನು ಮಾಡುವ ಮೂಲಕ ವರ್ತಮಾನ ಜೀವನದಲ್ಲಿ ಖ್ಯಾತಿಯನ್ನು ಹಾಗೂ ಭವಿಷ್ಯದಲ್ಲಿ ಮುನ್ನಡೆಯನ್ನು ಸಾಧಿಸಲು ವಿವರಗಳನ್ನು ಉಪದೇಶಿಸಬೇಕೆಂದು ಕೇಳಿಕೊಂಡರು. ಬ್ರಹ್ಮನು ಅವರಿಗೆ ಮಕ್ಕಳನ್ನು ಪಡೆಯಬೇಕೆಂದು,

ಯಜ್ಞದ ಮೂಲಕ ಭಗವಂತನಿಗೆ ಭಕ್ತಿಪೂರ್ವಕ ಸೇವೆಯನ್ನು ಸಲ್ಲಿಸಿ ಅವರನ್ನು ಆರಾಧಿಸುವಂಥ ತತ್ವಗಳನ್ನು ಮುಂದುವರಿಸಲು ಜಗತ್ತನ್ನು ಆಳಬೇಕೆಂದು ತಿಳಿಸಿದನು. ಮನುವು ಅವನ ಆಜ್ಞೆಯನ್ನು ಪಾಲಿಸುವುದಾಗಿ ವಚನವಿತ್ತರೂ ತನ್ನ ಹಾಗೂ ತನಗೆ ಹುಟ್ಟಲಿರುವ ಜೀವಿಗಳ ಸ್ಥಾನವನ್ನು ತಿಳಿದುಕೊಳ್ಳಲು ಬಯಸಿದನು. ಉನ್ನತ ಸಾಗರದಲ್ಲಿ ಮುಳುಗಿರುವ ಭೂಮಿಯು ಎಲ್ಲ ಜೀವಿಗಳ ಅವಾಸಸ್ಥಾನವಾಗ ಬೇಕಾದ್ದರಿಂದ ಅದನ್ನು ಮೇಲೆತ್ತುವಂತೆಯೂ ಅವನು ಭಗವಂತನನ್ನು ಪ್ರಾರ್ಥಿಸಿದನು.

ಬ್ರಹ್ಮನು ನೀರಿನಲ್ಲಿ ಮುಳುಗಿರುವ ಭೂಮಿಯನ್ನು ಹೇಗೆ ಮೇಲೆತ್ತಬೇಕೆಂಬುದರ ಬಗ್ಗೆ ಗಮನವನ್ನು ಹರಿಸಿದನೆಂದು ಮೈತ್ರೇಯನು ವಿದುರನಿಗೆ ತಿಳಿಸಿದನು. ತಾನು ಸೃಷ್ಟಿಯ ಕ್ರಿಯೆಯಲ್ಲಿ ತೊಡಗಿದ್ದಾಗ ವಿನಾಶವೊಂದರಿಂದಾಗಿ ಭೂಮಿಯು ಪ್ರವಾಹದಿಂದಾಗಿ ಸಾಗರದ ಆಳಗಳಿಗೆ ಹೋಗಿದೆ ಎಂಬುದಾಗಿ ಬ್ರಹ್ಮನು ಭಾವಿಸಿದನು. ಆದ್ದರಿಂದ ಅವನು ಭಗವಂತನನ್ನು ಸಮೀಪಿಸಿದನು. ಬ್ರಹ್ಮನು ಆಳವಾದ ಆಲೋಚನೆಯಲ್ಲಿ ಮುಳುಗಿದ್ದಾಗ ಅವನ ಹೆಬ್ಬೆಟ್ಟಿನ ಮೇಲ್ಭಾಗದಷ್ಟೇ ಗಾತ್ರದ ಹಂದಿಯ ಸಣ್ಣ ಆಕೃತಿಯು ಅವನ ಮೂಗಿನ ಹೊಳ್ಳೆಯಿಂದ ಹೊರಬಂದಿತು. ಹಂದಿಯು ಆಕಾಶದಲ್ಲಿ ಉನ್ನತ ದೈತ್ಯಾಕಾರದ ರೂಪದಲ್ಲಿ ನಿಂತಿತು. ಬ್ರಹ್ಮ ಹಾಗೂ ಅವನ ಪುತ್ರರು ಗಗನದಲ್ಲಿ ಕಾಣಿಸಿಕೊಂಡ ಹಂದಿಯ ಶ್ವೇತ ಆಕೃತಿಯ ಬಗ್ಗೆ ವಾದದಲ್ಲಿ ತೊಡಗಿದ್ದರು. ಹಂದಿಯು ಆರ್ಭಟಿಸುತ್ತಾ ಚೀತ್ಕರಿಸುತ್ತಿತ್ತು. ಹಂದಿ ನೀರನ್ನು ಪ್ರವೇಶಿಸಿ, ಭಗವಂತನೊಂದಿಗೆ ಕಾದಾಡಲು ಪ್ರಯತ್ನಿಸುತ್ತಿದ್ದ ಹಿರಣ್ಯಾಕ್ಷನನ್ನು ಕೊಂದ ನಂತರ ಭೂಮಿಯನ್ನು ಮೇಲೆತ್ತಿತ್ತು, ಅಲ್ಲಿ ನೆರೆದ್ದಿದ್ದವರೆಲ್ಲ ಭಗವಂತನನ್ನು ಕೊಂಡಾಡಿ ಚರಾಚರರಿಗೆ ವಾಸಸ್ಥಾನವನ್ನು ಕಲ್ಪಿಸುವ ಉದ್ದೇಶಕ್ಕಾಗಿ ಮೀಸಲಾದ ಭೂಮಿಯನ್ನು ಭಗವಂತನ ಪತ್ನಿಯೆಂದು ಕರೆದರು. ಭಗವಂತನು ಭೂಮಿಯನ್ನು ನೀರಿನ ಮೇಲಿಟ್ಟನು. ಈ ರೀತಿಯಾಗಿ ಭಗವಂತನು ಭೂಮಿಯನ್ನು ನೀರಿನಿಂದ ಮೇಲೆತ್ತಿ ಅದನ್ನು ನೀರಿನ ಮೇಲೆ ತೇಲಾಡುವಂತಿಟ್ಟು ತನ್ನ ವಾಸಸ್ಥಾನಕ್ಕೆ ಹಿಂತಿರುಗಿದನು.

ಭಗವಂತನ ಹಂದಿಯ ಅವತಾರವನ್ನು ಕುರಿತು ಆಲಿಸಿದ ನಂತರ ವಿದುರನು ಮೈತ್ರೇಯನನ್ನು ಭಗವಂತನ ಅತಿಶಯ ಚಟುವಟಿಕೆಗಳನ್ನು ಉಲ್ಲೇಖಿಸುವುದನ್ನು ಮುಂದುವರಿಸಬೇಕೆಂದು ಪ್ರಾರ್ಥಿಸಿದನು. ಹಿರಣ್ಯಾಕ್ಷನೆಂಬ ರಾಕ್ಷಸನನ್ನು ಭಗವಂತನು ಹಂದಿಯ ರೂಪದಲ್ಲೇ ಸಂಹರಿಸಿದ ಬಗ್ಗೆ ತಾನು ಕೇಳುವುದಾಗಿ ಅವನು ತಿಳಿಸಿದನು. ಅದಕ್ಕೆ ಮೈತ್ರೇಯನು ತಾನು ಹಂದಿಯಾಗಿ ಭಗವಂತ ಮತ್ತು ಹಿರಣ್ಯಾಕ್ಷನೆಂಬ ರಾಕ್ಷಸರ ಮಧ್ಯದಲ್ಲಿನ ಕಾಳಗದ ಇತಿಹಾಸವನ್ನು ಕೇಳಿರುವುದಾಗಿ ಹೇಳಿದನು. ಈ ಕಥೆಯು ಹೀಗಿದೆ.

ದಿತಿಯ ಗರ್ಭ ಮುಂದುವರೆದಾಗ ಜಗತ್ತಿನ ಕತ್ತಲು ಎಲ್ಲ ದಿಕ್ಕುಗಳಿಗೂ ವಿಸ್ತರಿಸಿತು. ಉಪದೇವತೆಗಳು ಚಿಂತಾಕ್ರಾಂತರಾಗಿ ಭಗವಂತನನ್ನು ಪ್ರಾರ್ಥಿಸಿದರು. ಅವರು ಬ್ರಹ್ಮನನ್ನೂ ಪ್ರಾರ್ಥಿಸಿದರು. ದಿತಿಯ ಗರ್ಭವು ಜಗತ್ತಿನಾದ್ಯಂತ ಕತ್ತಲೆ ಆವರಿಸುವಂತೆ ಮಾಡಿತು.

ಬ್ರಹ್ಮನು ನಂತರ ಉಲ್ಲೇಖಿಸಿದನು : ಬುದ್ಧಿಯಿಂದ ಜನಿಸಿದಂಥ ನನ್ನ ನಾಲ್ವರು ಪುತ್ರರಾದ ಸನಕ, ಸನಾತನ, ಸನಂದನ ಮತ್ತು ಸನತ್ಕುಮಾರರು ಜಗತ್ತಿನೆಲ್ಲೆಡೆ ಸಂಚರಿಸಿದರು. ಭೂ ಒಡೆಯನನ್ನು ಕಾಣಲು ಅವರು ವೈಕುಂಠಕ್ಕೆ ತೆರಳಿದರು. ವೈಕುಂಠದಲ್ಲಿನ ನಿವಾಸಿಗಳು ಫಲಾಪೇಕ್ಷೆಯಿಲ್ಲದೆಯೇ ಭಗವಂತನ ಭಕ್ತಿಪೂರ್ವಕ ಸೇವೆಯಲ್ಲಿ ತೊಡಗಿರುತ್ತಾರೆ. ಅಲ್ಲಿ , ವೈಕುಂಠದಲ್ಲಿ ಪರಮಾತ್ಮನು ವಾಸವಾಗಿದ್ದಾನೆ." ಬ್ರಹ್ಮನು ಇಡೀ ವೈಕುಂಠ ಗ್ರಹವನ್ನು ವಿವರಿಸಿದನು. ವೈಕುಂಠವನ್ನು ತಲಪಿದ ನಾಲ್ವರು ಕುಮಾರರು ಸಂತಸವನ್ನು ಅನುಭವಿಸಿದರು. ಭಗವಂತನ ನಿವಾಸವಾದ ವೈಕುಂಠಪುರಿಯ ಆರು ದ್ವಾರಗಳನ್ನು ಅಲಂಕರಿಸಿರುವ ರೀತಿಯನ್ನು ಕಂಡು ಅವರು ಚಕಿತರಾಗದಿದ್ದರೂ ಏಳನೇ ದ್ವಾರದಲ್ಲಿ ಒಂದೇ ವಯಸ್ಸಿನ, ದಂಡಗಳಿಂದ ಸಜ್ಜಿತರಾದ ಹಾಗೂ ಬೆಲೆ ಬಾಳುವ ಆಭರಣಗಳು, ಕರ್ಣಕುಂಡಲಗಳು, ವಜ್ರಗಳು, ಶಿರಸ್ತ್ರಾಣ, ಇತ್ಯಾದಿಯನ್ನು ಹೊಂದಿದ್ದ ಪ್ರಕಾಶಮಾನರಾದ ಇಬ್ಬರನ್ನು ಕಂಡರು. ಈ ದ್ವಾರಪಾಲಕರು ಮುನಿಗಳಿಗೆ ಸಲ್ಲದ್ದನ್ನು ಮಾಡದಿದ್ದರೂ ಅವರ ಹಾದಿಗೆ ಅಡ್ಡಲಾಗಿ ನಿಂತರು. ಕುಮಾರರು ಜಿಗುಪ್ಸೆಯಿಂದ ಅವರನ್ನು ಶಪಿಸಲು ನಿರ್ಧರಿಸಿದರು. ಶಾಪದ ಅನ್ವಯ ದ್ವಾರಪಾಲಕರನ್ನು ವೈಕುಂಠದಿಂದ ಬೇರ್ಪಡಿಸಿ ಜೀವಿಗಳು ಮೂರು ವಿಧಗಳ ಶತ್ರುಗಳನ್ನು ಹೊಂದಿರುವಂಥ ಐಹಿಕ ಜಗತ್ತಿಗೆ ಕಳಿಸುವುದು. (ಆಸೆ, ಕೋಪ ಮತ್ತು ಕಾಮ) ತಾವು ಶಾಪಕ್ಕೆ ಒಳಗಾಗುತ್ತೇವೆ ಎಂಬುದನ್ನು ತಿಳಿದ ದ್ವಾರಪಾಲಕರು ಕ್ಷಮೆಯನ್ನು ಯಾಚಿಸಿ ಅವರ ಕಾಲಿಗೆ ಬಿದ್ದರು. ಭಗವಂತನನ್ನು ಮರೆಸುವಂಥ ಭ್ರಮೆಗೆ ಮಾತ್ರ ತಾವು ಒಳಗಾಗಕೂಡದು ಎಂಬುದಾಗಿ ಅವರು ಪ್ರಾರ್ಥಿಸಿದರು.

ಆ ಸಂದರ್ಭದಲ್ಲಿ ಪದ್ಮನಾಭನೆಂಬ ಹೆಸರಿನಲ್ಲಿ ಭಗವಂತನು ಅಲ್ಲಿಗೆ ಬಂದನು. ಕುಮಾರರು ಭಗವಂತನನ್ನು ಅವನೆಲ್ಲ ವೈಭವದಲ್ಲಿ ಕಂಡು ಸಂತುಷ್ಟರಾದರು. ಭಗವಂತನನ್ನೇ ಕಂಡಂಥ ತಾವು ಅತ್ಯಂತ ಸುಖಪುರುಷರೆಂದು ಅವರು ಹೇಳಿದರು. ಭಗವಂತನಿಗೆ ಅವರು ಪ್ರಣಾಮಗಳನ್ನು ಸಲ್ಲಿಸಿದರು.

ಭಗವಂತನೆಂದನು: "ನನ್ನನ್ನು ಅನಾದರಿಸಿದ್ದರಿಂದಾಗಿ ನನ್ನ ಪರಿಚಾರಕರಾದ ಜಯ ಹಾಗೂ ವಿಜಯರು ನಿಮ್ಮ ವಿಚಾರದಲ್ಲಿ ದೊಡ್ಡದೊಂದು ಅಪರಾಧವನ್ನು ಮಾಡಿದ್ದಾರೆ. ನನ್ನಲ್ಲಿ ಭಕ್ತಿ ಹೊಂದಿರುವ ನೀವು ಅವರಿಗೆ ನೀಡಲಾಗಿರುವ ಶಿಕ್ಷೆಯನ್ನು ನಾನು ಒಪ್ಪುತ್ತೇನೆ. ಸೇವಕನೊಬ್ಬ ಮಾಡಿದಂಥ ತಪ್ಪು ಜನರನ್ನು ಆತನ ಒಡೆಯರನ್ನು ನಿಂದಿಸುವಂತಾಗಿಸುತ್ತದೆ. ನನ್ನ ಈ ಸೇವಕರು ತಮ್ಮ ಒಡೆಯನ ಮನಸ್ಸನ್ನು ಅರಿಯದೆ ನಿಮ್ಮ ವಿರುದ್ಧವಾಗಿ ಅಪಚಾರಗೈದಿದ್ದಾರೆ. ಆದ್ದರಿಂದ ನಾನು ಅವರು ತಮ್ಮ ತಪ್ಪಿನ

ಫಲವನ್ನು ಅನುಭವಿಸಿದ ನಂತರ ನನ್ನ ಬಳಿಗೇ ಬೇಗನೆ ಹಿಂತಿರುಗುವಂತೆ ಹಾಗೂ ನನ್ನ ವಾಸಸ್ಥಾನದಿಂದ ಅವರು ದೂರವಾಗಿರುವ ಅವಧಿಯು ಬೇಗನೆ ಮುಗಿಯುವಂತೆ ಮಾಡಿದರೆ ನಾನದನ್ನು ಉಪಕಾರವೆಂದು ಭಾವಿಸುತ್ತೇನೆ."

ಭಗವಂತನು ಮುಂದುವರಿಸಿ ಅವರಿಗೆ ನೀಡಲಾಗಿರುವ ಶಿಕ್ಷೆಯು ಮೊದಲು ಅವನಿಂದಲೇ ವಿಧಿಸಲ್ಪಟ್ಟಂಥದ್ದಾಗಿದ್ದು ಅವರು ದಾನವ ಕುಟುಂಬದಲ್ಲಿ ಹುಟ್ಟಿದರೂ ಆನಂತರ ತನ್ನೊಂದಿಗೇ ಐಕ್ಯರಾಗುತ್ತಾರೆಂದು ತಿಳಿಸಿದ.

ಆನಂತರ ಕುಮಾರರು ಭಗವಂತನನ್ನು ಕಂಡು ಅಲ್ಲಿಂದ ನಿರ್ಗಮಿಸಿದರು. ಭಗವಂತನು ದ್ವಾರಪಾಲಕರಾಗಿದ್ದ ಜಯ ಹಾಗೂ ವಿಜಯರತ್ತ ನೋಡಿ ಹೇಳಿದನು: "ಈ ಸ್ಥಳದಿಂದ ಹೊರಡಿ. ಆದರೆ ಭಯಪಡದಿರಿ. ನಿಮಗೆ ಜಯವಾಗಲಿ, ನಾನು ಬ್ರಾಹ್ಮಣರ ಶಾಪವನ್ನು ನಿರ್ಮೂಲ ಮಾಡುವ ಸಾಮರ್ಥ್ಯವನ್ನು ಹೊಂದಿದ್ದರೂ ಹಾಗೆ ಮಾಡಲಾರೆ. ಬದಲಾಗಿ ಅದಕ್ಕೆ ನನ್ನ ಸಮ್ಮತಿಯಿದೆ." ಆಗ ಜಯ ಮತ್ತು ವಿಜಯರು ಭಗವಂತನ ನಿವಾಸದಿಂದ ಕೆಳಗೆ ಬಿದ್ದರು. ಇವರಿಬ್ಬರೂ ದಿತಿಯ ಗರ್ಭವನ್ನು ಪ್ರವೇಶಿಸಿದರು ಎಂಬುದಾಗಿ ಬ್ರಹ್ಮದೇವನು ಉಪದೇವತೆಗಳಿಗೆ ತಿಳಿಸಿದನು.

ಬ್ರಹ್ಮದೇವನು ಕಪ್ಪನೆ ಮೋಡಗಳಿಗೆ ಕಾರಣಗಳನ್ನು ವಿವರಿಸಿದಾಗ ಉಪದೇವತೆಗಳು ತಮ್ಮ ಗ್ರಹಗಳಿಗೆ ಹಿಂತಿರುಗಿದರು ಎಂಬುದಾಗಿ ಮೈತ್ರೇಯಿ ಹೇಳಿದನು. ತನಗಾಗಲಿರುವ ಮಕ್ಕಳಿಂದಾಗಿ ದಿತಿಯು ಬೆದರಿದವಳಾದಳು. ಒಂದು ಸಂಪೂರ್ಣ ನೂರು ವರ್ಷಗಳ ನಂತರ ಅವಳು ಅವಳಿಗಳಿಗೆ ಜನ್ಮವಿತ್ತಳು. ಈ ಅವಳಿಗಳು ಹುಟ್ಟಿದಾಗ ಪ್ರಕೃತಿಯ ಸಮತೋಲನಕ್ಕೆ ಧಕ್ಕೆಯುಂಟಾಯಿತು. ಎಲ್ಲರೂ - ಉಪದೇವತೆಗಳು, ಹಕ್ಕಿಗಳು, ಪ್ರಾಣಿಗಳು ಭಯಭೀತರಾದರು. ಆದರೆ ಬ್ರಹ್ಮ ಮತ್ತು ಸನತ್ಕುಮಾರರಿಗೆ ಮಾತ್ರ ವಿನಾಶದ ಪ್ರಾರಂಭದ ಬಗ್ಗೆ ತಿಳಿವಳಿಕೆ ಇತ್ತು. ಅವರಿಗೆ ಜಗತ್ತಿನ ಪ್ರಳಯವೂ ಸನ್ನಿಹಿತವಾಗಿದೆ ಎಂಬುದೂ ತಿಳಿದಿತ್ತು. ಅವಳಿಗಳಾದ ಹಿರಿಣ್ಯಾಕ್ಷ ಮತ್ತು ಹಿರಣ್ಯಕಶಿಪು ಅಸಾಮಾನ್ಯ ದೈಹಿಕ ಚಹರೆಗಳನ್ನು ಪ್ರದರ್ಶಿಸಿದರು. ಅವರ ದೇಹಗಳು ಉಕ್ಕಿನ ಚೌಕಟ್ಟುಗಳಂತಿದ್ದು ಅವು ಎರಡು ದೊಡ್ಡ ಬೆಟ್ಟಗಳಂತೆ ಬೆಳೆಯತೊಡಗಿದವು. ಅವರ ಸುವರ್ಣ ಕಿರೀಟಗಳು ಗಗನವನ್ನೇ ಮುತ್ತಿಡುವವೆನೋ ಎಂಬಂತೆ ಅವರ ಶರೀರಗಳು ಎತ್ತರಕ್ಕೆ ಬೆಳೆದವು. ಅವರು ಎಲ್ಲ ದಿಕ್ಕುಗಳ ನೋಟಕ್ಕೂ ಅಡ್ಡಲಾಗಿ ನಡೆಯುತ್ತಿರುವಾಗ ಅವರ ಪ್ರತಿ ಹೆಜ್ಜೆಗೂ ಭೂಮಿಯು ನಡುಗುತ್ತಿತ್ತು. ಅವರ ಬಾಹುಗಳು ಪ್ರಕಾಶಮಾನವಾದ ಬಳೆಗಳಿಂದ ಅಲಂಕೃತವಾಗಿದ್ದು ಅವರು ಎದ್ದು ನಿಂತಾಗ ಸುಂದರವಾದ (ಡಾಬುಗಳಿಂದ) ಅಲಂಕೃತವಾಗಿದ್ದ ಅವರ ಸೊಂಟಗಳು ಸೂರ್ಯನನ್ನೇ ಮರೆಮಾಡುತ್ತಿದ್ದವು.

ಕಶ್ಯಪನು ತನ್ನ ಮಕ್ಕಳಿಗೆ ಹೆಸರುಗಳನ್ನು ನೀಡಿದನು. ಮೊದಲು ಹುಟ್ಟಿದವನಿಗೆ ಹಿರಣ್ಯಕಶಿಪು ಎಂಬ ಹೆಸರಿಟ್ಟು, ದಿತಿಯ ಮೊದಲು ಗರ್ಭದಲ್ಲಿ ಧರಿಸಿದವನಿಗೆ ಹಿರಣ್ಯಾಕ್ಷ ಎಂಬ ಹೆಸರನ್ನಿಟ್ಟನು. (ಪಿಂಡಿಸಿದ್ಧಿ)ಎಂಬ ಅಧಿಕಾರಯುತ ವೈದಿಕ ಸಾಹಿತ್ಯವಿದ್ದು

ಅದರಲ್ಲಿ ಗರ್ಭಧಾರಣೆಯನ್ನು ಕುರಿತಂಥ ಸುಂದರ ವೈಜ್ಞಾನಿಕ ವಿವರಣೆಯಿದೆ. ಗಂಡಸಿನ ವೀರ್ಯವು ಗರ್ಭಕೋಶದಲ್ಲಿನ ಮುಟ್ಟಿನ ಪ್ರವಾಹವನ್ನು ಒಂದಾದ ನಂತರ ಒಂದರಂತೆ ಎರಡು ಬಿಂದುಗಳಲ್ಲಿ ಪ್ರವೇಶಿಸಿದಾಗ ತಾಯಿಯು ತನ್ನ ಗರ್ಭದಲ್ಲಿ ಎರಡು ಭ್ರೂಣಗಳನ್ನು ವೃದ್ಧಿಸಿಕೊಂಡು, ಅವಳಿಗಳನ್ನು ವಿರುದ್ಧ ರೀತಿಯಲ್ಲಿ ಹುಟ್ಟಿಸುತ್ತಾಳೆ. ಮೊದಲು ಗರ್ಭದಲ್ಲಿ ರೂಪಗೊಂಡ ಮಗುವು ತಡವಾಗಿ ಹೊರಬರುತ್ತದೆ. ಗರ್ಭದಲ್ಲಿ ರೂಪಗೊಂಡ ಮೊದಲ ಮಗುವು ಎರಡನೇ ಮಗು ಇನ್ನೂ ಗರ್ಭದಲ್ಲಿ ಇರುವಾಗಲೇ ಹೊರಬರುವುದರಿಂದ ತಡವಾಗಿ ರೂಪಗೊಂಡ ಹಿರಣ್ಯಾಕ್ಷನೇ ಮೊದಲನೆಯವನಾಗಿ ಜನಿಸಿದನು. ಹಿರಣ್ಯಕಶಿಪುವು ಎರಡನೆಯವನಾದನು.

ಬ್ರಹ್ಮನಿಂದ ವರ ಪಡೆದವನಾಗಿ ಹಿರಣ್ಯಕಶಿಪುವಿಗೆ ಮೂರು ಜಗತ್ತುಗಳಲ್ಲಿ ಯಾರಿಂದಲೂ ಸಾವಿನ ಭಯವಿರಲಿಲ್ಲ. ಹಿರಣ್ಯಾಕ್ಷನು ತನ್ನ ಚಟುವಟಿಕೆಗಳಿಂದ ತನ್ನ ಸಹೋದರನನ್ನು ಸಂತೃಪ್ತಿಗೊಳಿಸಲು ಸದಾ ಸಿದ್ಧನಿದ್ದನು. ಅದರಿಂದ ಅವನು ತನ್ನ ಕೈಲಿ ದೊಣ್ಣೆಯೊಂದನ್ನು ಹಿಡಿದು ಹೋರಾಟದ ಉತ್ಸಾಹದಿಂದ ಇಡೀ ಜಗತ್ತಿನಲ್ಲಿ ಪ್ರವಾಸ ಮಾಡಿದನು. ಅವನಿಗೆ ನಿಯಂತ್ರಿಸಲು ಅಸಾಧ್ಯವಾದ ರೋಷವಿತ್ತು. ಈ ದೈತ್ಯನನ್ನು ಕಂಡು ಎಲ್ಲರೂ ಹೆದರಿದರು. ಉಪದೇವತೆಗಳೆಲ್ಲರೂ ಅಡಗಿ ಕೂತರು. ಇಂದ್ರ ಹಾಗೂ ಇತರ ಉಪದೇವತೆಗಳನ್ನು ಎಲ್ಲೂ ಕಾಣದೆ ಈ ದೈತ್ಯನು ಗಟ್ಟಿಯಾಗಿ ಆರ್ಭಟಿಸಿದನು. ದೇವಲೋಕಗಳಿಂದ ಹಿಂತಿರುಗಿದ ನಂತರ ಈ ರಾಕ್ಷಸನು ಸಾಗರದೊಳಗೆ ಮುಳುಗಿದನು. ವರುಣ ಹಾಗೂ ಜಲಪಕ್ಷಿಗಳು ಹಾರಿ ಹೋದವು. ಅವನು ವರುಣನ ರಾಜಧಾನಿಯಾದ ವಿಭವಾರಿಯನ್ನು ಪ್ರವೇಶಿಸಿದನು. ವಿಭವಾರಿಯು ಜಲಜಂತುಗಳ ಒಡೆಯ ಹಾಗೂ ದಾನವರು ವಾಸಮಾಡುವಂಥ ಜಗತ್ತಿನ ಕೆಳಸ್ತರದ ವಲಯಗಳ ಮೇಲ್ವಿಚಾರಕನಾದ ವರುಣನ ನಿವಾಸ. ಹಿರಣ್ಯಾಕ್ಷನು ವರುಣನನ್ನು ಕದನಕ್ಕೆ ಆಹ್ವಾನಿಸಿದನು. ಕಾದಾಟಕ್ಕೆ ತಾನು ತುಂಬಾ ವಯಸ್ಸಾದವನೆಂಬುದಾಗಿ ಹೇಳಿ ವರುಣನು ತಪ್ಪಿಸಿಕೊಳ್ಳಲು ನೋಡಿದನು. ವರುಣನು ದೈತ್ಯನೊಂದಿಗೆ ಅಂಗಲಾಚಿ ಅವನೊಂದಿಗೆ ಕದನಕ್ಕೆ ಇಳಿಯಲಿಲ್ಲ. ಅವನ ಜೊತೆಗೆ ಕದನಕ್ಕೆ ಏಕಮಾತ್ರನೊಬ್ಬನಿದ್ದು ಅವನೇ ವಿಷ್ಣು ಪರಮಾತ್ಮನೆಂದನು. ಆ ದಾನವನನ್ನು ವಿಷ್ಣುವು ಕೊಲ್ಲುತ್ತಾನೆಂಬುದಾಗಿಯೂ ಅವನು ತಿಳಿಸಿದನು.

ತನ್ನ ವ್ಯಾಖ್ಯಾನವನ್ನು ಮುಂದುವರಿಸಿದ ಮೈತ್ರೇಯಿಯು ದಾನವನು ವರುಣನ ಬುದ್ಧಿವಾದಕ್ಕೆ ಯಾವ ಮಹತ್ವವನ್ನೂ ನೀಡಲಿಲ್ಲ ಎಂಬುದಾಗಿ ತಿಳಿಸಿದನು. ಅವನು ನಾರದನ ಮೂಲಕ ಎಲ್ಲಿದ್ದಾನೆಂಬುದನ್ನು ತಿಳಿದು ಸಾಗರದ ಆಳಗಳನ್ನು ತಲಪಿದನು. ಅಲ್ಲಿ ವರಾಹ ಅವತಾರದಲ್ಲಿದ್ದ ವಿಷ್ಣುವು ತನ್ನ ಕೊಂಬುಗಳ ತುದಿಯಿಂದ ಭೂಮಿಯನ್ನು ಮೇಲಕ್ಕೆತ್ತಿ ಹಿಡಿದುಕೊಂಡು, ತನ್ನ ಕೆಂಪನೆಯ ಕಣ್ಣುಗಳಿಂದ ತನ್ನೆಲ್ಲ ವೈಭವವನ್ನು ಕಸಿದುಕೊಂಡ ಅನುಭವ ಆ ದಾನವನಿಗಾಯಿತು. ಕ್ರೂರ ಮಾತುಗಳಿಂದ ಕೂಡಿದ ವಾಗ್ವಾದಗಳ ನಂತರ ವಿಷ್ಣು ಪರಮಾತ್ಮ ಹಾಗೂ ದಾನವನ ಮಧ್ಯೆ ಭೀಕರ ಕಾಳಗ ನಡೆಯಿತು. ವರಾಹ ರೂಪದಲ್ಲಿದ್ದ ವಿಷ್ಣುವು ಭೂಮಿಯನ್ನು ತನ್ನ ಕಣ್ಣಿಗೆ ಕಾಣುವಂತೆ ನೀರಿನ ಮೇಲಿಟ್ಟು ಭೂಮಿಗೆ ನೀರಿನ ಮೇಲೆ ತೇಲುವ ಸಾಮರ್ಥ್ಯವನ್ನು

ನೀಡುವಂಥ ತನ್ನ ಶಕ್ತಿಯನ್ನೇ ಅದಕ್ಕೆ ವರ್ಗಾಯಿಸಿದನು. ಬ್ರಹ್ಮ ಮತ್ತು ಇತರ ಉಪದೇವತೆಗಳು ತಮ್ಮ ಗ್ರಹಗಳಿಂದ ಕಾಳಗವನ್ನು ವೀಕ್ಷಿಸಿದರು. ಪವಿತ್ರವಾದ ಅಭಿಜಿತ್ ಕಾಲವು ಸನ್ನಿಹಿತವಾಗಿರುವುದರಿಂದ ರಾಕ್ಷಸನನ್ನು ಕೊಲ್ಲುವಂತೆ ಬ್ರಹ್ಮನು ವಿಷ್ಣುವನ್ನು ಉತ್ತೇಜಿಸಿದನು. ಭಗವಂತನು ಬ್ರಹ್ಮನ ಮಾತುಗಳನ್ನು ಆಲಿಸಿ ತನ್ನ ಸುದರ್ಶನ ಚಕ್ರವನ್ನು ಬರಮಾಡಿಕೊಂಡನು. ಚಕ್ರವು ಭಗವಂತನ ಕೈಲಿ ಸುತ್ತಲು ಪ್ರಾರಂಭಿಸಿತು. ಭಗವಂತನ ಮೇಲೆ ಒಂದಾದ ಮೇಲೊಂದರಂತೆ ವೇಗವಾಗಿ ಬೀಸ ತೊಡಗಿದ ದಾನವನು ಕೊನೆಗೂ ಕೊಲ್ಲಲ್ಪಟ್ಟನು. ಮೈತ್ರೇಯಿಯು ಮುಂದುವರಿದು ರಕ್ಕಸನನ್ನು ಕೊಂದ ನಂತರ ಭಗವಂತನು ತನ್ನ ವಾಸಸ್ಥಾನಕ್ಕೆ ಹಿಂತಿರುಗಿದನೆಂದನು. ಮೈತ್ರೇಯಿಯು ನುಡಿದನು: "ನನ್ನ ಪ್ರೀತಿಯ ಕುಮಾರನೇ, ನಾನು ನಿನಗೆ ಮೊದಲು ವರಾಹ ಅವತಾರವಾಗಿ ಬಂದಂಥ ಹಾಗೂ ಅನಿರೀಕ್ಷಿತ ಶಕ್ತಿಯಿಂದ ದಾನವನೊಬ್ಬನನ್ನು ಭಾರಿ ಕದನದಲ್ಲಿ ಕೊಂದಂಥ ಭಗವಂತನ ಲೀಲೆಯನ್ನು ಕುರಿತು ವಿವರಿಸಿದ್ದೇನೆ. ನಾನು ನಿನ್ನ ಅಧ್ಯಾತ್ಮ ಗುರುವಿನಿಂದ ಕೇಳಿದ ರೀತಿಯಲ್ಲೇ ಇದನ್ನು ಉಲ್ಲೇಖಿಸಿದ್ದೇನೆ. ಭಗವಂತನನ್ನು ಕುರಿತ ನಿರೂಪಣೆಯನ್ನು ಕೇಳಿದ ನಂತರ ವಿದುರನು ಅತಿಶಯನಾದ ಆಹ್ಲಾದವನ್ನು ಹೊಂದಿದನೆಂಬುದಾಗಿ ಶ್ರೀ ಶುಕಾಚಾರ್ಯರು ತಿಳಿಸಿದರು.

ಭೂಮಿಯು ಮತ್ತೊಮ್ಮೆ ಕಕ್ಷೆಯ ಮೇಲಿಡಲ್ಪಟ್ಟಾಗ ಅನಂತರ ಜನಿಸಿದವರಿಗೆ ಮುಕ್ತಿ ಮಾರ್ಗವನ್ನು ತೋರಿಸಲು ಸ್ವಯಂಭು ಮನುವು ಏನು ಮಾಡಿದನೆಂಬುದಾಗಿ ಶ್ರೀ ಶೌನಕರು ಶ್ರೀ ಶುಕಾಚಾರ್ಯರನ್ನು ಕೇಳಿದರು. ಶೌನಕ ಮುನಿಯು ಉನ್ನತ ಭಕ್ತನಾದ ಹಾಗೂ ಕೃಷ್ಣಪರಮಾತ್ಮನ ಮಿತ್ರನಾದ ಮತ್ತು ಭಗವಂತನ ಆಸೆಗಳಿಗೆ ವಿರುದ್ಧವಾಗಿ ಕುಟಿಲೋಪಾಯಗಳನ್ನು ಮಾಡಿದಂಥ ತನ್ನ ಪುತ್ರನೊಂದಿಗೆ ಇದ್ದ ಹಿರಿಯಣ್ಣ ಧೃತರಾಷ್ಟ್ರನ ಸಹವಾಸ ಮಾಡಿದಂಥ ವಿದುರನ ಬಗ್ಗೆ ವಿಚಾರಿಸಿದನು. ವಿದುರನು ವೇದವ್ಯಾಸನ ಶರೀರದಿಂದ ಜನಿಸಿದವನು. ವಿದುರನು ಮನಃಪೂರ್ತಿಯಾಗಿ ಕೃಷ್ಣ ಪರಮಾತ್ಮನೊಂದಿಗೆ ಇರುವಂಥವನು.

ಹಸ್ತಿನಾಪುರದಿಂದ ನಿರ್ಗಮಿಸಿ ತೀರ್ಥಯಾತ್ರೆಗೆ ಹೊರಟ ವಿದುರನು ಎಲ್ಲೆಡೆ ಸುತ್ತಾಡಿ ಹರಿದ್ವಾರವನ್ನು ತಲಪಿದಾಗ ಹಿರಿಯ ಮುನಿ ಮೈತ್ರೇಯಿಯನ್ನು ಭೇಟಿಯಾದನು. ಶೌನಕ ಮುನಿಯು "ಮೈತ್ರೇಯಿಯಿಂದ ವಿದುರನು ಮತ್ತೇನನ್ನು ಅಪೇಕ್ಷಿಸಿದ" ಎಂಬುದಾಗಿ ಕೇಳಿದನು.

ವಿದುರನು ಮೈತ್ರೇಯಿಯಿಂದ ತಿಳಿದುಕೊಳ್ಳಬಯಸಿದ: "ನಮಗೆ ಅದಮ್ಯವಾದ ವಿಷಯಗಳನ್ನು ನೀನು ಬಲ್ಲೆಯಾದ್ದರಿಂದ ಪವಿತ್ರ ಮುನಿಯೇ, ಜೀವಿಗಳ ಮೂಲಪುರುಷರಾದ ಪ್ರಜಾಪತಿಗಳನ್ನು ಒಳಗೊಳಿಸಿ ಜೀವಿಗಳನ್ನು ಸೃಷ್ಟಿಸಲು ಬ್ರಹ್ಮನು ಏನು ಮಾಡಿದನು?" ವಿದುರನು ಮುಂದೆ ಪ್ರಜಾಪತಿಗಳು ಹೇಗೆ ಬ್ರಹ್ಮನ ಸೂಚನೆಗಳಿಗೆ ಅನುಗುಣವಾಗಿ ಸೃಷ್ಟಿಸಿದನು ಹಾಗೂ ಈ ವ್ಯಕ್ತಗೊಂಡ ಜಗತ್ತನ್ನು ಅವರು ರೂಪಿಸಿದ್ದು ಹೇಗೆ; ಅವರು ತಮ್ಮ ತಮ್ಮ ಹೆಂಡತಿಯರ ಸಮಾಗಮದೊಂದಿಗೆ ಸೃಷ್ಟಿಯನ್ನು

ಕೈಗೊಂಡರೇ; ಅವರು ತಮ್ಮ ಕ್ರಿಯೆಯಲ್ಲಿ ಸ್ವತಂತ್ರರಾಗಿ ಉಳಿದಿದ್ದರೇ ಅಥವಾ ಸಂಯುಕ್ತವಾಗಿ ಅವನ್ನು ಕೈಗೊಂಡರೇ ಎಂಬುದಾಗಿ ವಿಚಾರಿಸಿದನು.

ಮೈತ್ರೇಯಿಯು ಹೇಳಿದನು; ಮಹಾವಿಷ್ಣು ಮತ್ತು ಕಾಲದ ಚಕ್ರ ಹಾಗೂ ಜೀವಿಗಳ ಅಗೋಚರ ಚಟುವಟಿಕೆಗಳಿಂದಾಗಿ ಪ್ರಕೃತಿಯ ಮೂರು ವಿಧಾನಗಳ ಸಮ್ಮಿಶ್ರಣದಲ್ಲಿನ ಸಮತೋಲನದಲ್ಲಿ ಏರುಪೇರಾದಾಗ ಎಲ್ಲ ಐಹಿಕ ಅಂಶಗಳು ಉತ್ಪತ್ತಿಗೊಂಡವು. ಜೀವದ ಕರ್ಮದ ಒತ್ತಾಯದಿಂದಾಗಿ ಮೂರು ವಿಧವಾಗಿರುವ ಸುಳ್ಳು, ಅಹಂಮಿಕೆಯು ರಜಸ್ ಮೇಲುಗೈಯಾಗಿರುವ ಮಹತ್ ತತ್ವದಿಂದ ತಾನಾಗಿಯೇ ಅರಳಿಕೊಂಡಿತು. ಅಹಂ ನಿಂದಾಗಿ ಐದು ತತ್ವಗಳ ಅನೇಕ ಸಮೂಹಗಳು ಹುಟ್ಟಿಕೊಂಡವು.

ಪ್ರತ್ಯೇಕವಾಗಿ ಐಹಿಕ ಜಗತ್ತನ್ನು ಉತ್ಪಾದಿಸಲು ಅಸಮರ್ಥರಾದ ಅವರು ಭಗವಂತನ ನೆರವನ್ನು ಪಡೆದುಕೊಂಡು ಹೊಳೆಯುವ ಮೊಟ್ಟೆ ಹಿರಣ್ಯಗರ್ಭವನ್ನು ಉತ್ಪಾದಿಸಲು ಸಮರ್ಥರಾದರು. ಒಂದು ಸಾವಿರ ವರ್ಷಗಳಿಗಿಂತಲೂ ಹೆಚ್ಚಾಗಿ ಆ ಹೊಳೆಯುವ ಮೊಟ್ಟೆಯು ನಿರ್ಜೀವ ಸ್ಥಿತಿಯಲ್ಲಿ ಕಾರಣ ಸಾಗರದ ನೀರಿನಲ್ಲಿತ್ತು. ಆನಂತರ ಭಗವಂತನು ಗರ್ಭೋದಕಶಾಯಿ ವಿಷ್ಣುವಾಗಿ ಅದನ್ನು ಪ್ರವೇಶಿಸಿದನು. ವಿಷ್ಣು ಪರಮಾತ್ಮನ ನಾಭಿಯಿಂದ ಪ್ರಕಾಶಮಾನವಾದ ಸಾವಿರ ಸೂರ್ಯಗಳೋ ಪಾದಿಯಲ್ಲಿ ಕಮಲಪುಷ್ಪವೊಂದು ಚಿಗುರಿತು. (ಭಗವದ್ಗೀತೆಯ 12ನೇ ಶ್ಲೋಕ ಹಾಗೂ XI ಅಧ್ಯಾಯದಲ್ಲಿ ಹೀಗಿದೆ "ಅಗ್ನಿಕುಂಡದಲ್ಲಿ ಒಂದು ಸಾವಿರ ಸೂರ್ಯರ ಪ್ರಕಾಶವು ಒಮ್ಮೆಲೇ ಹೊಳೆದರೆ ಅದು ಒಂದು ರೀತಿಯಲ್ಲಿ ಉನ್ನತಾತ್ಮನ ಪ್ರಕಾಶದಂತಿರುತ್ತದೆ. "ಇದು ಅಣುಬಾಂಬಿನ ಜನಕನಾದ ಓಪನ್‌ಹೇಮರ್‌ನ ಅಭಿಪ್ರಾಯದೊಂದಿಗೆ ಹೊಂದಿಕೊಳ್ಳುತ್ತದೆ. 1945 ರ ಜುಲೈ 14 ಮತ್ತು 15 ರಂದು ಲಾಸ್ ಅಲಮೋಸ್‌ನ ಮೇಲೆ ಅಲಿಕಲ್ಲುಗಳಿಂದ ಒಳಗೊಂಡ ಭೀಕರ ಗುಡುಗು ಮಿಂಚುಗಳಿಂದ ಕೂಡಿದ ಮಳೆಯಾಯಿತು. ಪ್ರಯೋಗಾತ್ಮಕ ಬಾಂಬ್‌ನ್ನು ಮುಂದೆ 5.30 ಕ್ಕೆ ಸ್ಫೋಟಿಸಲು ನಿರ್ಧರಿಸಲಾಯಿತು. ಯಾರೂ ಅಣು ಅಗ್ನಿಯ ಮೊದಲ ಬೆಳಕನ್ನು ನೋಡಲಿಲ್ಲ. ಅದರ ಕಣ್ಣು ಕುಕ್ಕುವ ಪ್ರತಿಬಿಂಬವನ್ನು ಆಕಾಶದಲ್ಲಿ ಮತ್ತು ಬೆಟ್ಟಗಳ ಮೇಲೆ ಕಾಣಲು ಮಾತ್ರ ಸಾಧ್ಯವಾಯಿತು. ತಮ್ಮ ತಲೆಯನ್ನು ಅತ್ತಿತ್ತ ತಿರುಗಿಸುವ ಧೈರ್ಯ ಮಾಡಿದರೂ ಸಹ ಪ್ರಕಾಶಮಾನವಾದ ಅಗ್ನಿಯ ಚಂಡೊಂದು ಕ್ರಮೇಣ ದೊಡ್ಡದಾಗುತ್ತಾ ಬೆಳೆಯುತ್ತಿರುವುದನ್ನು ಕಂಡರು.ಕೋಸಿನ ಮಾರ್ಕನು ಈ ಅಗ್ನಿಯ ಚಂಡು ಭೂಮ್ಯಾಕಾಶಗಳನ್ನು ಸಂಪೂರ್ಣವಾಗಿ ಆವರಿಸಿಕೊಳ್ಳುವ ವರೆಗೆ ಬೆಳೆಯುವುದನ್ನೆಂದೂ ನಿಲ್ಲಿಸುವುದಿಲ್ಲ ಎಂಬುದಾಗಿ ವಾದಿಸಿದನು. ಓಪನ್‌ಹೋಮರ ನಿಯಂತ್ರಣ ಕೋಣೆಯಲ್ಲಿದ್ದನು. ಅವನಿಗೆ ಭಗವದ್ಗೀತೆಯ XI ಅಧ್ಯಾಯದ 12ನೇ ಶ್ಲೋಕವು ನೆನಪಾಗಿ ಅವನೆಂದನು : ಸಾವಿರ ಸೂರ್ಯದ ಪ್ರಕಾಶವು ಆಕಾಶದೊಳಗೆ ಸ್ಫೋಟಗೊಂಡಲ್ಲಿ ಅದು ಸರ್ವಶಕ್ತನ ವೈಭವದಂತಿರುತ್ತದೆ". (ಉಲ್ಲೇಖ: ರಾಬರ್ಟ ಜಂಗ್ಕ್‌ನ "Brighter Than Thousand Suns").

ಕಮಲ ಪುಷ್ಪವು ಪಕ್ವಗೊಂಡ ಆತ್ಮಗಳ ಆಗರವಾಗಿದ್ದು ಕಮಲ ಪುಷ್ಪದಿಂದ ಮೊದಲು ಹೊರಬಂದ ಜೀವಿಯು ಸರ್ವಶಕ್ತನಾದ ಬ್ರಹ್ಮನು. ಭಗವಂತನು ಬ್ರಹ್ಮನನ್ನು

ಪ್ರವೇಶಿಸಿದಾಗ ಬ್ರಹ್ಮನು ತನ್ನ ಬುದ್ಧಿಶಕ್ತಿಯನ್ನು ಬೆರೆಸಿ ಅವರಿಂದಾಗಿ ಜಗತ್ತನ್ನು ಮುಂಚಿನಂತೆಯೇ ಸೃಷ್ಟಿಸಲು ಪ್ರಾರಂಭಿಸಿದನು.

ಬ್ರಹ್ಮನು ಮೊದಲನೆಯದಾಗಿ ತನ್ನ ನೆರಳಿನಿಂದ ಅಪರಿಪಕ್ವಗೊಂಡ ಆತ್ಮಗಳ ಮೌಢ್ಯಕ್ಕೆ ಕವಚವನ್ನು ಸೃಷ್ಟಿಸಿದ. ಅಂಥಹ ಐದನ್ನು ತಮಿಶ್ರ, ಅಂಧತಮಿಶ್ರ, ತಮಸ್, ಮೋಹ ಮತ್ತು ಮಹಾಮೋಹವೆಂದು ಕರೆಯಲಾಗಿದೆ. (ತಮಿಶ್ರವು ಅಪಕ್ವ ಆತ್ಮಗಳಲ್ಲಿ ತಾವು ಸ್ವತಂತ್ರರು ಹಾಗೂ ಭಗವಂತನಂತೆ ಅನುಭೋಗಿಸಬಲ್ಲೆವು ಎಂಬ ಭಾವನೆಯನ್ನು ಉಂಟು ಮಾಡುವಂಥ ಕೋಪ. ಅಪಕ್ವ ಆತ್ಮಗಳು ಎಂದೂ ಭಗವಂತನ ಅಂಗವಾಗ ಆಗಲಾರವು. ಅಂಧ ಮಿಶ್ರತೆಯನ್ನುವುದು ಶರೀರ ಮತ್ತು ಐಹಿಕ ಆನಂದಕ್ಕೆ ಪ್ರಾಮುಖ್ಯತೆಯನ್ನು ನೀಡುವಂಥ ಮೌಢ್ಯ. "ಇದು ನನ್ನ ಶರೀರ ಮತ್ತು ನನ್ನ ಈ ಶರೀರದೊಂದಿಗಿನ ಯಾವುದೇ ರೀತಿಯ ಸಂಬಂಧ ನನ್ನದು". ಚೇತನ ಆತ್ಮದ ಬಗ್ಗೆ ಏನನ್ನು ತಿಳಿಯದಿರುವಂಥದ್ದನ್ನು ತಮಸ್ ಎಂದು ಕರೆಯಲಾಗಿದೆ. ಜೀವನಕ್ಕೆ ಸಂಬಂಧಿಸಿದಂತೆ ಶರೀರವನ್ನು ಕುರಿತಂಥ ಭ್ರಮೆಯೇ ಮೋಹ. ಐಹಿಕ ಆನಂದದ ಬಗ್ಗೆ ಹೆಚ್ಚಾಗಿರುವುದೆಂದರೆ ಮಹಾಮೋಹ.

ಜಿಗುಪ್ಸೆಗೊಂಡ ಬ್ರಹ್ಮನು ಮೌಢ್ಯದ ಶರೀರವನ್ನು ಕಿತ್ತೆಸೆದಾಗ ಈ ಅವಕಾಶವನ್ನು ಉಪಯೋಗಿಸಿಕೊಂಡು ಶರೀರವನ್ನು ಸ್ವಾಧೀನಕ್ಕೆ ತೆಗೆದುಕೊಳ್ಳುವ ಸಲುವಾಗಿ ಯಕ್ಷರು ಮತ್ತು ದಾನವರು ಶ್ರಮಿಸಿದರು. ಇದು ರಾತ್ರಿಯ ರೂಪದಲ್ಲಿ ಈಗಲೂ ತನ್ನ ಅಸ್ತಿತ್ವವನ್ನು ಮಂದುವರಿಸಿದೆ. ರಾತ್ರಿಯು ಹಸಿವು ಬಾಯಾರಿಕೆಗಳ ಮೂಲ. ಹಸಿವು ಮತ್ತು ಬಾಯಾರಿಕೆಯನ್ನು ತಡೆಯಲಾರದೆ ಅವರು ಬ್ರಹ್ಮನನ್ನು ಎಲ್ಲ ಬದಿಗಳಿಂದಲೂ ಆಕ್ರಮಿಸಲು ಓಡಿ ಬ್ರಹ್ಮನ ರಕ್ತವನ್ನೇ ಬಯಸಿದರು. ತನ್ನಿಂದಲೇ ಅವರು ಹುಟ್ಟಿದವರಾದ್ದರಿಂದ ತನ್ನನ್ನೇ ತಿನ್ನಕೂಡದೆಂದು ಬ್ರಹ್ಮನು ಅವರಿಗೆ ತಿಳಿಸಿದನು. ಅವನು ಅವರನ್ನು ಯಕ್ಷರು ಮತ್ತು ರಕ್ಕಸರೆಂದು ಕರೆದನು.

## ಉಪದೇವತೆಗಳು ಮತ್ತು ಇತರರು

ಬ್ರಹ್ಮನು ಅನಂತರ ಪ್ರಮುಖ ಉಪದೇವತೆಗಳನ್ನು ಸೃಷ್ಟಿಸಿ ಹಗಲಿನ ಪ್ರಕಾಶಮಾನ ರೂಪವನ್ನು ಅವರ ಮುಂದೆ ತೋರಿಸಿದಾಗ ಉಪದೇವತೆಗಳು ಅದನ್ನು ಸ್ವಾಧೀನ ಪಡಿಸಿಕೊಂಡರು. ಬ್ರಹ್ಮನು ತನ್ನ ಅಂಡುಗಳ ಮೂಲಕ ರಾಕ್ಷಸರಿಗೆ ಜನ್ಮನೀಡಿದನು. ಹಾಗೂ ಅವರು ಲೈಂಗಿಕತೆಯಲ್ಲಿ ಆಸಕ್ತರಾದರು. ಅವರು ಕಾಮುಕರಾದ್ದರಿಂದ ಸಂಭೋಗಕ್ಕಾಗಿ ಅವನನ್ನೇ ಸೂಚಿಸಿದರು. ಬ್ರಹ್ಮನು ವಿಷ್ಣುವಿನ ಪಾದಾರವಿಂದದಲ್ಲಿ ಆಶ್ರಯವನ್ನು ಅಪೇಕ್ಷಿಸಿದನು. ಭಗವಂತನು ಬ್ರಹ್ಮನಿಗೆ ತನ್ನ ಅಪರಿಶುದ್ಧ ಶರೀರವನ್ನು ಕಿತ್ತೆಸೆಯಬೇಕೆಂದು ತಿಳಿಸಿದನು. ಬ್ರಹ್ಮನು ಹರಿದೆಸೆದ ಶರೀರವು ಮುಸ್ಸಂಜೆಯ ರೂಪವನ್ನು ಪಡೆದಾಗ ದಾನವರು ಅದನ್ನು ಒಬ್ಬಳ ಸುಂದರಿಯೆಂದು ಭಾವಿಸಿ ಹೊಗಳಿ ಅವಳನ್ನು ಹಿಡಿದುಕೊಂಡರು. ಬ್ರಹ್ಮನು ಉಂಟುಮಾಡಿದ ಸಂಯಮದಿಂದ ಗಂಧರ್ವರು ಮತ್ತು ಅಪ್ಸರೆಯರು ಅಸ್ತಿತ್ವಕ್ಕೆ ಬಂದರು. ಬ್ರಹ್ಮನು ಚಂದ್ರನ ಬೆಳಕಿನ ರೂಪವನ್ನು

ಬಿಟ್ಟುಕೊಟ್ಟಾಗ ವಿಶ್ವವಸು ಮತ್ತು ಇತರ ಗಂಧರ್ವರು ಅದರ ಸ್ವಾಧೀನತೆಯನ್ನು ಪಡೆದರು. ಬ್ರಹ್ಮನು ತನ್ನ ಆಲಸ್ಯದಿಂದ ಭೂತ ಪಿಶಾಚಿಗಳನ್ನು ಸೃಷ್ಟಿಸಿದ. ಆದರೆ ಕೂದಲನ್ನು ಕೆದರಿಕೊಂಡು ಅವರೆಲ್ಲ ತನ್ನ ಮುಂದೆ ನಗ್ನರಾಗಿ ನಿಂತಾಗ ಅವನು ಕಣ್ಮುಚ್ಚಿ ನಿಂತ. ಅವನದೇ ಅಗೋಚರ ರೂಪದಿಂದ, ಅವನ ನಾಭಿಯಿಂದ ಸಂಧ್ಯರು ಮತ್ತು ಪಿತರು ಹುಟ್ಟಿದರು. ಆಗ ಪಿತರು ತಮ್ಮ ಅಸ್ತಿತ್ವದ ಮೂಲವಾದ ಅಗೋಚರ ಶರೀರವನ್ನು ವಶಪಡಿಸಿಕೊಂಡರು. ಈ ಅಗೋಚರ ಶರೀರದ ಮಾಧ್ಯಮದ ಮೂಲಕ ವಿಧಿಗಳ ವಿಚಾರದಲ್ಲಿ ತಜ್ಞರಾಗಿರುವವರು ಸಂಧ್ಯರಿಗೆ ಹಾಗು ಪಿತರಿಗೆ ಶ್ರಾದ್ಧದ ಸಂಧರ್ಭದಲ್ಲಿ ಮೃತರಾದ ತಮ್ಮ ಪಿತೃಗಳಿಗೆ ಬಲಿಯನ್ನು ನೀಡುತ್ತಾರೆ. ಅನಂತರ ತನ್ನ ಸಾಮರ್ಥ್ಯದಿಂದ ಬ್ರಹ್ಮನು ಸಿದ್ಧರು ಮತ್ತು ವಿದ್ಯಾದರರನ್ನು ಸೃಷ್ಟಿಸಿ ಅವರಿಗೆ ಅಂತರ್ಧಾನರೆಂದು ಕರೆಯಲಾದ ತನ್ನ ಅದ್ಭುತ ಆಕಾರವನ್ನು ನೀಡಿದನು. ಒಂದು ದಿನ ಬ್ರಹ್ಮನು ನೀರಿನಲ್ಲಿ ತನ್ನದೇ ಪ್ರತಿಬಿಂಬವನ್ನು ಕಂಡು ಮೋಹಿತನಾಗಿ ಆ ಪ್ರತಿಬಿಂಬದಿಂದಲೇ ಕಿಂಪುರುಷರು ಹಾಗು ಕಿನ್ನರನ್ನು ಸೃಷ್ಟಿಸಿದನು. ಅವರು ಬ್ರಹ್ಮನ ನೆರಳನ್ನು ಸ್ವಾಧೀನಪಡಿಸಿಕೊಂಡಿದ್ದರಿಂದಲೇ ಅವರು ಹಾಗೂ ಅವರ ಸಂತತಿ ಅವನ ಸಾಹಸಗಳನ್ನು ಹಾಗೂ ಪ್ರತಿ ದಿನದ ಮುಕ್ತಾಯವನ್ನು ಸ್ಮರಿಸಿಕೊಂಡು ಹಾಡುತ್ತಾರೆ.

ಒಂದು ದಿನ ಬ್ರಹ್ಮನು ತನ್ನ ಶರೀರವನ್ನು ಸಂಪೂರ್ಣವಾಗಿ ಚಾಚಿಕೊಂಡು ತನ್ನ ಸೃಷ್ಟಿ ಮುಂದುವರಿಯದಿರುವ ಬಗ್ಗೆ ಖಿನ್ನವಾಗಿ ಶರೀರವನ್ನು ತ್ಯಜಿಸಿದ. ಮೈತ್ರೇಯಿ ಮುಂದುವರಿದು ಹೇಳಿದನು : ಆಗ ಅವನ ಶರೀರದಿಂದ ಕೆಳಗುದರಿದ ರೋಮಗಳು ಸರ್ಪಗಳಾಗಿ ಪರಿವರ್ತನೆಗೊಂಡು, ಶರೀರವು ಅದರ ಕೈಕಾಲುಗಳ ಮೇಲೆ ಸಂಕುಚಿತಗೊಂಡು ತೆರಳಿದಾಗಲೂ ಅಲ್ಲಿಂದ ಭಯಂಕರ ಸರ್ಪಗಳು ಮತ್ತು ನಾಗರಗಳು ತಮ್ಮ ಹೆಡೆಯನ್ನೆತ್ತಿಕೊಂಡು ಚಿಮ್ಮಿದವು. ಅವನ ಬುದ್ಧಿಯಿಂದ ಜಗತ್ತಿನ ಕ್ಷೇಮಕರ ಚಟುವಟಿಕೆಗಳನ್ನು ಮುಂದುವರಿಸಲು ಮನುಗಳು ಸೃಷ್ಟಿಗೊಂಡು ಅವರಿಗೆ ಮಾನವ ಶರೀರವನ್ನು ನೀಡಲಾಯಿತು.

ಸರಳ ತಪಸ್ಸು, ಪ್ರಶಂಸೆ, ಮಾನಸಿಕ ಮುನ್ನಡೆ ಹಾಗೂ ಭಕ್ತಿಯಲ್ಲಿ ತಲ್ಲೀನನಾಗುವಿಕೆ ಇವುಗಳಿಂದ ತನ್ನನ್ನೇ ಸುಸಜ್ಜಿತಗೊಳಿಸಿಕೊಂಡು ನಿರ್ವಿಕಾರದಿಂದ ತನ್ನ ಇಂದ್ರಿಯಗಳನ್ನು ನಿಯಂತ್ರಿಸಿಕೊಂಡು ಸ್ವಯಂಜನ್ಯ ಜೀವಿಯಾದ ಬ್ರಹ್ಮನು ಹಿರಿಯ ಮುನಿಗಳನ್ನು ತನ್ನ ಪ್ರೀತಿಯ ಪುತ್ರರನ್ನಾಗಿ ಸೃಷ್ಟಿಸಿದನು. ಈ ಪ್ರತಿಯೊಬ್ಬ ಪುತ್ರರಿಗೂ, ಜಗತ್ತಿನ ಅಜನ್ಯ ಸೃಷ್ಟಿಕರ್ತನು ಆಳವಾದ ಧ್ಯಾನ, ಮಾನಸಿಕ ಮಗ್ನತೆ, ಅತೀಂದ್ರಿಯ ಶಕ್ತಿ, ಸರಳತೆ, ಪ್ರಶಂಸೆ ಮತ್ತು ತ್ಯಾಗ ಇಂಥ ಗುಣಗಳಿಂದ ಕೂಡಿದ ತನ್ನ ಶರೀರದ ಭಾಗಗಳನ್ನು ನೀಡಿದನು.

## ಮನು ಸಂತಾನ

ವಿದುರನು ಮೈತ್ರೇಯಿಗೆ ಲೈಂಗಿಕ ಸಂಭೋಗದ ಮೂಲಕ ಸಂತತಿಯನ್ನು ದ್ವಿಗುಣಗೊಳಿಸಿದಂಥ ಸ್ವಯಂಭು ಮನುವಿನ ಕುಲದ ಬಗ್ಗೆ ತಿಳಿಸಬೇಕೆಂದು ಕೇಳಿದನು.

ಮೈತ್ರೇಯಿಯು ಸ್ವಯಂಭು ಮನುವಿಗೆ ಪ್ರಿಯವ್ರತ ಮತ್ತು ಉತ್ತಾನಪಾದರೆಂಬ ಇಬ್ಬರು ಪುತ್ರರರು ಜಗತ್ತನ್ನು ಆಳಿದರೆಂಬುದಾಗಿ ತಿಳಿಸಿದನು. ಅವನಿಗೆ ದೇವಾಹುತಿ ಎಂಬ ಪುತ್ರಿಯು ಇದ್ದಳು. ವಿದುರನು ದೇವಾಹುತಿ ಮತ್ತು ಅವಳ ಪತಿ ಕರ್ದಮ ಮುನಿಯ ಮಕ್ಕಳ ಬಗ್ಗೆಯೂ ತಿಳಿದುಕೊಳ್ಳಲು ಬಯಸಿದನು. ಬ್ರಹ್ಮನ ಮಗನಾದ ದಕ್ಷ ಹಾಗೂ ರುಚಿಯರು ಮನುವಿನ ಇನ್ನಿಬ್ಬರು ಪುತ್ರಿಯರನ್ನು ಪಡೆದುಕೊಂಡ ನಂತರ ಹೇಗೆ ಮಕ್ಕಳನ್ನುಹುಟ್ಟಿಸಿದರು ಎಂಬುದಾಗಿಯೂ ಅವನು ತಿಳಿದುಕೊಳ್ಳಲು ಬಯಸಿದ.

ಕರ್ದಮ ಮುನಿಗೆ ಮಕ್ಕಳನ್ನು ಪಡೆಯುವಂತೆ ಸೂಚಿಸಲಾಯಿತು. ಆದ್ದರಿಂದ ಅವನು ಹತ್ತು ಸಹಸ್ರ ವರ್ಷಗಳ ಕಾಲ ಸರಸ್ವತಿ ನದಿಯ ತೀರದಲ್ಲಿ ತಪಸ್ಸನ್ನು ಆಚರಿಸಿದನು. ತಪಸ್ಸಿನ ಕಾಲದಲ್ಲಿ ಮುನಿಯು ಭಗವಂತನನ್ನು ಕುರಿತು ಧ್ಯಾನಿಸಿದನು, ಸತ್ಯಯುಗದಲ್ಲಿ ಭಗವಂತನು ಮುನಿಗೆ ಪ್ರತ್ಯಕ್ಷನಾದನು. ಭಗವಂತನನ್ನು ಕಂಡ ಮುನಿಯು ಆನಂದ ತುಂಬಿದವನಾಗಿ ಅವನನ್ನು ಹಾಡಿ ಹೊಗಳಿದನು. ಅಂಥ ಹೋಲಿಕೆಯುಳ್ಳ ಹಾಗೂ ತನ್ನ ವೈವಾಹಿಕ ಜೀವನದಲ್ಲಿ ಸಮೃದ್ಧಿಯನ್ನು ನೀಡಬಲ್ಲಂಥ ಫಲಭರಿತ ಗೋವಾಗಿ ಪರಿಣಿಸಬಲ್ಲ ಕನ್ಯೆಯನ್ನು ವಿವಾಹವಾಗುವ ತನ್ನ ಬಯಕೆಯನ್ನು ಮುನಿಯು ವ್ಯಕ್ತಪಡಿಸಿದ. ಆದ್ದರಿಂದ ಮುನಿಯು ಭಗವಂತನ ಪಾದಾರವಿಂದವನ್ನು ಆಶ್ರಯಿಸಿದ. ಭಗವಂತನನ್ನು ಹೊಗಳುತ್ತ ಮುನಿಯೆಂದ: "ಮೂರು ಮಧ್ಯಭಾಗಗಳನ್ನುಳ್ಳ ನಿನ್ನ ಚಕ್ರವು ಅವಿನಾಶಿಯಾದ ಬ್ರಹ್ಮನ್‌ನ ಅಕ್ಷದಿಂದ ಸುತ್ತುತ್ತದೆ. ಅದು ಹದಿಮೂರು ಕಡ್ಡಿಗಳನ್ನು 360 ಸಂಧಿಗಳನ್ನು, 6 ತಂತುಗಳನ್ನು ಮತ್ತು ಅದರ ಮೇಲೆ ಕೆತ್ತಲಾದ ಅಸಂಖ್ಯಾತ ಕಲೆಗಳನ್ನು ಹೊಂದಿರುತ್ತವೆ. ಅದರ ಕ್ರಾಂತಿಯೇ ಇಡೀ ಸೃಷ್ಟಿಯ ಜೀವಿತ ಕಾಲವನ್ನು ಕಡಿತಗೊಳಿಸಿದರೂ ಅಮಿತ ಸುತ್ತುವಿಕೆಯನ್ನು ಹೊಂದಿರುವ ಈ ಚಕ್ರವು ಭಗವಂತನ ಭಕ್ತರ ಜೀವಿತ ಅವಧಿಯನ್ನು ಸ್ಪರ್ಶಿಸಲಾಗುವುದಿಲ್ಲ. (ಶ್ಲೋಕದ ಕಾಲದ ವಿಷಯವನ್ನು ಸೂಚಿಸುತ್ತಾರೆ. ಅದು ಕ್ಷಣ, ಗಂಟೆಗಳು, ತಿಂಗಳುಗಳು, ವರ್ಷಗಳು, ಅವಧಿಗಳು, ಋತುಗಳು, ಇತ್ಯಾದಿಯಾಗಿ ಅನೇಕ ಭಾಗಗಳಾಗಿ ಸಾಹಿತ್ಯದ ಖಗೋಳ ಲೆಕ್ಕಾಚಾರಗಳಿಗೆ ಅನುಗುಣವಾಗಿ ನಿರ್ಧರಿಸಲ್ಪಟ್ಟಿದೆ).

ಋತುಗಳೆಂದು ಕರೆಯಲಾದ ಆರು ಋತುಮಾನಗಳಿವೆ. ಮತ್ತು ನಾಲ್ಕು ತಿಂಗಳುಗಳ ಅವಧಿಯ 'ಚಾತುರ್ಮಾಸ'ವೆಂಬುದಿದೆ. ನಾಲ್ಕು ತಿಂಗಳುಗಳ ಮೂರು ಅವಧಿಗಳು ಒಂದು ವರ್ಷವಾಗುತ್ತದೆ. ವೈದಿಕ ಖಗೋಳ ಲೆಕ್ಕಾಚಾರಗಳಿಗೆ ಅನುಗುಣವಾಗಿ ಹದಿಮೂರು ತಿಂಗಳುಗಳಿವೆ. ಹದಿಮೂರನೇ ತಿಂಗಳನ್ನು ಆದಿ ಮಾಸ ಅಥವಾ ತುಲಮಾಸವೆಂದು ಕರೆದಿದ್ದು ಪ್ರತಿ ಮೂರನೇ ವರ್ಷದಲ್ಲಿ ಸೇರಿಸಲಾಗುತ್ತದೆ. ಕಾಲವನ್ನು ೩೬೦ ಸಂಧಿಗಳು ಹಾಗೂ ಋತುಗಳು ಮತ್ತು ಕ್ಷಣಗಳ ರೂಪದಲ್ಲಿನ ಅಸಂಖ್ಯಾತ ಎಲೆಗಳ ಆಕಾರದಲ್ಲಿರುವ ೬ ಕಡ್ಡಿಗಳಿಗೆ ಹೋಲಿಸಲಾಗಿದೆ. ಅದು ಶಾಶ್ವತ ಅಸ್ತಿತ್ವವಾದ ಬ್ರಹ್ಮನ್‌ನ ಮೇಲೆ ಸುತ್ತುತ್ತದೆ.

ಮೈತ್ರೇಯಿಯು ಮುಂದುವರಿದು ಭಗವಂತನನ್ನು ಹೊಗಳಿದನು. ಮುನಿಯ ಮುಂದೆ ಕಾಣಿಸಿಕೊಂಡ ಭಗವಂತನು ಹೇಳಿದನು. "ನಿನ್ನ ಮನಸ್ಸಿನಲ್ಲಿ ಇರುವುದೇನೆಂಬುದನ್ನು ತಿಳಿದ ನಂತರ ನಾನು ಈಗಾಗಲೇ ನನ್ನ ಮಾನಸಿಕ ಮತ್ತು ಬುದ್ಧಿಶಕ್ತಿಯ ಶಿಸ್ತಿನ ಮೂಲಕ ಯಾವುದನ್ನು ಪಡೆಯುವ ಸಲುವಾಗಿ ನನ್ನನ್ನು ಪ್ರಾರ್ಥಿಸಿದೆಯೋ ಅದನ್ನು ಈಗಾಗಲೇ ವ್ಯವಸ್ಥೆ ಮಾಡಿದ್ದೇನೆ. ಬ್ರಹ್ಮನ ಪುತ್ರನಾದ ಸ್ವಯಂಭು ಚಕ್ರವರ್ತಿಯು ಭೂಮಿಯನ್ನು ಆಳುತ್ತಾನೆ. ಅವನಿಗೆ ಅಷ್ಟು ಹೊತ್ತಿಗಾಗಲೇ ವಿವಾಹ ವಯಸ್ಕಳಾದ ಕನ್ಯೆಯಿದ್ದು ಅವಳು ನಿನ್ನ ಪತ್ನಿಯಾಗಲು ತಕ್ಕವಳಾಗಿರುತ್ತಾಳೆ. ಚಕ್ರವರ್ತಿಯು ತನ್ನ ಮಗಳನ್ನು ವಿವಾಹದಲ್ಲಿ ನಿನಗೆ ನೀಡುವ ಸಲುವಾಗಿ ನಿನ್ನನ್ನು ಕಾಣಲು ಬರುತ್ತಾನೆ. ನೀನು ಅವಳಲ್ಲಿ ಬಿತ್ತುವ ಬೀಜದಿಂದಾಗಿ ಅವಳು ಒಂಬತ್ತು ಪುತ್ರಿಯರನ್ನು ಹುಟ್ಟಿಸಿ, ಅವರು ಉನ್ನತ ಮುನಿಗಳನ್ನು ವಿವಾಹವಾಗುವರು. ಭಗವಂತನು ಮುಂದೆ ತಾನೇ ಮುನಿಯ ಪತ್ನಿಯಾದ ದೇವಾಹುತಿ ಹಾಗೂ ಮುನಿಯ ಒಂಬತ್ತು ಮಕ್ಕಳೊಂದಿಗೆ ತಾನು ಅವತರಿಸುತ್ತೇನೆ ಎಂಬುದಾಗಿಯೂ ತಿಳಿಸಿದನು. ಎಲ್ಲ ಶ್ರೇಣಿಗಳ ಅಂತಿಮ ಸತ್ವಗಳಿಗೆ ಸಂಬಂಧಿಸಿದ ಆಧ್ಯಾತ್ಮ ವಿದ್ಯೆಯನ್ನು ಭಗವಂತನು ದೇವಹುತಿಗೆ ತಿಳಿಸಿಕೊಡುತ್ತೇನೆಂದನು. ಈ ರೀತಿ ಮಾತನಾಡಿದ ಭಗವಂತನು ತನ್ನ ಆವಾಸಸ್ಥಾನಕ್ಕೆ ತೆರಳಿದ ಎಂಬುದಾಗಿ ಮೈತ್ರೇಯಿ ಮುನಿಯು ವಿದುರನಿಗೆ ತಿಳಿಸಿದನು.

ಭಗವಂತನು ನಿಗದಿ ಪಡಿಸಿದ ದಿನದಂದೇ ಸ್ವಯಂಭು ಚಕ್ರವರ್ತಿ ಹಾಗೂ ಅವನ ಪತ್ನಿಯು ಕರ್ದಮ ಮುನಿಯ ಆಶ್ರಮಕ್ಕೆ ಆಗಮಿಸಿದರು. ಚಕ್ರವರ್ತಿಯು ಆಶ್ರಮವನ್ನು ಪ್ರವೇಶಿಸಿ ಆಗ ತಾನೇ ತಪಸ್ಸನ್ನು ಪೂರ್ಣಗೊಳಿಸಿದ್ದ ಮುನಿಯತ್ತ ನೋಡಿದನು. ಮುನಿಯು ಎತ್ತರವಾಗಿ, ಅಗಲವಾದ ಕಣ್ಣುಗಳನ್ನು ಹಾಗೂ ತಲೆಯಲ್ಲಿ ಹೆಣೆದುಕೊಂಡಿದ್ದ ಕೂದಲನ್ನೂ ಹೊಂದಿದ್ದನು. ಚಕ್ರವರ್ತಿಯನ್ನು ಕಂಡು ಅವನು ಅವನನ್ನು ಆಶೀರ್ವದಿಸಿ ಗೌರವದಿಂದ ಬರಮಾಡಿಕೊಂಡನು. ಬಂದ ಕಾರಣವೇನೆಂದು ಮುನಿಯು ಚಕ್ರವರ್ತಿಯನ್ನು ವಿಚಾರಿಸಿದನು. ಚಕ್ರವರ್ತಿಯು ಉತ್ತರಿಸಿದನು: "ವೈದಿಕ ಜ್ಞಾನದಲ್ಲಿ ತನ್ನನ್ನೇ ವಿಸ್ತರಿಸಿಕೊಳ್ಳುವ ಸಲುವಾಗಿ ವೇದಗಳ ಸಾಕಾರ ರೂಪನಾದ ಬ್ರಹ್ಮನು ತನ್ನ ಮುಖದಿಂದ ನಿನ್ನನ್ನು ಸರಳ, ಜ್ಞಾನಿಕ ಹಾಗೂ ಅತೀಂದ್ರಿಯರಾದ ನಿಗೂಢ ಶಕ್ತಿಯಿಂದ ಕೂಡಿದ ಹಾಗೂ ಇಂದ್ರಿಯ ಸಾರ್ಥಕತೆಯ ಬಗ್ಗೆ ಮನಸ್ಸಿಲ್ಲದ ಬ್ರಾಹ್ಮಣನನ್ನು ಸೃಷ್ಟಿಸಿದನು. ನನ್ನ ಮಗಳು ಪ್ರಿಯವ್ರತ ಹಾಗೂ ಉತ್ತಾನಪಾದನ ಸೋದರಿಯಾಗಿದ್ದು ವಯಸ್ಸು, ಚಾರಿತ್ರ್ಯ ಮತ್ತು ಒಳ್ಳೆಯ ಗುಣಗಳನ್ನು ಉಳ್ಳ ಸೂಕ್ತ ಪತಿಗಾಗಿ ಹುಡುಕುತ್ತಿದ್ದಾಳೆ. ನಿನ್ನ ಸದ್ಗುಣ, ಬುದ್ಧಿಶಕ್ತಿ, ಸುಂದರ ರೂಪ, ಯೌವ್ವನ ಹಾಗೂ ಇನ್ನಿತರ ಗುಣಗಳನ್ನು ನಾರದ ಮುನಿಯಿಂದ ಕೇಳಿದ ಕ್ಷಣದಿಂದ ಅವಳು ನಿನ್ನ ಮೇಲೇ ಮನಸ್ಸನ್ನು ಇಟ್ಟಿದ್ದಾಳೆ. ಆದ್ದರಿಂದ ದಯಮಾಡಿ ಅವಳನ್ನು ಸ್ವೀಕರಿಸಿ. ಓ, ವಿವೇಕಿಯಾದವನೇ, ನೀನು ವಿವಾಹವಾಗಲು ಸಿದ್ಧನಾಗಿದ್ದಿಯೆಂಬುದಾಗಿ ನಾನು ಕೇಳಿದೆ. ನೀನು ನಿರಂತರ ಬ್ರಹ್ಮಚರ್ಯೆಯ ವಚನವನ್ನು ಕೈಗೊಂಡಿಲ್ಲವಾದ್ದರಿಂದ ನಿನಗೆ ನೀಡಲಾಗುತ್ತಿರುವ ಅವಳ ಕೈಯನ್ನು ಹಿಡಿ". ಅವಳು ಗರ್ಭ ಧರಿಸಿದ ಕೂಡಲೇ ತಾನು ಇನ್ನುಳಿದ ಜೀವಿತ

ಕಾಲವನ್ನು ಭಗವಂತನ ಸೇವೆಯಲ್ಲಿ ಕಳೆಯುತ್ತೇನೆಂಬ ಒಂದು ಷರತ್ತಿನ ಮೇಲೆ ಮುನಿಯು ವಿವಾಹಕ್ಕೆ ಒಪ್ಪಿದನು.

ಮೈತ್ರೇಯಿ ಮುಂದುವರಿಸಿ, ಈ ಮಾತನ್ನಾಡಿದ ನಂತರ ಮುನಿಯು ಮೌನವನ್ನು ಧರಿಸಿದ ಎಂಬುದಾಗಿ ಹೇಳಿದನು. ವಿವಾಹ ಕಾಲದಲ್ಲಿ, ರಾಣಿ ಶತರೂಪಳು ತನ್ನ ಮಗಳಿಗೆ ಅನೇಕ ಉಡುಗೊರೆಗಳನ್ನು ನೀಡಿದ ನಂತರ ಚಕ್ರವರ್ತಿ ಹಾಗೂ ಅವನ ರಾಣಿಯು ತನ್ನ ರಾಜಧಾನಿಯಾದ ಬರ್ಹಿಸ್ಮತಿಗೆ ಹಿಂತಿರುಗಿದರು.

ತನ್ನ ತಂದೆ ತಾಯಿಗಳ ನಿರ್ಗಮನದ ನಂತರ ದೇವಾಹುತಿಯು ಮುನಿಯ ಮೇಲೆ ಪ್ರೇಮವನ್ನು ಸುರಿಸಿದಳು. ಮುನಿಗೆ ಸತತವಾಗಿ ಸೇವೆಯನ್ನು ಸಲ್ಲಿಸಿದ್ದರಿಂದಾಗಿ ದೇವಾಹುತಿಯು ಕೃಶಗೊಂಡು ನಿರ್ವಿಣ್ಣಳಾದಳು. ಇದನ್ನು ಗಮನಿಸಿದ ಮುನಿಯು ಅವಳಿಗೆ ತನ್ನ ತಪಸ್ಸಿನ ಫಲಗಳನ್ನು ನೀಡಿದಾಗ ಅವಳು ಕಾಂತಿಯುಕ್ತಳಾದಳು. ಅದ್ಭುತ ಪತಿಯನ್ನು ಪಡೆದಂಥ ಸನ್ನಡತೆಯ ಹೆಂಗಸಿಗೆ ಮಕ್ಕಳು ಒಂದು ದೊಡ್ಡ ಆಸ್ತಿಯಾದ್ದರಿಂದ ಅವರನ್ನು ಪಡೆಯುವ ಹಂಬಲವನ್ನು ಅವಳು ವ್ಯಕ್ತಪಡಿಸಿದಳು. ಈ ಉದ್ದೇಶಕ್ಕಾಗಿ ಸೂಕ್ತ ಗೃಹವನ್ನು ಹೊಂದಬೇಕೆಂದೂ ಅವಳು ಮುನಿಗೆ ತಿಳಿಸಿದಳು. ಮುನಿಯು ಬಾಹ್ಯಾಕಾಶದಲ್ಲಿ ಸ್ವರ್ಗವೊಂದನ್ನು ನಿರ್ಮಿಸಿ ತನ್ನ ಪತ್ನಿಯನ್ನು ಅಲ್ಲೆಲ್ಲ ಓಡಾಡಿಸಿದನು. ಜಗತ್ತಿನ ಗೋಳ ಮತ್ತು ಅದ್ಭುತಗಳಿಂದ ತುಂಬಿದ ಅದರ ವಿವಿಧ ವ್ಯವಸ್ಥೆಗಳನ್ನು ತೋರಿಸಿದ ನಂತರ ಮುನಿಯು ತನ್ನ ಆಶ್ರಮಕ್ಕೆ ಹಿಂತಿರುಗಿದನು. ನಂತರ ಅವನು ದೇವಾಹುತಿಗೆ ಸಂತಸವನ್ನು ನೀಡುವ ಸಲುವಾಗಿ ತನ್ನನ್ನೇ ಒಂಬತ್ತು ವ್ಯಕ್ತಿತ್ವಗಳನ್ನಾಗಿ ವಿಭಜಿಸಿಕೊಂಡಾಗ ಅವಳು ತುಂಬಾ ಮುದ್ದಾದ ಹಾಗೂ ಕೆಂದಾವರೆಯ ಸುವಾಸನೆಯುಳ್ಳ ಒಂಬತ್ತು ಪುತ್ರಿಯರಿಗೆ ಜನ್ಮನೀಡಿದಳು. ತನ್ನ ಪತಿಯು ತನ್ನನ್ನು ಬಿಟ್ಟು ಹೊರಡಲಿದ್ದಾಗ ಅವಳೆಂದಳು : "ನನ್ನ ದೊರೆಯೇ, ನೀನು ನನಗೆ ನೀಡಿದ ವಚನಗಳೆಲ್ಲವನ್ನು ಪಾಲಿಸಿದೀಯೆ. ಆದರೂ ನಾನು ನಿನಗೆ ಶರಣಾಗತಳಾದ ಆತ್ಮವಾದ್ದರಿಂದ ನೀನು ನನಗೆ ಭಯರಾಹಿತ್ಯವನ್ನು ನೀಡಬೇಕು. ನಿನ್ನ ಪುತ್ರಿಯರ ಬಗ್ಗೆ ಹೇಳಬೇಕೆಂದರೆ ಅವರು ತಾವೇ ತಮಗೆ ತಕ್ಕವರಾದ ಪತಿಯರನ್ನು ಹುಡುಕಿಕೊಂಡು ತಮ್ಮ ತಮ್ಮ ಮನೆಗೆ ತೆರಳುತ್ತಾರೆ. ಆದರೆ ಸನ್ಯಾಸಿಯಾಗಿ ನಿನ್ನ ನಿರ್ಗಮನದ ನಂತರ ನನಗ್ಯಾರು ಸಮಾಧಾನವನ್ನು ನೀಡುತ್ತಾರೆ?"

ವಿಷ್ಣು ಪರಮಾತ್ಮನ ಮಾತುಗಳನ್ನು ಸ್ಮರಿಸಿದ ಕರ್ದಮ ಮುನಿಯು ಹೇಳಿದನು: "ನಿನ್ನ ಬಗ್ಗೆಯೇ ನೀನು ನಿರಾಶಳಾಗದಿರು. ನೀನು ವಾಸ್ತವವಾಗಿ ಪ್ರಶಂಸೆಗೆ ಅರ್ಹಳು. ಉನ್ನತ ವ್ಯಕ್ತಿತ್ವವು ಶೀಘ್ರದಲ್ಲೇ ನಿನ್ನ ಪುತ್ರನಾಗಿ ನಿನ್ನ ಗರ್ಭವನ್ನು ಪ್ರವೇಶಿಸುತ್ತಾನೆ. ನೀನು ನಿನ್ನ ಪವಿತ್ರ ವಚನಗಳನ್ನು ಕೈಗೊಂಡಿದ್ದೀಯೆ. ನಿನಗೆ ಭಗವಂತನ ಆಶೀರ್ವಾದವಿದೆ. ಆದ್ದರಿಂದ ನೀನು ಭಗವಂತನನ್ನು ಇಂದ್ರಿಯ ನಿಯಂತ್ರಣ, ಧಾರ್ಮಿಕ ಆಚರಣೆ, ಸರಳತೆ ಹಾಗೂ ನಿನ್ನ ಹಣವನ್ನು ದಾನವಾಗಿ ನೀಡುವ ಮೂಲಕ ಪ್ರಾರ್ಥಿಸುವವಳಾಗು."

## ಅಧ್ಯಾಯ - 5

# ಕಪಿಲನ ಜನನ

(ಈ ಅಧ್ಯಾಯವು ಕರ್ದಮ ಮುನಿ ಮತ್ತು ದೇವಾಹುತಿಯಿಂದ ಕಪಿಲನ ಜನನ ವೃತ್ತಾಂತವನ್ನು ಒಳಗೊಂಡಿದೆ. ಭಾಗವತದ ಅನ್ವಯ ಕಪಿಲನು ವಿಷ್ಣುವಿನ ಸಾಕಾರ ರೂಪ. ಸಾಂಖ್ಯ ಶಾಸ್ತ್ರವು ಕಪಿಲನಿಂದ ರೂಪಿಸಲ್ಪಟ್ಟಿತು.)

ಅನೇಕ ವರ್ಷಗಳ ನಂತರ ಯಜ್ಞದ ಸಂದರ್ಭದಲ್ಲಿ ಮರದಿಂದ ಹೊರಬರುವ ಅಗ್ನಿಯಂತೆ ಭಗವಂತನು ದೇವಾಹುತಿಯಲ್ಲಿ ಕಾಣಿಸಿಕೊಂಡನು. ಅವನು ಭೂಮಿಗಿಳಿಯುವ ಸಂದರ್ಭದಲ್ಲಿ ಮಳೆ ಸುರಿಸುವ ಮೋಡಗಳ ರೂಪದಲ್ಲಿದ್ದ ಉಪದೇವತೆಗಳು ಗಗನದಲ್ಲಿ ಸಂಗೀತ ವಾದ್ಯಗಳನ್ನು ನುಡಿಸಿದರು. ಗಂಧರ್ವರು ಭಗವಂತನನ್ನು ಹಾಡಿ ಹೊಗಳಿದರು. ಬ್ರಹ್ಮನು ಮರೀಚಿ ಹಾಗೂ ಇತರ ಮುನಿಗಳೊಂದಿಗೆ ಕರ್ದಮ ಮುನಿಯ ಸ್ಥಳಕ್ಕೆ ಹೊರಟನು. ಭಗವಂತನು ದೇವಾಹುತಿಯ ಗರ್ಭವನ್ನು ಸೇರಿದ್ದಾನೆಂಬ ವಿಷಯವನ್ನು ತಿಳಿದಿದ್ದ ಬ್ರಹ್ಮನು ಮುನಿ ಹಾಗೂ ಆತನ ಪತ್ನಿಯೊಂದಿಗೆ ಮಾತನಾಡಿದನು. ಬ್ರಹ್ಮನು ಮುನಿಯ ಒಂಭತ್ತು ಪುತ್ರಿಯರನ್ನು ಪ್ರಶಂಸಿಸಿ ಅವರು ಪ್ರಮುಖ ಮುನಿಗಳ ಕೈಹಿಡಿಯಬೇಕೆಂದು ತಿಳಿಸಿದನು. ಭಗವಂತನು ದೇವಾಹುತಿಯ ಗರ್ಭವನ್ನು ಪ್ರವೇಶಿಸಿದ್ದಾನೆಂದು ತಿಳಿಸಿದ ಬ್ರಹ್ಮನು ಜನಿಸಲಿರುವ ಪುತ್ರನು ಕಪಿಲ ಮುನಿ ಎಂಬುದಾಗಿ ಹೆಸರಾಗುತ್ತಾನೆ ಎಂದನು. ಅವನು ಚಿನ್ನದ ಬಣ್ಣದ ಕೂದಲು, ಕಮಲ ದಳದಂಥ ಕಣ್ಣುಗಳು, ಕಮಲ ಪುಷ್ಪದಂತಿರುವ ಪಾದ ಇವುಗಳನ್ನು ಹೊಂದಿದ್ದು ಐಹಿಕ ಜಗತ್ತಿನಲ್ಲಿ ಕೆಲಸ ಮಾಡುವ ಮಹದಾಶಯವನ್ನು ಹೊಂದಿರುತ್ತಾನೆ. ಬ್ರಹ್ಮನು ದೇವಾಹುತಿಗೆ ಕಪಿಲ ಮುನಿಯ ಬಗ್ಗೆ ತಿಳಿಸಿ ತನ್ನ ಆವಾಸಸ್ಥಾನಕ್ಕೆ ಹಿಂತಿರುಗಿದನು. ಕರ್ದಮ ಮುನಿಯು ತನ್ನ ಪುತ್ರಿಯರನ್ನು ಮುನಿಗಳಿಗೆ ಈ ರೀತಿ ನೀಡಿದನು: ಕಲಾ-ಮರೀಚಿ; ಅನುಸೂಯ - ಅತ್ರಿ; ಶ್ರದ್ಧ -ಅಂಗೀರ; ಹವಿರ್ಭೂ - ಪೌಲಸ್ತ್ಯ ; ಗತಿ -ಪುಲಾಹ; ಕ್ರಿಯಾ - ಕೃತು; ಖ್ಯಾತಿ - ಭೃಗು ಮತ್ತು ಅರುಂಧತಿ - ವಸಿಷ್ಠ, ಅವನು ಶಾಂತಿಯನ್ನು ಅಥರ್ವನಿಗೆ ನೀಡಿದನು. ಶಾಂತಿಯಿಂದಾಗಿಯೇ ಯಜ್ಞಕಾರ್ಯಗಳು ಸಾಂಗವಾಗಿ ನೆರವೇರಿದವು. ಹೀಗೆ ಅವನು ಪ್ರಮುಖ ಬ್ರಾಹ್ಮಣರ ವಿವಾಹಗಳನ್ನು ಮಾಡಿಸಿದನು.

ಕರ್ದಮ ಮುನಿಯು ಭಗವಂತನನ್ನು ಕೊಂಡಾಡಿ ಸನ್ಯಾಸಿಯ ಜೀವನವನ್ನು ನಡೆಸಲು ಅನುಮತಿಯನ್ನು ಕೋರಿದನು. ಅವನೆಂದನು; "ಈ ಕೌಟುಂಬಿಕ ಜೀವನವನ್ನು ತ್ಯಜಿಸಿದ ನಂತರ ನಾನು ಬೇಗುದಿಯಿಂದ ಮುಕ್ತನಾಗಿ ಸದಾ ಕಾಲವೂ ನಿನ್ನನ್ನು ಹೃದಯದಲ್ಲೂ ಸ್ಥಾಪಿಸಿಕೊಂಡು ಸುತ್ತಾಡಲು ಬಯಸುತ್ತೇನೆ." ಭಗವಂತನೆಂದನು: "ನಾನು ನೇರವಾಗಿ ಅಥವಾ ಧರ್ಮಗ್ರಂಥಗಳ ಮೂಲಕ ಹೇಳಿದ್ದೆಲ್ಲವೂ ಎಲ್ಲ ರೀತಿಗಳಿಂದಲೂ ಜಗತ್ತಿನ ಜನರಿಗೆ ಅಧಿಕಾರಯುತವಾದದ್ದು. ಎಲೈ ಮುನಿಯೇ, ನಾನು ನಿನಗೆ ಮುಂಚಿತವಾಗಿಯೇ ನಿನ್ನ ಪುತ್ರನಾಗಿ ಬರಲಿರುವೆನೆಂದು ತಿಳಿದಿದ್ದರಿಂದ: ನಾನು

ಸತ್ಯವನು ಪಾಲಿಸಲು ಇಲ್ಲಿಗೆ ಇಳಿದು ಬಂದೆ." ಅವನು ಮುಂದುವರಿಸಿದನು: "ಈ ಜಗತ್ತಿನಲ್ಲಿ ನನ್ನ ಅವತರಿಸುವಿಕೆಯು ಮುಖ್ಯವಾಗಿ ಅನವಶ್ಯಕ ಐಹಿಕ ಹಂಬಲಗಳ ಬಂಧನದಿಂದ ವಿಮುಕ್ತರಾಗ ಬಯಸುವವರಿಗೆ ಆತ್ಮ ಸಾಕ್ಷಾತ್ಕಾರವನ್ನು ಅನುವು ಮಾಡಿಕೊಡುವಂಥ ಅತ್ಯಂತ ಉನ್ನತವೆಂದು ಪರಿಗಣಿಸಲ್ಪಟ್ಟ ಸಾಂಖ್ಯ ಶಾಸ್ತ್ರವನ್ನು ವಿವರಿಸುವುದು. ಅರ್ಥ ಮಾಡಿಕೊಳ್ಳಲು ಕಷ್ಟಕರವಾದ ಆತ್ಮ ಸಾಕ್ಷಾತ್ಕಾರದ ಈ ಹಾದಿಯು ಕಾಲಕ್ರಮದಲ್ಲಿ ಕಳೆದು ಹೋಗಿದೆ. ಮಾನವ ಸಮಾಜಕ್ಕೆ ಮತ್ತೆ ಈ ಅಧ್ಯಾತ್ಮವನ್ನು ಪ್ರವೇಶ ಮಾಡಿಸಿ ಅದನ್ನು ವಿವರಿಸಲು ನಾನು ಕಪಿಲನ ಈ ಶರೀರವನ್ನು ತಾಳಿದ್ದೇನೆಂದು ತಿಳಿ." ಅನಂತರ ಭಗವಂತನು ಮುನಿಗೆ ಅವನಾಸೆಯಂತೆ ಮುಂದುವರಿಯಲು ಅನುಮತಿಸಿದನು. ಮುನಿಯು ನಿರಾಳ ಮನಸ್ಸಿನವನಾಗಿ ಅರಣ್ಯಕ್ಕೆ ತೆರಳಿದನು.

ಶ್ರೀ ಶೌನಕರು ಹೇಳಿದರು: "ಅವನಿಗೆ ಹುಟ್ಟು ಎಂಬುದಿಲ್ಲವಾದರೂ ಪರಮಾತ್ಮನು ತನ್ನ ಅಂತರಿಕ ಶಕ್ತಿಯಿಂದಾಗಿ ಕಪಿಲನಾಗಿ ಜನ್ಮ ತಳೆದನು. ಇಡೀ ಮಾನವ ಕುಲದ ಪ್ರಯೋಜನಕ್ಕಾಗಿ ಅತಿಶಯ ಜ್ಞಾನವನ್ನು ನೀಡುವ ಸಲುವಾಗಿ ಅವನು ಅವತರಿಸಿದನು." ಭಗವಂತನಿಗಿಂತಲೂ ಹೆಚ್ಚು ತಿಳಿದವರು ಯಾರೂ ಇಲ್ಲ. ಆದ್ದರಿಂದ ಅವನು ವೇದಗಳ ಒಡೆಯನಾಗಿದ್ದು ಅವನನ್ನು ಸದಾ ತಿಳಿಯುವುದು ಇಂದ್ರಿಯಗಳಿಗೆ ಹರ್ಷವನ್ನುಂಟು ಮಾಡುವಂಥದ್ದು.

ಕರ್ದಮ ಮುನಿಯು ಅರಣ್ಯಕ್ಕೆ ತೆರಳಿದ ನಂತರ ಕಪಿಲನು ತನ್ನ ಐಹಿಕ ಪ್ರಜ್ಞೆಯಿಂದಾಗಿ ಉಂಟಾದ ಗೊಂದಲಗಳಿಂದಾಗಿ ಬೇಗುದಿಗೆ ಒಳಗಾಗಿರುವೆನೆಂದೂ ಹಾಗೂ ಇಂದ್ರಿಯ ಗೊಂದಲಗಳಿಂದಾಗಿ ಮಧ್ಯದಲ್ಲಿ ಮುಳುಗಿರುವೆನೆಂದೂ ತನಗೆ ಹೇಳಿದ ತನ್ನ ತಾಯಿ ದೇವಾಹುತಿಯನ್ನು ಮುದ ಗೊಳಿಸುವ ಸಲುವಾಗಿ ಕಪಿಲ ದೇವನು ಬಿಂದು ಸರೋವರದ ದಂಡೆಯಲ್ಲಿ ಉಳಿದನು. ತನ್ನ ಭಾರಿ ಭ್ರಮೆಯನ್ನು ಹೋಗಲಾಡಿಸುವಂತೆ ಅವಳು ತನ್ನ ಮಗ ಕಪಿಲನಿಗೆ ವಿನಂತಿಸಿಕೊಂಡು ಪುರುಷ ಮತ್ತು ಸ್ತ್ರೀ ಹಾಗೂ ಚೇತನ ಮತ್ತು ವಸ್ತು ಇವುಗಳ ಮಧ್ಯದಲ್ಲಿನ ಸಂಬಂಧವನ್ನು ಕುರಿತು ವಿಚಾರಿಸಿದಳು.

## ಸಾಂಖ್ಯ ಯೋಗ

(ಸಾಂಖ್ಯ ಯೋಗವು ಪ್ರಕೃತಿ ಮತ್ತು ಪುರುಷರನ್ನು ಕುರಿತು ಹೇಳುತ್ತದೆ. ಪುರುಷನು ಭಗವಂತನಾಗಿದ್ದು, ಪ್ರಕೃತಿಯೆಂದರೆ ನಿಸರ್ಗ, ಪ್ರಕೃತಿ ಮತ್ತು ಪುರುಷರ ಮಧ್ಯದಲ್ಲಿನ ಸಂಬಂಧ ಅಥವಾ ಅನುಭವ ನೀಡುವವನು ಹಾಗೂ ಅನುಭೋಗಿಸುವುದನ್ನು ಸಂಸಾರ ಅಥವಾ ಐಹಿಕ ಬಂಧನವೆನ್ನಲಾಗುತ್ತದೆ.)

ಜೀವಿಗಳ ಅಂತಿಮ ಪ್ರಯೋಜನವನ್ನು ಗುರಿಯನ್ನಾಗಿ ಹೊಂದಿರುವ ಹಾಗೂ ಐಹಿಕ ಜಗತ್ತಿನ ಎಲ್ಲ ಹರ್ಷ ಮತ್ತು ಬೇಗುದಿಗಳ ಬಗ್ಗೆ ನಿರ್ವಿಕಾರವನ್ನು ಉಂಟು ಮಾಡುವಂತಹ ಭಗವಂತ ಮತ್ತು ವ್ಯಕ್ತಿಗೆ ಸಂಬಂಧಿಸಿದ ಯೋಗ ಪದ್ಧತಿಯು ಉತ್ಕೃಷ್ಟವಾದದ್ದು. ಜೀವಿಯ ಪ್ರಜ್ಞೆಯು ಐಹಿಕ ಸ್ವಭಾವದ ಮೂರು ವಿಧಾನಗಳಿಂದ

ಆಕರ್ಷಣೆಗೊಂಡಾಗಿನ ಸ್ಥಿತಿಯನ್ನು ಅಪರಿಪಕ್ವ ಜೀವನವೆನ್ನಲಾಗುತ್ತದೆ. ಆದರೆ, ಅದೇ ಪ್ರಜ್ಞೆಯು ಭಗವಂತನಿಗೆ ಜೋಡಿಸಲ್ಪಟ್ಟಾಗ ಅದು ವಿಮುಕ್ತಿಯ ಪ್ರಜ್ಞೆಯಾಗುತ್ತದೆ. ಒಬ್ಬರು ಶರೀರದೊಂದಗಿನ ಹುಸಿ ಗುರುತಿಸಿಕೊಳ್ಳುವಿಕೆಯಾದ "ನಾನು" ಹಾಗೂ ಶಾರೀರಿಕ ಸ್ವಾಧೀನದಿಂದುಂಟಾದ "ನನ್ನದು" ಎಂಬುವುದರಿಂದ, ಕಾಮ ಹಾಗೂ ಹಂಬಲದ ಪರಿಶುದ್ಧತೆಗಳಿಂದ ಸಂಪೂರ್ಣವಾಗಿ ಶುಚಿರ್ಭೂತರಾದಾಗ ಮನಸ್ಸು ಪರಿಶುದ್ಧಗೊಳ್ಳುತ್ತದೆ. ಈ ಪರಿಶುದ್ಧ ಅವಸ್ಥೆಯಲ್ಲಿ ಐಹಿಕ ಆನಂದ ಮತ್ತು ಬೇಗುದಿಯೆನ್ನಲಾದ ಹಂತದಿಂದ ಅವನು ಮೇಲೇರುತ್ತಾನೆ. ಆ ಸಮಯದಲ್ಲಿ ಆತ್ಮವು ಐಹಿಕ ಆಸ್ತಿತ್ವಕ್ಕಿಂತಲೂ ತಾನು ಮೇಲೇರಿದ್ದನ್ನು ತಾನೇ ನೋಡಿಕೊಳ್ಳಲು ಸಾಧ್ಯವಾಗುತ್ತದೆ. ಸದಾ ಹೊಳೆಯುತ್ತಿರುವ, ಎಂದೂ ಬೇಗುದಿಗೊಳಗಾಗದೆ, ಆಕಾರದಲ್ಲಿ ತೀರಾ ಚಿಕ್ಕದಾಗಿದ್ದರೂ ಸಹ, (ವೈದಿಕ ಸಾಹಿತ್ಯದಲ್ಲಿ "ಜೀವ" ವೆಂಬ ಅಣುವನ್ನು ಕೂದಲಿನ ಮೇಲ್ಭಾಗದ ಒಂದನೇ ಹತ್ತು ಸಾವಿರದ ಅಳತೆಯೆಂಬುದಾಗಿ ಅಂದಾಜು ಮಾಡಲಾಗಿದೆ). ಆದ್ದರಿಂದ ಇದು ಅಪಾರ. ಐಹಿಕವನ್ನು ಕುರಿತ ವ್ಯಾಮೋಹವು ಆತ್ಮದ ಅತ್ಯಂತ ದೊಡ್ಡ ಬಂಧನ. ಆದರೆ ಅದೇ ವ್ಯಾಮೋಹವನ್ನು ಆತ್ಮಸಾಕ್ಷಾತ್ಕಾರಗೊಂಡ ಭಕ್ತರಿಗೆ ಅನ್ವಯಿಸಿದಾಗ ಅದು ವಿಮುಕ್ತಿಯ ದ್ವಾರವನ್ನು ತೆರೆಯಿಸುತ್ತದೆ. ಸಾಧುವಿನ ಮುಖ್ಯ ಮುದ್ರೆಗಳೆಂದರೆ ಅವನು ತಾಳ್ಮೆಯುಳ್ಳವನು, ದಯೆಯುಳ್ಳವನು ಹಾಗೂ ಜೀವಿಗಳೆಲ್ಲರ ಬಗ್ಗೆ ಸ್ನೇಹದಿಂದ ಇರುವವನು. ಅವನಿಗೆ ಯಾವ ಶತೃಗಳೂ ಇಲ್ಲ. ಅವನು ಶಾಂತಿಯುತ. ಅವನು ಧರ್ಮಗ್ರಂಥಗಳ ಕಟ್ಟುಪಾಡುಗಳಿಗೆ ಒಳಪಟ್ಟವನು ಹಾಗೂ ಮೃದುಗುಣಗಳನ್ನು ಹೊಂದಿದವನು. ಅಂಥ ಸಾಧು ಯಾವ ವಿಮುಖತೆಯೂ ಇಲ್ಲದೆ ಭಗವಂತನ ಭಕ್ತಿಪೂರ್ವಕ ಸೇವೆಯಲ್ಲಿ ತೊಡಗುತ್ತಾನೆ. ಸಾಧುಗಳು ಲೌಕಿಕ ಸಂಕಷ್ಟಗಳಿಂದ ಕಷ್ಟಪಡದಿರುವುದಕ್ಕೆ ಕಾರಣ ಅವರ ಆಲೋಚನೆಗಳೆಲ್ಲವೂ ಭಗವಂತನಲ್ಲಿ ಮಗ್ನವಾಗಿರುವುದು. ಕಪಿಲನು ತನ್ನ ತಾಯಿಗೆ ಹೇಳಿದನು: "ಓ ನನ್ನ ತಾಯಿಯೆ, ಓ, ಗುಣವತಿಯಾದ ಸ್ತ್ರೀಯೇ, ಇವೆಲ್ಲವೂ ಎಲ್ಲ ಬಂಧನಗಳಿಂದಲೂ ವಿಮುಕ್ತರಾಗಿರುವ ಉನ್ನತ ಭಕ್ತಾದಿಗಳ ಗುಣಾವಶೇಷಗಳು." ನಿಜವಾದ ಭಕ್ತರಾಗಬೇಕು ಎಂಬುದಾಗಿ ಅವನು ಅವಳಿಗೆ ಸಲಹೆ ಮಾಡಿದನು.

ದೇವಾಹುತಿಯು ವಿಚಾರಿಸಿದಳು: "ನಿನ್ನ ಪದ್ಮಪಾದದ ಸೇವೆಯನ್ನು ಸುಲಭವಾಗಿ ಹಾಗೂ ಈ ಕೂಡಲೇ ಕೈಗೊಳ್ಳಲು ನನಗೆ ನೆರವಾಗುವಂಥ ಯಾವ ಬಗೆಯ ಭಕ್ತಿಪೂರ್ವಕ ಸೇವೆಯನ್ನು ವೃದ್ಧಿಪಡಿಸಿಕೊಳ್ಳಬೇಕು ಹಾಗೂ ಅಭ್ಯಸಿಸಬೇಕು? " ಅವಳು ಅದಕ್ಕೂ ಮುಂದೆ ಭಗವಂತನನ್ನೇ ಗುರಿಯಾಗಿಡುವ ಹಾಗೂ ಐಹಿಕ ಅಸ್ತಿತ್ವವನ್ನು ಸಂಪೂರ್ಣವಾಗಿ ಕೊನೆಗೊಳಿಸುವಂಥ ಯೋಗ ಪದ್ಧತಿಯ ಗುಣಗಳನ್ನು ಕುರಿತು ವಿಚಾರಿಸಿದಳು. (ವಿವಿಧ ಯೋಗ ಪದ್ಧತಿಗಳೆಂದರೆ : ನಿರ್ವಿಕಾರ ಬ್ರಹ್ಮನ ಉಜ್ವಲತೆಗೆ ಸಂಬಂಧಿಸಿದ ಜ್ಞಾನ ಯೋಗ; ಸ್ಥಳೀಕರಿಸಲ್ಪಟ್ಟ ವೈಯಕ್ತಿಕ ಬದಿಯನ್ನು ಗುರಿಯಾಗುಳ್ಳ ಹಠಯೋಗ; ಹಾಗೂ ಒಂಬತ್ತು ವಿಧಾನಗಳೆಂದರೆ - ಆಲಿಸುವುದು, ಪಠಿಸುವುದು, ಸ್ಮರಿಸುವುದು, ಪ್ರಾರ್ಥನೆಗಳನ್ನು ಸಲ್ಲಿಸುವುದು, ಭಗವಂತನನ್ನು ದೇವಾಲಯಗಳಲ್ಲಿ

ಪೂಜಿಸುವುದು; ಅವನಿಗೆ ಸೇವೆ ಸಲ್ಲಿಸುವುದು; ಅವನ ಅಜ್ಞೆಯನ್ನು ಪರಿಪಾಲಿಸುವುದು, ಅವನೊಂದಿಗೆ ಸ್ನೇಹ ಬೆಳೆಸುವುದು; ಹಾಗೂ ಕೊನೆಯದಾಗಿ ಪ್ರತಿಯೊಂದನ್ನೂ ಭಗವಂತನ ಸೇವೆಗಾಗಿ ತ್ಯಜಿಸುವುದು).

ದೇವಾಹುತಿಯು ತನ್ನ ಮಗನನ್ನು ಸಂಪೂರ್ಣ ಸತ್ಯದ ಬಗೆಗಿನ ಜ್ಞಾನವನ್ನು ವಿವರಿಸಬೇಕೆಂದು ವಿನಂತಿಸಿಕೊಂಡಳು. ಕಪಿಲ ಮುನಿಯು ತನ್ನ ತಾಯಿಗೆ ಭಕ್ತಿಪೂರ್ವಕ ಸೇವೆ ಮತ್ತು ಅತೀಂದ್ರಿಯ ಸಾಕ್ಷಾತ್ಕಾರದ ಸಮಾಯೋಗವಾದ ಸಾಂಖ್ಯ ಪದ್ಧತಿಯನ್ನು ವಿವರಿಸಿದನು. ಅವನೆಂದನು: "ಇಂದ್ರಿಯಗಳು ಉಪದೇವತೆಗಳ ಸಾಂಕೇತಿಕ ಪ್ರತಿನಿಧಿಗಳಾಗಿದ್ದು, ಮನಸ್ಸು ಮಾತ್ರ ಭಗವಂತನ ಪ್ರತೀಕ".

ಮನಸ್ಸಿನ ಕರ್ತವ್ಯವು ಸೇವೆ ಸಲ್ಲಿಸುವುದು. ಆ ಭಕ್ತಿಪೂರ್ವಕ ಸೇವೆಯು ಯಾವ ಉದ್ದೇಶವನ್ನೂ ಹೊಂದಿರದಂಥ ಭಗವಂತನ ಸೇವೆಯಲ್ಲಿ ತೊಡಗಿದ್ದಾಗ ಅದು ಮೋಕ್ಷಕ್ಕಿಂತಲೂ ಹೆಚ್ಚು ಉತ್ತಮವಾದದ್ದು. ನಾವು ತಿಂದದ್ದನ್ನೆಲ್ಲ ಹೊಟ್ಟೆಯಲ್ಲಿನ ಅಗ್ನಿಯು ಜೀರ್ಣಿಸಿಕೊಳ್ಳುವಂತೆ ಭಕ್ತಿಯು ಪ್ರತ್ಯೇಕ ಪ್ರಯತ್ನಗಳಿಲ್ಲದೆ ಜೀವಿಯ ಸೂಕ್ಷ್ಮ ಶರೀರವನ್ನು ಕರಗಿಸಿಕೊಳ್ಳುತ್ತದೆ. ಪರಿಶುದ್ಧನಾದ ಭಕ್ತನು ಭಗವಂತನೊಂದಿಗೆ ಒಂದಾಗುವ ಬಯಕೆ ಇಲ್ಲದೆಯೇ ಅವನ ಸೇವೆಯಲ್ಲಿ ತನ್ನನ್ನು ತೊಡಗಿಸಿಕೊಳ್ಳುತ್ತಾನೆ. ಅಂಥ ಭಕ್ತನು ಅವಿಚ್ಛಿನ್ನವಾಗಿ ಯಾವಾಗಲೂ ಭಗವಂತನ ಲೀಲೆಗಳನ್ನು ವೈಭವೀಕರಿಸುತ್ತಾನೆ. ಅವರು ಯಾವಾಗಲೂ ಭಗವಂತನತ್ತ ನೋಡುತ್ತಾರೆ. ಈ ದೃಷ್ಟಿಯ ಮೂಲಕ ಭಕ್ತನು ಭಕ್ತಿಪೂರ್ವಕ ಸೇವೆಯಲ್ಲಿ ಮುಳುಗಿ ಹೋಗುತ್ತಾನೆ. ಹೀಗೆ ಅವನು ಮೋಕ್ಷವನ್ನು ಸಾಧಿಸುತ್ತಾನೆ. ಇಂಥ ಭಕ್ತನು ಸತ್ಯಲೋಕವನ್ನು ಒಳಗೊಂಡಂತೆ ಮೇಲಿನ ಸ್ತರದಲ್ಲಿನ ಗ್ರಹಮಂಡಲಗಳಲ್ಲಿ ಲಭ್ಯವಾಗಬಹುದಾದ ಅತ್ಯುನ್ನತ ವರವನ್ನು ಪಡೆಯಲೂ ಆಶಿಸುವುದಿಲ್ಲ, ಅಥವಾ ಭಗವಂತನ ಸಾಮ್ರಾಜ್ಯಕ್ಕೆ ಎತ್ತರಿಸಲ್ಪಡಬೇಕೆಂಬ ಬಯಕೆಯನ್ನೂ ಹೊಂದಿರುವುದಿಲ್ಲ. ಆದರೂ ಅವೆಲ್ಲದ್ದಕ್ಕೂ ಆಸೆಪಡದೆಯೇ ಎಲ್ಲ ವರಗಳೂ ನೀಡುವಂಥ ಜೀವನವನ್ನು ಈ ಬದುಕಿನಲ್ಲಿಯೇ ಅನುಭವಿಸುತ್ತಾನೆ. ಇಂಥ ಅತಿಶಯ ಸಮೃದ್ಧಿಯನ್ನು ಪಡೆದಂಥ ಭಕ್ತರು ಎಂದೂ ಅವುಗಳನ್ನು ಪಡೆಯದಿರುವುದಿಲ್ಲ. ಅಂಥ ಸಮೃದ್ಧಿಯನ್ನು ಯಾವುದೂ ವಿನಾಶಗೊಳಿಸಲಾರದು.

ಭಗವಂತನನ್ನು ಅವಿಚ್ಛಿನ್ನ ಭಕ್ರಿಪೂರ್ವಕ ಸೇವೆಯ ಮೂಲಕ ಆರಾಧಿಸುವ ಭಕ್ತರು ದೇವಲೋಕಗಳಿಗೆ ಉತ್ತೀರ್ಣರಾಗುವ ಸಲುವಾಗಿ ಎಲ್ಲ ಆಕಾಂಕ್ಷೆಗಳನ್ನು ಬಿಟ್ಟು ಕೊಡುತ್ತಾರೆ. ಭಗವಂತನು ಅವರನ್ನು ಹುಟ್ಟು ಸಾವಿನ ಮತ್ತೊಂದು ಬದಿಗೆ ಕೊಂಡೊಯ್ಯುತ್ತಾನೆ. ಕಪಿಲನು ಮುಂದೆ ಹೇಳಿದನು: "ಹುಟ್ಟು ಮತ್ತು ಸಾವಿನ ಭಯವನ್ನು ಯಾರೂ ಬಿಟ್ಟು ಕೊಡಲಾಗದು. ನನ್ನ ಹೊರತು ಬೇರೆ ಎಲ್ಲಿಯಾದರೂ ಶರಣಾದರೆ ಅಂಥವರಿಗೆ ಜನನ ಮತ್ತು ಮರಣದ ಮಹಾ ಭೀತಿ ತಪ್ಪುವುದಿಲ್ಲ ಯಾಕೆಂದರೆ ನಾನೇ ಸರ್ವೋತ್ತಮನು, ಜಗತ್ತಿನ ಸೃಷ್ಟಿಗೆ ನಾನೇ ಒಡೆಯ ಮತ್ತು ಎಲ್ಲ ಆತ್ಮಗಳಿಗೆ ಪರಮಾತ್ಮನು ನಾನೇ. ನನ್ನ ಭಯದಿಂದಾಗಿ ಗಾಳಿಯು ಬೀಸುತ್ತದೆ; ಸೂರ್ಯನು ನನ್ನ ಭಯದಿಂದ ಬೆಳಗುತ್ತಾನೆ ಹಾಗೂ ಮೋಡಗಳ ದೊರೆಯಾದ ಇಂದ್ರನು ನನ್ನ ಭಯದಿಂದ ಮಳೆಯನ್ನು ಸುರಿಸುತ್ತಾನೆ. ಅಗ್ನಿಯು ನನ್ನ ಭಯದಿಂದ

ಉರಿಯುತ್ತದೆ ಹಾಗೂ ನನ್ನ ಭಯದಿಂದಲೇ ಮೃತ್ಯು ತನ್ನ ಪಾಲನ್ನು ತೆಗೆದುಕೊಂಡು ಸಾಗುತ್ತದೆ." ಭಗವಂತನ ಮೇಲೆ ತಮ್ಮ ಮನಸ್ಸನ್ನು ಇಟ್ಟಂಥವರು ತಮ್ಮದೇ ಭಕ್ತಿಪೂರ್ವಕ ಸೇವೆಗೆ ಸಂಬಂಧಿಸಿದ ತೀವ್ರ ಆಭ್ಯಾಸದಲ್ಲಿ ತೊಡಗುತ್ತಾರೆ. ಜೀವನದಲ್ಲಿ ಅಂತಿಮ ಪರಿಶುದ್ಧತೆಯನ್ನು ಸಾಧಿಸಲು ಇದೊಂದೇ ಮಾರ್ಗ".

ಕಪಿಲನು ಹೇಳಿದನು: "ನಾನು ನಿನಗೆ ಪರಮ ಸತ್ಯದ ವಿವಿಧ ಶ್ರೇಣಿಗಳನ್ನು ವಿವರಿಸಲಿದ್ದು ಇದನ್ನು ಅರಿತ ಯಾವುದೇ ವ್ಯಕ್ತಿಯು ಐಹಿಕ ಸ್ವಭಾವದ ವಿಧಾನಗಳ ಪ್ರಭಾವದಿಂದ ಬಿಡುಗಡೆ ಹೊಂದುತ್ತಾನೆ.

ಕಪಿಲ ಮುನಿಯು ಐಹಿಕ ಜಗತ್ತಿನೊಂದಿಗಿನ ಗಂಟುಗಳನ್ನು ಕತ್ತರಿಸುವಂಥ ಜ್ಞಾನವನ್ನು ವಿವರಿಸಿದನು. ಜ್ಞಾನವು ಆತ್ಮ ಸಾಕ್ಷಾತ್ಕಾರದ ಅಂತಿಮ ಪರಿಶುದ್ಧತೆ. ಪರಮಾತ್ಮನು ಅತ್ಯುನ್ನತ ಆತ್ಮನಾಗಿದ್ದು ಅವನಿಗೆ ಆದಿಯೆಂಬುವದಿಲ್ಲ, ಭಗವಂತನು ಸ್ವಪ್ರಕಾಶಮಾನನಾಗಿದ್ದು ಆ ಪ್ರಕಾಶದಿಂದಾಗಿಯೇ ಇಡೀ ಸೃಷ್ಟಿಯು ನಡೆಸಲ್ಪಡುವುದರಿಂದ ಅವನನ್ನು ಎಲ್ಲೆಡೆಗಳಲ್ಲೂ ಕಾಣಬಹುದು. ಅವನು ಸೂಕ್ಷ್ಮ ಐಹಿಕ ಶಕ್ತಿಯನ್ನು ಅಂಗೀಕರಿಸಿದ್ದು ಅವನ್ನು ವಿಷ್ಣುವಿಗೆ ಸಂಬಂಧಿಸಿದ ಐಹಿಕ ಸ್ವಭಾವ ವಿಧಾನಗಳಲ್ಲಿ ತೊಡಗಿಸಲಾಗಿದೆ. ಐಹಿಕ ಪ್ರಜ್ಞೆಯು ಒಬ್ಬನ ಅಪಕ್ವ ಜೀವನಕ್ಕೆ ಕಾರಣವಾಗಿದ್ದು ಲೌಕಿಕ ಶಕ್ತಿಯಿಂದಾಗಿ ಅಪಕ್ವ ಜೀವಿಗಳ ಮೇಲೆ ಅದನ್ನು ಹೊರಲಾಗುತ್ತದೆ.

ದೇವಾಹುತಿಯು ತನ್ನ ಮಗನಾದ ಕಪಿಲ ಮುನಿಯನ್ನು ಭಗವಂತನ ಗುಣಶಕ್ತಿಗಳನ್ನು, ಅವು ವ್ಯಕ್ತಗೊಳ್ಳುವ ಹಾಗೂ ಅವ್ಯಕ್ತವಾಗೇ ಇರುವ ಸೃಷ್ಟಿಗಳಿಗೆ ಕಾರಣವಾದುದರಿಂದ ಅದನ್ನು ವಿವರಿಸಬೇಕೆಂದು ವಿನಂತಿಸಿಕೊಂಡಳು. ಕಪಿಲ ಮುನಿಯು ಮೂರು ವಿಧದ ಶಾಶ್ವತ ಸಮ್ಮಿಶ್ರಣದ ಅವ್ಯಕ್ತ ವ್ಯಕ್ತ ಸ್ಥಿತಿಗೆ ಕಾರಣವಾಗಿದ್ದು ಇದನ್ನು ಪ್ರಧಾನ ಎಂಬುದಾಗಿ ಕರೆಯಲಾಗಿದೆ ಎಂದು ವಿವರಿಸಿದನು. ಅಸ್ತಿತ್ವದ ವ್ಯಕ್ತ ಸ್ಥಿತಿಯಲ್ಲಿರುವಾಗ ಅದನ್ನು ಪ್ರಕೃತಿಯೆಂದು ಕರೆಯಲಾಗುತ್ತದೆ. ಮೂರು ವಿಧಾನಗಳ ಪರಸ್ಪರ ಸಕ್ರಿಯೆಗಳಿಂದ ಒಟ್ಟು ಐಹಿಕ ಅಂಶಗಳು ವ್ಯಕ್ತಗೊಂಡ ಅದನ್ನು ಪ್ರಕೃತಿ ಯೆನ್ನಲಾಗುತ್ತದೆ. ಪ್ರಧಾನವೆಂದರೆ: ಪಂಚ ಭೂತಗಳು, ಐದು ಸೂಕ್ಷ್ಮ ಅಂಶಗಳು, ನಾಲ್ಕು ಆಂತರಿಕ ಪ್ರಜ್ಞೆಗಳು, ಜ್ಞಾನವನ್ನು ಸಂಗ್ರಹಿಸುವಂಥ ಪಂಚೇಂದ್ರಿಯಗಳು ಮತ್ತು ಐದು ಕ್ರಿಯೆಯ ಬಾಹು ಅಂಗಗಳು (ಅನಿಲ ಅಂಶಗಳೆಂದರೆ, ಭೂಮಿ, ನೀರು, ಅಗ್ನಿ, ವಾಯು ಮತ್ತು ಆಕಾಶ, ಸೂಕ್ಷ್ಮ ಅಂಶಗಳೆಂದರೆ: ವಾಸನೆ, ರುಚಿ, ಬಣ್ಣ, ಸ್ಪರ್ಶ ಮತ್ತು ಶಬ್ದ. ಆಂತರಿಕ ಇಂದ್ರಿಯಗಳೆಂದರೆ : ಮನಸ್ಸು, ಬುದ್ಧಿ, ಅಹಂ, ಕಲ್ಮಶದಿಂದ ಒಡಗೂಡಿದ ಪ್ರಜ್ಞೆ ಮತ್ತು ಜ್ಞಾನ ಹಾಗೂ ಕ್ರಿಯೆಯನ್ನು ಪಡೆಯಲು ಅಗತ್ಯವಾದ ಹತ್ತು ಪ್ರಜ್ಞೆಗಳು).

ಈ ಇಪ್ಪತ್ನಾಲ್ಕು ಅಂಶಗಳನ್ನೊಳಗೊಂಡವನೇ "ಪರಿಪೂರ್ಣ ಬ್ರಹ್ಮನ್" (ಕಾಲವನ್ನು ಇಪ್ಪತ್ತೈದನೇ ಅಂಶವಾಗಿ ತಿಳಿಸುತ್ತದೆ) ನಿರ್ಗುಣ ಬ್ರಹ್ಮನ್‌ನಲ್ಲಿ ಐಹಿಕ

ಕಲ್ಮಶವಿಲ್ಲ ಅಥವಾ ಆಧ್ಯಾತ್ಮಿಕ ಜಗತ್ತಿನಲ್ಲಿ ಮೂರು ವಿಧಾನಗಳು - ಒಳ್ಳೆಯತನ, ಕಾಮ ಮತ್ತು ಮೃತ್ಯು - ಇವು ಹಾಜರಾಗಿಲ್ಲ. ಸಗುಣ ಬ್ರಹ್ಮನ್‌ನನ್ನು ಸಾಂಖ್ಯಾವೇದಾಂತಿಗಳ ಕಾಲವನ್ನು ಅಂದರೆ ಭೂತ, ವರ್ತಮಾನ ಮತ್ತು ಭವಿಷ್ಯವನ್ನೊಳಗೊಂಡಂತೆ ಇಪ್ಪತ್ತೈದು ಅಂಶಗಳಿಂದ ಕೂಡಿದವು ಎಂಬುದಾಗಿ ವಿವರಿಸಿದ್ದಾರೆ.

ಕಾಲವು ಸರ್ವದಾ ಭಗವಂತನಿಂದ ಪ್ರಭಾವಿತಗೊಳ್ಳುತ್ತದೆ. ಐಹಿಕ ಸ್ವಭಾವದ ಸಂಪರ್ಕವನ್ನು ಹೊಂದಿರುವಂಥ ಚಿಂತನೆಗೊಂಡ ಆತ್ಮದ ಸುಳ್ಳು ಅಹಂಮಿಕೆಯಿಂದಾಗಿ ಕಾಲವು ಮೃತ್ಯುವಿನ ಭಯವನ್ನು ಉಂಟು ಮಾಡುತ್ತದೆ. ಕಾಲವು ಭಗವಂತನ ಉನ್ನತ ವ್ಯಕ್ತಿತ್ವ. ಏಕೆಂದರೆ ಅವನಿಂದಲೇ ಸೃಷ್ಟಿಯ ಪ್ರಾರಂಭ, ತಟಸ್ಥ, ಅವ್ಯಕ್ತ ಸ್ವಭಾವದ ಚಡಪಡಿಸುವಿಕೆಯ ಪರಿಣಾಮವಾಗಿ ಇದು ಸಂಭವಿಸುತ್ತದೆ. (ಕಾಲದ ರೂಪದಲ್ಲಿ ಭಗವಂತನು ಗರ್ಭಧಾರಣೆ ಮಾಡದ ಹೊರತು ಸ್ತ್ರೀಯೊಬ್ಬಳು ಯಾವುದನ್ನೇ ಉತ್ಪಾದಿಸಲಾರಳು ಅಥವಾ ಸೃಷ್ಟಿಸಲಾರಳು). "ಭಗವಂತನು ತನ್ನ ಆಂತರಿಕ ಸಾಮರ್ಥ್ಯದಿಂದಾಗಿ ಉನ್ನತ ಐಹಿಕ ಶಕ್ತಿಯನ್ನು ಧಾರಣೆ ಮಾಡಿದ ನಂತರ ಐಹಿಕ ಸ್ವಭಾವವು ಹಿರಣ್ಯಗರ್ಭವೆಂಬುದಾಗಿ ಹೆಸರಾಗಿರುವ ಬ್ರಹ್ಮಾಂಡದ ಬುದ್ಧಿಶಕ್ತಿಯ ಒಟ್ಟು ಮೊತ್ತವನ್ನು ಐಹಿಕ ಸ್ವಭಾವವು ಹೊಂದಿರುತ್ತದೆ. ಅವಳು ಪಕ್ವಗೊಂಡ ಆತ್ಮಗಳ ಗುರಿಗಳ ಬಗ್ಗೆ ಗೊಂದಲಗೊಂಡಾಗ ಇದು ಐಹಿಕ ಸ್ವಭಾವದಲ್ಲಿ ಸಂಭವಿಸುತ್ತದೆ. (ಐಹಿಕ ಸ್ವಭಾವದ ಧಾರಣೆಯನ್ನು ಭಗವದ್ಗೀತೆಯ 14.3 ರಲ್ಲಿ ವಿವರಿಸಲಾಗಿದೆ. ಬ್ರಹ್ಮನ್‌ನೆಂದು ಕರೆಯಲಾದ ಒಟ್ಟು ಐಹಿಕ ಸತ್ತ್ವವು ಜನನದ ಮೂಲವಾಗಿದ್ದು ನಾನು ಜೀವಿಗಳೆಲ್ಲರ ಜನನವನ್ನು ಸಾಧ್ಯವಾಗಿಸಲು ಧಾರಣೆ ಮಾಡುವುದೇ ಬ್ರಹ್ಮನ್). ಐಹಿಕ ಸ್ವಭಾವದ ಪ್ರಮುಖ ಅಂಶವು ಮಹತ್ ತತ್ವ ಅಥವಾ ಎಲ್ಲ ವಿಧಗಳ ಸಂತಾನೋತ್ಪತ್ತಿಯ ಮೂಲ. ಪ್ರಧಾನ ಹಾಗೂ ಬ್ರಹ್ಮನ್‌ಎಂಬುದಾಗಿ ಕರೆಯಲಾಗುವ ಐಹಿಕ ಸ್ವಭಾವದ ಈ ಭಾಗವನ್ನು ಭಗವಂತನು ಧಾರಣೆ ಮಾಡಿ ವಿವಿಧ ರೀತಿಯ ಜೀವಿಗಳನ್ನು ಹುಟ್ಟಿಸುತ್ತಾನೆ. ಈ ಸಂದರ್ಭದಲ್ಲಿ ಐಹಿಕ ಪ್ರಕೃತಿಯನ್ನು ಬ್ರಹ್ಮನ್‌ಯೆಂಬುದಾಗಿ ಕರೆಯಲಾಗುತ್ತದೆ. ಏಕೆಂದರೆ ಇದು ಆಧ್ಯಾತ್ಮಿಕ ಸ್ವಭಾವದ ವ್ಯತಿರಿಕ್ತ ಪ್ರತಿಬಿಂಬ)

ತನ್ನೊಳಗೆ ಎಲ್ಲ ಜಗತ್ತುಗಳನ್ನು ಹೊಂದಿರುವಂಥ ಮಹತ್ ತತ್ವವು, ಎಲ್ಲ ವ್ಯಕ್ತಗೊಂಡ ಅವತಾರಗಳ ಮೂಲವಾದ್ದು ಮತ್ತು ಪ್ರಳಯ ಸಮಯದಲ್ಲಿ ಕಾಲದಿಂದ ವಿನಾಶವನ್ನು ಹೊಂದದಿರುವುದು. ಪ್ರಳಯ ಸಮಯದಲ್ಲಿ ಪ್ರಕಾಶವನ್ನು ಮುಚ್ಚಿಕೊಂಡಂಥ ಕತ್ತಲನ್ನು ನುಂಗಿ ಹಾಕುತ್ತದೆ. ಮೂರು ಗುಣಗಳಾದ ಸತ್ತ್ವ, ರಜಸ್ ಮತ್ತು ತವಸ್ - ಮಹತ್ ತತ್ತ್ವದಲ್ಲಿ ಅವತರಿಸುತ್ತದೆ. ವ್ಯಕ್ತ ಅಹಂಮಿಕೆಯ ಈ ಮೂರು ಮಾದರಿಗಳಿಂದ ಮನಸ್ಸು, ಅರಿಯುವ ಇಂದ್ರಿಯಗಳು, ಕ್ರಿಯೆಗೈಯ್ಯುವ ಅಂಗಾಂಗಗಳು ಮತ್ತು ಒಟ್ಟು ಮಾಲಾಂಶಗಳು ಹುಟ್ಟಿಕೊಳ್ಳುತ್ತವೆ: ಐಹಿಕ ಅಹಂ ಕೂಡ ಮಹತ್ ತತ್ತ್ವದಿಂದಲೇ ಚಿಮ್ಮುತ್ತದೆ. ಹುಸಿ ಅಹಂಮಿಕೆಯನ್ನು ಕಾಮುಕತೆಯಲ್ಲಿ ಪರಿವರ್ತನೆಗೊಳಿಸಿದಾಗ ಬುದ್ಧಿ ಶಕ್ತಿಯು ಜನಿಸುತ್ತದೆ. ಬುದ್ಧಿಶಕ್ತಿಯ ಕೆಲಸಗಳೆಂದರೆ ವಸ್ತುಗಳು ನೋಟಕ್ಕೆ ಸಿಲುಕಿದಾಗ ಅವುಗಳ ಸ್ವಭಾವವನ್ನು ಖಚಿತಪಡಿಸಿಕೊಳ್ಳುವುದು ಹಾಗೂ ಇಂದ್ರಿಯಗಳಿಗೆ

ನೆರವಾಗುವುದು. ಸಂಶಯ, ತಪ್ಪು ಕಲ್ಪನೆ, ಸರಿಯಾದ ಗ್ರಹಿಕೆ, ಸ್ಮರಣೆ ಹಾಗೂ ನಿದ್ರೆ ಇವುಗಳ ವಿವಿಧ ಕ್ರಿಯೆಗಳ ಮೂಲಕ ನಿಶ್ಚಯಿಸಲ್ಪಟ್ಟಥವು. ಇವುಗಳನ್ನು ಬುದ್ಧಿಶಕ್ತಿಯ ವಿಶೇಷ ಗುಣಗಳೆನ್ನಬಹುದಾಗಿದೆ. ಕಾಮುಕತೆಯ ವಿಧಾನದಲ್ಲಿನ ಅಹಂಮಿಕೆ ಎರಡು ವಿಧದ ಪ್ರಜ್ಞೆಗಳನ್ನು ಉಂಟು ಮಾಡುತ್ತದೆ - ಜ್ಞಾನದ ಸಂಪಾದನೆ ಮತ್ತು ಕ್ರಿಯಾಶಕ್ತಿ. ಮೊದಲನೆಯದು ಬುದ್ಧಿ ಶಕ್ತಿಯ ಮೇಲೆ ಅವಲಂಬಿತವಾಗಿದ್ದು ಎರಡನೆಯದು ಜೀವಶಕ್ತಿ. ಬುದ್ಧಿಶಕ್ತಿಯಲ್ಲಿನ ಅಹಂಮಿಕೆ ಭಗವಂತನ ಲೈಂಗಿಕ ಶಕ್ತಿಯಿಂದ ಗೊಂದಲಗೊಂಡಾಗ ಸೂಕ್ಷ್ಮ ಶಬ್ದಾಂಶವು ಹುಟ್ಟಿಕೊಂಡು, ಶಬ್ಧದಿಂದ ಆಲಿಸುವ ಪ್ರಜ್ಞೆಯುಂಟಾಗುತ್ತದೆ. (ವೇದಾಂತ ಸೂತ್ರದಲ್ಲಿ ಶಬ್ಧವು ಐಹಿಕ ಸ್ವಾಧೀನತೆಯ ಎಲ್ಲ ವಸ್ತುಗಳಿಗೂ ಮೂಲವಾಗಿದ್ದು ಶಬ್ಧದಿಂದ ಒಬ್ಬರು ಐಹಿಕ ಅಸ್ತಿತ್ವವನ್ನು ಕರಗಿಸಬಹುದೆಂದು ಹೇಳಲಾಗಿದೆ). ಪ್ರಾಜ್ಞರಾದವರು ಶಬ್ಧವನ್ನು ವಸ್ತುವೊಂದರ ಕಲ್ಪನೆಯನ್ನು ತಿಳಿಸುವಂಥದ್ದು, ಮಾತಾಡುವವನ ಅಸ್ತಿತ್ವವನ್ನು ಸೂಚಿಸುವಂಥದ್ದು ಎಂಬುದಾಗಿ ಅರ್ಥೈಸಿದ್ದಾರೆ: ಅದ್ದರಿಂದ ನಾವು ಆಲಿಸುವುದರ ಬಗ್ಗೆ ಮಾತನಾಡುವಾಗ ಮಾತನಾಡುವವನು ಒಬ್ಬನಿರಬೇಕೆಂದು ಸ್ಪಷ್ಟವಾಗುತ್ತದೆ; ಮಾತನಾಡುವವನಿಲ್ಲದೆ ಕೇಳುವ ಪ್ರಶ್ನೆಯೇ ಏಳುವುದಿಲ್ಲ. ಅದ್ದರಿಂದ ಶ್ರುತಿಯೆಂದು ಹೆಸರಾದ ಅಥವಾ ಆಲಿಸುವ ಮೂಲಕ ಪಡೆದಂಥ ವೈದಿಕ ಜ್ಞಾನವನ್ನು ಐಹಿಕವಾಗಿ ಸೃಷ್ಟಿಗೊಂಡ ಯಾವ ವ್ಯಕ್ತಿಯಿಂದಲೂ ಆಡಲ್ಪಡದಿರುವಂಥದ್ದು ಅಥವಾ ಅಪೌರುಷವೆಂದು ಕರೆಯಲಾಗಿದೆ. ಶಬ್ಧದಿಂದ ಪರಿವರ್ತನೆಯು ಸಂಭವಿಸಿ ಅದರಿಂದ ಸೂಕ್ಷ್ಮ ಅಂಶವಾದ ಸ್ಪರ್ಶ ಉಂಟಾಗುವುದರಿಂದ ಗಾಳಿ ಅಥವಾ ಸ್ಪರ್ಶವು ಪ್ರಮುಖವಾಗುತ್ತದೆ. ವಾಯುವಿನ ಸೂಕ್ಷ್ಮರೂಪವೆಂಬುದಾಗಿ ಅರ್ಥೈಸಲ್ಪಟ್ಟಿರುವಂತೆಯೇ ಮೃದುತ್ವ ಮತ್ತು ಗಟ್ಟಿತನ ಹಾಗೂ ಶೀಥಲ ಮತ್ತು ಶಾಖವು ಸ್ಪರ್ಶದ ವಿಶಿಷ್ಟ ಗುಣಗಳು. ಗಾಳಿಯ ಅಂತರ್‌ಪ್ರಕ್ರಿಯೆ ಮತ್ತು ಸ್ಪರ್ಶದ ಅನುಭವದಿಂದ ಒಬ್ಬರ ಕರ್ಮಕ್ಕೆ ಅನುಸಾರವಾಗಿ ವಿವಿಧ ರೂಪಗಳನ್ನು ಪಡೆದುಕೊಳ್ಳುತ್ತದೆ. ಅಂತರ ರೂಪಗಳು ಬದಲಾವಣೆಯಿಂದಾಗಿ ಅಗ್ನಿಯಿಂದ ಮತ್ತು ಕಣ್ಣುಗಳ ಬಣ್ಣಗಳಲ್ಲಿ ವಿವಿಧ ರೂಪಗಳನ್ನು ಕಾಣುತ್ತವೆ. ಅಗ್ನಿಯು ತನ್ನ ಬೆಳಕಿನಿಂದ, ಬೇಯಿಸುವ ಸಾಮರ್ಥ್ಯದಿಂದ, ಜೀರ್ಣಿಸುವ ಶಕ್ತಿಯಿಂದ, ಶೀತವನ್ನು ನಾಶಮಾಡುವುದರಿಂದ, ಆವಿಯಾಗಿಸುವುದರಿಂದ ಹಾಗೂ ಹಸಿವು, ಬಾಯಾರಿಕೆ, ತಿನ್ನುವುದು ಮತ್ತು ಕುಡಿಯುವುದಕ್ಕೆ ಅವಕಾಶ ಮಾಡಿಕೊಡುವುದರಿಂದ ಅದನ್ನು ಪ್ರಶಂಸಿಸಲಾಗುತ್ತದೆ. ಅಗ್ನಿಯ ಅಂತರ್‌ಕ್ರಿಯೆ ಮತ್ತು ಕಾಣಿಸುವ ಗುಣದಿಂದಾಗಿ ರುಚಿಯಂಥ ಸೂಕ್ಷ್ಮ ಅಂಶವು ಶ್ರೇಷ್ಠ ವ್ಯವಸ್ಥೆಯನ್ನು ಹೊಂದುತ್ತದೆ. ರುಚಿಯಿಂದ ನೀರು ಉತ್ಪಾದನೆಗೊಂಡು ರುಚಿಯನ್ನು ಅನುಭವಿಸುವ ನಾಲಗೆಯೂ ರೂಪುಗೊಳ್ಳುತ್ತದೆ. ನೀರಿನ ಗುಣಗಳು ಇತರರನ್ನು ತೇವವಾಗಿಸುವುದು, ವಿವಿಧ ಮಿಶ್ರಣಗಳನ್ನು ಬೆರೆಸುವುದು, ತೃಪ್ತಿಯನ್ನುಂಟು ಮಾಡುವುದು, ಜೀವನವನ್ನು ಮುಂದುವರಿಸುವುದು ಮುಂತಾದವುಗಳ ಮೂಲಕ ಪ್ರದರ್ಶಿತಗೊಳ್ಳುತ್ತದೆ. ನೀರು ರುಚಿಯ ಸಾಮರ್ಥ್ಯದೊಂದಿಗೆ ಪ್ರಕ್ರಿಯಿಸಿದಾಗ ಸೂಕ್ಷ್ಮತರ ವಾಸನೆಯು ಶ್ರೇಷ್ಠ ವ್ಯವಸ್ಥೆಯ ಕೆಳಗೆ ಉಂಟಾಗತ್ತದೆ. ಹೀಗೆ ಭೂಮಿ ಮತ್ತು ಪ್ರಾಣಕ್ಕೆ ಸಂಬಂಧಿಸಿದ

ತಿಳಿವಳಿಕೆ. (ವಾಸನೆಗೆ ಸಂಬಂಧಿಸಿದಂತೆ). ಭೂಮಿಯ ಎಲ್ಲ ಭೌತಿಕ ಅಂಶಗಳಿಗ ಉಳಿಯುವಿಕೆಗೆ ಸ್ಥಾನ. ಎಲ್ಲ ಭೌತಿಕ ಅಂಶಗಳ ವೈಚಿತ್ರ್ಯಗಳು ಭೂಮಿಯಲ್ಲಿ ಮಾ ಅಸ್ತಿತ್ವದಲ್ಲಿರುತ್ತದೆ.

ಮೇಲಿನ ಎಲ್ಲ ಅಂಶಗಳೂ ಬೇರೆಕೆಯಾಗದಿದ್ದಾಗ, ಕಾಲ, ಕೆಲಸ, ಐಹಿ ಪ್ರಕೃತಿಯ ವಿಧಾನಗಳ ಗುಣಗಳು ಇವುಗಳ ಮೂಲವಾದ ಭಗವಂತನು ಒಟ್ಟು ಐಹಿ ಶಕ್ತಿಗಳೊಂದಿಗೆ ಏಳು ವಿಭಾಗಗಳಲ್ಲಿ ಜಗತ್ತನ್ನು ಪ್ರವೇಶಿಸಿದನು. ಈ ಏಳು ತತ್ತ್ವಗಳ ಕ್ರಿಯೆಯನ್ನು ಪ್ರಾರಂಭಿಸಿ ಭಗವಂತನ ಎದುರಿನಲ್ಲಿ ಒಟ್ಟುಗೂಡಿದಾಗ ಬುದ್ಧಿ ಶೂನ್ಯವಾದ ಮೊಟ್ಟೆಯು ಮೇಲೆದ್ದು ಅದರಿಂದ ಪ್ರಖ್ಯಾತನಾದ ವಿಶ್ವದ ಜೀವಿಯ ಕಾಣಿಸಿಕೊಂಡನು. ಮೊಟ್ಟೆಯ ಆಕಾರದ ಜಗತ್ತನ್ನು ಐಹಿಕ ಶಕ್ತಿಯ ಸಾಕಾರ ರೂಪವೆಂದ ಕರೆಯಲಾಗಿದೆ. ಅದರ ನೀರು, ಗಾಳಿ, ಬೆಂಕಿ, ಅಕಾಶ, ಅಹಂ ಹಾಗೂ ಮಹತ್‌ತ ಇವುಗಳ ಪದರುಗಳು ಒಂದಾದ ನಂತರ ಒಂದರಂತೆ ಉಬ್ಬುತ್ತಲೇ ಹೋಗುತ್ತದೆ. ಪ್ರ ಪದರವೂ ಮುಂಚಿನದಕ್ಕಿಂತಲೂ ಹತ್ತು ಪಟ್ಟು ದೊಡ್ಡದಾಗಿದ್ದು ಕೊನೆಯ ಹೊರಗಿ ಪದರವು ಪ್ರಧಾನದಿಂದ ಹೊಚ್ಚಲ್ಪಡುತ್ತದೆ. ಈ ಮೊಟ್ಟೆಯೊಳಗೆ ಶ್ರೀ ಹರಿಂ ವಿಶ್ವರೂಪವಿದ್ದು ಅವನ ದೇಹದ ಭಾಗಗಳೆಂದರೆ ಹದಿನಾಲ್ಕು ಗ್ರಹ ವ್ಯವಸ್ಥೆಗಳ ಭಗವಂತನ ಅತ್ಯುನ್ನತ ವ್ಯಕ್ತಿತ್ವವಾದ ವಿರಾಟಪುರುಷನು ತಾನೇ ಈ ಸುವರ್ಣ ಮೊ ಅಥವಾ ಹಿರಣ್ಯಗರ್ಭವನ್ನು ಪ್ರವೇಶಿಸಿ ಅದನ್ನು ಅನೇಕ ವಿಭಾಗಗಳಾಗಿ ವಿಭಜಿಸಿದನ

ಮೊದಲು ಅವನಲ್ಲಿ ಬಾಯಿಯು ಹುಟ್ಟಿಕೊಂಡಿತು. ಅದಕ್ಕೆ ಹೊಂದಿಕೊಂಡಂ ಮಾತಿನ ಅವಯವ ಉಂಟಾಯಿತು. ಅದರೊಂದಿಗೆ ಆ ಅಂಗದ ನೇತೃತ್ವವನ ವಹಿಸುವ ಅಗ್ನಿ ದೇವನು ಬಂದ. ಅನಂತರ ಮೂಗಿನ ಹೊಳ್ಳೆಗಳ ಒಂದು ಜೋಡಿಯ ಕಾಣಿಸಿಕೊಂಡು ಅದನ್ನು ಅನುಸರಿಸಿದಂತೆ ಆಘ್ರಾಣ ಶಕ್ತಿ, ಪ್ರಾಣ ಮತ್ತು ಜೀ ವಾಯುವು ಹುಟ್ಟಿಕೊಂಡವು.

ಆಘ್ರಾಣ ಶಕ್ತಿಯ ತಿಳಿವಳಿಕೆಯುಂಟಾಗುತ್ತಿದ್ದಂತೆಯೇ ಅದರ ನೇತೃತ್ವ ವಹಿಸು ವಾಯುದೇವನ ಆಗಮನವಾಯಿತು. ಆನಂತರ ಕಣ್ಣುಗಳ ಜೋಡಿ ಕಾಣಿಸಿಕೊಂಡ ನಂತರ ಅವುಗಳಲ್ಲಿ ಕಾಣುವ ಶಕ್ತಿಯುಂಟಾಯಿತು. ಈ ಇಂದ್ರಿಯ ಸೃಷ್ಟಿಗೊಳ್ಳುತ್ತಿದ್ದಂತೆಯೆ ಅದರ ನೇತೃತ್ವ ವಹಿಸುವ ಸೂರ್ಯದೇವನ ಆಗಮನವಾಯಿತು. ಅದರ ಪಕ್ಕದ ಎರಡು ಕಿವಿಗಳು ಕಾಣಿಸಿಕೊಂಡು ಅದಕ್ಕೆ ಕೇಳುವ ಶಕ್ತಿಯುಂಟಾಗಿ, ದಿಕ್ಕುಗ ನೇತೃತ್ವವನ್ನು ವಹಿಸುವ ದೇವತೆಗಳು ಕಾಣಿಸಿಕೊಂಡರು. ವಿಶ್ವ ರೂಪದ ಮೇಲೆ ತ್ವಚ ಕೂದಲು, ಮೀಸೆ, ಗಡ್ಡ, ಔಷಧಿಗಳು ಹಾಗೂ ಜನನೇಂದ್ರಿಯಗಳು ಕಾಣಿಸಿಕೊಂಡವ ಇದಾದ ನಂತರ ವೀರ್ಯವು ಕಾಣಿಸಿಕೊಂಡು ನೀರಿನ ನೇತೃತ್ವದ ದೇವತೆಯ ಕಾಣಿಸಿಕೊಂಡಳು. ಇವಲ್ಲದೆ ಅಸನದ್ವಾರ ಹಾಗೂ ಮೃತ್ಯು ದೇವತೆಯು ಕಾಣಿಸಿಕೊಂಡರ

ಆನಂತರ ಎರಡು ಕೈಗಳು ಕಾಣಿಸಿಕೊಂಡು ಅದರೊಂದಿಗೆ ವಸ್ತುಗಳನ ಬಾಚಿಕೊಳ್ಳುವ ಹಾಗೂ ಬೀಳಿಸುವ ಶಕ್ತಿಯುಂಟಾಯಿತಲ್ಲದೆ, ಇಂದ್ರನ ಉಗಮವಾಯಿತ

ಮುಂದೆ ಕಾಲುಗಳು ಕಾಣಿಸಿಕೊಂಡಾಗ ಚಲನೆಯ ಕ್ರಿಯೆ ಪ್ರಾರಂಭವಾಗಿ ಅದರೊಂದಿಗೆ ವಿಷ್ಣು ಪರಮಾತ್ಮನು ಕಾಣಿಸಿಕೊಂಡನು.

ರಕ್ತನಾಳಗಳು ಹಾಗೂ ಕೆಂಪು ರಕ್ತದ ಕಣಗಳು ಅಥವಾ ರಕ್ತ ಕಾಣಿಸಿಕೊಂಡು ಅವುಗಳೊಂದಿಗೆ ನಾಡಿಗಳು ಹಾಗೂ ಹೊಟ್ಟೆ ಕಂಡವು. ಆನಂತರ ಹಸಿವು, ಬಾಯಾರಿಕೆ, ಹೃದಯ ಮತ್ತು ಬುದ್ಧಿ. ಆನಂತರ ಮನಸ್ಸು ಕಾಣಿಸಿಕೊಂಡಿತು. (ಬುದ್ಧಿಶಕ್ತಿಯನ್ನು ಚಂದ್ರನು ಅನುಸರಿಸಿದ. ಬ್ರಹ್ಮನೂ ಉಗಮಿಸಿದ) ಆನಂತರ ಹುಸಿ ಅಹಂ ಕಾಣಿಸಿಕೊಂಡಿತು. ನಂತರ ಮಹೇಶ್ವರ, ಅವನ ನಂತರ ಪ್ರಜ್ಞೆ ಹಾಗೂ ಅದರ ಅಧಿದೇವತೆ. ಉಪದೇವತೆಗಳು ತಮ್ಮ ಕಾಣುವಿಕೆಯ ಮೂಲವನ್ನು ಎಚ್ಚರಿಸಲು ಬಯಸಿದರೂ ಅಲ್ಲಿ ಸೋತರು. ವಿರಾಟಪುರುಷನನ್ನು ಪ್ರವೇಶಿಸಿದ ಉಪದೇವತೆಗಳ್ಯಾರೂ ವಿರಾಟ ಪುರುಷನನ್ನು ಎಚ್ಚರಿಸಲು ಸಮರ್ಥರಾಗಲಿಲ್ಲ. ಕೊನೆಗೆ ಪ್ರಜ್ಞೆಯ ಅಧಿದೇವತೆಯು ಬುದ್ಧಿಯೊಂದಿಗೆ ಹೃದಯವನ್ನು ಪ್ರವೇಶಿಸಿದಾಗ ತತ್‌ಕ್ಷಣ ವಿಶ್ವ ಜೀವಿಯು ಕಾರಣ ಸಾಗರದಿಂದ ಉದ್ಭವಿಸಿದನು. ಆದ್ದರಿಂದ ಭಕ್ತಿ, ನಿರ್ಮಮಕಾರ ಮತ್ತು ಕೇಂದ್ರೀಕರಿಸಿದ ಭಕ್ತಿಪೂರ್ವಕ ಸೇವೆಯ ಮೂಲಕ ಪಡೆದುಕೊಂಡಂಥ ಅಧ್ಯಾತ್ಮಿಕ ತಿಳಿವಳಿಕೆಯ ಮುನ್ನಡೆಯ ಮೂಲಕ ಈ ಶರೀರದಿಂದ ಹಾಗೂ ಅದೇ ಕಾಲಕ್ಕೆ ಅದರಿಂದ ಪ್ರತ್ಯೇಕಗೊಂಡು ಆ ಉನ್ನತಾತ್ಮನನ್ನು ಕುರಿತು ಧ್ಯಾನಿಸಬೇಕು.

ಕಪಿಲ ಮುನಿಯು ಮುಂದುವರಿಸಿದನು :“ಲೌಕಿಕ ಶರೀರದಲ್ಲಿರುವ ಜೀವಿತಾತ್ಮನು ನೀರಿನಲ್ಲಿ ಪ್ರತಿಬಿಂಬಿಸುವ ಸೂರ್ಯನಂತೆ ಪ್ರಭಾವಕೊಳ್ಳಪಡೆದೆಯೇ ಉಳಿದುಕೊಳ್ಳುತ್ತಾನೆ. ಆಂದರೆ ಆತ್ಮವು ಐಹಿಕ ಪ್ರಕೃತಿಯ ಪ್ರಭಾವಕ್ಕೆ ಸಿಲುಕಿ ತನ್ನ ಶರೀರವೇ ಆತ್ಮವೆಂಬುದಾಗಿ ಹುಸಿ ಆಹಂನ್ನು ಹೊಂದಿರುವಾಗ ಅವನು ಐಹಿಕ ಚಟುವಟಿಕೆಗಳಲ್ಲೇ ಮುಳುಗು ವಂಥವನಾಗುತ್ತಾನೆ. ಆದ್ದರಿಂದ ಪ್ರತಿಯೊಬ್ಬ ಅಪರಿಪಕ್ವ ಆತ್ಮನ ಕರ್ತವ್ಯವು ಈಗ ಐಹಿಕ ಹರ್ಷದೊಂದಿಗೆ ಹೊಂದಿಕೊಂಡಿರುವ ಕಲ್ಮಶ ಪ್ರಜ್ಞೆಯಲ್ಲಿ ನಿರ್ಮಮಕಾರದೊಂದಿಗೇ ತೀರಾ ಗಂಭೀರವಾದ ಭಕ್ತಿಪೂರ್ವಕ ಸೇವೆಯಲ್ಲಿ ತೊಡಗಿಕೊಳ್ಳಬೇಕು. ಹೀಗೆ ಅವನ ಬುದ್ಧಿ ಮತ್ತು ಪ್ರಜ್ಞೆಯು ನಿಯಂತ್ರಣದಲ್ಲಿರುತ್ತವೆ. ಪರಮಾತ್ಮನನ್ನು ಕುರಿತು ಪಠಿಸುವುದು ಮತ್ತು ಅವನ ಬಗ್ಗೆ ಆಲಿಸುವ ಮೂಲಕ ಒಬ್ಬರು ಪರಿಶುದ್ಧವಾದ ಭಕ್ತಿಪೂರ್ವಕ ಸೇವೆಯ ವೇದಿಕೆಗೆ ತಮ್ಮನ್ನೇ ಏರಿಸಿಕೊಳ್ಳಬಹುದು. ನಿಜವಾದ ಭಕ್ತನು ಪ್ರತಿಯೊಬ್ಬ ಜೀವಿಯನ್ನು ಸರಿಸಮವಾಗಿ ಮತ್ತು ಯಾರ ಬಗ್ಗೆಯೂ ಶತೃತ್ವವನ್ನು ಹೊಂದದೆ ಹಾಗೂ ನಿಕಟ ಸಂಬಂಧವೇರ್ಪಡಿಸಿಕೊಳ್ಳದೆ ನೋಡಬೇಕು. ಒಬ್ಬನು ಬ್ರಹ್ಮಚರ್ಯವನ್ನು ಪಾಲಿಸಬೇಕು ಹಾಗೂ ಪರಮಾತ್ಮನಿಗೆ ಸರ್ವವನ್ನೂ ಸಲ್ಲಿಸುತ್ತ ತನ್ನ ಚಟುವಟಿಕೆಗಳನ್ನು ನಡೆಸಬೇಕು. ಅವನು ಹೆಚ್ಚಾಗಿ ತಿನ್ನಕೂಡದು. ಏಕಾಂತ ಸ್ಥಳದಲ್ಲಿ ವಾಸವಾಗಬೇಕು, ಆಲೋಚನಾಪರನಾಗಿರಬೇಕು, ಶಾಂತನಾಗಿರಬೇಕು, ಸ್ನೇಹದಿಂದಿರಬೇಕು, ಅನುಕಂಪದಿಂದ

ಕೂಡಿರಬೇಕು ಹಾಗೂ ಆತ್ಮವನ್ನು ಸಾಕ್ಷಾತ್ಕಾರಗೊಳಿಸಿಕೊಂಡಿರಬೇಕು. ಒಬ್ಬರು ಚೈತನ್ಯ ಮತ್ತು ಮೂಲದ್ರವ್ಯಗಳ ತಿಳಿವಳಿಕೆಯ ಮೂಲಕ ಶಕ್ತಿಯನ್ನು ಹೆಚ್ಚಿಸಿಕೊಳ್ಳಬೇಕು ಹಾಗೂ ಯಾರೊಬ್ಬರೂ ಅನವಶ್ಯಕವಾಗಿ ಶರೀರದೊಂದಿಗೆ ತನ್ನನ್ನು ಹೋಲಿಸಿಕೊಳ್ಳಬಾರದು ಹಾಗೂ ಶಾರೀರಿಕ ಸಂಬಂಧಗಳ ಆಕರ್ಷಣೆಗೆ ಒಳಗಾಗಬಾರದು. ಅವನು ಎಲ್ಲೆಡೆಗಳಲ್ಲಿ ಭಗವಂತನ ಇರುವಿಕೆಯನ್ನು ಅರಿಯಬೇಕು.

ಪ್ರಕೃತಿಯು ಎಂದಾದರೂ ಚೇತನ ಹಾಗೂ ಆತ್ಮಕ್ಕೆ ಬಿಡುಗಡೆ ನೀಡುತ್ತದೆಯೇ ಮತ್ತು ಅವು ಶಾಶ್ವತವಾಗಿ ಪರಸ್ಪರ ಆಕರ್ಷಿತಗೊಂಡಿರುವುದದಿಂದ ಅವುಗಳು ಪ್ರತ್ಯೇಕಗೊಳ್ಳುವುದು ಹೇಗೆ ಸಾಧ್ಯ ಎಂಬುದಾಗಿ ದೇವಾಹುತಿಯು ವಿಚಾರಿಸಿದಳು; ಅದಕ್ಕೆ ಕಪಿಲ ಮುನಿಯು ಒಬ್ಬರು ಪರಮಾತ್ಮನಿಗೆ ಭಕ್ತಿಪೂರ್ವಕ ಸೇವೆಯನ್ನು ಗಂಭೀರವಾಗಿ ಸಲ್ಲಿಸುವ ಮೂಲಕ ಹಾಗೂ ಅವನನ್ನು ಕುರಿತು ಕೇಳುವ ಮೂಲಕ ಮುಕ್ತಿಯನ್ನು ಪಡೆದುಕೊಳ್ಳಬಹುದೆಂದನು. ಒಬ್ಬರ ಸೂಚಿತ ಕರ್ತವ್ಯಗಳನ್ನು ನೆರವೇರಿಸುವ ಮೂಲಕ ಯಾವ ಪ್ರಕ್ರಿಯೆಯೂ ಇರದೆ ಅವರು ಮೂಲದ್ರವ್ಯಗಳ ಕಲುಷಿತ ಗೊಳ್ಳುವಿಕೆಯಿಂದ ಮುಕ್ತರಾಗಬಹುದೆಂದರು. ಭಕ್ತಿಸೇವೆಯನ್ನು ಪರಿಪೂರ್ಣ ತಿಳಿವಳಿಕೆಯಿಂದ ಹಾಗೂ ಮೇಲ್ಮಟ್ಟದ ದೃಷ್ಟಿಯಿಂದ ಪ್ರಬಲವಾಗಿ ಸಲ್ಲಿಸಬೇಕು. ಒಬ್ಬರು ಸರಳವಾಗಿದ್ದು ಆತ್ಮದಲ್ಲೇ ಮುಳುಗುವತ್ತ ಸ್ಥಿರವಾಗಿ ಮನಸ್ಸನ್ನು ಕೇಂದ್ರೀಕರಿಸಲು ಅತೀಂದ್ರಿಯ ಯೋಗದಲ್ಲಿ ನಿರತರಾಗಬೇಕು. ಅವನು ಲೌಕಿಕ ಚಟುವಟಿಕೆಗಳಲ್ಲಿ ತೊಡಗಿದ್ದರೂ ಸಹ ಲೌಕಿಕ ಸ್ವಭಾವದ ಪ್ರಭಾವವು ವಿಕಾಸಗೊಂಡ ಆತ್ಮವನ್ನು ಹಾನಿಗೊಳಿಸಲಾರದು. ಏಕೆಂದರೆ ಪರಮಾತ್ಮನನ್ನು ಕುರಿತಂಥ ಸತ್ಯವು ಅವನಿಗೆ ತಿಳಿದಿದ್ದು ಪರಮಾತ್ಮನ ಮೇಲೇ ಅವನು ಮನಸ್ಸನ್ನು ಕೇಂದ್ರೀಕರಿಸಿರುವ ಕಾರಣಕ್ಕಾಗಿ ಇದು ಸಾಧ್ಯವಾಗುತ್ತದೆ.

ಕಪಿಲ ಮುನಿಯು ತನ್ನ ತಾಯಿಗೆ ಮನಸ್ಸನ್ನು ಕೇಂದ್ರೀಕರಿಸುವುದನ್ನೇ ಉದ್ದೇಶವನ್ನಾಗಿ ಹೊಂದಿರುವ ಯೋಗ ಪದ್ಧತಿಯ ವಿವರಣೆಯನ್ನು ಮುಂದುವರಿಸಿದನು. ಈ ಪದ್ಧತಿಯನ್ನು ಅಭ್ಯಸಿಸುವ ಮೂಲಕ ಒಬ್ಬರು ಸಂತೋಷ ಚಿತ್ತರಾಗಿ ಪರಮಸತ್ಯದ ಮಾರ್ಗದತ್ತ ಮುಂದುವರಿಯಬಹುದು. ನಿಗದಿತ ಕರ್ತವ್ಯಗಳನ್ನು ಒಬ್ಬರು ಮಾಡಬೇಕಲ್ಲದೆ ಅನಿಗದಿತವಾದದ್ದನ್ನಲ್ಲ. ಭಗವಂತನ ಕೃಪೆಯಿಂದ ತಾನೆಷ್ಟು ಸಾಧಿಸದ್ದೇನೋ ಅದರ ಬಗ್ಗೆ ತೃಪ್ತಿಯನ್ನು ಹೊಂದಿ ಅವನನ್ನು ಪ್ರಾರ್ಥಿಸಬೇಕು. ಒಬ್ಬರು ಧರ್ಮವನ್ನು ಆರ್ಥಿಕತೆಗಾಗಿ ಅಭ್ಯಾಸ ಮಾಡದೆ ಐಹಿಕ ಬಂಧನಗಳಿಂದ ತನ್ನನ್ನೇ ಬಿಡಿಸಿಕೊಳ್ಳುವ ಉದ್ದೇಶದಿಂದ ಆಚರಿಸಬೇಕು. ಎಚ್ಚರಿಕೆಯಿಂದಿದ್ದು ಏಕಾಂತ ಸ್ಥಳದಲ್ಲಿ ಉಳಿಯಬೇಕು. ಅಹಿಂಸೆ ಹಾಗೂ ಸತ್ಯಸಂಧತೆಯನ್ನು ಆಚರಿಸಬೇಕು ಮತ್ತು ಕಳ್ಳತನದಲ್ಲಿ ತೊಡಗಕೂಡದು. ಅವನು ಲೈಂಗಿಕ ಚಟುವಟಿಕೆಯನ್ನು ಬಹಿಷ್ಕರಿಸಿ, ವೇದಗಳನ್ನು ಅಧ್ಯಯನ ಮಾಡಿ ಭಗವಂತನ ಉನ್ನತ ಸ್ವರೂಪವನ್ನು ಆರಾಧಿಸಬೇಕು, ಒಬ್ಬರು ಮೌನವನ್ನಾಚರಿಸಬೇಕು. ವಿವಿಧ ಯೋಗ ಭಂಗಿಗಳನ್ನು ಅಭ್ಯಸಿಸಿ ಸ್ಥಿರತೆಯನ್ನು ಪಡೆದುಕೊಳ್ಳಬೇಕಲ್ಲದೆ ಪ್ರಾಣ ವಾಯುವಿನ ಉಸಿರಾಟವನ್ನು ನಿಯಂತ್ರಿಸಿಕೊಳ್ಳಬೇಕು. ಇಂದ್ರಿಯ ವಿಷಯಗಳಿಂದ

ಬುದ್ಧಿಯನ್ನು ಹಿಂತೆಗೆದುಕೊಳ್ಳಬೇಕು ಹಾಗೂ ಮನಸ್ಸನ್ನು ಹೃದಯದ ಮೇಲೆ ಕೇಂದ್ರೀಕರಿಸಬೇಕು. ಉಸಿರಾಟದ ಅಭ್ಯಾಸದಲ್ಲಿ ತೊಡಗಿರುವ ಯೋಗಿಗಳು ಮಾನಸಿಕ ಗೊಂದಲಗಳಿಂದ ಬೇಗನೆ ಮುಕ್ತರಾಗುತ್ತಾರೆ. ಮನಸ್ಸನ್ನು ಪರಿಶುದ್ಧಗೊಳಿಸಿಕೊಂಡ ನಂತರ ಭಗವಂತನಲ್ಲಿ ಅದನ್ನು ಕೇಂದ್ರೀಕರಿಸಬೇಕು.

ಭಗವಂತನು ಕಮಲ ಪುಷ್ಪದಂಥ ಮುಖಭಾವವನ್ನು ಹೊಂದಿದ್ದು ಹೊಳೆಯುವ ಕಣ್ಣುಗಳು ಪುಷ್ಪದ ಒಳಭಾಗದಂತಿದ್ದರೆ ಶ್ಯಾಮ ಶರೀರವು ನೀಲಿ ತಾವರೆಯ ದಳಗಳಂತಿದೆ. ಅವನು ತನ್ನ ಮೂರು ಕೈಗಳಲ್ಲಿ ಶಂಖ ಚಕ್ರ ಗದೆಗಳನ್ನು ಹಿಡಿದಿದ್ದಾನೆ. ಅವನ ಸೊಂಟವನ್ನು ತಾವರೆಯ ಪರಾಗಗಳಂಥ ಚಿನ್ನದ ಬಣ್ಣದ ಹೊಳೆಯುವ ವಸ್ತ್ರದಿಂದ ಮುಚ್ಚಲಾಗಿದೆ. ಅವನು ತನ್ನ ವಕ್ಷಸ್ಥಳದಲ್ಲಿ ಬಿಳಿಗೂದಲಿನ ಗುಂಗುರೊಂದರ ಮೂಲಕ ಶ್ರೀವತ್ಸ ಚಿಹ್ನೆಯನ್ನು ಹೊಂದಿದ್ದಾನೆ. ಅವನ ಕತ್ತಿನಿಂದ ಪ್ರಕಾಶಮಯ ಕೌಸ್ತುಭ ಮಣಿಯು ತೂಗಾಡುತ್ತದೆ. ಅವನು ತನ್ನ ಕೊರಳ ಸುತ್ತಲೂ ಆಕರ್ಷಕ ಕೌಸ್ತುಭ ಮಾಲೆಯನ್ನು ಧರಿಸಿದ್ದು ಅದರ ಸುವಾಸನೆಯಿಂದ ಮತ್ತೇರಿದ ದುಂಬಿಗಳ ಸಮೂಹವು ಆ ಮಾಲೆಯ ಸುತ್ತಲೂ ಝೇಂಕರಿಸುತ್ತಿದೆ. ಅವನು ಮುತ್ತಿನ ಸರವನ್ನು, ಕಿರೀಟವನ್ನು, ತೋಳುಬಂಧಿಗಳನ್ನು ಕಡಗ ಹಾಗೂ ಕಾಲಂದಿಗೆಯನ್ನು ಧರಿಸಿದ್ದಾನೆ. ಅವನ ಸೊಂಟ ಹಾಗೂ ಅಂಡುಗಳು ಡಾಬುಗಳಿಂದ ಅಲಂಕೃತವಾಗಿವೆ. ಅವನು ತನ್ನ ಭಕ್ತರ ಹೃದಯಕಮಲದ ಮೇಲೆ ನಿಂತಿದ್ದಾನೆ. ಅವನು ನೋಡಲು ಅತ್ಯಂತ ಸುಂದರನಾಗಿದ್ದು ಅವನ ಶಾಂತ ಮುಖಭಾವವು ಅವನನ್ನು ಆರಾಧಿಸುವ ಭಕ್ತರ ಕಣ್ಣುಗಳು ಮತ್ತು ಆತ್ಮಗಳಿಗೆ ಸಂತಸವನ್ನು ಉಂಟು ಮಾಡುತ್ತದೆ. ಭಗವಂತನು ನಿರಂತರವಾಗಿ ಸುಂದರನಾಗಿದ್ದು ಅವನು ಪ್ರತಿಯೊಂದು ಗ್ರಹದ ನಿವಾಸಿಗಳೆಲ್ಲರಿಂದಲೂ ಪೂಜಾರ್ಹನು. ಅವನು ಸದಾ ಯೌವ್ವನಸ್ಥ ಹಾಗೂ ಯಾವಾಗಲೂ ತನ್ನ ಭಕ್ತಾದಿಗಳನ್ನು ಆಶೀರ್ವದಿಸಲು ಕಾತುರನಾಗಿರುವವನು.

ಯೋಗ ವಿದ್ಯೆಯಿಂದ ಒಬ್ಬರು ಭಗವಂತನಿಂದ ಸ್ವತಂತ್ರವಾಗಿ ತನ್ನನ್ನೇ ಕುರಿತು ಆಲೋಚಿಸುವಂಥ ಮೌಢ್ಯವನ್ನು ಹೋಗಲಾಡಿಸಿಕೊಳ್ಳಬಹುದು. ಪರಬ್ರಹ್ಮನೆಂದು ಹೆಸರಾದ ಪರಮಾತ್ಮನು ಮುನಿಯು. ಪಂಚೇಂದ್ರಿಯಗಳು ಮತ್ತು ಪ್ರಜ್ಞೆಯ ಸಮ್ಮಿಶ್ರಣ ವಾದ ಎಲ್ಲ ರೂಪಗಳಲ್ಲಿಯೂ ಒಂದೇ ಬಗೆಯ ಆತ್ಮನನ್ನು ಕಾಣಬೇಕು. ಏಕೆಂದರೆ ಇರುವುದೆಲ್ಲವೂ ಭಗವಂತನ ವಿವಿಧ ಶಕ್ತಿಯ ರೂಪಗಳು. ಭಕ್ತನು ಎಲ್ಲ ಜೀವಿಗಳನ್ನು ತಾರತಮ್ಯವಿಲ್ಲದೆಯೇ ನೋಡಬೇಕು, ಅದೇ ಉನ್ನತಾತ್ಮನ ಸಾಕ್ಷಾತ್ಕಾರ.

ಎಲ್ಲ ಅಧ್ಯಾತ್ಮ ಪದ್ಧತಿಗಳ ಅಂತಿಮ ಗುರಿಯಾದ ಭಕ್ತಿಪೂರ್ವಕ ಸೇವೆಯ ಮಾರ್ಗವನ್ನು ವಿವರಿಸಬೇಕೆಂದು ದೇವಾಹುತಿಯು ಕಪಿಲನನ್ನು ಕೇಳಿದಳು. ಹುಟ್ಟುಸಾವುಗಳ ನಿರಂತರ ಕ್ರಿಯೆಯನ್ನು ಕುರಿತೂ ವಿವರಿಸಬೇಕೆಂದು ಅವಳು ಕೇಳಿಕೊಂಡಳು. ಏಕೆಂದರೆ ಅಂಥ ಅನಾಹುತಗಳನ್ನು ಕೇಳುವ ಮೂಲಕವೇ ಈ ಐಹಿಕ ಜಗತ್ತಿನ ಚಟುವಟಿಕೆಗಳಿಂದ ದೂರವಾಗುವುದು ಸಾಧ್ಯ. ಭಗವಂತನ ರೂಪದ ಪ್ರತಿನಿಧಿಯಾದ ಶಾಶ್ವತ ಕಾಲವನ್ನು ವಿವರಿಸಬೇಕೆಂದೂ ಹಾಗೂ ಯಾರ ಪ್ರಭಾವದಿಂದ ಸಾಮಾನ್ಯವಾಗಿ ಜನರು ಪವಿತ್ರ ಚಟುವಟಿಕೆಗಳಲ್ಲಿ ತೊಡಗುತ್ತಾರೆಂಬುದನ್ನು ತಿಳಿಸುವಂತೆ ಕೇಳಿದಳು.

ಅದಕ್ಕೆ ಕಪಿಲ ಮುನಿಯು ಸೇವೆ ಮಾಡುವವನ ವಿವಿಧ ಗುಣಗಳ ಅನ್ವಯ ಭಕ್ತಿಯ ಸಲ್ಲಿಸುವಿಕೆಗೆ ಅನೇಕಾನೇಕ ವಿಧಗಳು ಇವೆ ಎಂಬುದಾಗಿ ತಿಳಿಸಿದನು. ಶತೃತ್ವವನ್ನು ಹೊಂದಿರುವ, ಜಂಭಗಾರನಾದ, ಹಿಂಸಾತ್ಮಕ ಹಾಗೂ ಕೋಪಾವಿಷ್ಠನಾದ ಮತ್ತು ಪ್ರತ್ಯೇಕವಾದಿಯಾದವನು ನಡೆಸುವ ಭಕ್ತಿಪೂರ್ವಕ ಸೇವೆಯನ್ನು ಅಂಧಕಾರದ ವಿಧಾನವೆಂದು ಪರಿಗಣಿಸಲಾಗಿದೆ. ಪ್ರತ್ಯೇಕವಾದಿಯು ಐಹಿಕ ಸುಖ, ಖ್ಯಾತಿ ಮತ್ತು ಸಮೃದ್ಧಿಗಾಗಿ ದೇವಾಲಯಗಳಲ್ಲಿ ದೇವರುಗಳಿಗೆ ಪೂಜಿಸುವ ವಿಧಾನವು ತೋರಿಕೆಯ ವಿಧಾನ. ಫಲಪ್ರದ ಚಟುವಟಿಕೆಗಳ ನಿಷ್ಪರಿಣಾಮಗಳಿಂದ ತನ್ನನ್ನೇ ಮುಕ್ತಗೊಳಿಸಿಕೊಳ್ಳುವ ಸಲುವಾಗಿ ತನ್ನ ಕರ್ಮಗಳ ಫಲವನ್ನು ದೇವರಿಗೆ ಸಲ್ಲಿಸಿದಾಗ ಆತನ ಭಕ್ತಿ ಒಳಿತಿನ ವಿಧಾನವಾಗುತ್ತದೆ.

ಪರಿಶುದ್ಧ ಭಕ್ತಿಯು ಯಾವ ವಿಧವಾದ ಮುಕ್ತಿಯನ್ನೂ ಅಂಗೀಕರಿಸುವುದಿಲ್ಲ - ಸಾಲೋಕ್ಯ, ಸರಸ್ತಿ, ಸಮಿಪ್ಯ, ಸಾರುಪ್ಯ ಅಥವಾ ಏಕತ್ಯ. ಇವನ್ನು ಭಗವಂತನಿಗೆ ಸಲ್ಲಿಸಲಾಗಿದ್ದರೂ ಉಪಯುಕ್ತವಲ್ಲ. ಒಬ್ಬರು ಐಹಿಕ ಪ್ರಕೃತಿಯ ವಿಧಾನಗಳ ಪ್ರಭಾವವನ್ನು ದಾಟಿ ಬಂದು ಅತ್ಯುನ್ನತ ಭಕ್ತಿಪೂರ್ವಕ ಸೇವೆಯ ಮೂಲಕ ಭಗವಂತನಂತೆಯೇ ಮೇಲ್ಮಟ್ಟವನ್ನು ಏರಬಹುದು. ಭಕ್ತನು ತನ್ನ ನಿಯಮಿತ ಕರ್ತವ್ಯಗಳನ್ನು ನಡೆಸಬೇಕು. ತಪ್ಪದೆ ಭಕ್ತಿ ಚಟುವಟಿಕೆಗಳನ್ನು ಆಚರಿಸಬೇಕು. ತ್ಯಾಗಮಾಡುವುದನ್ನು ಕಲಿಯಬೇಕು. ಅಧ್ಯಾತ್ಮಿಕತೆಯನ್ನು ಕುರಿತು ಆಲಿಸಬೇಕು. ಭಗವಂತನು ಎಲ್ಲ ಜೀವಿಗಳಲ್ಲೂ ಅಸ್ತಿತ್ವದಲ್ಲಿರುವುದರಿಂದ ಯಾರನ್ನೂ ಅನಾದರಿಸಕೂಡದು. ಒಬ್ಬರು ಸರಿಯಾದ ವಿಧಿ ವಿಧಾನಗಳ ಮೂಲಕ ಪ್ರಾರ್ಥಿಸಿದರೂ ಜೀವಿಗಳಲ್ಲೆಲ್ಲ ಅವನಿದ್ದಾನೆ ಎಂಬುದಾಗಿ ತಿಳಿಯದ ಅಮಾಯಕನು ದೇವಾಲಯದಲ್ಲಿ ವಿಗ್ರಹಗಳನ್ನು ಪೂಜಿಸುವ ಮೂಲಕ ಅವನನ್ನೆಂದೂ ಸಂಪ್ರೀತಗೊಳಿಸಲಾರನು. ಆದ್ದರಿಂದ ದಾನಧರ್ಮಾದಿಗಳ ಮೂಲಕ ಮತ್ತು ಸ್ನೇಹಪರತೆಯಿಂದ, ಎಲ್ಲರನ್ನೂ ಸಮಭಾವದಿಂದ ಕಂಡು ಎಲ್ಲ ಜೀವಿಗಳಲ್ಲಿರುವ ಅವನನ್ನು ಆರಾಧಿಸಬೇಕು.

ವಿವಿಧ ಲೌಕಿಕ ರೂಪಗಳ ಪರಿವರ್ತನೆಗೆ ಕಾರಣವಾದ ಕಾಲವು ಭಗವಂತನ ಮತ್ತೊಂದು ಗುಣ. ಕಾಲವು ಭಗವಂತನೇ ಎಂಬುದಾಗಿ ತಿಳಿಯದವರು ಕಾಲದ ಬಗ್ಗೆ ಹೆದರುತ್ತಾರೆ. ವಿಷ್ಣು ಪರಮಾತ್ಮನು ಕಾಲನೂ ಆಗಿದ್ದು ಅವನಿಗೆ ಯಾರೂ ಪ್ರಿಯರಲ್ಲ ಅಥವಾ ಯಾರೂ ಶತೃ ಅಥವಾ ಗೆಳೆಯರಲ್ಲ, ತನ್ನನ್ನು ಮರೆಯದವರಿಗೆ ಅವನು ಸ್ಫೂರ್ತಿ ನೀಡಿ ಮಿಕ್ಕವರನ್ನು ನಾಶಪಡಿಸುತ್ತಾನೆ. ಪರಮಾತ್ಮನ ಹೆದರಿಕೆಯಿಂದಾಗಿಯೇ ಎಲ್ಲವೂ ನಡೆಯುತ್ತದೆ. ಶಾಶ್ವತವಾದ ಕಾಲಕ್ಕೆ ಆದಿ ಅಂತ್ಯಗಳಿಲ್ಲ. ಅದು ಭಗವಂತನ ಪ್ರತಿನಿಧಿ. ಅದು ಇಂದ್ರಿಯಗೋಚರ ಜಗತ್ತನ್ನು ಮುಕ್ತಾಯಗೊಳಿಸುತ್ತದೆ. ಒಬ್ಬರಿಂದ ಮತ್ತೊಬ್ಬರನ್ನು ಅಸ್ತಿತ್ವಕ್ಕೆ ತರುತ್ತಾ ಅದು ಸೃಷ್ಟಿಕಾರ್ಯವನ್ನು ಮುಂದುವರಿಸುತ್ತದೆ. ಹಾಗೂ ಅದೇ ರೀತಿ ಮೃತ್ಯುವಿನ ಒಡೆಯನಾದ ಯಮರಾಜನನ್ನು ನಾಶಪಡಿಸಿ ಜಗತ್ತನ್ನು ಮುಳುಗಿಸುತ್ತದೆ.

ಕಪಿಲ ಮುನಿಯು ಮುಂದುವರಿಸಿದನು: "ಮೋಡಗಳ ಸಮೂಹಕ್ಕೆ ಗಾಳಿಯ
ಾಲಿ ಪ್ರಭಾವವು ತಿಳಿಯದಿರುವಂತೆ ಐಹಿಕ ಪ್ರಜ್ಞೆಯಲ್ಲಿ ತೊಡಗಿರುವ ವ್ಯಕ್ತಿಯು
ನನ್ನು ನಡೆಸುವಂಥ ಕಾಲನ ಅದ್ಭುತ ಶಕ್ತಿಯನ್ನು ತಿಳಿದಿರುವುದಿಲ್ಲ. ಅತಿಯಾದ
ವು ಮತ್ತು ಶ್ರಮದಿಂದ ಐಹಿಕನಾದವನು ತನ್ನ ತೃಪ್ತಿಗಾಗಿ ಕರೆಯಲಾಗುವ ಏನನ್ನೇ
ಾದಿಸಿರಲಿ, ಕಾಲನಾಗಿ ಪರಮಾತ್ಮನು ಅದನ್ನು ನಾಶಪಡಿಸುತ್ತಾನೆ. ಐಹಿಕನಾದವನಿಗೆ
ವೂ - ತನ್ನ ಮನೆ, ತನ್ನ ಐಶ್ವರ್ಯ ಇವೆಲ್ಲವೂ ಕ್ಷಣಿಕವಾದದು ಎಂಬುದು
ರುವುದಿಲ್ಲ. ಇವೆಲ್ಲವುಗಳಿಂದ ತಾನು ಗಳಿಸಿದ್ದೆಲ್ಲವೂ ಹಾಗೂ ತಾನು ಮಾಡಿದ್ದೆಲ್ಲವೂ
ತವೆಂಬುದಾಗಿ ಒಬ್ಬನು ಭಾವಿಸುತ್ತಾನೆ. ಆದರೆ ಅವನು ಎಲ್ಲೆಡೆಗಳಲ್ಲೂ ನೋವನ್ನು
ಭವಿಸುತ್ತಾನೆ. ಕೊನೆಯಲ್ಲಿ ತನ್ನ ಜನರಿಂದಲೇ ಅನಾದರಿಸಲ್ಪಡುತ್ತಾನೆ. ಈ
ಯಾಗಿ ಅವನು ಮೃತ್ಯುವಿನ ಹಿಡಿತದಲ್ಲಿ ಸಿಲುಕಿ ಮಲಗುತ್ತಾನೆ. ಅವನ
ುಬಾಂಧವರು ಗೋಳಾಡುತ್ತ ಅವನನ್ನು ಸುತ್ತುವರಿಯುತ್ತಾರೆ. ಅವನಿಗೆ ಅವರೊಂದಿಗೆ
ತನಾಡಬೇಕೆನ್ನಿಸಿದರೂ ಆಡಲಾಗದಿರುವುದಕ್ಕೆ ಕಾರಣ ಅವನು ಕಾಲದ
ವಾಗಿರುವುದು. ಹೀಗೆ ತನ್ನ ಕ್ರಮವನ್ನು ಮುನ್ನೆಡೆಸುವಲ್ಲಿ ಅನಿಯಂತ್ರಿತ ಪ್ರಶ್ನೆಯಲ್ಲಿ
ತಗಿರುವ ಮನುಷ್ಯ ಅತೀವ ದುಃಖದಿಂದ ತನ್ನ ಬಂಧುಗಳೆಲ್ಲ ರೋದಿಸುತ್ತಿರುವುದನ್ನು
ಡುತ್ತಾ ಮರಣ ಹೊಂದುತ್ತಾನೆ. ಅವನು ಅತ್ಯಂತ ಚಿಂತಾಜನಕ ರೀತಿಯಲ್ಲಿ,
ವ ನೋವು ಹಾಗೂ ಪ್ರಜ್ಞಾರಹಿತನಾಗಿ ನಿಧನ ಹೊಂದುತ್ತಾನೆ. ಅವನು ಸತ್ತ ನಂತರ
ಅಪರಾಧಗಳಿಗಾಗಿ ಅಸಂಖ್ಯಾತ ಶಿಕ್ಷೆ ಹಾಗೂ ಹಿಂಸೆಗಳನ್ನು ಅನುಭವಿಸುತ್ತಾನೆ.
ವೊಮ್ಮೆ ಈ ಜಗತ್ತಿನಲ್ಲೇ ನಾವು ನರಕ ಅಥವಾ ಸ್ವರ್ಗವನ್ನು ಅನುಭವಿಸುತ್ತೇವೆ.
ದರೆ ನರಕ ಸದೃಶ ಶಿಕ್ಷೆಗಳು ಕೆಲವೊಮ್ಮೆ ಈ ಜಗತ್ತಿನಲ್ಲೇ ಕಾಣಿಸಿಕೊಳ್ಳುತ್ತವೆ.

ಒಂದು ನಿರ್ದಿಷ್ಟ ರೀತಿಯ ಶರೀರವನ್ನು ತಳೆಯಲು ಪುರುಷ ವೀರ್ಯದ
ಗಳು ಸ್ತ್ರೀಯೊಬ್ಬಳ ಗರ್ಭವನ್ನು ಆತ್ಮವು ಅವರವರ ಕಾರ್ಯದ ಫಲಕ್ಕೆ ಅನುಗುಣವಾಗಿ
ವಂತನ ನೇತೃತ್ವದಲ್ಲಿ ಪ್ರವೇಶಿಸುತ್ತಾನೆ. ಮೊದಲ ರಾತ್ರಿ ವೀರ್ಯ ಮತ್ತು
ಗಳು ಬೆರೆಯುತ್ತವೆ ಮತ್ತು ಐದನೆಯ ರಾತ್ರಿ ಮಿಶ್ರಣವು ಗುಳ್ಳೆಯಾಗಿ ಉಕ್ಕುತ್ತದೆ.
ನೇ ರಾತ್ರಿ ಅದು ಒಂದು ದುಂಡು ಹಣ್ಣಿನ ಆಕಾರವನ್ನು ಹೊಂದುತ್ತದೆ. ಅನಂತರ
ಕ್ರಮೇಣ ಸಂದರ್ಭಕ್ಕೆ ಅನುಸಾರವಾಗಿ ಮಾಂಸದ ಮುದ್ದೆ ಅಥವಾ ಮೊಟ್ಟೆಯಾಗುತ್ತದೆ.
ಧಾರಣೆಯ ನಾಲ್ಕು ತಿಂಗಳುಗಳ ಒಳಗಾಗಿ ಶರೀರದ ಏಳು ಅತ್ಯವಶ್ಯಕ
ಗ್ರಿಗಳು - ಬಿಳಿಯ ದ್ರವ, ರಕ್ತ, ಮಾಂಸ, ಕೊಬ್ಬು, ಮೂಳೆ, ಎಲುಬಿನ ನೆಣ ಮತ್ತು
ರ್ಯ ಅಸ್ತಿತ್ವಕ್ಕೆ ಬರುತ್ತವೆ. ಐದು ತಿಂಗಳುಗಳ ಕೊನೆಯಲ್ಲಿ ಹಸಿವು ಮತ್ತು
ಾರಿಕೆಯ ಅನುಭವವಾಗಿ ಆರು ತಿಂಗಳುಗಳ ನಂತರ ಭ್ರೂಣವು ಪೊರೆಯಿಂದ
ತವಾಗಿ ಹೊಟ್ಟೆಯ ಬಲಭಾಗದಲ್ಲಿ ಅಲುಗಾಡಲು ಪ್ರಾರಂಭವಾಗುತ್ತದೆ. ತಾಯಿಯು
ಸಿದ ಆಹಾರ ಮತ್ತು ಪಾನೀಯದಿಂದ ಪೌಷ್ಠಿಕತೆಯನ್ನು ಪಡೆದುಕೊಳ್ಳುತ್ತ
ಣವು ಬೆಳೆದು ಎಲ್ಲ ವಿಧದ ಜಂತುಗಳ ಆಗರವಾದ ಮಲ ಮೂತ್ರದ ಹೇಸಿಗೆ
ೃಸುವಂಥ ನಿವಾಸದಲ್ಲಿ ಉಳಿಯುತ್ತದೆ. ತಾಯಿಯು ಕಹಿಯಾದ, ಖಾರವಾದ

ಆಹಾರಗಳು ಅಥವಾ ತುಂಬಾ ಉಪ್ಪಿನಿಂದ ಕೂಡಿದ ಆಹಾರ ಇಲ್ಲವೇ ತುಂಬಾ ಹುಳಿಯಾದ ಆಹಾರವನ್ನು ತಿನ್ನುವುದರಿಂದಾಗಿ ಶಿಶುವಿನ ದೇಹವು ನಿರಂತರವಾಗಿ ಅಸದಳ ನೋವನ್ನು ಅನುಭವಿಸುತ್ತದೆ. ಪೊರೆ ಮತ್ತು ಜಠರಾಂಗಗಳ ಮಧ್ಯದಲ್ಲಿರುವ ಮಗು ಹೊಟ್ಟೆಯ ಒಂದು ಭಾಗದಲ್ಲಿ ತನ್ನ ತಲೆಯನ್ನು ತನ್ನ ಹೊಟ್ಟೆಯತ್ತ ತಿರುಗಿಸಿ ಬೆನ್ನು ಮತ್ತು ಕತ್ತನ್ನು ಬಿಲ್ಲಿನಂತೆ ಬಾಗಿಸುತ್ತದೆ. ಶಿಶುವು ಹೀಗೆ ಪಂಜರದಲ್ಲಿನ ಒಂದು ಪಕ್ಷಿಯಂತೆ ಚಲನೆಯ ಸ್ವಾತಂತ್ರ್ಯವಿಲ್ಲದೆ ಉಳಿಯುತ್ತದೆ. ಆ ಸಮಯದಲ್ಲಿ ಮಗುವಿಗೆ ಅದೃಷ್ಟವಿದ್ದರೆ ಅದು ತನ್ನ ಹಿಂದಿನ ಒಂದು ನೂರು ಜನ್ಮಗಳಲ್ಲಿನ ತೊಂದರೆಗಳನ್ನು ಸ್ಮರಿಸಿಕೊಂಡು ಕ್ರೂರವಾಗಿ ರೋದಿಸುತ್ತದೆ. ಆ ಸ್ಥಿತಿಯಲ್ಲಿ ಮನಸ್ಸಿನ ಶಾಂತಿಯು ಹೇಗೆ ಸಾಧ್ಯ? ಹೀಗೆ ಗರ್ಭಧಾರಣೆಯ ಏಳನೇ ತಿಂಗಳಿನಿಂದ ಪ್ರಜ್ಞೆಯನ್ನು ವೃದ್ಧಿಸಿಕೊಂಡ ಮಗು ಗರ್ಭವನ್ನು ಒತ್ತುವ ಗಾಳಿಗಳಿಂದ ಜನನಕ್ಕೆ ಮುಂಚಿನ ವಾರಗಳಲ್ಲಿ ಕೆಳಮುಖನಾಗಿ ತಳ್ಳಲ್ಪಡುತ್ತವೆ.

ಅದೇ ರೀತಿಯ ಕೊಳಕು ಗುಹೆಯಲ್ಲಿ ಹುಟ್ಟುವ ಜೀವಿಗಳಂತೆಯೇ ಶಿಶುವೂ ಒಂದೇ ಸ್ಥಳದಲ್ಲಿ ಇರಲಾಗದು. ಜೀವಿಯು ಬದುಕಿನ ಈ ಭಯಂಕರ ಪರಿಸ್ಥಿತಿಯಲ್ಲಿ, ಐಹಿಕ ಅಂಶಗಳ ಏಳು ಪದರುಗಳಿಂದ ಸುತ್ತುವರಿಯಲ್ಪಟ್ಟು ತನ್ನನ್ನು ಈ ಸ್ಥಿತಿಗೆ ತಳ್ಳಿದ ಭಗವಂತನನ್ನು ಕೈಮುಗಿದು ಪ್ರಾರ್ಥಿಸುತ್ತದೆ. ತನ್ನ ತಾಯಿಯ ಹೊಟ್ಟೆಯೊಳಗೆ ರಕ್ತ, ಮಲ ಮೂತ್ರಗಳ ಹೊಂಡದಲ್ಲಿ ಬಿದ್ದು ಅದರ ಶರೀರವು ತಾಯಿಯ ಜಠರಾಗ್ನಿಯಿಂದ ಸುತ್ತುವರಿದು ಆತ್ಮವು ಹೊರಬರಲು ಧಾವಂತ ಪಡುತ್ತದೆ. ತನ್ನ ಮಾಸಗಳನ್ನು ಎಣಿಸುತ್ತದೆ ಹಾಗೂ ಪ್ರಾರ್ಥಿಸುತ್ತದೆ: "ಓ, ಭಗವಂತನೇ, ಯಾವಾಗ ನಾನು, ಹತಭಾಗ್ಯನಾದ ಆತ್ಮನು, ಈ ಬಂಧನದಿಂದ ಬಿಡುಗಡೆ ಹೊಂದುತ್ತೇನೆ?" ಎಂಬುದಾಗಿ.

ಕಪಿಲದೇವನು ಮುಂದುವರಿಸಿದನು: " ಹತ್ತು ತಿಂಗಳ ಜೀವಿಯು ಇನ್ನೂ ಗರ್ಭದಲ್ಲಿ ಇರುವಾಗಲೇ ಈ ಬಯಕೆಗಳನ್ನು ಹೊಂದಿರುತ್ತದೆ. ಆದರೆ ಅವನು ಹೀಗೆ ಭಗವಂತನನ್ನು ಕರೆದಾಗ ಹೆರಿಗೆಗೆ ನೆರವಾಗುವಂಥ ಗಾಳಿಯು ಅವನನ್ನು ಮುಂದೆ ತಳ್ಳಿ ಅವನು ಕೆಳಮುಖನಾಗಿ ಜನಿಸಲು ಅನುವು ಮಾಡಿಕೊಡುತ್ತದೆ. ಇದ್ದಕ್ಕಿದ್ದಂತೆಯೇ ಗಾಳಿಯಿಂದ ಹೀಗೆ ತಳ್ಳಲ್ಪಟ್ಟಾಗ ಶಿಶುವು ತಲೆಕೆಳಗಾಗಿ ಉಸಿರಾಟವಿಲ್ಲದೆ ತುಂಬಾ ಕಷ್ಟದಿಂದ ಹೊರ ಬಂದು ತೀವ್ರ ಬೇನೆಯಿಂದಾಗಿ ಸ್ಮರಣೆಯಿಂದ ವಂಚಿತವಾಗುತ್ತದೆ. ಶಿಶುವು ಮಲ ರಕ್ತಗಳನ್ನು ಮೆತ್ತಿಕೊಂಡು ನೆಲಕ್ಕೆ ಬೀಳುತ್ತದೆ ಹಾಗೂ ಮಲದಿಂದ ಉತ್ಪತ್ತಿಯಾದ ಕ್ರಿಮಿಯಂತೆ ಆಟವಾಡುತ್ತದೆ. ಅದು ತನ್ನ ಉನ್ನತ ಜ್ಞಾನವನ್ನು ಕಳೆದುಕೊಂಡು ಮಾಯೆಯ ಪ್ರಭಾವದಿಂದ ರೋದಿಸುತ್ತದೆ. ಗರ್ಭದಿಂದ ಹೊರಬಂದ ನಂತರ ಶಿಶುವನ್ನು ಅದಕ್ಕೆ ಏನು ಬೇಕೆಂದು ತಿಳಿಯಲು ಅಸಮರ್ಥರಾದ ವ್ಯಕ್ತಿಗಳಿಗೆ ಒಪ್ಪಿಸಲಾಗುವುದರಿಂದ ಅದು ಅಂಥ ವ್ಯಕ್ತಿಗಳೊಂದಿಗೇ ಬೆಳೆಯುತ್ತದೆ. ತನಗೆ ನೀಡಲಾದದ್ದನ್ನು ನಿರಾಕರಿಸಲು ಅಸಮರ್ಥನಾಗಿ ಅನಪೇಕ್ಷಿತ ಪರಿಸ್ಥಿತಿಗಳಿಗೆ ಅದು ಕುಸಿಯುತ್ತದೆ.

ಗರ್ಭವನ್ನು ಪ್ರವೇಶಿಸುವುದರಿಂದ ಜನ್ಮತಳೆಯುವವರೆಗೆ ಶರೀರವು ಹಲವಾರು ಮಾರ್ಪಾಟುಗಳನ್ನು ಹೊಂದುತ್ತದೆ. ಜೀವಿಯು ಲೈಂಗಿಕ ಬಯಕೆಯ ಪೂರೈಕೆಯಲ್ಲಿ

ಹಾಗೂ ಜಿಹ್ವಾಚಾಪಲ್ಯವನ್ನು ತೀರಿಸಿಕೊಳ್ಳಲು ತೊಡಗಿರುವುದರಿಂದ ಪ್ರಭಾವಿತಗೊಂಡು ಅನೈತಿಕ ಹಾದಿಗೆ ಬಿದ್ದು ಮತ್ತೆ ಮುಂಚಿನಂತೆಯೇ ನರಕಕ್ಕೆ ಹೋಗುತ್ತಾನೆ. ಅವನು/ ಒಳಿತಾದುದೆಲ್ಲವನ್ನೂ ಮರೆತು ಸ್ತ್ರೀಯೊಂದಿಗಿನ ಸಂಪರ್ಕವನ್ನು ಮುಂದುವರಿಸುತ್ತಾನೆ.

ಬ್ರಹ್ಮದೇವನೂ ಸಹ ತನ್ನ ಸ್ವಂತ ಮಗಳನ್ನು ಕಂಡಾಗ ಅವಳ ಮೋಹಕತೆಯಿಂದ ಚಕಿತಗೊಂಡು ಸಾರಂಗದ ರೂಪದಲ್ಲಿ ನಾಚಿಕೆಯಿಲ್ಲದೆ ಅವಳ ಹಿಂದೆ ಓಡಿದಾಗ ಅವಳು ಹೆಣ್ಣು ಜಿಂಕೆಯ ರೂಪವನ್ನು ತಳೆದಳು. ಇಡೀ ಐಹಿಕ ಜಗತ್ತಿನುದ್ದಕ್ಕೂ ಬ್ರಹ್ಮನಿಂದ ಮೊದಲ್ಗೊಂಡು ಯಾವ ಮಹತ್ವವೂ ಇರದ ಸಣ್ಣ ಜಂತುಗಳವರೆಗೆ ಎಲ್ಲರೂ ಲೈಂಗಿಕತೆಯ ಬಗ್ಗೆ ಆಕರ್ಷಿಸಲ್ಪಡುತ್ತಾರೆ. ಸ್ತ್ರೀ, ಆದ್ದರಿಂದ ಅಪರಿಪಕ್ವ ಆತ್ಮವನ್ನು ಸಂಕೋಲೆಗಳಲ್ಲಿ ಇಟ್ಟುಕೊಳ್ಳಬಹುದಾದ ಮಾಯೆಯ ಅದ್ಭುತ ಸೃಷ್ಟಿ. ಯೋಗದ ಸಮ್ಮಿಲನವನ್ನು ತಲಪುವ ಆಕಾಂಕ್ಷೆಯನ್ನು ಹೊಂದಿ ಭಗವಂತನಿಗೆ ಸೇವೆ ಸಲ್ಲಿಸುವ ಮೂಲಕ ತಮ್ಮನ್ನೇ ಅರಿತುಕೊಂಡವರು ಎಂದೂ ಆಕರ್ಷಕ ಸ್ತ್ರೀಯೊಂದಿಗೆ ಬೆರೆಯಕೂಡದು. ಏಕೆಂದರೆ ಅಂಥ ಸ್ತ್ರೀ ಮುನ್ನಡೆಯುತ್ತಿರುವ ಭಕ್ತನಿಗೆ ನರಕದ ಹಾದಿಯನ್ನು ತೋರಿಸುತ್ತಾಳೆ ಎಂಬುದಾಗಿ ಧರ್ಮಗ್ರಂಥಗಳು ತಿಳಿಸಿವೆ ಎಂಬುದಾಗಿ ಕಪಿಲನು ತಾಯಿಗೆ ತಿಳಿಸಿದನು.

ಭಗವಂತನ ವ್ಯಕ್ತಿತ್ವವಾದ ಕಪಿಲನು ಹೇಳಿದನು: "ಗ್ರಹಸ್ಥ ಜೀವನದ ಮಧ್ಯದಲ್ಲಿ ಜೀವಿಸುವವರು ಧಾರ್ಮಿಕ ಕ್ರಿಯೆಗಳನ್ನು ಮಾಡುವ ಮೂಲಕ ಐಹಿಕ ಲಾಭಗಳನ್ನು ಪಡೆದುಕೊಂಡು ಆರ್ಥಿಕತೆ ಮತ್ತು ಇಂದ್ರಿಯ ಸಾರ್ಥಕತೆಗೆ ಸಂಬಂಧಿಸಿದಂತೆ ತೃಪ್ತಿಯನ್ನು ಪಡೆಯುತ್ತಾರೆ. ಅಂಥವರಿಗೆ ಭಕ್ತಿಪೂರ್ವಕ ಸೇವೆಯಲ್ಲಿ ಎಂದೂ ಆಸಕ್ತಿಯಿರುವುದಿಲ್ಲ. ಇಂದ್ರಿಯ ತೃಪ್ತಿಯ ಬಗ್ಗೆ ಆಕರ್ಷಿತರಾಗಿರುವ ಹಾಗೂ ತಮ್ಮ ಪಿತೃಗಳು ಮತ್ತು ಉಪದೇವತೆಗಳಿಗೆ ಹೊಂದಿಕೊಂಡಿರುವ ಐಹಿಕರು ಚಂದ್ರಲೋಕಕ್ಕೇ ಹೋಗಿ ಸೋಮ-ರಸವನ್ನು ಕುಡಿಯಬಹುದು. ಆದರೆ ಅವರು ಮತ್ತೆ ಈ ಭೂಮಿಗೇ ಹಿಂತಿರುಗುತ್ತಾರೆ. ಆದರೆ ಭಗವಂತನು ಶಯನಕ್ಕೆ ತೆರಳಿದ ಕೂಡಲೇ ಈ ಲೋಕಗಳು ಕಣ್ಮರೆಯಾಗುತ್ತವೆ. ಬುದ್ಧಿಶಕ್ತಿಯುಳ್ಳವರು ಹಾಗೂ ಪರಿಶುದ್ಧ ಪ್ರಜ್ಞೆಯುಳ್ಳವರು ಭಗವಂತನಿಗೆ ಸಲ್ಲಿಸುವ ಭಕ್ತಿಯಿಂದ ಸಂಪೂರ್ಣ ತೃಪ್ತರಾಗಿರುತ್ತಾರೆ. ಐಹಿಕ ಪ್ರಕೃತಿಯ ವಿಧಾನಗಳಿಂದ ಮುಕ್ತರಾಗಿ ಅವರು ಇಂದ್ರಿಯ ಕೃತಾರ್ಥತೆಗಾಗಿ ಕ್ರಿಯೆಗೈಯುವುದಿಲ್ಲ. ಒಬ್ಬರು ವೃತ್ತಿಕರ ಕರ್ತವ್ಯಗಳನ್ನು ನಡೆಸುವ ಮೂಲಕ ಯಾವುದೇ ಬಡತನ ಅಥವಾ ಸುಳ್ಳು ಅಹಂಮಿಕೆಯಿಂದ ನಿರ್ಮೋಹದಿಂದಿರುವವರು ಪ್ರಜ್ಞೆಯನ್ನು ಸಂಪೂರ್ಣವಾಗಿ ಪರಿಶುದ್ಧಗೊಳಿಸಿಕೊಳ್ಳುವುದರಿಂದಾಗಿ ಅವರು ಸುಲಭವಾಗಿ ಭಗವಂತನ ರಾಜ್ಯವನ್ನು ಪ್ರವೇಶಿಸಬಹುದು.

ಭಗವಂತನ ಹಿರಣ್ಯಗರ್ಭದ ವಿಸ್ತರಣೆಯ ಆರಾಧಕರು ಈ ಐಹಿಕ ಜಗತ್ತಿನಲ್ಲಿ ಎರಡು ಪರರ್ಧಗಳ ಅಂತ್ಯವಾಗುವವರೆಗೆ ಅಂದರೆ ಬ್ರಹ್ಮದೇವನು ಇರುವವರೆಗೂ ಉಳಿದಿರುತ್ತಾರೆ. (ಪರರ್ಧ-ಬ್ರಹ್ಮನ ಜೀವಿತ ಕಾಲದ ಅರ್ಧ. ಅಂದರೆ 4,320,000 x2000 x30 x 12x100 ವರ್ಷಗಳು) ಎರಡು ಪರರ್ಧಗಳೆಂದು ಪ್ರಚಲಿತವಾದ ಐಹಿಕ

ಪ್ರಕೃತಿಯ ಮೂರು ವಿಧಾನಗಳ ಆವಾಸ ಕಾಲವನ್ನು ಅನುಭವಿಸಿದ ನಂತರ ಬ್ರಹ್ಮದೇವನು ಭೂಮಿಯ ಪದರುಗಳು, ಜಲ, ವಾಯು, ಅಗ್ನಿ, ಹವೆ, ಮನಸ್ಸು, ಅಹಂ ಇವುಗಳಿಂದ ಆವೃತವಾದ ಐಹಿಕ ವಿಶ್ವವನ್ನು ಸಮಾಪ್ತಿಗೊಳಿಸಿ ಭಗವಂತನ ಬಳಿಗೆ ಹಿಂತಿರುಗುತ್ತಾರೆ. ಉಸಿರಾಟ, ವ್ಯಾಯಾಮಗಳು ಹಾಗೂ ಮನಸ್ಸಿನ ನಿಯಂತ್ರಣದ ಮೂಲಕ ಐಹಿಕ ವಿಶ್ವದಿಂದ ದೂರ ನಿಂತಿರುವಂಥ ಯೋಗಿಗಳು ಬ್ರಹ್ಮನನ್ನು ತಲುಪಿ ವಿಮುಕ್ತಿಗೊಂಡು ಭಗವಂತನನ್ನು ಸೇರಿದಾಗ ಯೋಗಿಗಳೂ ಅವನನ್ನು ಹಿಂಬಾಲಿಸುತ್ತಾರೆ. ಕಪಿಲ ಮುನಿಯು ತನ್ನ ತಾಯಿಗೆ ಪ್ರತಿಯೊಬ್ಬರ ಹೃದಯದಲ್ಲೂ ನೆಲೆಸಿರುವಂಥ ಭಗವಂತನಿಗೆ ಭಕ್ತಿಯಿಂದ ಸೇವೆ ಸಲ್ಲಿಸುವ ಮೂಲಕ ಅವನ ಆಶ್ರಯವನ್ನು ಪಡೆಯಬೇಕೆಂದು ಉಪದೇಶಿಸಿದನು.

ಕಪಿಲ ಮುನಿಯು ಮುಂದುವರಿದು ಹೇಳಿದನು: ಕೆಲವರು ಭಗವಂತನನ್ನು ವಿಶೇಷವಾಗಿ ಸ್ವಯಂ ಆಸಕ್ತಿಯಿಂದ ಪೂಜಿಸಬಹುದು. ಆದರೆ ಬ್ರಹ್ಮದೇವನಂಥ ಉಪದೇವತೆಗಳು ಹಾಗೂ ಸನತ್ಕುಮಾರರಂಥ ಮಹಾನ್ ಋಷಿ ಮುನಿಗಳು ಸೃಷ್ಟಿಯ ಸಮಯದಲ್ಲಿ ಮತ್ತೆ ಐಹಿಕ ಜಗತ್ತಿಗೆ ಹಿಂತಿರುಗಬೇಕಾಯಿತು. ಐಹಿಕ ಪ್ರಕೃತಿಯ ಮೂರು ವಿಧಾನಗಳ ಪರಸ್ಪರ ಪ್ರಕ್ರಿಯೆಯು ಪ್ರಾರಂಭಗೊಂಡಾಗ ಈ ವಿಶ್ವದ ಸೃಷ್ಟಿಕರ್ತನಾದ ಹಾಗೂ ಸಂಪೂರ್ಣ ವೈದಿಕ ಜ್ಞಾನವುಳ್ಳ ಬ್ರಹ್ಮದೇವ ಹಾಗೂ ಇತರರು ಕಾಲದ ಪ್ರಭಾವದಿಂದ ಹಿಂತಿರುಗುತ್ತಾರೆ. ಅವರು ತಮ್ಮ ಫಲಪ್ರದ ಚಟುವಟಿಕೆಗಳಿಂದ ವಿಮುಕ್ತರಾಗುತ್ತಾರೆ. ಆದರೆ ಸೃಷ್ಟಿಕಾಲದಲ್ಲಿ ಅವರು ಮುಂಚೆ ಹೊಂದಿದ್ದಂಥಹುದೇ ರೂಪ ಹಾಗೂ ಸ್ಥಾನಗಳಲ್ಲಿ ಹಿಂತಿರುಗುತ್ತಾರೆ. ಈ ಉಪದೇವತೆಗಳಿಗೆ ತಾವು ಭಗವಂತನಿಗೆ ಸರಿಸಮಾನವೆಂಬುದಾಗಿ ಆಲೋಚಿಸುವ ಪ್ರವೃತ್ತಿಯಿರುವುದೇ ಇದಕ್ಕೆ ಕಾರಣ.

ಐಹಿಕ ಜಗತ್ತಿಗೆ ಕಚ್ಚಿಕೊಂಡಿರುವವರು ಮತ್ತು ತಮ್ಮ ಪಿತೃಗಳನ್ನು ಆರಾಧಿಸುವವರು ಹಾಗೂ ತಮ್ಮ ಕುಟುಂಬ, ಸಾಮಾಜಿಕ ಅಥವಾ ರಾಷ್ಟ್ರೀಯ ಜೀವನದ ಆರ್ಥಿಕ ಸ್ಥಿತಿಯನ್ನು ಸುಧಾರಿಸುವಲ್ಲಿ ತೊಡಗಿರುವವರರನ್ನು "ತ್ರಿವರ್ಗೀಕರೆಂದು" ಕರೆಯಲಾಗುತ್ತದೆ. ಅವರು ಭಗವಂತನ ಬಗ್ಗೆ ವಿಮುಖರಾಗಿರುವವರು. ಅಂಥ ವ್ಯಕ್ತಿಗಳನ್ನು ಭಗವಂತನು ಖಂಡಿಸುತ್ತಾನೆ. ಅಂಥ ಭಕ್ತಾದಿಗಳು ಪಿತೃಲೋಕಕ್ಕೆ ಹೋದರೂ ತಮ್ಮ ಭಕ್ತಿಯ ಲಾಭಗಳನ್ನು ಅನುಭವಿಸಿದ ನಂತರ ಹಿಂತಿರುಗುತ್ತಾರೆ. ಆದ್ದರಿಂದ ಮುನಿಯು ತನ್ನ ತಾಯಿಗೆ "ಭಗವಂತನ ಪದ್ಮಪಾದವು ಆರಾಧನೆಗೆ ಅರ್ಹವಾದ್ದರಿಂದ ಅವನಲ್ಲಿ ಆಶ್ರಯವನ್ನು ಪಡೆದುಕೊಳ್ಳಬೇಕೆಂದು ಉಪದೇಶಿಸಿದನು. ಅದನ್ನು ಪ್ರೇಮ ಮತ್ತು ಭಕ್ತಿಯಿಂದ ಅಂಗೀಕರಿಸಬೇಕು. ಏಕೆಂದರೆ ಹೀಗೆ ಮಾತ್ರ ನೀನು ಮೇಲ್ತರದ ಭಕ್ತಿಯಲ್ಲಿ ಸ್ಥಾಪನೆಗೊಳ್ಳುತ್ತೀಯೆ. ಉನ್ನತ ರೀತಿಯ ಮುನ್ನಡೆಯನ್ನು ಸಾಧಿಸಿರುವ ಭಕ್ತನಿಗೆ ಒಪ್ಪತಕ್ಕಂಥದ್ದು ಅಥವಾ ಒಪ್ಪದೇ ಇರುವಂಥದ್ದು ಎಂಬುದು ಯಾವುದೂ ಇಲ್ಲ. ಏಕೆಂದರೆ ಅವನು ತನ್ನ ಸ್ವಂತ ಇಂದ್ರಿಯ ಸಾಕ್ಷಾತ್ಕಾರಕ್ಕಾಗಿ ಕ್ರಿಯೆಯನ್ನು ಮಾಡುವುದೇ ಇಲ್ಲ.

ಎಲ್ಲ ಯೋಗಿಗಳಿಗೂ ಅತ್ಯಂತ ಹಿರಿದಾದ ಸಾಮಾನ್ಯ ತಿಳಿವಳಿಕೆಯೆಂದರೆ ದ್ರವ್ಯದಿಂದ ದೂರಸರಿಯುವುದಾಗಿದ್ದು ಇವನ್ನು ವಿವಿಧ ರೀತಿಯ ಯೋಗಗಳಿಂದ ಸಾಧಿಸಬಹುದು. ವಸ್ತುವೊಂದನ್ನು ಅದು ವಿವಿಧ ಗುಣಗಳನ್ನು ಹೊಂದಿರುವುದರಿಂದಾಗಿ ವಿವಿಧ ಇಂದ್ರಿಯಗಳ ಮೂಲಕ ವಿವಿಧ ರೀತಿಯಲ್ಲಿ ಪ್ರಶಂಸಿಸಬಹುದು. ಅದೇ ರೀತಿಯಾಗಿ ಭಗವಂತನೊಬ್ಬನೇ. ಆದರೆ ವಿವಿಧ ಧರ್ಮಗ್ರಂಥಗಳಲ್ಲಿನ ಸೂಚನೆಯನ್ವಯ ಅವನು ವಿವಿಧ ರೀತಿಯಾಗಿ ಕಾಣುತ್ತಾನೆ. ಒಬ್ಬರು ಭಗವಂತನನ್ನು ಭಕ್ತಿ ಯೋಗದ ಮೂಲಕ ಸಮೀಪಿಸಬಹುದು. ಭಕ್ತಿಯು ಎಲ್ಲ ಪ್ರಕ್ರಿಯೆಗಳ ಮೂಲಭೂತ ತತ್ತ್ವ. ಭಕ್ತಿಯಿಲ್ಲದೆ ಜ್ಞಾನಯೋಗವಾಗಲಿ ಅಥವಾ ಅಷ್ಟಾಂಗ ಯೋಗವಾಗಲಿ ಯಶಸ್ವಿಯಾಗದಿದ್ದು ಒಬ್ಬರು ಭಗವಂತನನ್ನು ಸಮೀಪಿಸದ ಹೊರತು ಆತ್ಮಸಾಕ್ಷಾತ್ಕಾರದ ತತ್ತ್ವಗಳಿಗೆ ಯಾವ ಅಂತಿಮ ಗುರಿಯೂ ಇಲ್ಲ.

ಕಪಿಲ ದೇವನು ತನ್ನ ತಾಯಿಗೆ ಹೇಳಿದನು,"ಈ ಸೂಚನೆಯು ಶಠತ್ವವನ್ನು ಹೊಂದಿರುವವರು, ವಾಗ್ವಾದ ಮಾಡುವವರು, ತಮ್ಮ ವರ್ತನೆಯಲ್ಲಿ ಪರಿಶುದ್ಧರಾದವರು, ಹೇಡಿಗಳು ಅಥವಾ ಐಹಿಕ ಸಂಪತ್ತನ್ನು ಬಯಸುವಂಥ ವ್ಯಕ್ತಿಗಳಿಗಾಗಿ ರೂಪಿಸಿರುವುದಲ್ಲ. ದುರಾಸೆಯುಳ್ಳವರಿಗೆ ಹಾಗೂ ಕೌಟುಂಬಿಕ ಜೀವನದ ಬಗ್ಗೆ ಅತಿಯಾದ ವ್ಯಾಮೋಹ ಉಳ್ಳವರಿಗೆ ಇಲ್ಲವೇ ಭಕ್ತರಲ್ಲದವರಿಗೂ ಇದನ್ನು ಭೋಧಿಸಕೂಡದು."

ದೇವಾಹುತಿಯೆಂದಳು: "ನೀನು ಕಪಿಲನೆಂಬ ಹೆಸರಿನ ವಿಷ್ಣುಪರಮಾತ್ಮನಾಗಿದ್ದು ನೀನೇ ಉನ್ನತ ಬ್ರಹ್ಮನ್."

ಕಪಿಲ ಮುನಿಯು ಹೇಳಿದನು:" ನನ್ನ ಪ್ರಿಯ ಮಾತೆಯೇ, ನಿಜವಾಗಿಯೂ ಮೇಲ್ಮಟ್ಟದಲ್ಲಿ ನಿಂತಿರುವ ನಾನು ನಿನಗೆ ನೀಡುರುವಂಥ ಸೂಚನೆಗಳನ್ನು ಖಂಡಿತವಾಗಿಯೂ ಅನುಸರಿಸಬಹುದಾಗಿದೆ. ಈ ಆತ್ಮಸಾಕ್ಷಾತ್ಕಾರದ ಹಾದಿಯನ್ನು ನೀನು ಪರಿಪೂರ್ಣಳಾಗಿ ಹಾದು ಹೋದರೆ ನೀನು ಖಂಡಿತವಾಗಿಯೂ ಭಯಾನಕ ಐಹಿಕ ಕಲ್ಮಶದಿಂದ ವಿಮುಖಳಾಗಿ ಕೊನೆಗೆ ನನ್ನನ್ನು ಸೇರುತ್ತೀಯೆ ಎಂಬ ಭರವಸೆಯನ್ನು ಇಟ್ಟುಕೊಳ್ಳವಂಥ ಹವಳಾಗು. ತಾಯಿಯೇ, ಭಕ್ತಿಪೂರ್ವಕ ಸೇವೆಯ ಈ ವಿಧಾನದೊಂದಿಗೆ ಇಲ್ಲದವರು ಖಂಡಿತವಾಗಿಯೂ ಹುಟ್ಟು ಸಾವುಗಳ ಚಕ್ರದಿಂದ ಹೊರ ಹೋಗಲಾರರು.

ಕಪಿಲ ಮುನಿಯು ಮೊದಲು ಹಿಮಾಲಯದತ್ತ ಸಾಗಿ ಗಂಗೆಯ ಗತಿಯನ್ನು ಪತ್ತೆ ಹಚ್ಚಿದನೆಂದೂ ಹಾಗೂ ಭಗವಂತನು ಬಂಗಾಳ ಕೊಲ್ಲಿ ಎಂಬ ಹೆಸರಿನ ಗಂಗೆಯ ಮುಖಜ ಭೂಮಿಯ ಬಳಿಗೆ ಬಂದನೆಂಬುದಾಗಿ ತಿಳಿದು ಬಂದಿದೆ. ಸಾಗರವು ಈಗಲೂ ಗಂಗಾಸಾಗರವೆಂದು ಪ್ರಸಿದ್ಧಿ ಪಡೆದಿರುವಂಥದ್ದು. ಗಂಗೆ ಸಮುದ್ರದೊಂದಿಗೆ ಸಮಾಗಮಗೊಳ್ಳುವ ಸ್ಥಳದಲ್ಲಿ ಅವನಿಗೆ ವಾಸಸ್ಥಾನವನ್ನೂ ನೀಡಿತು. ಇಂದೂ ಸಹ ಜನರು ಅಲ್ಲಿ ನೆರೆದು ಸಾಂಖ್ಯಾಯೋಗದ ಪಿತನಾದ ಕಪಿಲ ದೇವನಿಗೆ ಪ್ರಣಾಮಗಳನ್ನು ಸಲ್ಲಿಸುತ್ತಾರೆ.

ಅಧ್ಯಾಯ - 6

# ಮನುವಿನ ಪುತ್ರಿಯರ ಸಂತತಿ

(ಈ ಅಧ್ಯಾಯವು ಮನುವಿನ ಪುತ್ರಿಯರು, ಅವರ ಪತಿಯರು ಹಾಗೂ ಪುತ್ರಿಯರ ವಿವರಗಳನ್ನೊಳಗೊಂಡಿದೆ. ಇದರೊಂದಿಗೆ ದಕ್ಷಯಜ್ಞ, ಧ್ರುವ ಮತ್ತು ಯಕ್ಷರೊಂದಿಗಿನ ಕಾಳಗವನ್ನೂ ಇದು ವಿವರಿಸುತ್ತದೆ.)

ಸ್ವಯಂಭು ಮನುವು ತನ್ನ ಪತ್ನಿ ಶತರೂಪಳಿಂದ ಅಕುತಿ, ದೇವಾಹುತಿ ಮತ್ತು ಪ್ರಸೂತಿಯೆಂಬ ಮೂವರು ಪುತ್ರಿಯರನ್ನು ಪಡೆದನು. ಅಕುತಿಗೆ ಇಬ್ಬರು ಸಹೋದರರಿದ್ದರೂ ಮನುವು ಅಕುತಿಯನ್ನು ಪ್ರಜಾಪತಿ ಋಷಿಗೆ ನೀಡಿದಾಗ ಅವಳಿಗೆ ಹುಟ್ಟಲಿರುವ ಮಗುವನ್ನು ತನಗೆ ಹಿಂತಿರುಗಿಸಬೇಕೆಂದು ಕೇಳಿಕೊಂಡಿದ್ದನು. ಇದು ಶತರೂಪಳ ಸಮಾಲೋಚನೆಯೊಂದಿಗೆ ಮಾಡಿದ್ದು. ಅಕುತಿಯು ಯಜ್ಞನೆಂಬ ಒಬ್ಬ ಮಗ (ವಿಷ್ಣುವಿನ ಅವತಾರ) ಮತ್ತು ಲಕ್ಷ್ಮಿಯ ಭಾಗಶಃ ಅವತಾರವಾದ ದಕ್ಷಿಣಳೆಂಬ ಒಬ್ಬಳು ಪುತ್ರಿಯನ್ನು ಪಡೆದಳು. ಮನುವಿನ ಕೋರಿಕೆಯಂತೆ ಯಜ್ಞನನ್ನು ಅವನಿಗೆ ನೀಡಲಾಯಿತು ಹಾಗೂ ರುಚಿ ಮತ್ತು ಅಕುತಿಯರು ತಮ್ಮ ಮಗಳಾದ ದಕ್ಷಿಣಳನ್ನು ತಮ್ಮೊಂದಿಗಿಟ್ಟುಕೊಂಡು ಯಾಗಾದಿಗಳ ಒಡೆಯನಾದ ಯಜ್ಞನು ದಕ್ಷಿಣಳನ್ನು ವಿವಾಹವಾಗಿ ತೋಷಾ, ಪ್ರತೋಷಾ, ಸಂತೋಷ, ಭದ್ರ, ಶಾಂತಿ, ಇದಸ್ಪತಿ, ಇದ್ಮಾ ಕವಿ, ವಿಭಾ, ಸ್ವಾಹನ, ಸುದೇವ ಮತ್ತು ರೋಚನರೆಂಬ ಹನ್ನೆರಡು ಮಕ್ಕಳನ್ನು ಪಡೆದರು. ಈ ಹನ್ನೆರಡು ಪುತ್ರರೂ ಉಪದೇವತೆಗಳಾದರು.

ಸ್ವಯಂಭು ಮನುವಿಗೆ ಪ್ರಿಯವ್ರತ ಮತ್ತು ಉತ್ತಾನಪಾದರೆಂಬ ಇಬ್ಬರು ಪುತ್ರರು. ಮನುವು ತನ್ನ ಮಗಳಾದ ಪ್ರಸೂತಿಯನ್ನು ಬ್ರಹ್ಮನ ಮಗನಾದ ದಕ್ಷನಿಗೆ ನೀಡಿದನು. ದಕ್ಷನ ಸಂತತಿಯವರು ಮೂರು ಜಗತ್ತುಗಳಲ್ಲೂ ಹರಡಿಕೊಂಡರು.

ಕರ್ದಮ ಮುನಿಗೆ ಒಂಬತ್ತು ಪುತ್ರಿಯರು. ಅವರಲ್ಲೊಬ್ಬಳಾದ ಕಲಾಳು ಮರೀಚಿಯನ್ನು ವಿವಾಹವಾಗಿ, ಅವರು ಕಶ್ಯಪ ಮತ್ತು ಪೂರ್ಣಿಮರೆಂಬ ಇಬ್ಬರು ಪುತ್ರರನ್ನು ಪಡೆದರು. ಪೂರ್ಣಿಮನು ಮೂವರು ಮಕ್ಕಳನ್ನು - ವಿರಾಜ, ವಿಶ್ವಕ್ಷಪ ಮತ್ತು ದೇವಕುಲ್ಯರನ್ನು ಪಡೆದನು. (ದೇವಕುಲ್ಯ ಭಗವಂತನನ್ನು ತೋಯಿಸುವ ಜಲವಾಗಿದ್ದು ಅದನ್ನು ಅನಂತರ ಉನ್ನತ ಲೋಕಗಳ ಗಂಗೆಯನ್ನಾಗಿ ಪರಿವರ್ತಿಸಲಾಯಿತು. ಧೇವಕುಲ್ಯ - ಗಂಗೆಯ ಅಧಿ ದೇವತೆ).

ಅತ್ರಿ ಮುನಿಯ ಮಡದಿಯಾದ ಅನುಸೂಯಳು ಮೂವರು ತುಂಬಾ ಖ್ಯಾತರಾದ ಸೋಮ, ದತ್ತಾತ್ರೇಯ ಮತ್ತು ದೂರ್ವಾಸರಿಗೆ ಜನ್ಮ ನೀಡಿದಳು. ಅವರು ಭಾಗಶಃ ಬ್ರಹ್ಮ ವಿಷ್ಣು ಮತ್ತು ಈಶ್ವರರ ಪ್ರತಿನಿಧಿಗಳು. ಸೃಷ್ಟಿಕರ್ತ, ಮುನ್ನಡೆಸುವವನು ಹಾಗೂ ವಿನಾಶಕರಾದ ಬ್ರಹ್ಮ ವಿಷ್ಣು ಮತ್ತು ಮಹೇಶ್ವರರು ಹೇಗೆ ಅತ್ರಿ ಮುನಿಯ ಪತ್ನಿಯ

ಸಂತತಿಯಾದರೆಂದು ವಿದುರನು ತಿಳಿದುಕೊಳ್ಳಲು ಬಯಸಿದನು. ಅತ್ರಿ ಮತ್ತು ಅನುಸೂಯೆಯರಿಗೆ ಸಂತತಿಯನ್ನು ಸೃಷ್ಟಿಸಬೇಕೆಂದು ತಿಳಿಸಿದಾಗ ಅತ್ರಿ ಮುನಿಯು ಕಠಿಣ ತಪಸ್ಸನ್ನು ಕೈಗೊಂಡನೆಂಬುದಾಗಿ ಮೈತ್ರೇಯಿ ಉತ್ತರಿಸಿದನು. ಮುನಿಯು ಸದಾ ಆಲೋಚಿಸುತ್ತಿದ್ದನು : "ನಾನು ಯಾರಲ್ಲಿ ಆಶ್ರಯ ಪಡೆದಿದ್ದೇನೆಯೋ ಅಂಥ ಜಗತ್ತಿನ ಒಡೆಯ ತನ್ನನ್ನೇ ಹೋಲುವ ಪುತ್ರನೊಬ್ಬನನ್ನು ನನಗೆ ದಯಪಾಲಿಸಲಿ." ಅತ್ರಿ ಮುನಿಯು ಕಠಿಣ ತಪಸ್ಸನ್ನು ಕೈಗೊಂಡಿದ್ದಾಗ ಮೂವರು ದೇವತೆಗಳು ಅವನನ್ನು ಸಮೀಪಿಸಿದರು. ಮುನಿಯು ಮೂವರು ದೇವತೆಗಳಿಗೂ ಪ್ರಾರ್ಥನೆಯನ್ನು ಸಲ್ಲಿಸಿದನು. ಮುನಿಯು ತುಂಬಾ ಸಂಪ್ರೀತನಾಗಿ ಕಣ್ಣುಚ್ಚಿ ಕುಳಿತನು. ಕೊನೆಗೂ ಮುನಿಯೆಂದನು: "ಎಲೈ ಬ್ರಹ್ಮದೇವನೇ, ವಿಷ್ಣು ದೇವನೇ ಹಾಗೂ ಮಹೇಶ್ವರನೇ, ಪ್ರತಿಯೊಂದು ಯುಗದಲ್ಲಿ , ಜಗತ್ತುಗಳ ಸೃಷ್ಟಿ, ಮುನ್ನಡೆ ಮತ್ತು ನಿರ್ನಾಮಗಳ ಸಂದರ್ಭಗಳಲ್ಲಿನಂತೆಯೇ ನೀವು ಲೌಕಿಕ ಸ್ವಭಾವದ ಮೂರು ವಿಧಾನಗಳನ್ನು ಅಂಗೀಕರಿಸುವ ಮೂಲಕ ನಿಮ್ಮನ್ನೇ ವಿಭಜಿಸಿಕೊಂಡಿದ್ದೀರಿ. ನಾನು ನಿಮ್ಮೆಲ್ಲರಿಗೂ ನನ್ನ ಗೌರವಪೂರ್ವಕ ಪ್ರಣಾಮಗಳನ್ನು ಸಲ್ಲಿಸುತ್ತೇನೆ ಮತ್ತು ನನ್ನ ಪ್ರಾರ್ಥನೆಯಲ್ಲಿ ನಾನು ನಿಮ್ಮಲ್ಲಿ ಯಾರನ್ನು ಕರೆದೆನೆಂಬುದನ್ನು ತಿಳಿಯಲು ಬಯಸುತ್ತೇನೆ. ಮೂವರು ದೇವರುಗಳೂ ಹೇಳಿದರು: "ನಮ್ಮ ಸಾಮರ್ಥ್ಯದ ಭಾಗಶಃ ಅವತಾರವನ್ನು ಪ್ರತಿನಿಧಿಸುವಂಥ ಪುತ್ರರನ್ನು ನೀನು ಪಡೆಯುತ್ತೀಯೆ ಮತ್ತು ನಾವು ನಿನಗೆ ಎಲ್ಲ ಒಳಿತನ್ನೂ ಬಯಸುವುದರಿಂದ ಆ ಪುತ್ರರು ಜಗತ್ತಿನಾದ್ಯಂತ ನಿನ್ನ ಪ್ರತಿಷ್ಠೆಯನ್ನು ಸಾರುತ್ತಾರೆ." ಅನಂತರ ಮೂವರು ಪುತ್ರರು ಹುಟ್ಟಿದರು. ಅವರೆಂದರೆ ಬ್ರಹ್ಮನನ್ನು ಪ್ರತಿನಿಧಿಸುವ ಸೋಮ, ವಿಷ್ಣುವನ್ನು ಪ್ರತಿನಿಧಿಸುವ ದತ್ತಾತ್ತೇಯ ಹಾಗೂ ಮಹೇಶ್ವರನನ್ನು ಪ್ರತಿನಿಧಿಸುವ ದೂರ್ವಾಸ.

ಅಂಗೀರಸನ ಪತ್ನಿಯಾದ ಶ್ರದ್ದಾಳು ನಾಲ್ವರು ಪುತ್ರಿಯರಿಗೆ ಜನ್ಮ ನೀಡಿದಳು. ಅವರೆಂದರೆ ಶಿನಿವಾಲಿ, ಕುಹು, ರಾಕಾ ಮತ್ತು ಅನುಮತಿ. ಶ್ರದ್ಧಾಳಿಗೆ ಇಬ್ಬರು ಪುತ್ರರೂ ಇದ್ದರು. ಅವರೆಂದರೆ ಉತಥ್ಯ ಮತ್ತು ಮಹಾಪಂಡಿತನಾದ ಬೃಹಸ್ಪತಿ. ಪುಲಸ್ತ್ಯನು ತನ್ನ ಮಡದಿ ಹರಿರ್ಭೂವಿನಿಂದ ಇಬ್ಬರು ಪುತ್ರರನ್ನು - ಅಗಸ್ತ್ಯ ಮತ್ತು ವಿಶ್ವಾನರನನ್ನು ಪಡೆದನು. ಅವನಿಗೆ ಇಬ್ಬರು ಮಡದಿಯರು. ಕುಬೇರನಿಗೆ ಜನ್ಮ ನೀಡಿದ ಇಡಾವಿಡ ಹಾಗೂ ರಾವಣ, ಕುಂಭಕರ್ಣ ಮತ್ತು ವಿಭೀಷಣರಿಗೆ ಜನ್ಮ ನೀಡಿದ ಕೇಶಿನಿ.

ಪುಲಹನು ತನ್ನ ಪತ್ನಿ ಗತಿಯಲ್ಲಿ ಮೂವರು ಪುತ್ರರಿಗೆ ಕರ್ಮಶ್ರೇಷ್ಠ, ವಾರಿಯನ್ ಮತ್ತು ಸಹಿಷ್ಣುವಿಗೆ ಜನ್ಮವಿತ್ತನು.

ಕ್ರತುವಿನ ಮಡದಿಯಾದ ಕ್ರಿಯೆಯು ಅಧ್ಯಾತ್ಮಿಕ ಜ್ಞಾನದಲ್ಲಿ ಉನ್ನತ ರೀತಿಯಲ್ಲಿ ಮುಂದುವರಿದಿದ್ದಂಥ ವಾಲಖಿಲ್ಯಾಸರೆಂಬ ಅರವತ್ತು ಸಾವಿರ ಹಿರಿಯ ಮುನಿಗಳಿಗೆ ಜನ್ಮ ನೀಡಿದಳು. ವಶಿಷ್ಠ ಹಾಗೂ ಅವನ ಪತ್ನಿಯಾದ ಅರುಂಧತಿ ಎಂಬ ಹೆಸರನ್ನೂ ಹೊಂದಿದ ಉರ್ಜಾಳು ಚಿತ್ರಕೇತು, ಸುರೋಚಿ, ವಿರಾಜ, ಮಿತ್ರ, ಉಲ್ಬಣ, ವಸುಭೃದ್ಯಾನ ಮತ್ತು ದ್ಯುಮನರೆಂಬ ಏಳು ಋಷಿಗಳಿಗೆ ಜನ್ಮ ನೀಡಿದಳು.

ಅಥರ್ವ ಹಾಗೂ ಅವನ ಪತ್ನಿ ಚಿತ್ತಿಯು ದಧ್ಯಾಂಚ ಎಂಬ ಉನ್ನತ ಶಪಥವನ್ನು ಅಂಗೀಕರಿಸುವ ಮೂಲಕ ಅಶ್ವಶಿರನೆಂಬ ಪುತ್ರನಿಗೆ ಜನ್ಮ ನೀಡಿದರು.

ಭೃಗು ಮತ್ತು ಅವನ ಪತ್ನಿ ಖ್ಯಾತಿಯು ಧಾತಾ ಮತ್ತು ವಿಧಾತರೆಂಬ ಇಬ್ಬರು ಪುತ್ರರನ್ನೂ ಹಾಗೂ ಭಗವಂತನ ಭಕ್ತಳಾದ ಶ್ರೀ ಎಂಬ ಹೆಸರಿನ ಒಬ್ಬಳು ಪುತ್ರಿಯನ್ನೂ ಪಡೆದರು.

ಮೇರುವಿಗೆ ಆಯಾತಿ ಮತ್ತು ನಿಯಾತಿ ಎಂಬ ಇಬ್ಬರು ಪುತ್ರಿಯರಿದ್ದು ಅವರನ್ನು ಅವನು ಧಾತ ವಿಧಾತರಿಗೆ ದಾನವಾಗಿ ನೀಡಿದನು. ಆಯಾತಿ ಮತ್ತು ನಿಯಾತಿಯರು ತಲಾ ಒಬ್ಬೊಬ್ಬ ಪುತ್ರನನ್ನು - ಮಾರ್ಕಾಂಡ ಮತ್ತು ಪ್ರಾಣರನ್ನು ಪಡೆದರು. ಮಾರ್ಕಾಂಡನಿಂದ ಮಾರ್ಕಂಡೇಯ ಮುನಿಯು ಜನಿಸಿ ಪ್ರಾಣನಿಂದ ವೇದಶಿರನೆಂಬ ಮುನಿಯ ಜನನ ವಾಯಿತು. ವೇದಶಿರನ ಮಗನೇ ಕವಿಯೊಂದು ಹೆಸರಾದ ಉಸನ. ಶುಕ್ರಾಚಾರ್ಯ ಕವಿಯೆಂಬುದಾಗಿಯೂ ಕರೆಯಲ್ಪಟ್ಟಿರುವ ಈತನು ಭೃಗುಕುಲದ ಸಂತತಿಗೆ ಸೇರಿದವನು.

ಮನುವಿನ ಪುತ್ರಿಯರಲ್ಲೊಬ್ಬಳಾದ ಪ್ರಸೂತಿಯು ದಕ್ಷನೆಂದೂ ಹೆಸರುಳ್ಳ ಬ್ರಹ್ಮನ ಮಗನನ್ನು ವಿವಾಹವಾದಳು. ದಕ್ಷನು ಹದಿನಾರು ಪುತ್ರಿಯರನ್ನು ಪಡೆದನು. ಅವರಲ್ಲಿ ಹದಿಮೂರು ಪುತ್ರಿಯರನ್ನು ಧರ್ಮನಿಗೆ ವಿವಾಹ ಮಾಡಿಕೊಟ್ಟು ಒಬ್ಬಳನ್ನು ಅಗ್ನಿಗೆ ವಿವಾಹ ಮಾಡಿಕೊಡಲಾಯಿತು. ಇನ್ನುಳಿದ ಇಬ್ಬರು ಪುತ್ರಿಯರಲ್ಲಿ ಒಬ್ಬಳನ್ನು ಪಿತೃಲೋಕಕ್ಕೆ ದಾನವಾಗಿತ್ತು ಅಲ್ಲಿ ಅವಳು ಅನುಕೂಲದಿಂದಿದ್ದು ಮತ್ತೊಬ್ಬಳನ್ನು ಮಹೇಶ್ವರನಿಗೆ ಕೊಡಲಾಯಿತು. ಈ ಪುತ್ರಿಯರು ವಿವಿಧ ಉಪದೇವತೆಗಳಿಗೆ ಜನ್ಮ ನೀಡಿ ಎಲ್ಲ ಗೌರವಯುತ ಗುಣಗಳ ಆಗರವಾಗಿದ್ದ ದಕ್ಷನ ಮಗಳಾದ ಮೂರ್ತಿಯು ಪರಮಾತ್ಮನ ಉನ್ನತ ಸ್ವರೂಪರಾದ ಶ್ರೀ ನರ- ನಾರಾಯಣರಿಗೆ ಜನ್ಮವಿತ್ತಳು. ನರ ನಾರಾಯಣರು ಕಾಣಿಸಿಕೊಂಡ ಸಂದರ್ಭದಲ್ಲಿ ಇಡೀ ಜಗತ್ತು ಹರ್ಷದಿಂದ ತುಂಬಿತ್ತು. ಪ್ರತಿಯೊಬ್ಬರ ಮನಸ್ಸೂ ಸ್ಥಿಮಿತದಲ್ಲಿದ್ದು ಎಲ್ಲ ದಿಕ್ಕುಗಳಲ್ಲೂ ಗಾಳಿ, ನದಿಗಳು ಮತ್ತು ಪರ್ವತಗಳು ಮುದಗೊಂಡವು. ಎಲ್ಲೆಲ್ಲೂ ಅನಂದವಿದ್ದು ಬ್ರಹ್ಮನಂಥ ಉನ್ನತ ಉಪದೇವತೆಗಳೂ ಭಕ್ತಿಪೂರ್ವಕ ಪ್ರಾರ್ಥನೆಗಳನ್ನು ಸಲ್ಲಿಸಿದರು. ಮೈತ್ರೇಯಿಯು ವಿದುರನಿಗೆ ಉಪದೇವತೆಗಳು, ನರ ನಾರಾಯಣ ಮುನಿಯಾಗಿ ಕಾಣಿಸಿಕೊಂಡ ಭಗವಂತನನ್ನು ಪೂಜಿಸಿದರು ಎಂಬುದಾಗಿ ತಿಳಿಸಿದರು. ಅವರು ಮುಂದೆ, ನರ ನಾರಾಯಣರು ಶ್ರೀ ಕೃಷ್ಣನ ಭಾಗಶಃ ವಿಸ್ತರಣೆಯೆಂದರು. ಅವರೀಗ ಯದು ಮತ್ತು ಕೌರವ ಕುಲಗಳಲ್ಲಿ , ಕೃಷ್ಣಾರ್ಜುನರಾಗಿ, ಜಗತ್ತಿನ ಹೊರೆಯನ್ನು ಹೋಗಲಾಡಿಸಲು ಕಾಣಿಸಿಕೊಂಡಿದ್ದಾರೆ.

ಪ್ರಮುಖ ದೇವತೆಯಾದ ಅಗ್ನಿಯು ತನ್ನ ಮಡದಿ ಸ್ವಾಹಾಳಿಂದ ಪಾವಕ, ಪವಮಾನ ಮತ್ತು ಶುಚಿಯೊಂಬ ಮೂವರು ಮಕ್ಕಳನ್ನು ಪಡೆದನು. ಯಜ್ಞಕ್ಕಾಗಿ ಸಲ್ಲಿಸಲಾದ ಹವಿಸ್ಸನ್ನು ತಿಂದು ಅವರು ಬದುಕಿದ್ದಾರೆ. ಯಜ್ಞಕ್ಕಾಗಿ ಒಪ್ಪಿಸಲಾದ ಹವಿಸ್ಸು ಉಪದೇವತೆಗಳು, ಅಗ್ನಿ ಮತ್ತು ಸ್ವಾಹಾರ ಮೂವರು ಪುತ್ರರಿಗೆ ನೀಡಿದಂಥದ್ದು. ಆ ಮೂವರು ಪುತ್ರರಿಂದ ಇನ್ನೂ ನಲವತ್ತೈದು ಕುಲಜರನ್ನು ಸೃಷ್ಟಿಸಲಾಗಿ ಅವರೂ ಅಗ್ನಿ ದೇವತೆಗಳಾಗಿದ್ದರು. ಆದ್ದರಿಂದ ಅಗ್ನಿ ದೇವತೆಗಳ ಒಟ್ಟು ಸಂಖ್ಯೆ ಪಿತರು ಮತ್ತು

ಅಜ್ಜಂದಿರನ್ನೂ ಒಳಗೊಂಡಂತೆ, ನಲವತ್ತೊಂಬತ್ತು. ದಕ್ಷನ ಮಗಳಾದ ಸ್ವಾಧಾಳು ಎಲ್ಲ ಪಿತರ ಮಡದಿ. ಸ್ವಾಧಾಳು ವಾಯುನ ಮತ್ತು ಧರಣಿಯೆಂಬ ಹೆಸರಿನ ಇಬ್ಬರು ಪುತ್ರಿಯರನ್ನು ಪಡೆದಿದ್ದು ಅವರಿಬ್ಬರೂ ವೇದ ಪಾರಂಗತರು. ದಕ್ಷನ ಮಗಳಾದ ಹಾಗೂ ಮಹೇಶ್ವರನ ಮಡದಿಯಾದ ಸತಿಗೆ ಮಕ್ಕಳಿರಲಿಲ್ಲ. ಕಾರಣವೆಂದರೆ ಮಹೇಶ್ವರನು ನಿರಪರಾಧಿಯಾಗಿದ್ದರೂ ಸಹ ಸತಿಯ ತಂದೆಯಾದ ದಕ್ಷನು ಅವನನ್ನು ನಿಂದಿಸುತ್ತಿದ್ದುದು. ಪರಿಣಾಮವಾಗಿ ಋತುಮತಿಯಾಗುವ ಮುನ್ನವೇ ಸತಿಯು ತನ್ನ ಯೋಗ ಶಕ್ತಿಯಿಂದಾಗಿ ಶರೀರವನ್ನು ಬಿಟ್ಟುಕೊಟ್ಟಳು.

ತನ್ನ ಮಗಳ ಬಗ್ಗೆ ಅಷ್ಟು ವಿಶ್ವಾಸವನ್ನು ಹೊಂದಿದ್ದ ದಕ್ಷನು ಮಹೇಶ್ವರನ ಮೇಲೆ ಶತೃತ್ವವನ್ನೇಕೆ ಬೆಳೆಸಿಕೊಂಡಿದ್ದನು ಎಂಬುದಾಗಿ ವಿದುರನು ವಿಚಾರಿಸಿದನು. ದಕ್ಷ ಮತ್ತು ಶಿವರ ಮಧ್ಯೆ ವೈಮನಸ್ಯ ಏಕೆ ಇತ್ತು ಎಂಬುದನ್ನು ಅವನು ತಿಳಿಯಲು ಬಯಸಿದನು.

## ದಕ್ಷ ಯಜ್ಞ

ಹಿಂದೆ ಮಹಾಮುನಿಗಳು, ವೇದಾಂತಿಗಳು, ಉಪದೇವತೆಗಳು ಮತ್ತು ಅಗ್ನಿದೇವತೆಗಳಿಂದ ಹಾಜರಾಗಲ್ಪಡುತ್ತಿದ್ದ ಯಜ್ಞವೊಂದನ್ನು ವಿಶ್ವಸೃಷ್ಟಿಯ ಅಧ್ವರ್ಯುಗಳು ನಡೆಸುತ್ತಿದ್ದರು ಎಂಬುದಾಗಿ ಮೈತ್ರೇಯಿಯು ಹೇಳಿದನು. ಪ್ರಜಾಪತಿಗಳ ಮುಖಂಡನಾದ ದಕ್ಷನು ತನ್ನ ಶರೀರದ ಕಾಂತಿಯಿಂದ ಇಡೀ ಸಭಾಂಗಣವನ್ನು ಪ್ರಕಾಶಮಾನಗೊಳಿಸುತ್ತ ಪ್ರವೇಶಿಸಿದಾಗ ಬ್ರಹ್ಮದೇವ ಹಾಗೂ ಮಹೇಶ್ವರರನ್ನುಳಿದು ಮಿಕ್ಕವರೆಲ್ಲರೂ ಗೌರವದಿಂದ ಎದ್ದು ನಿಂತರು. ಶಿವನು ಕುಳಿತೇ ಇದ್ದುದನ್ನು ಕಂಡ ದಕ್ಷನು ಅವಮಾನಿತಗೊಂಡೆನೆಂದು ಭಾವಿಸಿ ಕೋಪಾವಿಷ್ಟನಾಗಿ ಶಿವನನ್ನು ಶಪಿಸಿ ಸಭಾಂಗಣದಿಂದ ಹೊರಗೆ ಹೋದನು. ಅವನು ನೀಡಿದ ಶಾಪವಿದು : " ಉಪದೇವತೆಗಳೆಲ್ಲರೂ ಯಜ್ಞದ ಸಮಯದಲ್ಲಿ ತಮ್ಮ ಪಾಲಿನ ಹವಿಸ್ಸನ್ನು ಪಡೆದುಕೊಳ್ಳಲು ಅರ್ಹರಾದರೂ ಉಪದೇವತೆಗಳಲ್ಲೆಲ್ಲ ಕೆಳಗಿನ ಸ್ಥಾನದಲ್ಲಿರುವ ಶಿವನು ಮಾತ್ರ ಅದಕ್ಕೆ ಅರ್ಹನಲ್ಲ." ದಕ್ಷನೊಂದಿಗೆ ಮಿಕ್ಕವರೂ ಹೊರಟರು. ಶಿವ ಹಾಗೂ ಅವನ ಅನುಯಾಯಿಗಳು ಯಜ್ಞಮಂಟಪದಿಂದ ನಿರ್ಗಮಿಸಿದರು. ಈ ರೀತಿಯಾಗಿ ಮಾವ ಹಾಗೂ ಅಳಿಯಂದಿರ ಮಧ್ಯೆ ವೈಮನಸ್ಯ ವೇರ್ಪಟ್ಟಿತು.

ಈಶ್ವರನು ದಕ್ಷನ ಶಾಪಕ್ಕೊಳಗಾದನೆಂಬುದನ್ನು ಅರಿತ ಶಿವನ ಪ್ರಮುಖ ಅನುಯಾಯಿಯಾದ ನಂದೀಶ್ವರನು ಬ್ರಾಹ್ಮಣರನ್ನೂ ಮತ್ತು ದಕ್ಷನನ್ನು ಶಪಿಸಿದನು. ಅವನ ಮೊದಲ ಶಾಪವೆಂದರೆ ದಕ್ಷನನ್ನು ಬೆಂಬಲಿಸಿದ ಯಾರೇ ಆಗಲಿ ಅತಿಶಯ ಜ್ಞಾನದಿಂದ ವಂಚಿತರಾಗಲಿ ಎಂಬುದು. ನಂದೀಶ್ವರನ ಪ್ರಕಾರ ಎರಡನೇ ಶಾಪವೆಂದರೆ ವಿಷ್ಣುಪಾದ ಅಥವಾ ವಿಷ್ಣುಗತಿಯನ್ನು ಮರೆತು ಲೈಂಗಿಕ ಜೀವನಕ್ಕೆ ಬಂಧನಗೊಂಡಿರುವ ದಕ್ಷನು ಮೇಕೆಯ ಮುಖವನ್ನು ಹೊಂದಲಿ ಎಂಬುದು; ಈಶ್ವರನ ಅವಹೇಳನವನ್ನು ಮಾಡುವಲ್ಲಿ ದಕ್ಷನನ್ನು ಬೆಂಬಲಿಸಿದವರೆಲ್ಲರೂ ಹುಟ್ಟು ಸಾವಿನ ವೃತ್ತದಲ್ಲಿ ಮುಂದುವರಿಯಲಿ ಎಂಬುದು. ತಾವು ಯಾವುದನ್ನು ತಿನ್ನಬೇಕು ಹಾಗೂ ಯಾವುದನ್ನು

ತಿನ್ನಬಾರದು ಎಂಬ ತಾರತಮ್ಯವನ್ನು ಕಳೆದುಕೊಂಡು ಮನೆಯಿಂದ ಮನೆಗೆ ಅಲೆದು ದುಡ್ಡು ಸಂಪಾದಿಸಿಕೊಂಡು ಹೊಟ್ಟೆ ಹೊರೆಯುವಂತಾಗಲಿ ಎಂಬುದಾಗಿಯೂ ಅವನು ಬ್ರಾಹ್ಮಣರಿಗೆ ಶಾಪವಿತ್ತನು.

ಭೃಗುವು ಕ್ಷೋಭೆಗೊಂಡು ಶಿವನ ಅನುಯಾಯಿಗಳನ್ನು ಖಂಡಿಸಿದನು. ಅವನೆಂದನು: "ಈಶ್ವರನನ್ನು ಸಂತೃಪ್ತಿಗೊಳಿಸಲು ವಚನವನ್ನು ಕೈಗೊಳ್ಳುವವನು ಅಥವಾ ಅಂಥ ತತ್ವಗಳನ್ನು ಅನುಸರಿಸುವವರು ನಿಶ್ಚಿತವಾಗಿಯೂ ನಾಸ್ತಿಕರಾಗಿ, ಧಾರ್ಮಿಕ ಗ್ರಂಥಗಳ ಸೂಚನೆಗಳಿಂದ ವಿಮುಖರಾಗಲಿ."

ಬ್ರಹ್ಮನು ದಕ್ಷನನ್ನು ಜನಸಂಖ್ಯೆಯನ್ನು ವೃದ್ಧಿಸುವ ಪ್ರಜಾಪತಿಗಳ ಮುಖಂಡ ನನ್ನಾಗಿಸಿದಾಗ ದಕ್ಷನು ತುಂಬಾ ಉಬ್ಬಿಹೋದನು. ದಕ್ಷನು "ವಾಜಪೇಯಿ" ಎಂಬ ಹೆಸರಿನ ಯಜ್ಞವನ್ನು ಪ್ರಾರಂಭಿಸಿ "ಬೃಹಸ್ಪತಿ ಸೇವೆ" ಎಂಬ ಮತ್ತೊಂದು ದೊಡ್ಡ ಯಜ್ಞವನ್ನು ನೆರವೇರಿಸಿದನು. ಯಜ್ಞವು ನಡೆಯುತ್ತಿರುವ ಸಂದರ್ಭದಲ್ಲಿ ಅನೇಕ ಋಷಿಗಳು, ಉಪದೇವತೆಗಳು ತಮ್ಮ ಕುಟುಂಬಗಳೊಂದಿಗೆ ಹಾಜರಿದ್ದರು. ಇದನ್ನು ತಿಳಿದ ಸತಿಯು ತನ್ನ ತಂದೆಯಿಂದ ಆಮಂತ್ರಿತಗೊಳ್ಳದಿದ್ದರೂ ತಾನೂ ಅಲ್ಲಿಗೆ ಹೋಗಲು ಇಚ್ಛಿಸುವುದಾಗಿ ತನ್ನ ಪತಿ ಮಹೇಶ್ವರನನ್ನು ಕೇಳಿಕೊಂಡಳು. ಆಮಂತ್ರಣವಿಲ್ಲದೆ ಅಲ್ಲಿ ಹಾಜರಾಗಕೂಡದೆಂದು ಶಿವನು ಅವಳನ್ನು ಸಮಾಧಾನಪಡಿಸಿದರೂ ಅವಳು ಯಜ್ಞಕ್ಕೆ ಹೊರಟಳು. ಅಲ್ಲಿ ಅವಳನ್ನು ಅವಳ ತಂದೆ ಸ್ವಾಗತಿಸಲಿಲ್ಲ. ಅದಕ್ಕೆ ಬದಲಾಗಿ ದಕ್ಷನು ಶಿವನನ್ನು ನಿಂದಿಸಲು ಪ್ರಾರಂಭಿಸಿದನು. ಸತಿಯು ತನ್ನ ದೇಹವು ತನ್ನ ತಂದೆ ದಕ್ಷನಿಂದ ನೀಡಲಾದ್ದರಿಂದ ಅದನ್ನು ಬಿಟ್ಟುಕೊಡಲು ನಿರ್ಧರಿಸಿದಳು. ಇದನ್ನು ಕಂಡ ಶಿವನ ಅನುಯಾಯಿಗಳು ದಕ್ಷನನ್ನು ಗಾಯಗೊಳಿಸಲು ಅಥವಾ ಸಾಯಿಸಲು ಸಿದ್ಧರಾದಾಗ ಸತಿಯು ಅವರನ್ನು ತಡೆದಳು. ಸತಿಯು ದಕ್ಷನಿಗೆ ನುಡಿದಳು : "ಮಹೇಶ್ವರನು ಎಲ್ಲ ಜೀವಿಗಳ ಪ್ರೀತಿಗೆ ಪಾತ್ರನಾದವನು. ಅವನಿಗೆ ಶತೃಗಳಿಲ್ಲ. ಅವನಿಗೆ ಯಾರೂ ತುಂಬ ಪ್ರಿಯರಲ್ಲ. ಎಲ್ಲ ಶತೃತ್ವಗಳಿಂದಲೂ ಮುಕ್ತನಾದ ವಿಶ್ವ ಜೀವಿಯೊಬ್ಬನನ್ನು ನಿನ್ನನ್ನು ಬಿಟ್ಟು ಮತ್ಯಾರೂ ದ್ವೇಷಿಸಲು ಸಾಧ್ಯವಿಲ್ಲ. ಶಿವನು ಪರಿಶುದ್ಧನಾಗಿದ್ದು ನಿನ್ನನ್ನು ಬಿಟ್ಟು ಯಾರೂ ಅವನನ್ನು ಶತೃತ್ವದಿಂದ ಕಾಣುವುದಿಲ್ಲ" .

ಅವಳೊಂದಿಗೆ ಬಂದಿದ್ದ ಸೇವಕರು ದಕ್ಷನನ್ನು ಕೊಲ್ಲಲು ಆಯುಧಗಳನ್ನು ಕೈಗೆತ್ತಿಕೊಂಡರು. ಅಪಾಯವನ್ನು ಕಂಡ ಭೃಗು ಮುನಿಯು ಯಜ್ಞ ಕಾರ್ಯವನ್ನು ನಾಶಪಡಿಸುವವರನ್ನು ತತ್‌ಕ್ಷಣದಲ್ಲೇ ಪರಿಹರಿಸಬಲ್ಲಂಥ ಯಜುರ್ವೇದದ ಶ್ಲೋಕಗಳನ್ನು ಪಠಿಸಿದನು. ಭೃಗು ಮುನಿಯು ಅಗ್ನಿಗೆ ಹವಿಸ್ಸನ್ನು ಅರ್ಪಿಸಿದಾಗ, ತಕ್ಷಣವೇ ಶಕ್ತಿಯುತರಾದ ಹಲವಾರು ಸಾವಿರ ಉಪದೇವತೆಗಳು ಸೃಷ್ಟಿಗೊಂಡರು. ಸತಿಯ ಸೇವಕರು ಆ ಸ್ಥಳದಿಂದ ಪಲಾಯನ ಮಾಡಿದರು. ತನ್ನ ತಂದೆಯ ಅವಹೇಳನದಿಂದಾಗಿ ಸತಿಯು ನಿಧನ ಹೊಂದಿದಳು ಎಂಬುದನ್ನು ನಾರದನಿಂದ ಅರಿತ ಶಿವನು ಕೋಪಾವಿಷ್ಟನಾದ. ಅವನು ರೋಷದಿಂದ ತನ್ನ ತಲೆಗೊದಲಿನ ಒಂದು ಹಿಡಿಯಷ್ಟನ್ನು ಕಿತ್ತಿ ಅದನ್ನು

ಭೂಮಿಗೆ ಅಪ್ಪಳಿಸಿದ. ಅಲ್ಲಿ ಆಕಾಶದಷ್ಟು ಎತ್ತರವಾದ ಹಾಗೂ ಮೂವರು ಸೂರ್ಯರು ಒಟ್ಟುಗೂಡಿದರೆ ಹೊಮ್ಮುವಷ್ಟು ಪ್ರಕಾಶಮಾನನಾದ ಹಾಗೂ ಸಹಸ್ರ ಬಾಹುಗಳ ರಕ್ಕಸನು ಕಾಣಿಸಿಕೊಂಡನು. (ಅವನ ಹೆಸರು ವೀರಭದ್ರ). ಭೂತನಾಥನೆಂಬ ಹೆಸರನ್ನೂ ಉಳ್ಳ ಶಿವನು ಅಜ್ಞಾಪಿಸಿದ : "ನೀನು ನನ್ನ ಶರೀರದಿಂದ ಹುಟ್ಟಿದವನಾದ್ದರಿಂದ ನೀನು ನನ್ನೆಲ್ಲ ಅನುಯಾಯಿಗಳಿಗೂ ಮುಖ್ಯಸ್ಥನು. ಆದ್ದರಿಂದ, ಯಜ್ಞದಲ್ಲಿ ದಕ್ಷ ಮತ್ತು ಅವನ ಸೈನಿಕರನ್ನು ಕೊಲ್ಲು." ದೈತ್ಯನು ಇಡೀ ಯಜ್ಞವನ್ನು ನಾಶಪಡಿಸಿ, ದಕ್ಷನನ್ನು ಕೊಂದು, ಭೃಗುವಿನ ಮೀಸೆಯನ್ನು ಕಿತ್ತು ಅಲ್ಲಿ ನೆರೆದಿದ್ದ ಅನೇಕರನ್ನು ಸಾವಿಗೀಡಾಗಿಸಿದನು.

ಬ್ರಹ್ಮದೇವನು, ಎಲ್ಲವನ್ನೂ, ಉಪದೇವತೆಗಳು ಹಾಗೂ ಯಜ್ಞಕ್ಕೆ ಹಾಜರಾಗಿದ್ದ ಇನ್ನಿತರರಿಂದ ಕೇಳಿ ಅವರಿಗೆ ಉತ್ತರಿಸಿದನು: " ನೀವು ಒಬ್ಬ ಉನ್ನತ ವ್ಯಕ್ತಿಯನ್ನು ಅವಮಾನಗೊಳಿಸಿ ಅದರ ಮೂಲಕ ಅವನ ಪದ್ಮಪಾದವನ್ನು ನೋಯಿಸಿ ಯಜ್ಞವನ್ನು ನೇರವೇರಿಸುವುದರಿಂದ ನಿಮಗೆ ಯಾವ ಸಂತೋಷವೂ ಸಿಗುವುದಿಲ್ಲ. ನೀವು ಆ ರೀತಿಯಾಗಿ ಸಂತೋಷವನ್ನು ಹೊಂದಲಾಗುವುದಿಲ್ಲ." ಅವನು ಮುಂದುವರಿದು ಈಶ್ವರನು ತುಂಬಾ ಶಕ್ತಿಶಾಲಿಯಾಗಿದ್ದು ಅವನು ತನ್ನ ಕೋಪದಿಂದ ಎಲ್ಲ ಗ್ರಹಗಳನ್ನು ನಿಯಂತ್ರಿಸುತ್ತಾನೆ. ಅವನು, ಉಪದೇವತೆಗಳಿಗೆ, ಈಶ್ವರನ ಬಳಿಗೆ ಹೋಗಿ ಕ್ಷಮಾಯಾಚನೆ ಮಾಡಬೇಕೆಂದು ಸಲಹೆ ಮಾಡಿದನು. ಮಹೇಶ್ವರನ ಕ್ಷಮೆ ಯಾಚಿಸಲು ಬ್ರಹ್ಮದೇವನೇ ಸ್ವತಃ ಅವರೆಲ್ಲರನ್ನೂ ಕೈಲಾಸಕ್ಕೆ ಕೊಂಡೊಯ್ದನು.

ಈಶ್ವರನ ಆವಾಸಸ್ಥಾನವಾದ ಕೈಲಾಸವು ಎಲ್ಲ ವಿಧದ ಬೆಲೆ ಬಾಳುವ ಆಭರಣಗಳು ಹಾಗೂ ಖನಿಜಗಳಿಂದ ತುಂಬಿದ್ದು ಎಲ್ಲ ವಿಧವಾದ ಬೆಲೆ ಬಾಳುವ ವೃಕ್ಷಗಳು ಹಾಗೂ ಗಿಡಗಳನ್ನು ಹೊಂದಿದೆ. ಕೈಲಾಸವನ್ನು ಸ್ವರ್ಗವೆಂದು ವರ್ಣಿಸಲಾಗಿದೆ.

ತಂಡವು ಈಶ್ವರನನ್ನು ಸಮೀಪಿಸಿದಾಗ ಅವನು ಜಿಂಕೆಯ ಚರ್ಮದ ಮೇಲೆ ಕೂತು ಧ್ಯಾನಮಗ್ನನಾಗಿದ್ದನು. ಎಲ್ಲ ಮುನಿಗಳೂ ಹಾಗೂ ಉಪದೇವತೆಗಳು ಮಹೇಶ್ವರನಿಗೆ ಭಕ್ತಿ ಪೂರ್ವಕ ಪ್ರಣಾಮಗಳನ್ನು ಸಲ್ಲಿಸಿದರು. ಬ್ರಹ್ಮದೇವನು ಈಶ್ವರನ ಗುಣಗಾನ ಮಾಡಿ ಯಜ್ಞವನ್ನು ಪೂರ್ಣಗೊಳಿಸಲು ಅನುವಾಗುವಂತೆ ಮತ್ತು ಅದನ್ನು ಪುನಃಶ್ಚೇತನಗೊಳಿಸಬೇಕೆಂದು ಅವನನ್ನು ಕೇಳಿಕೊಂಡನು. ಈ ರೀತಿಯಾಗಿ ಸಮಾಧಾನ ಪಡಿಸಲಾದ ಶಿವನು ದಕ್ಷನ ಶಿರವು ಈಗಾಗಲೇ ಸುಟ್ಟು ಬೂದಿಯಾಗಿರುವುದರಿಂದ ಅವನು ಮೇಕೆಯೊಂದರ ಶಿರವನ್ನು ಹೊಂದುತ್ತಾನೆಂದನು. ತನ್ನ ಕಣ್ಣುಗಳನ್ನು ಕೇಳಿಸಿಕೊಂಡ ಭಾಗ ಎಂಬ ಮತ್ತೊಬ್ಬ ಉಪದೇವತೆಯು ತನ್ನ ಪಾಲಿನ ಯಜ್ಞವನ್ನು ಮಿತ್ರನೆಂಬುವನ ನೇತ್ರದಿಂದ ನೋಡುತ್ತಾನೆಂದನು. ಮತ್ತೊಬ್ಬ ಉಪದೇವತೆಯಾದ ಕೂಸನು ತನ್ನ ಹಲ್ಲುಗಳನ್ನು ಕಳೆದುಕೊಂಡಿರುವುದಾಗಿ ತನ್ನ ಶಿಷ್ಯರ ಹಲ್ಲುಗಳ ಮೂಲಕ ಅಗಿಯಲು ಸಮರ್ಥನಾಗುತ್ತಾನೆಂದನು. ಭೃಗು ಮುನಿಯು ಮೇಕೆಯ ಶಿರದಿಂದ ದಾಡಿಯನ್ನು ಪಡೆಯುತ್ತಾನೆ. ಅನಂತರ ಮಹಾಮುನಿಗಳ ಮುಖ್ಯಸ್ಥನಾದ ಭೃಗುವು ಮಹೇಶ್ವರನನ್ನು ಯಜ್ಞಮಂಟಪಕ್ಕೆ ಬರಬೇಕೆಂದು ಅಹ್ವಾನಿಸಿದಾಗ ಎಲ್ಲರೂ ಅಲ್ಲಿಗೆ ತೆರಳಿದರು. ಹೀಗೆ ವಿನಾಶಗೊಂಡಿದ್ದ ಯಜ್ಞವು ಪುನಃಶ್ಚೇತನಗೊಂಡಿತು.

ಮೈತ್ರೇಯಿ ಋಷಿಯು ಭಾಗವತ ವ್ಯಾಖ್ಯಾನವನ್ನು ಮುಂದುವರಿಸಿ ಹೇಳಿದನು. ನಾಲ್ಕು ಕುಮಾರ ಮುನಿಗಳು, ಸನಕನಲ್ಲದೆ ನಾರದ, ಹಾಗೂ ಬ್ರಹ್ಮನ ಮಕ್ಕಳಾದ ರಭು, ಹಂಸ, ಅರುಣಿ ಮತ್ತು ಏತಿ ಮನೆಯಲ್ಲಿ ವಾಸವಾಗಿರದ ಊರ್ಧ್ವರೇತರು ಅಥವಾ ನೈಸ್ಥಿಕ ಬ್ರಹ್ಮಚಾರಿಗಳು ಅಥವಾ ಪರಿಶುದ್ಧ ಬ್ರಹ್ಮಚಾರಿಗಳಾಗಿ ಸದಾ ಕಾಲವೂ ಸಂಚಾರಿಗಳಾದರು.

ಬಹ್ಮದೇವನ ಮತ್ತೊಬ್ಬ ಪುತ್ರನು "ಅಧರ್ಮ" ನಾಗಿದ್ದು ಅವನ ಪತ್ನಿಯು "ಸುಳ್ಳುಗಾರ್ತಿ". ಅವರ ಕೂಡಿಕೆಯಿಂದ ಧಂಬ ಅಥವಾ "ಸುಳ್ಳು" ಹಾಗೂ ಮಾಯಾ ಅಥವ "ಮೋಸ" ವೆಂಬ ಇಬ್ಬರು ರಕ್ಕಸರು ಜನಿಸಿದರು. ಈ ಇಬ್ಬರು ರಕ್ಕಸರನ್ನು ಮಕ್ಕಳಿಲ್ಲದ ನ್ರತ್ತಿಯೆಂಬ ರಕ್ಕಸನು ಕರೆದುಕೊಂಡು ಹೋದನು. ಅಧಾರ್ಮಿಕತೆಯು ಬ್ರಹ್ಮನ ಪುತ್ರನೇ ಆಗಿದ್ದು ಅವನು ತನ್ನ ಸೋದರಿ ತ್ರುಷಳನ್ನೇ ವಿವಾಹವಾದನು. ಇದು ಸಹೋದರ ಸಹೋದರಿಯರ ಮಧ್ಯದಲ್ಲಿನ ಲೈಂಗಿಕ ಸಂಬಂಧದ ಪ್ರಾರಂಭ. ದಂಭ ಮತ್ತು ಮಾಯಾ ಇವರಿಂದ ದುರಾಸೆ ಮತ್ತು ನಿಕೃತಿ ಅಥವಾ ಕುಟಿಲತೆಯು ಹುಟ್ಟಿದವು. ಅವರ ನೆರೆಯುವಿಕೆಯಿಂದ ಕ್ರೋಧ ಮತ್ತು ಹಿಂಸೆಯು ಹುಟ್ಟಿ ಅವರಿಂದ ಕಾಳಿ ಮತ್ತು ಅವನ ಸೋದರಿ ದುರುಕ್ತಿ ಜನಿಸಿದರು. ಕಾಳಿ ಮತ್ತು ದುರುಕ್ತಿಯರ ಕೂಡುವಿಕೆಯಿಂದ ಮೃತ್ಯುಮತ್ತು ಭೀತಿ ಜನಿಸಿ ಇವರಿಂದ ಯಾತನ ಹಾಗೂ ನಿರಾಮ (ನರಕ) ಹುಟ್ಟಿದವು. ಸೃಷ್ಟಿಯ ಒಳತಿನ ಆಧಾರದ ಮೇಲೆ ಸಂಚರಿಸುತ್ತಿದ್ದ "ಅಧರ್ಮ" ದ ನೆಲೆಯಿಂದ ವಿನಾಶವು ಹುಟ್ಟುತ್ತದೆ.

## ಧ್ರುವ

ಮೈತ್ರೇಯಿ ಮುನಿಯು ಮುಂದುವರೆಸಿ ಹೇಳಿದನು: "ಸ್ವಯಂಭು ಮನುವಿಗೆ ಉತ್ತಾನಪಾದ ಮತ್ತು ಪ್ರಿಯವ್ರತರೆಂಬ ಇಬ್ಬರು ಮಕ್ಕಳು. ಉತ್ತಾನ ಪಾದನಿಗೆ ಸುನೀತಿ ಮತ್ತು ಸುರುಚಿ ಎಂಬ ಇಬ್ಬರು ರಾಣಿಯರು. ಸುರುಚಿಯು ಅವನಿಗೆ ಪ್ರೀಯಳಾದ ರಾಣಿ. ಸುನೀತಿ ರಾಣಿಗೆ ಧ್ರುವನೆಂಬ ಒಬ್ಬ ಮಗ, ಸುರುಚಿಯ ಮಗ ಉತ್ತಮ. ಒಮ್ಮೆ ಉತ್ತಮನು ಉತ್ತಾನಪಾದನ ತೊಡೆಯ ಮೇಲೆ ಕುಳಿತಿದ್ದಾಗ ಧ್ರುವನು ಅಲ್ಲೆ ಕೂಡಲು ಬಯಸಿದನು. ಸುರುಚಿಗೆ ಅದು ಇಷ್ಟವಾಗದೆ ಅವನು ಸುನೀತೆಗೆ ಹುಟ್ಟಿದುದರಿಂದ ತನ್ನ ತಂದೆಯ ತೊಡೆಯ ಮೇಲೆ ಕುಳಿತುಕೊಳ್ಳಲಾಗುವುದಿಲ್ಲ ಎಂದಳು. ಅವಳು ಹೇಳಿದಳು: "ದೊರೆಯ ಸಿಂಹಾಸನವನ್ನು ಏರುವ ಆಸೆಯೇನಾದರೂ ನಿನಗಿದ್ದರೆ ನೀನು ಕಠಿಣ ತಪಸ್ಸನ್ನು ಕೈಗೊಳ್ಳಬೇಕಲ್ಲದೆ ತ್ಯಾಗ ಮಾಡಬೇಕು. ಮೊದಲು ನೀನು ನಾರಾಯಣನ್ನು ಸಂತೃಪ್ತಗೊಳಿಸಿ ಅವನ ದಯೆಯ ಮೂಲಕವೇ ಮುಂದಿನ ಜನ್ಮದಲ್ಲಿ ನನ್ನ ಗರ್ಭದಲ್ಲಿ ಜನಿಸಬೇಕು". ಆದರೆ ತಂದೆಯು ಯಾವ ಮಾತನ್ನೂ ಆಡದಿರುವುದನ್ನು ಕಂಡಾಗ ಧ್ರುವನು ಅರಮನೆಯನ್ನು ಬಿಟ್ಟು ಹೊರಟ. ಅವನು ತಾಯಿ ಸುನೀತಿಯ ಬಳಿಗೆ ಬಂದಾಗ ಅವಳೆಂದಳು: "ಇತರರಿಗೆ ಯಾವ ಕೆಡಕನ್ನು ಬಯಸಬೇಡ. ಯಾರು ಇತರರಿಗೆ

ನೋವನ್ನುಂಟು ಮಾಡುತ್ತಾರೋ ಅಂಥವರು ಆ ನೋವಿನಿಂದ ತಾವೇ ನರಳುತ್ತಾರೆ. ನನ್ನ ಮುದ್ದಿನ ಮಗುವೇ, ಸುರುಚಿ ಏನೇ ಮಾತನ್ನಾಡಿರಲಿ ಅದಕ್ಕೆ ಕಾರಣ ನಿನ್ನ ತಂದೆಯು ನನ್ನನ್ನು ತನ್ನ ಪತ್ನಿಯಾಗಿ ಕಾಣುವುದಿರಲಿ, ಸೇವಕಿಯಂತೆಯೂ ಕಾಣದಿರುವುದು. ಅವನು ನನ್ನನ್ನು ಅಂಗಿಕರಿಸುವುದು ನಾಚಿಕೆಗೇಡು ಎಂದು ಬಗೆದಿದ್ದಾನೆ. ಅದ್ದರಿಂದ ನೀನು ನತದೃಷ್ಟೆಯೊಬ್ಬಳ ಗರ್ಭದಲ್ಲಿ ಜನಿಸಿರುವುದು ನಿಜವಾಗಿದ್ದು ಅಂಥವಳ ಎದೆಹಾಲನ್ನು ಕುಡಿದು ಬೆಳೆದಿದ್ದಿ". ಸುನೀತಿಯು ತನ್ನ ಮಗನಿಗೆ ಅವನ ಮಲತಾಯಿಯು ನೀಡಿದ ಸೂಚನೆಗಳನ್ನು ಯಾವ ವಿಳಂಬವೂ ಇಲ್ಲದೆ ಪಾಲಿಸಬೇಕೆಂದು ಹಾಗೂ ಭಗವಂತನ ಪದ್ಮಪಾದಗಳನ್ನು ಪೂಜಿಸುವಲ್ಲಿ ತೊಡಗಬೇಕೆಂದೂ ಹೇಳಿದಳು. ಅವಳು ಮುಂದುವರಿದು ಪರಮಾತ್ಮನು ತುಂಬಾ ಉನ್ನತನಾಗಿದ್ದು ಅವನನ್ನು ಕೇವಲ ಪೂಜಿಸುವ ಮೂಲಕ ಮಾತ್ರ ಬ್ರಹ್ಮನು ಈ ಜಗತ್ತನ್ನು ಸೃಷ್ಟಿಸುವ ಅರ್ಹತೆಯನ್ನು ಪಡೆದು ಕೊಂಡನೆಂದಳು. ಬ್ರಹ್ಮನು ಜನಿಸದಿದ್ದರೂ ಅವನು ಜೀವಿಗಳೆಲ್ಲರ ಮುಖ್ಯಸ್ಥನಾಗಿದ್ದು ಭಗವಂತನ ಕೃಪೆಯಿಂದ ಆ ಸ್ಥಾನವನ್ನು ಪಡೆದುಕೊಂಡಿದ್ದಾನೆ. ಆದ್ದರಿಂದ ಹಿರಿಯ ಯೋಗಿಗಳು ಮನಸ್ಸನ್ನು ನಿಯಂತ್ರಿಸಿಕೊಂಡು ಹಾಗೂ ಪ್ರಾಣವನ್ನು ಕ್ರಮಬದ್ಧಗೊಳಿಸಿಕೊಂಡು ಅವನನ್ನು ಆರಾಧಿಸಿದ್ದಾರೆ.

ಸುನೀತಿಯೆಂದಳು: "ನಿನ್ನ ತಾತನಾದ ಸ್ವಯಂಭು ಮನುವು ದಾನದ ಮೂಲಕ ವಿತರಣೆ ಮಾಡಿ ದೊಡ್ಡ ಯಾಗಗಳನ್ನು ನಡೆಸಿದನಲ್ಲದೆ ನಂಬಿಕೆ ಹಾಗೂ ಭಕ್ತಿಯ ಮೂಲಕ ಭಗವಂತನನ್ನು ಆರಾಧಿಸಿ ಸಂತೃಪ್ತಿಗೊಳಿಸಿದ. ಈ ರೀತಿಯಾಗಿ ಕ್ರಿಯೆಗೈಯ್ಯುವ ಮೂಲಕ ನಂಬಿಕೆ ಹಾಗೂ ಅವನು ಲೌಕಿಕ ಸಂತೋಷದಲ್ಲಿ ಅಭೂತಪೂರ್ವ ಯಶಸ್ಸನ್ನು ಸಾಧಿಸಿ ನಂತರ ಉಪದೇವತೆಗಳನ್ನು ಪೂಜಿಸುವ ಮೂಲಕ ಪಡೆದುಕೊಳ್ಳಲು ಅಸಾಧ್ಯವಾದಂಥ ಮುಕ್ತಿಯನ್ನು ಪಡೆಯಲು ಇಚ್ಛಿಸುವವರು ಸದಾಕಾಲವು ಭಗವಂತನ ಸೇವೆಯ ಮೂಲಕ ಭಗವಂತನ ಪದ್ಮಪಾದಗಳಲ್ಲಿ ಆಶ್ರಯ ಪಡೆಯುತ್ತಾರೆ. ನಿನಗೆ ನಿಗದಿಯಾದ ವೃತ್ತಿಯನ್ನು ನಡೆಸುವ ಮೂಲಕ ನಿನ್ನ ಹೃದಯದಲ್ಲಿ ಭಗವಂತನನ್ನು ಸ್ಥಾಪಿಸಿಕೊಂಡು ಒಂದು ಕ್ಷಣವೂ ಬೇರಡೆಗೆ ಗಮನವನ್ನು ಹರಿಸದೆ ಸದಾ ಕಾಲವು ಅವನ ಸೇವೆಯಲ್ಲಿ ತೊಡಗು". ತಾಯಿಯು ಧ್ರುವನಿಗೆ ಭಗವಂತನಲ್ಲದೆ ಅವನ ಕಷ್ಟಗಳನ್ನು ನಿವಾರಿಸುವಂಥ ಪೇರ್ಯಾರು ಇಲ್ಲವೆಂದಳು. ಸುನೀತಿಯು ತನ್ನ ಮಗ ಧ್ರುವನಿಗೆ ನೀಡಲಾದ ಉಪದೇಶವು ವಾಸ್ತವಾಗಿ ಅವನ ಆಸೆಯ ಗುರಿಯನ್ನು ಪೂರೈಸಿಕೊಳ್ಳುವ ಸಾಧನವಾಗಿತ್ತು. ಆದ್ದರಿಂದ ಸಾಕಷ್ಟು ಚಿಂತನೆ ಮಾಡಿ ಬುದ್ಧಿಯನ್ನು ಉಪಯೋಗಿಸಿ ಅಚಲ ನಿಶ್ಚಯದಿಂದ ಧ್ರುವನು ತನ್ನ ತಂದೆಯ ಮನೆಯಿಂದ ಹೊರಟನು.

ಈ ವಾರ್ತೆಯನ್ನು ಕೇಳಿದ ನಾರದ ಮುನಿಯು ಧ್ರುವ ಮಹಾರಾಜನ ಚಟುವಟಿಕೆಗಳನ್ನು ಅರ್ಥಮಾಡಿಕೊಂಡು ಆಶ್ಚರ್ಯಚಕಿತನಾಗಿ ಅವನನ್ನು ಸಮೀಪಿಸಿದನು.

ನಾರದನು ಅವನಿಗೆ ಹೇಳಿದನು: "ನನ್ನ ಪ್ರೀತಿಯ ಬಾಲಕನೇ, ನೀನಿನ್ನೂ ಸಣ್ಣವನಾಗಿದ್ದ ನಿನ್ನ ಚಟುವಟಿಕೆಗಳು ಕ್ರೀಡೆ ಹಾಗೂ ಚೇಷ್ಟೆಗಳಿಗೆ ಸೀಮಿತವಾಗಿರಬೇಕು ". ಧ್ರುವನು ತನ್ನ ತಾಯಿಯ ಸೂಚನೆಯಂತೆ ಭಗವಂತನ ಕೃಪೆಯನ್ನು ಪಡೆಯಲೆಂದು ತಪಸ್ಸನ್ನು ಆಚರಿಸಲು ನಿರ್ಧರಿಸಿದ್ದನು. ಇದು ಸಾಮಾನ್ಯ ಮನುಷ್ಯನಿಗೆ ಅಸಾಧ್ಯವಾಗಿದ್ದು ಭಗವಂತನನ್ನು ತೃಪ್ತಿಪಡಿಸುವುದು ಕಷ್ಟದಾಯಕವೆಂದನು. ನಾರದ ಮುನಿಯು ಮುಂದುವರೆಸಿದನು: "ಅನೇಕ ಜನ್ಮಗಳ ಕಾಲ ಈ ವಿಧಾನವನ್ನು ಪ್ರಯತ್ನಿಸಿ ಐಹಿಕ ಕಲ್ಮಶಗಳಿಂದ ವಿಮುಖರಾಗಿ ಉಳಿದು, ಸತತವಾಗಿ ಧ್ಯಾನದಲ್ಲಿ ತಮ್ಮನ್ನು ತೊಟಗಿಸಿಕೊಂಡು ಅನೇಕ ವಿಧವಾದ ತಪಸ್ಸುಗಳನ್ನು ಆಚರಿಸಿದ ಅನೇಕ ಅತೀಂದ್ರಿಯ ಯೋಗಿಗಳು ದೈವಸಾಕ್ಷಾತ್ಕಾರದ ಗುರಿಯನ್ನು ಕಂಡುಕೊಳ್ಳಲು ಅಸಮರ್ಥರಾಗಿದ್ದಾರೆ". ಅವನು ಆದ್ದರಿಂದ ಬಾಲಕನಿಗೆ ಹಿಂತಿರುಗಿ ಹೋಗುವಂತೆ ಉಪದೇಶಿಸಿದನು.

ಧ್ರುವ ಮಹಾರಾಜನೆಂದನು: ನನ್ನ ತಾತ ಮುತ್ತಾತಂದಿರೂ ಸೇರಿದಂತೆ ಮೂರು ಜಗತ್ತುಗಳಲ್ಲೂ ಯಾರೂ ಪಡೆಯದಿರುವಂಥ ಅತ್ಯುನ್ನತ ಸ್ಥಾನವನ್ನು ಹೊಂದಲು ನಾನು ಬಯಸುತ್ತೇನೆ. ನೀನು ನೆರವಾಗಬಲ್ಲೆಯಾದರೆ ದಯವಿಟ್ಟು ನನ್ನ ಜೀವನದ ಗುರಿಯನ್ನು ಸಾಧಿಸಲು ನಾನು ಅನುಸರಿಸಬೇಕಾದ ಪ್ರಾಮಾಣಿಕ ಹಾದಿಯನ್ನು ಕುರಿತು ನನಗೆ ಉಪದೇಶಿಸು".

ನಾರದ ಮುನಿಯು ಧ್ರುವನಿಗೆ ಅವನ ತಾಯಿಯು ಭಗವಂತನಿಗೆ ಭಕ್ತಿಪೂರ್ವಕ ಸೇವೆಯನ್ನು ಸಲ್ಲಿಸುವುದಕ್ಕಾಗಿ ಸೂಚಿಸಿರುವ ಮಾರ್ಗವನ್ನು ಅನುಸಿರಬೇಕೆಂದೂ, ಅದೇ ಅತ್ಯಂತ ಸೂಕ್ತವಾದದ್ದೆಂದೂ ಹೇಳಿದನು. ಯಾವ ವ್ಯಕ್ತಿಯೇ ಆಗಲಿ ನಾಲ್ಕು ತತ್ವಗಳ ಧಾರ್ಮಿಕತೆ, ಆರ್ಥಿಕ ಅಭಿವೃದ್ಧಿ, ಇಂದ್ರಿಯ ಕೃತಾರ್ಥತೆ ಮತ್ತು ಕೊನೆಯಲ್ಲಿ ವಿಮುಕ್ತಿ ಸಾಧನೆ-ಫಲಗಳನ್ನು ಅಪೇಕ್ಷಸುವವರು ಭಗವಂತನ ಭಕ್ತಿಪೂರ್ವಕ ಸೇವೆಯಲ್ಲಿ ತಮ್ಮನ್ನೇ ತೊಡಗಿಸಿಕೊಳ್ಳಬೇಕು. ಏಕೆಂದರೆ ಅವನ್ನು ಆರಾಧಿಸುವ ಮೂಲಕ ಮಾತ್ರವೇ ಇವೆಲ್ಲವನ್ನು ಪೂರೈಸಿಕೊಳ್ಳಲು ಸಾಧ್ಯ. ನಾರದ ಮುನಿಯು ಬಾಲಕನಿಗೆ ಮಧುವನವೆಂಬ ಯಮುನಾ ತೀರದಲ್ಲಿರುವ ನಿರ್ಜನ ಪ್ರದೇಶಕ್ಕೆ ತೆರಳಿ ಅಷ್ಟಾಂಗ ಯೋಗಕ್ಕೆ ಅಗತ್ಯವಾದ ಕ್ರಮಬದ್ಧ ತತ್ವಗಳನ್ನು ಅನುಸರಿಸಿ ನಂತರ ನಿಶ್ಯಬ್ಧರಾದ ಭಂಗಿಯಲ್ಲಿ ಕುಳಿತುಕೊಳ್ಳಬೇಕೆಂದನು. ಕುಳಿತುಕೊಂಡ ನಂತರ ಮೂರು ವಿಧವಾದ ಉಸಿರಾಟ ವ್ಯಾಯಾಮಗಳನ್ನು ಅಭ್ಯಾಸ ಮಾಡಬೇಕು. ನೀನು ಸಂಪೂರ್ಣವಾಗಿ ಐಹಿಕ ಕಲ್ಮಶದಿಂದ ನಿನ್ನನ್ನೇ ಸ್ವತಂತ್ರಗೊಳಿಸಿಕೊಂಡು ಅತ್ಯಂತ ತಾಳ್ಮೆಯಿಂದ ಭಗವಂತನನ್ನು ಧ್ಯಾನಿಸಬೇಕು".

ನಾರದ ಮುನಿಯು ಧ್ರುವ ಮಹಾರಾಜನಿಗೆ ಏಳು ರಾತ್ರಿಗಳ ಕಾಲ ಪಠಿಸಬೇಕಾದ ಮಂತ್ರವೊಂದನ್ನು ನೀಡಿದನು. ಅದೇನೆಂದರೆ ಭಗವಂತನನ್ನು ಪೂಜಿಸುವಂಥ "ಓಂ ನಮೋ ಭಗವತೆ ವಾಸುದೇವಾಯ". ಅವನು ಮುಂದೆ ಭಗವಂತನ ಭೌತಿಕ ಆಕಾರವನ್ನು ಹೃದಯದಲ್ಲಿ ಸ್ಥಾಪಿಸಿಕೊಂಡು ಮಂತ್ರವನ್ನು ಪಠಿಸ ಬೇಕೆಂದು ತಿಳಿಸಿದ.

ನಾರದ ಮುನಿಗೆ ಸೂಕ್ತ ಪ್ರಣಾಮಗಳನ್ನು ಸಲ್ಲಿಸಿದ ನಂತರ ಧ್ರುವ ಮಹಾರಾಜನು ಭಕ್ತಿಪೂರ್ವಕ ಸೇವೆಯನ್ನು ಸಲ್ಲಿಸಲು ಮಧುವನಕ್ಕೆ ತೆರಳಿದನು.

ಅನಂತರ ನಾರದನು ದೊರೆ ಉತ್ತಾನಪಾದನನ್ನು ಭೇಟಿಯಾಗಲು ಹೊರಟ. ಅವನು ದೊರೆಯ ಚಿಂತೆಗೆ ಕಾರಣವನ್ನು ಕೇಳಿದಾಗ ಅವನು ತಾನು ತನ್ನ ಪತ್ನಿ ಸುರುಚಿಯ ಬಗ್ಗೆ ಇಟ್ಟುಕೊಂಡಿರುವ ಅತಿಯಾದ ವ್ಯಾಮೋಹದಿಂದಾಗಿ ಮಗನ ಬಗ್ಗೆ ಎಲ್ಲಾ ದಯಾರ್ದ್ರ ವರ್ತನೆಯನ್ನು ಕಳೆದುಕೊಂಡಿದ್ದೇನೆಂಬುದಾಗಿ ತಿಳಿಸಿದನು. ಅವನು ಸಂದರ್ಭದ ವಿವರಗಳನ್ನು ತಿಳಿದು ತನ್ನ ಸ್ವಂತ ಮಗನಿಗೇ ತಾನು ಅನ್ಯಾಯ ಮಾಡಿರುವುದಾಗಿ ಭಾವಿಸಿದನು. ಮುನಿಯು ಉತ್ತರವಾಗಿ ಧ್ರುವನು ಒಬ್ಬ ಸಮರ್ಥ ಬಾಲಕನಾಗಿದ್ದು ಉನ್ನತ ದೊರೆಗಳು ಮತ್ತು ಋಷಿಗಳು ಮಾಡಲು ಅಸಾಧ್ಯವಾದ ಚಟುವಟಿಕೆಗಳನ್ನು ಅವನು ನಡೆಸಬಲ್ಲವನಾಗಿದ್ದು ಬೇಗನೇ ತನ್ನ ಉದ್ದೇಶವನ್ನು ಪೂರೈಸಿ ಮನೆಗೆ ಹಿಂತಿರುಗಲಿರುವುದರಿಂದ ಅವನ ಬಗ್ಗೆ ಚಿಂತಿಸಬೇಡವೆಂದು ತಿಳಿಸಿದ.

ಮೈತ್ರೇಯಿ ಮುನಿಯು ಭಾಗವತ ವ್ಯಾಖ್ಯವನ್ನು ವಿದುರನಿಗೆ ಮುಂದುವರೆಸಿ ಹೇಳುತ್ತಾ ನಾರದ ಮುನಿಯ ಉಪದೇಶದಂತೆ ದೊರೆ ತನ್ನ ಕರ್ತವ್ಯಗಳಿಗೆ ಸಂಬಂಧಪಟ್ಟಂತೆ ಪ್ರತಿಯೊಂದನ್ನು ತ್ಯಜಿಸಿ ತನ್ನ ಮಗ ಧ್ರುವ ಮಹಾರಾಜನ ಬಗ್ಗೆ ಆಲೋಚಿಸತೊಡಗಿದನು.

ಅಲ್ಲಿ ಧ್ರುವ ಮಹಾರಾಜನು ಮಧುವನವನ್ನು ಪ್ರವೇಶಿಸಿ, ತನ್ನ ಶರೀರ ಹಾಗೂ ಆತ್ಮವನ್ನು ಉಳಿಸಿಕೊಳ್ಳುವ ಸಲುವಾಗಿ ಮೂರು ದಿನಗಳಿಗೊಮ್ಮೆ ಕೇವಲ ಹಣ್ಣು ಹಂಪಲನ್ನು ಸೇವಿಸುತ್ತಾ ತಪಸ್ಸನ್ನು ಪ್ರಾರಂಭಿಸಿದ. ಅನಂತರ ಅವನು ಎಲ್ಲವನ್ನು ತ್ಯಜಿಸಿ ಇಂದ್ರಿಯಗಳನ್ನು ನಿಯಂತ್ರಿಸಿ ಬೇರೆ ಯಾವೆಡೆಗೂ ಗಮನವನ್ನು ಹರಿಸದೆ ತನ್ನ ಮನಸ್ಸನ್ನು ಭಗವಂತನ ಮೇಲೆ ಕೇಂದ್ರಿಕರಿಸಿದಾಗ, ಮೂರು ಜಗತ್ತುಗಳು ಅಲುಗಾಡಲು ತೊಡಗಿದವು. ಧ್ರುವನು ಒಂದು ಕಾಲಿನ ಮೇಲೆ ನಿಂತು ತನ್ನ ದೊಡ್ಡ ಹಿಮ್ಮಡಿಯ ಭಾರದಿಂದ ಅರ್ಧ ಭೂಮಿಯನ್ನು ಕೆಳಕ್ಕೆ ಅದುಮಿದನು. ಕೊನೆಗೆ ಧ್ರುವನು ಭಗವಂತನೊಂದಿಗೆ ಒಂದಾದಾಗ ಅವನು ಮನಸ್ಸನ್ನು ಕೇಂದ್ರೀಕರಿಸಿ ಹಾಗೂ ತನ್ನ ಶರೀರದ ಎಲ್ಲ ರಂಧ್ರಗಳನ್ನು ಮುಚ್ಚಿಕೊಂಡಾಗ ಇಡೀ ಜಗತ್ತಿನ ಉಸಿರಾಡವು ಕಟ್ಟಿಕೊಂಡು ಗ್ರಹವ್ಯವಸ್ಥೆಗಳಲ್ಲಿನ ಎಲ್ಲ ಉಪದೇವತೆಗಳಿಗೂ ಉಸಿರಾಡವು ಸಿಕ್ಕಿಕೊಂಡಂತಾಗಿ ಭಗವಂತನಲ್ಲಿ ಆಶ್ರಯವನ್ನು ಪಡೆದರು.

ಉಪದೇವತೆಗಳು ವಿಷ್ಣು ಪರಮಾತ್ಮನನ್ನು ಸ್ಮರಿಸಿ ತಮ್ಮನ್ನು ಅಪಾಯದಿಂದ ರಕ್ಷಿಸುವಂತೆ ಅವನನ್ನು ಕೇಳಿಕೊಂಡರು.

ಭಗವಂತನು ಉತ್ತರಿಸಿದನು: "ನನ್ನ ಪ್ರೀತಿಯ ಉಪದೇವತೆಗಳೇ, ಗೊಂದಲಗೊಳ್ಳದಿರಿ. ಇದಕ್ಕೆ ಕಾರಣ ಉತ್ತಾನಪಾದ ದೊರೆಯ ಮಗನು ಈಗ ಕಠಿಣ ತಪಸ್ಸನ್ನು ಕೈಗೊಂಡು ಧೃಡ ನಿಶ್ಚಯದವನಾಗಿ ನನ್ನ ಆಲೊಚನೆಯಲ್ಲೇ ಸಂಪೂರ್ಣವಾಗಿ

ಮಗ್ನನಾಗಿರುವುದು. ಅವನು ಜಗತ್ತಿನ ಉಸಿರಾಟದ ಕ್ರಿಯೆಯನ್ನು ತಡೆ ಹಿಡಿದಿದ್ದಾನೆ. ನೀವು ನಿಮ್ಮ ವಾಸಸ್ಥಾನಗಳಿಗೆ ಕ್ಷೇಮದಿಂದ ಹಿಂತಿರುಗಬಹುದು. ನಾನು ಈ ಬಾಲಕನ ಕಠಿಣ ತಪಸ್ಸನ್ನು ನಿಲ್ಲಿಸಿದಾಗ ಈ ಪರಿಸ್ಥಿತಿಯಿಂದ ನೀವು ರಕ್ಷಿಸಲ್ಪಡುತ್ತೀರಿ".

## ಧ್ರುವನಿಗೆ ಭಗವಂತನ ದರ್ಶನ

ಭಗವಂತನಿಂದ ಆಶ್ವಾಸನೆಯನ್ನು ಪಡೆದ ಉಪದೇವತೆಗಳು ತಮ್ಮ ವಾಸಸ್ಥಾನಗಳಿಗೆ ಹಿಂತಿರುಗಿದರು ಎಂಬುದಾಗಿ ಮಹಾಮುನಿ ಮೈತ್ರೇಯಿಯು ವಿದುರನಿಗೆ ತಿಳಿಸಿದನು. ಭಗವಂತನೇ ಧ್ರುವನ ಮುಂದೆ ಕಾಣಿಸಿಕೊಂಡನು. ಮಿಂಚಿನಂತೆ ಪ್ರಕಾಶಮಾನವಾಗಿದ್ದ ಭಗವಂತನ ಆಕೃತಿಯಲ್ಲಿ ತನ್ನ ಯೋಗ ಸಾಧನೆಯಿಂದಾಗಿ ಧ್ಯಾನದ ಸಮಯದಲ್ಲಿ ತಲ್ಲೀನನಾಗಿದ್ದ ಧ್ರುವನ ಮನಸ್ಸಿನಿಂದ ಭಗವಂತನ ಆಕೃತಿ ಮರೆಯಾಯಿತು. ಧ್ರುವ ಮಹಾರಾಜನು ಗೊಂದಲಗೊಂಡಾಗ ಅವನ ಧ್ಯಾನ ಕಡಿತಗೊಂಡಿತು. ಅವನು ಕಣ್ತೆರೆದಾಗ ಅವನು ತನ್ನ ಹೃದಯದಲ್ಲಿ ಭಗವಂತನನ್ನು ಯಾವ ರೂಪದಲ್ಲಿ ಧ್ಯಾನಿಸುತ್ತಿದ್ದನೋ ಅದೇ ರೂಪದಲ್ಲಿ ಸಾಕ್ಷಾತ್ ಭಗವಂತನೇ ಅವನ ಮುಂದೆ ಪ್ರತ್ಯಕ್ಷನಾದ. ಧ್ರುವ ತೀವ್ರವಾಗಿ ವಿಚಲಗೊಂಡು ಭಗವಂತನ ಪಾದದ ಮೇಲೆ ಬಿದ್ದ. ಭಗವಂತನು ಶಂಖದಿಂದ ಧ್ರುವನ ಹಣೆಯನ್ನು ಸ್ಪರ್ಶಿಸಿದನು.

ಧ್ರುವನೆಂದ: "ಎಲೈ ಪರಮಾತ್ಮನೇ, ನೀನು ಸರ್ವಶಕ್ತನು. ನನ್ನೊಳಗೆ ಪ್ರವೇಶಿಸಿದ ನಂತರ ನೀನು ನನ್ನ ನಿದ್ರಿಸುತ್ತಿದ್ದ ಅಂಗಾಂಗಗಳನ್ನು - ಕೈಕಾಲುಗಳು, ಕಿವಿಗಳು, ಸ್ಪರ್ಶೇಂದ್ರಿಯಗಳು, ಪ್ರಾಣ ಹಾಗೂ ಮುಖ್ಯವಾಗಿ ನನ್ನ ವಾಕ್‌ಶಕ್ತಿಯನ್ನು ಜೀವಂತಗೊಳಿಸಿದ್ದೀಯೆ. ನಾನು ಈಗ ನನ್ನ ಭಕ್ತಿಪೂರ್ವಕ ಪ್ರಣಾಮಗಳನ್ನು ನಿನಗೆ ಸಲ್ಲಿಸುತ್ತೇನೆ". ಧ್ರುವನು ಭಗವಂತನನ್ನು ಹಾಡಿ ಹೊಗಳಿ ಅವನೆಲ್ಲಾ ಅವತಾರಗಳನ್ನು ಹಾಗೂ ಆಕೃತಿಗಳನ್ನು ವೈಭವೀಕರಿಸಿದ.

ಧ್ರುವನು ಮುಂದೆ ಹೇಳಿದನು : "ಬ್ರಹ್ಮ ದೇವನು ನಿನಗೆ ಸಂಪೂರ್ಣನಾಗಿ ಶರಣಾಗಿದ್ದಾನೆ. ಪ್ರಾರಂಭದಲ್ಲಿ ನೀನು ಅವನಿಗೆ ಜ್ಞಾನವನ್ನು ನೀಡಿ ಅದರ ಮೂಲಕ ನಿದ್ರೆಯಿಂದ ಎಚ್ಚೆತ್ತು ಒಬ್ಬರು ತನ್ನ ತಕ್ಷಣದ ಕರ್ತವ್ಯಗಳನ್ನು ಅರಿಯುವಂತೆ ಅವನು ಇಡೀ ಜಗತ್ತನ್ನು ನೋಡಿ ಅರಿವಾಗಿಸಿಕೊಳ್ಳಲು ಸಾಧ್ಯವಾಯಿತು. ಮುಕ್ತಿಯನ್ನು ಆಶಿಸುವ ಎಲ್ಲರಿಗೂ ನೀನು ಏಕಮಾತ್ರ ಆಶ್ರಯದಾತನಾಗಿದ್ದ ನೀನು ಅವರೆಲ್ಲರಿಗೂ ಮಿತ್ರನು. ನೀನು ಬೇಗುದಿಗೊಳ್ಳದೇ ಎಲ್ಲರಿಗೂ ಸ್ನೇಹಿತನು. ಆದ್ದರಿಂದ ಪರಿಪೂರ್ಣ ಜ್ಞಾನವಿರುವ ಒಬ್ಬ ಮೇಧಾವಿಯು ನಿನ್ನನ್ನು ಹೇಗೆ ಮರೆಯಲು ಸಾಧ್ಯ?"

ಧ್ರುವನು ಮುಂದುವರಿಸಿದನು: "ಎಲೈ ಅಮಿತನಾದ ಭಗವಂತನೇ, ನದಿಯೊಂದರ ಅಲೆಗಳು ಸತತವಾಗಿ ಹರಿಯುವಂತೆ ತನ್ನ ಭಕ್ತಿಪೂರ್ವಕ ಧ್ಯಾನಯುತ ಸೇವೆಯಲ್ಲಿ ಸತತವಾಗಿ ತೊಡಗಿರುವ ಉನ್ನತ ಭಕ್ತಾಧಿಗಳೊಂದಿಗೆ ನಾನು ಸೇರ್ಪಡೆಯಾಗುವಂತೆ ದಯವಿಟ್ಟು ಅನುಗ್ರಹಿಸು. ಕಮಲದ ನಾಭಿಯುಳ್ಳ ಭಗವಂತನೇ, ವ್ಯಕ್ತಿಯೊಬ್ಬನು ಸದಾ

ನಿನ್ನ ಪದ್ಮಪಾದವನ್ನು ಹಂಬಲಿಸುತ್ತಾ ಅವುಗಳ ಸುವಾಸನೆಯನ್ನು ಹುಡುಕುತ್ತಿರುವಂಥ ಭಕ್ತನೊಂದಿಗೆ ಸಂಪರ್ಕ ಹೊಂದಿದರೆ ಅವನೆಂದೂ ಐಹಿಕ ಶರೀರಕ್ಕೆ ಅಥವ ಶಾರೀರಿಕ ಸಂಬಂದಕ್ಕೆ, ಮಕ್ಕಳಿಗೆ, ಮಿತ್ರರಿಗೆ, ಮನೆಗೆ, ಮತ್ತು ಐಹಿಕ ಜನರಿಗೆ ಅತ್ಯಂತ ಪ್ರಿಯಳಾದ ಮಡದಿಗೆ ಎಂದೂ ಅಂಟಿಕೊಳ್ಳುವುದಿಲ್ಲ. ನನ್ನ ಪ್ರೀತಿಯ ಭಗವಂತನೇ, ಪ್ರತಿಯೊಂದು ಯಾಗದ ಕೊನೆಯಲ್ಲೂ ಮಹಾಮಹಿಮ ಭಗವಂತನಾದ ವಿಷ್ಣುವು ಜಗತ್ತಿನೊಳಗೆ ಸೃಷ್ಟಿಸಿದ ಪ್ರತಿಯೊಂದನ್ನು ತನ್ನ ಹೊಟ್ಟೆಯಲ್ಲಿ ವಿನಾಶಗೊಳಿಸುತ್ತಾನೆ. ಅವನು ಶೇಷನಾಗನ ಹಾಸಿಗೆಯ ಮೇಲೆ ಮಲಗುತ್ತಾನೆ. ಅವನ ನಾಭಿಯಿಂದ ಬೇರೊಂದರ ಮೂಲಕ ಸುವರ್ಣತಾವರೆಯು ಚಿಮ್ಮಿ ಅದರ ಮೇಲೆ ಬ್ರಹ್ಮದೇವನು ಸೃಷ್ಟಿಗೊಳ್ಳುತ್ತಾನೆ. ನೀನು ಭಗವಂತನೆಂದು ನಾನು ತಿಳಿಯುತ್ತೇನೆ. ನಾನು ಆದ್ದರಿಂದಲೆ ನನ್ನ ಭಕ್ತಿಪೂರ್ವಕ ನಮನಗಳನ್ನು ನಿನಗೆ ಸಲ್ಲಿಸುತ್ತೇನೆ. ನೀನು ಭಗವಂತನ ಮೂಲಕ ವೈಶಿಷ್ಟ್ಯ ಸಕಲ ಸಮೃಧ್ಧತೆಗಳನ್ನು ಹೊಂದಿರುವವನು ಮತ್ತು ನೀನು ಶಾಶ್ವತವಾಗಿ ಐಹಿಕ ಸ್ವಭಾವದ ಮೂರು ವಿಧಾನಗಳ ನಿರಂತರ ಒಡೆಯನು. ಹೀಗೆ ನೀನು ಯಾವಾಗಲೂ ಸಾಮಾನ್ಯ ಜೀವಿಗಳಿಗಿಂತಲೂ ಭಿನ್ನನಾದವನು. ಭಗವಾನ್ ವಿಷ್ಣುವಾಗಿ ನೀನು ಜಗತ್ತಿನ ಎಲ್ಲ ವ್ಯವಹಾರಗಳನ್ನು ನಡೆಸಿದರೂ ಪ್ರತ್ಯೇಕವಾಗಿ ನಿಂತು ಎಲ್ಲ ತ್ಯಾಗಗಳ ಫಲಗಳನ್ನು ಅನುಭವಿಸುವವನು. ನನ್ನ ಪ್ರೀತಿಯ ಭಗವಂತನೇ, ಬ್ರಹ್ಮನಾಗಿ ನಿನ್ನ ನಿರ್ವಿಕಾರ ಅವತಾರದಲ್ಲಿ ಸದಾ ಎರಡು ವಿರುದ್ಧ ಗುಣಗಳು - ಬುದ್ಧಿಶಕ್ತಿ ಮತ್ತು ಮೌಢ್ಯಗಳಿವೆ. ನಿನ್ನ ಹಲವಾರು ಶಕ್ತಿಗಳು ಸತತವಾಗಿ ಅವತರಿಸುತ್ತಿದ್ದರೂ ನಿರ್ವಿಕಾರ ಬ್ರಹ್ಮನು, ಅವಿಭಾಜ್ಯನಾದವನು ಮತ್ತು ಆಹ್ಲಾದಕರನಾದವನು, ಐಹಿಕ ಅವತಾರಕ್ಕೆ ಕಾರಣನು. ನೀನು ಅದೇ ನಿರ್ವಿಕಾರ ಬ್ರಹ್ಮನಾಗಿರುವುದರಿಂದ ನಾನು ನಿನಗೆ ನನ್ನ ಗೌರವಾರ್ಥಕ ಪ್ರಣಾಮಗಳನ್ನು ಸಲ್ಲಿಸುತ್ತೇನೆ".

ಮೈತ್ರೇಯನು ಮುಂದುವರಿದು, ಧ್ರುವ ಮಹಾರಾಜನು ತನ್ನ ಕೋರಿಕೆಯನ್ನು ಮುಗಿಸಿದಾಗ ಭಗವಂತನು ಅವನನ್ನು ಅಭಿನಂದಿಸಿ ಹೀಗೆ ಹೇಳಿದನೆಂಬುದಾಗಿ ತಿಳಿಸಿದನು: "ನನ್ನ ಪ್ರೀತಿಯ ಧ್ರುವನೇ, ನೀನು ಪವಿತ್ರತಮ ವಚನಗಳನ್ನು ಪಾಲಿಸಿದ್ದೀಯೆ ಮತ್ತು ನಾನು ನಿನ್ನ ಹೃದಯದ ಹಂಬಲವನ್ನು ಬಲ್ಲೆ. ನಿನ್ನ ಹಂಬಲವು ತುಂಬ ಆಸೆಯುಳ್ಳದ್ದಾಗಿದ್ದು ಪೂರೈಸಲು ಕಷ್ಟಕರವಾದದ್ದಾದರೂ ಅದು ಪೂರೈಕೆಯಾಗುವಂತೆ ನಾನು ವರವನ್ನು ನೀಡುತ್ತೇನೆ. ನಿನಗೆಲ್ಲಾ ಅದೃಷ್ಟವೂ ಲಭಿಸಲಿ. ನಾನು ನಿನಗೆ ಯುಗದ ಅಂತ್ಯ ಸಂಭವಿಸಿದಾಗಲೂ ಮುಂದುವರಿಯುತ್ತಲೇ ಹೋಗುವಂಥ ಧ್ರುವ ನಕ್ಷತ್ರವೆಂಬ ಹೆಸರಿನ ಪ್ರಕಾಶಮಯ ಗ್ರಹವೊಂದನ್ನು ಪ್ರಶಸ್ತಿಯಾಗಿ ನೀಡುತ್ತೇನೆ. ಎಲ್ಲಾ ಗೃಹ ವ್ಯವಸ್ಥೆ, ಗ್ರಹಗಳು ಮತ್ತು ನಕ್ಷತ್ರಗಳಿಂದ ಸುತ್ತುವರಿದಿರುವ ಈ ಗ್ರಹವನ್ನು ಇದುವರೆಗೂ ಯಾರೂ ಆಳಿಲ್ಲ. ಆಕಾಶದಲ್ಲಿರುವ ಎಲ್ಲಾ ಪ್ರಕಾಶಮಯ ವಸ್ತುಗಳಿಗೂ ಈ ಗ್ರಹವನ್ನು, ಧಾನ್ಯಗಳನ್ನು ನುಗ್ಗಾಗಿಸುವ ಸಲುವಾಗಿ ಹೋರಿಗಳು ಕೇಂದ್ರ ಸ್ಥಳವೊಂದನ್ನು ಸುತ್ತುವಂತೆ ಪ್ರದಕ್ಷಿಣೆ ಮಾಡುತ್ತವೆ. ಧ್ರುವ ನಕ್ಷತ್ರವನ್ನು ತಮ್ಮ ಬಲಗಡೆಯಿಟ್ಟುಕೊಂಡು ಧರ್ಮ, ಅಗ್ನಿ, ಕಶ್ಯಪ ಮತ್ತು ಶುಕ್ರರು ವಾಸವಾಗಿರುವ ನಕ್ಷತ್ರಗಳು ಈ ಗ್ರಹವನ್ನು ಪ್ರದಕ್ಷಿಣೆ ಹಾಕಿ,

ಎಲ್ಲವೂ ಸ್ಥಳದಲ್ಲಿ ವಿನಾಶಗೊಂಡನಂತರವೂ ಈ ನಕ್ಷತ್ರವು ಉಳಿಯುತ್ತದೆ. ನಿನ್ನ ತಂದೆಯು ಅರಣ್ಯಕ್ಕೆ ಹೋಗಿ ನಿನಗೆ ರಾಜ್ಯದ ಆಳ್ವಿಕೆಯನ್ನು ಒಪ್ಪಿಸಿದಾಗ ನೀನು ಇಡೀ ಜಗತ್ತನ್ನು ಸತತವಾಗಿ ಮುವತ್ತಾರು ಸಾವಿರ ವರ್ಷಗಳು ಆಳಿದರೂ ನಿನ್ನ ಇಂದ್ರಿಯಗಳು ಈಗಿನಂತೆಯೇ ಬಲಿಷ್ಠವಾಗಿ ಮುಂದುವರೆಯುತ್ತವೆ. ನೀನೆಂದೂ ವೃದ್ಧನಾಗುವುದಿಲ್ಲ. ಭವಿಷ್ಯದಲ್ಲಿ ನಿನ್ನ ಸೋದರನಾದ ಉತ್ತಮನು ಅರಣ್ಯಕ್ಕೆ ಬೇಟೆಗಾಗಿ ಹೋಗಲಿದ್ದು ಅದರಲ್ಲಿ ಮಗ್ನನಾಗಿದ್ದಾಗ ಕೊಲ್ಲಲ್ಪಡುತ್ತಾನೆ. ನಿನ್ನ ಮಲತಾಯಿ ಸುರುಚಿಯು ಮಗನ ಸಾವಿನಿಂದ ಹುಚ್ಚಾಗಿ ಅವನನ್ನು ಹುಡುಕುತ್ತಾ ಅರಣ್ಯಕ್ಕೆ ತೆರಳಿದಾಗ ಅವಳು ಒಂದು ಅರಣ್ಯದ ಅಗ್ನಿಗೆ ಸಿಲುಕಿ ಮರಣ ಹೊಂದುತ್ತಾಳೆ. ನಾನು ಎಲ್ಲಾ ಯಜ್ಞಗಳ ಅಧಿಪತಿ. ನೀನು ಇನ್ನೂ ಅನೇಕ ಉನ್ನತ ವಿಧಿಗಳನ್ನು ಆಚರಿಸಲಿದ್ದು ಕೊಡೆಗೈನಿಂದ ದಾನ ಮಾಡುತ್ತೀಯೆ. ಈ ರೀತಿಯಾಗಿ ನೀನು ಈ ಜೀವನದಲ್ಲಿ ಐಹಿಕ ಆನಂದವನ್ನು ಅನುಭವಿಸುವ ಆಶೀರ್ವಾದವನ್ನು ಪಡೆದು ನಿನ್ನ ನಿಧನದ ಸಮಯದಲ್ಲಿ ನನ್ನನ್ನು ಸ್ಮರಿಸಲು ಸಮರ್ಥನಾಗುತ್ತೀ. ನನ್ನ ಪ್ರೀತಿಯ ಧ್ರುವನೇ, ಈ ಶರೀರದಲ್ಲಿ ನಿನ್ನ ಐಹಿಕ ಜೀವನದ ನಂತರ ನೀನು ಎಲ್ಲಾ ಗ್ರಹ ವ್ಯವಸ್ಥೆಗಳಲ್ಲಿನ ನಿವಾಸಿಗಳು ಪ್ರಾರ್ಥನೆ ಪೂಜೆಗಳನ್ನು ಸಲ್ಲಿಸುವಂಥ ನನ್ನ ಗ್ರಹಕ್ಕೆ ಆಗಮಿಸುತ್ತೀ. ಇದು ಸಪ್ತರ್ಷಿಗಳ ಗ್ರಹಗಳಿಗಿಂತಲೂ ಮೇಲಿದ್ದು ಅಲ್ಲಿಗೆ ತೆರಳಿದ ನಂತರ ನೀನೆಂದೂ ಮತ್ತೆ ಈ ಐಹಿಕ ಜಗತ್ತಿಗೆ ಹಿಂತಿರುಗುವುದಿಲ್ಲ". ಹೀಗೆಂದು ಹೇಳಿ ಭಗವಂತನು ತನ್ನ ವಾಸಸ್ಥಾನಕ್ಕೆ ಹಿಂತಿರುಗಿದಾಗ ಧ್ರುವ ಮಹಾರಾಜನು ತನ್ನ ಅರಮನೆಗೆ ವಾಪಸ್ಸಾದನು. ಭಗವಂತನನ್ನು ಅರಸುತ್ತಾ ಹೊರಟಾಗ ಧ್ರುವ ಮಹಾರಾಜನು ತನ್ನ ಮಲತಾಯಿಯ ಮಾತಿನಿಂದ ತುಂಬಾ ವ್ಯಥೆಗೆ ಒಳಗಾಗಿದ್ದನು ಎಂಬುದಾಗಿ ಮೈತ್ರೇಯಿ ಮುನಿಯು ಹೇಳಿದನು. ಅವನು ನಿಜವಾಗಿಯೂ ಈ ಐಹಿಕ ಜಗತ್ತಿನಿಂದ ವಾಸ್ತವವಾಗಿ ವಿಮೋಚನೆಯನ್ನು ಬೇಡದಿರುವುದು ತನ್ನ ಭಕ್ತಿಪೂರ್ವಕ ಸೇವೆಯ ಕೊನೆಯಲ್ಲಿ ಭಗವಂತನು ಪ್ರತ್ಯಕ್ಷನಾದಾಗ ತನ್ನ ಮನದಲ್ಲಿದ್ದ ಐಹಿಕ ಬೇಡಿಕೆಗಳ ಬಗ್ಗೆ ನಾಚಿಕೆಪಟ್ಟನು.

ಧ್ರುವ ಮಹಾರಾಜನು ತನ್ನೊಳಗೇ ಆಲೋಚಿಸಿದನು: "ಧ್ಯಾನ ಮಗ್ನತೆಯ ಮೂಲಕ ಅಷ್ಟಾಂಗ ಯೋಗವನ್ನು ಅಭ್ಯಾಸ ಮಾಡಿದ ಸನಂದನ ಹಾಗೂ ಇನ್ನಿತರ ಹಿರಿಯ ಮುನಿಗಳು, ಅನೇಕಾನೇಕ ಜನ್ಮಗಳ ನಂತರ ಭಗವಂತನ ಪಾದಾರವಿಂದದಲ್ಲಿ ಆಶ್ರಯ ಪಡೆದರು. ನಾನು ಆರು ತಿಂಗಳುಗಳಲ್ಲೇ ಅದೇ ಫಲಿತಾಂಶಗಳನ್ನು ಪಡೆದರೂ ಭಗವಂತನನ್ನು ಕುರಿತು ಬೇರೆಯದೇ ಆದ ರೀತಿಯಲ್ಲಿ ಯೋಚಿಸಿದ್ದರಿಂದ ನಾನು ಆ ಸ್ಥಾನದಿಂದ ಕೆಳಗೆ ಬಿದ್ದೆನು. ನಾನು ವಿನಾಶಗೊಳ್ಳಬಹುದಾದ ವಿಷಯಗಳಿಗಾಗಿ ಭಗವಂತನನ್ನು ಸಮೀಪಿಸಿದೆ".

ಧ್ರುವನು ಪರಿತಪಿಸಿದನು: "ವಾಸ್ತವ ವಿಷಯಗಳ ಬಗೆಗಿನ ಮೌಢ್ಯತೆಯಿಂದಾಗಿ ನಾನು ಭ್ರಮೆಯಿಂದೊಡಗೂಡಿದ ಮಾಯೆಯ ಪ್ರಭಾವಕ್ಕೆ ಸಿಲುಕಿ ಅವಳ ತೊಡೆಯಲ್ಲಿ ನಿದ್ರಿಸಿದೆ. ದ್ವಂದ್ವ ನೋಟಕ್ಕೆ ಸಿಲುಕಿ ನಾನು ನನ್ನ ಸಹೋದರರನ್ನು ಶತ್ರುಗಳೆಂದು ಬಗೆದು ಹೃದಯದೊಳಗೆ "ಅವರೆಲ್ಲ ನನ್ನ ಶತ್ರುಗಳು" ಎಂಬುದಾಗಿ ಕಳವಳಿಸಿದೆ. ಧ್ರುವನು ತನ್ನ ವರ್ತನೆಯ ಬಗ್ಗೆ ವಿಷಾದಗೊಂಡನು.

ಧ್ರುವನು ತನ್ನ ಅರಮನೆಗೆ ಹಿಂದಿರುಗಿದಾಗ ತನ್ನ ತಂದೆ ಹಾಗೂ ಇತರರಿಂದ ಸ್ವಾಗತಿಸಲ್ಪಟ್ಟನು. ಅವನು ತನ್ನ ತಂದೆಯ ಪಾದಗಳಿಗೆ ನಮಸ್ಕರಿಸಿ ತನ್ನ ತಂದೆಯಿಂದ ಅನೇಕ ಪ್ರಶ್ನೆಗಳನ್ನು ಕೇಳಲ್ಪಟ್ಟು ಆತನ ಗೌರವಕ್ಕೆ ಪಾತ್ರನಾದ. ಆನಂತರ ಅವನು ತನ್ನಿಬ್ಬರ ತಾಯಂದಿರ ಪಾದಗಳಿಗೆ ನಮಸ್ಕರಿಸಿದ. ಧ್ರುವ ಮಹಾರಾಜನಿಗೆ ರಾಜವೈಭವದ ಸ್ವಾಗತ ನೀಡಲಾಯಿತು. ತನ್ನ ವೃದ್ಧಾಪ್ಯವನ್ನು ಪರಿಗಣಿಸಿ ಹಾಗೂ ತನ್ನ ಆತ್ಮದ ಕಲ್ಯಾಣವನ್ನು ಕುರಿತು ಚಿಂತಿಸಿದ ದೊರೆ ಉತ್ತಾನಪಾದನು ಜಗತ್ತಿನ ವ್ಯವಹಾರಗಳಿಗೆ ತನ್ನನ್ನು ದೂರವಾಗಿಸಿಕೊಂಡು ಅರಣ್ಯವನ್ನು ಪ್ರವೇಶಿಸಿದನು.

ಆನಂತರ ಧ್ರುವ ಮಹಾರಾಜನು ಪ್ರಜಾಪತಿ ಶಿಶುಮಾರನ ಮಗಳಾದ ಭ್ರಮಿಯನ್ನು ವಿವಾಹವಾಗಿ ಅವಳಿಂದ ಕಲ್ಪಿ ಮತ್ತು ವತ್ಸರನೆಂಬ ಇಬ್ಬರು ಪುತ್ರರನ್ನು ಪಡೆದನು. ಧ್ರುವನಿಗೆ ವಾಯುವಿನ ಮಗಳಾದ ಇಳಾ ಎಂಬ ಮತ್ತೊಬ್ಬ ಪತ್ನಿಯೂ ಇದ್ದಳು. ಅವಳಿಂದ ಅವನು ಉತ್ಕಲನೆಂಬ ಪುತ್ರನನ್ನೂ ಹಾಗೂ ಅತ್ಯಂತ ಸುಂದರಳಾದ ಮಗಳನ್ನೂ ಪಡೆದನು.

ಅವಿವಾಹಿತನಾಗಿದ್ದ ಧ್ರುವನ ತಮ್ಮನು ಅರಣ್ಯಕ್ಕೆ ಹೊರಟಾಗ ಅಲ್ಲಿ ಹತ್ಯೆಗೊಂಡನು. ಆತನೊಂದಿಗೆ ಭಗವಂತನು ತಿಳಿಸಿದ್ದಂದೆಯೇ ಅವನ ತಾಯಿ ಸುರುಚಿಯೂ ಮರಣವನ್ನಪ್ಪಿದಳು.

ತನ್ನ ಸೋದರನನ್ನು ಕೊಂದ ಯಕ್ಷರ ಹಾಗೂ ಧ್ರುವ ಮಹಾರಾಜನ ಮಧ್ಯೆ ಭೀಕರ ಕಾಳಗವು ನಡೆಯಿತು. ಯಕ್ಷರು ಧ್ರುವಮಹಾರಾಜನನ್ನು ಸೋಲಿಸಲು ಎಲ್ಲ ವಿಧದ ಆಯುಧಗಳನ್ನು ಅವನತ್ತ ಬೀಸಲು ಪ್ರಾರಂಭಿಸಿದರು. ಹಿರಿಯ ಮುನಿಗಳು ಬೇಸರಗೊಂಡು ಹೇಳಿದರು: "ಪ್ರೀತಿಯ ಧ್ರುವನೇ, ಸಾರಂಗಧ್ವನನೆಂಬ ಹೆಸರಾದ ದೇವನು ತನ್ನ ಭಕ್ತಾದಿಗಳ ಕಷ್ಟಗಳನ್ನು ನಿವಾರಿಸುವಂಥ ಪರಮಾತ್ಮನು ನಿನ್ನನ್ನು ಬೆದರಿಸುತ್ತಿರುವ ಎಲ್ಲ ಶತ್ರುಗಳನ್ನು ನಿರ್ಮೂಲಗೊಳಿಸಲಿ. ಭಗವಂತನ ಪವಿತ್ರ ನಾಮಸ್ಮರಣೆ ಅವನಷ್ಟೇ ಶಕ್ತಿಯುತವಾದದ್ದು. ಆದ್ದರಿಂದ ಭಗವಂತನ ಪವಿತ್ರ ನಾಮವನ್ನು ಕೇವಲ ಪಠಿಸುವ ಹಾಗೂ ಆಲಿಸುವ ಮೂಲಕವೇ ಅನೇಕರು ಯಾರ ತೊಂದರೆಯೂ ಇಲ್ಲದೆ ಭೀಕರ ಮೃತ್ಯುವಿನಿಂದ ಸಂಪೂರ್ಣವಾಗಿ ರಕ್ಷಿಸಲ್ಪಡಬಲ್ಲರು."

ಧ್ರುವ ಮಹಾರಾಜನು ನಾರಾಯಣ ಅಸ್ತ್ರವನ್ನು ಬಳಸಲು ನಿರ್ಧರಿಸಿ ಅವನು ಹಾಗೆ ಮಾಡಿದ ಕ್ಷಣದಲ್ಲೇ ಯಕ್ಷರು ಸೃಷ್ಟಿಸಿದ್ದ ಇಡೀ ಮಾಯೆಯು ಕಣ್ಮರೆಯಾಯಿತು. ಈ ಆಯುಧದಿಂದ ಅವನು ಅನೇಕ ಯಕ್ಷರನ್ನು ಸಂಹರಿಸಿದನು. ಆಗ ಧ್ರುವನ ಆಜ್ಜನಾದ ಸ್ವಯಂಭು ಮನುವು ಕಾಣಿಸಿಕೊಂಡು ಹೇಳಿದನು: "ನನ್ನ ಪ್ರೀತಿಯ ಧ್ರುವನೆ, ದಯವಿಟ್ಟು ನಿಲ್ಲಿಸು ಈ ಕಾಳಗವನ್ನು, ಅನಾವಶ್ಯಕವಾಗಿ ರೋಷಗೊಳ್ಳುವುದು ಒಳಿತಲ್ಲ. ಅದು ನರಕಸದೃಶ ಜೀವನಕ್ಕೆ ದಾರಿ. ನೀನೀಗ ವಾಸ್ತವವಾಗಿ ಅಪರಾಧಿಗಳಲ್ಲದ ಯಕ್ಷರನ್ನು ಸಂಹರಿಸುವ ಮೂಲಕ ನಿನ್ನ ಮಿತಿಯನ್ನು ದಾಟಿ ಹೋಗುತ್ತಿದ್ದೀಯೆ. ಯಕ್ಷರನ್ನು ಕೊಲ್ಲುವುದು ಅಂಗೀಕೃತವಲ್ಲದ್ದಾಗಿ ಧರ್ಮ ಮತ್ತು ಅಧರ್ಮಗಳ ನಿಯಮಗಳನ್ನು ತಿಳಿದಿರಬೇಕಾದಂಥ ನಿನ್ನ ಕುಟುಂಬಕ್ಕೆ ಇದು ತಕ್ಕದಾದುದಲ್ಲ."

ಮನುವು ಮುಂದುವರಿದು ಹೇಳಿದನು : “ಈ ಘಟನೆಯು ನೀನು ನಿನ್ನ ಸೋದರನನ್ನು ತುಂಬಾ ಪ್ರೀತಿಸುತ್ತೀ ಎಂಬುದನ್ನು, ಯಕ್ಷರಿಂದ ಅವನು ಕೊಲ್ಲಲ್ಪಟ್ಟಿರುವುದರಿಂದ ನಿನಗೆ ಅತ್ಯಂತ ಖೇದವಾಗಿದೆಯೆಂಬುದನ್ನು ಸಾಬೀತು ಪಡಿಸಿದ್ದರೂ, ಒಬ್ಬ ಯಕ್ಷನ ಅಪರಾಧಕ್ಕಾಗಿ ನೀನು ಮುಗ್ಧರಾದ ಅನೇಕರನ್ನು ಕೊಲ್ಲುತ್ತಿದ್ದೇಯೆ ಎಂಬುದನ್ನು ಆಲೋಚಿಸು. ಯಾರೂ ಶರೀರವನ್ನು ಆತ್ಮವೆಂದು ಅಂಗೀಕರಿಸಕೂಡದ್ದಾಗಿದ್ದು, ಪ್ರಾಣಿಗಳಂತೆ ಇತರರನ್ನು ಕೊಲ್ಲಬಾರದು, ಅದರಲ್ಲೂ ಭಗವಂತನಿಗೆ ಭಕ್ತಿಪೂರ್ವಕ ಸೇವೆಯನ್ನು ಸಲ್ಲಿಸುವಂಥ ಮಾರ್ಗವನ್ನು ಅನುಸರಿಸುವಂಥ ಮುನಿಸದೃಶರು ಇದನ್ನು ನಿಷೇಧಿಸಬೇಕು. ವೈಕುಂಠ ಗ್ರಹದಲ್ಲಿ ಹರಿಯ ವಾಸಸ್ಥಾನವನ್ನು ಪಡೆಯುವುದು ಅತ್ಯಂತ ಕಠಿಣವಾಗಿದ್ದು ಆ ಆವಾಸಸ್ಥಾನಕ್ಕೆ ಹೋಗಲು ಈಗಾಗಲೇ ನಿಯೋಜಿತನಾಗಿರುವ ನೀನು ತುಂಬಾ ಅದೃಷ್ಟಶಾಲಿ. ನೀನು ಭಗವಂತನ ಪರಿಶುದ್ಧ ಭಕ್ತನಾದ್ದರಿಂದ ಭಗವಂತನು ಸದಾ ನಿನ್ನನ್ನು ಕುರಿತು ಆಲೋಚಿಸುತ್ತಿದ್ದು ಅವನ ನಂಬಿಕೆಗೆ ಒಳಪಟ್ಟ ಭಕ್ತಾದಿಗಳೆಲ್ಲರಿಂದ ಗುರುತಿಸಲ್ಪಡುತ್ತೀಯೆ. ನಿನ್ನ ಜೀವನವು ವಿಶೇಷವಾದ ವರ್ತನೆಗೆ ಮೀಸಲಿರುವಂಥದ್ದು. ಆದ್ದರಿಂದ ನೀನು ಇಂಥ ಅನ್ಯಾಯ ಕಾರ್ಯವನ್ನೇಕೆ ಕೈಗೊಂಡೆ ಎಂಬ ಬಗ್ಗೆ ನಾನು ಚಕಿತನಾಗಿದ್ದೇನೆ.”

ಮನುವು ಧ್ರುವನಿಗೆ ಕುಬೇರನ ಸಂತತಿಯವರಾದ ಯಕ್ಷರು ವಾಸ್ತವವಾಗಿ ಅವನ ಸೋದರನನ್ನು ಕೊಂದಿಲ್ಲವೆಂಬುದಾಗಿ ಹೇಳಿದನು. ಪ್ರತಿಯೊಬ್ಬ ಜೀವಿಯ ಹುಟ್ಟು ಸಾವುಗಳು ಎಲ್ಲ ಕಾರಣಗಳಿಗೂ ಖಂಡಿತವಾಗಿಯೂ ಕಾರಣೀಭೂತನಾದ ಭಗವಂತನಿಂದ ನಡೆಯುವಂಥದ್ದು. ಮನುವು ತನ್ನ ಮೊಮ್ಮಗನಿಗೆ ಬುದ್ಧಿವಾದ ಹೇಳಿ ಮರೆಯಾದನು.

ಧ್ರುವ ಮಹಾರಾಜನ ಕೋಪವು ತಗ್ಗಿತು. ಕುಬೇರನು ಧ್ರುವ ಮಹಾರಾಜನ ಮುಂದೆ ನಿಂತು ತನ್ನ ಅಜ್ಜನ ಹಿತವಚನದಿಂದಾಗಿ ಧ್ರುವನು ಶತ್ರುತ್ವವನ್ನು ತ್ಯಜಿಸಿದ ಬಗ್ಗೆ ತಾನು ಸಂತುಷ್ಟಗೊಂಡಿರುವುದಾಗಿ ತಿಳಿಸಿದನು. ಧ್ರುವನ ಸೋದರನನ್ನು ಯಕ್ಷರು ಕೊಂದಿಲ್ಲದೆ, ಧ್ರುವನೂ ಯಕ್ಷರನ್ನು ಕೊಂದಿಲ್ಲವೆಂಬುದಾಗಿ ಅವನು ತಿಳಿಸಿದನು. ಉತ್ಪತ್ತಿ ಮತ್ತು ಮೋಕ್ಷದ ಅಂತಿಮ ಕಾರಣವು ಭಗವಂತನ ಶಾಶ್ವತ ಗುಣ. ಒಬ್ಬರು ಹಾಗೂ ಇತರರನ್ನು “ನಾನು” ಮತ್ತು “ನೀನು” ಎಂಬುದನ್ನು ಆಧರಿಸಿದ ಜೀವನದ ಶಾರೀರಿಕ ತತ್ತ್ವವನ್ನು ಆಧರಿಸಿದ ಗುರುತಿಸುವಿಕೆಯು ಮತ್ಸದಿಂದ ಉಂಟಾದ ಫಲ. ಈ ಶಾರೀರಿಕ ಭಾವನೆಯೇ ಪುನರಾವೃತ್ತಿಯಾಗುವ ಹುಟ್ಟು ಮತ್ತು ಸಾವಿಗೆ ಕಾರಣವಾಗಿದ್ದು ಅದು ಸತತವಾಗಿ ಐಹಿಕ ಅಸ್ತಿತ್ವಕ್ಕೆ ನಮ್ಮನ್ನು ತಳ್ಳುತ್ತದೆ. ಆದ್ದರಿಂದ ಎಲ್ಲ ಜೀವಿಗಳ ಅಂತಿಮ ಆಶ್ರಯವಾದ ಭಗವಂತನಿಗೆ ಸೇವೆ ಸಲ್ಲಿಸಲು ಪ್ರಯತ್ನಿಸಬೇಕು.

ಇತಾವಿಡನ ಪುತ್ರನಾದ ಕುಬೇರನು ತುಂಬಾ ಸಂತುಷ್ಟಗೊಂಡು ಆನಂದದಿಂದ ಧ್ರುವ ಮಹಾರಾಜನಿಗೆ ಅವನು ಅಪೇಕ್ಷಿಸಿದ ವರವನ್ನು ನೀಡಿ ಕಣ್ಮರೆಯಾದ ನಂತರ ಧ್ರುವ ತನ್ನ ರಾಜಧಾನಿಗೆ ಹಿಂತಿರುಗಿದನು.

ಹೀಗೆ ತನ್ನನ್ನೇ ನಿಯಂತ್ರಿಸಕೊಂಡಂಥ ಉನ್ನತಾತ್ಮನಾದ ಧ್ರುವ ಮಹಾರಾಜನು ಅನೇಕ ವರ್ಷಗಳ ಕಾಲ ಮೂರು ವಿಧವಾದ ಐಹಿಕ ಚಟುವಟಿಕೆಗಳನ್ನು, ಅಂದರೆ, ಧಾರ್ಮಿಕತೆ, ಆರ್ಥಿಕ ಅಭಿವೃದ್ಧಿ ಮತ್ತು ಎಲ್ಲ ಐಹಿಕ ನಿಯಮಗಳ ಸಂತೃಪ್ತಿ ಇವನ್ನು ಅನುಕೂಲಕರ ರೀತಿಯಲ್ಲಿ ನಡೆಸುತ್ತ ಹಲವಾರು ವರ್ಷಗಳನ್ನು ಕಳೆದನು. ಅನಂತರ ಅವನು ರಾಜಸಿಂಹಾಸನವನ್ನು ತನ್ನ ಮಗನಿಗೆ ವಹಿಸಿಕೊಟ್ಟ ಅವನು ಬದರೀಕಾಶ್ರಮಕ್ಕೆ ತೆರಳಿ ಅಲ್ಲಿ ಸಂಪೂರ್ಣ ಪರಿಶುದ್ಧತೆಯನ್ನು ಪಡೆದನು. ಅಲ್ಲಿ ಅವನು ಸಂಪೂರ್ಣ ಧ್ಯಾನಾಸಕ್ತನಾದ. ಅವನನ್ನು ಭಗವಂತನ ಪರಿಚಾರಕರು ವಿಮಾನದಲ್ಲಿ ಕೊಂಡೊಯ್ದರು.

ವಿದುರನು ಧ್ರುವ ಮಹಾರಾಜನ ಕಥೆಯನ್ನು ಅರಿತ ನಂತರ ಪ್ರಚೇತಸರು, ಅವರ ಕುಟುಂಬ ಅವರ ಮಕ್ಕಳು ಮುಂತಾದವರ ಬಗ್ಗೆ ತಿಳಿಯಲು ಬಯಸಿದ. ವಿದುರನು ಹೇಳಿದ "ಉನ್ನತ ಮಹರ್ಷಿ ನಾರದನು ಭಕ್ತರಲ್ಲೆಲ್ಲ ಅತ್ಯುನ್ನತ್ತಮನೆಂಬುದು ನನಗೆ ತಿಳಿದಿದೆ. ಅವನು ಭಕ್ತಿಪೂರ್ವಕ ಸೇವೆಯ ವಿಧಾನವಾದ "ಪಂಚರಾತ್ರಿಕ" ವನ್ನು ಸಂಕಲಿಸಿದ್ದು ಭಗವಂತನನ್ನು ಭೇಟಿಯಾಗಿದ್ದಾನೆ." ಪಂಚರಾತ್ರಿಕ ವಿಧಿಯು ದೇವಾಲಯ ಆರಾಧನೆಯ ವಿಧಾನ- ಈ ವಿಧಿಯು ಮೊದಲು ನಾರದ ಮುನಿಯಿಂದ ಪ್ರಾರಂಭಿಸಲ್ಪಟ್ಟಿತು.

## ಅಧ್ಯಾಯ - 7

# ಧ್ರುವನ ಉತ್ತರಾಧಿಕಾರಿಗಳು

(ಈ ಅಧ್ಯಾಯವು ಧ್ರುವನ ಮಕ್ಕಳು ಹಾಗೂ ಮೊಮ್ಮಕ್ಕಳ ಆಡಳಿತಕ್ಕೆ ಸಂಬಂಧಿಸಿದೆ. ಭಾಗಶಃ ವಿಷ್ಣುವಿನ ಅವತಾರವಾದ ದೊರೆ ಪೃಥು ಜಗತ್ತನ್ನು ಆಳಿ ಅನೇಕ ಉತ್ತಮ ಕ್ರಮಗಳನ್ನು ಜಾರಿಗೊಳಿಸಿದನು).

ಮಹಾರಾಜ ಧ್ರುವನಿಗೆ ಉತ್ಕಲನೆಂಬ ಪುತ್ರನಿದ್ದು ಅವನು ತನ್ನ ತಂದೆಯ ಸಿಂಹಾಸನವನ್ನು ಏರುವ ಆಶೆಯನ್ನು ಹೊಂದಿರಲಿಲ್ಲ. ಹುಟ್ಟಿದಂದಿನಿಂದಲೂ ಉತ್ಕಲನು ಜಗತ್ತಿನಿಂದ ದೂರವೇ ಉಳಿದಿದ್ದನು. ಭಗವಂತನಿಂದಲೇ ಎಲ್ಲವೂ ನಡೆಯುವುದೆಂಬುದನ್ನು ಅವನು ಕಂಡುಕೊಂಡಿದ್ದರಿಂದ ಸ್ಥಿತಪ್ರಜ್ಞನಾಗಿ ಉಳಿದ. ಅವನು ನಿರ್ವಾಣವನ್ನು ಪಡೆದುಕೊಂಡಿದ್ದ. ಭಕ್ತಿಯೊಂದನ್ನು ಸಾಧಿಸಿದ್ದು ತನ್ನ ಈ ಮನೋಭಾವದಿಂದಾಗಿ ಉತ್ಕಲನು ಮಿಕ್ಕವರಿಗೆ ಹುಚ್ಚನಾಗಿ ಕಂಡಿದ್ದ. ಉತ್ಕಲನ ತಮ್ಮ ವತ್ಸರನು (ಬ್ರಹ್ಮಿಯ ಪುತ್ರ) ದೊರೆಯಾದನು. ಧ್ರುವನ ಕುಟುಂಬದಲ್ಲಿ ಅಂಗನೆಂಬುವನಿಗೆ ಪತ್ನಿ ಸುನೀತಳಿಂದ ಪುತ್ರನೊಬ್ಬನ ಜನನವಾಯಿತು. ಅವನ ಹೆಸರು ವೇಣ್ ಎಂಬುದಾಗಿದ್ದು ಅವನು ದುಷ್ಟ ಸ್ವಭಾವದವನಾಗಿದ್ದ. ಜಿಗುಪ್ಸೆಗೊಂಡ ಅಂಗ, ರಾಜ್ಯವನ್ನು ತ್ಯಜಿಸಿ ಅರಣ್ಯವನ್ನು ಪ್ರವೇಶಿಸಿದನು. ವೇಣ ದೊರೆಯು ದುಷ್ಟ. ಅವನ ಹಿಂಸಾತ್ಮಕ ಆಳ್ವಿಕೆಯನ್ನು ತಡೆದುಕೊಳ್ಳಲಾಗದೆ ಬ್ರಾಹ್ಮಣರು ಅವನನ್ನು ಶಪಿಸಿದಾಗ ಅವನು ಮರಣವನ್ನಪ್ಪಿದ. ಅವನ ಮರಣದ ನಂತರ ರಾಜರೇ ಇರಲಿಲ್ಲ. ವೇಣನ ತೊಡೆಗಳನ್ನು ತಿರುಚಿದಾಗ ಅಲ್ಲಿ ಕುಬ್ಜನಾದ ಹಾಗೂ ದುರ್ಬಲನಾಗಿದ್ದ ಬಾಹುಕನೆಂಬುವನು ಕಾಣಿಸಿಕೊಂಡನು. ಅವನು ಮುನಿಗಳನ್ನು ತಾನೇನು ಮಾಡಬೇಕೆಂದು ಪ್ರಶ್ನಿಸಿದ. ಬಾಹುಕನಿಗೆ "ಕುಳಿತುಕೊಳ್ಳುವಂತೆ" (ನಿನೀದ) ತಿಳಿಸಲಾಯಿತು. ಹೀಗೆ ನಿನದ ಸಂತತಿಯ ಪಿತ ನಿನೀದನ ಜನನವಾಗಿ ಅವನು ವೇಣ ದೊರೆಯ ಎಲ್ಲ ಪಾಪಕೃತ್ಯಗಳನ್ನೂ ವಹಿಸಿಕೊಂಡನು.

ಆನಂತರ ಮುನಿಗಳು ವೇಣನ ಎರಡು ಬಾಹುಗಳನ್ನು ತಿರುಚಿದಾಗ ಅಲ್ಲಿ ಪೃಥು ಹಾಗೂ ಅರಿಸಿ ಎಂಬ ಗಂಡು ಹೆಣ್ಣುಗಳು ಕಾಣಿಸಿಕೊಂಡು ಅವರು ರಾಜರಾಣಿಯಾದರು.

ಪೃಥುವಿನ ಜನನವನ್ನು ಎಲ್ಲ ಋಷಿಮುನಿಗಳೂ ಕೊಂಡಾಡಿದರು. ಬ್ರಹ್ಮದೇವನು ತನ್ನೆಲ್ಲ ಉಪದೇವತೆಗಳು ಹಾಗೂ ಮುಖಂಡರೊಂದಿಗೆ ಅಲ್ಲಿಗೆ ಆಗಮಿಸಿದನು. ಪೃಥು ದೊರೆಯ ಬಲಗೈಯಲ್ಲಿ ವಿಷ್ಣು ಪರಮಾತ್ಮನ ಹಸ್ತದಲ್ಲಿನ ಗೆರೆಗಳನ್ನು, ಅವನ ಪಾದಗಳಲ್ಲಿ ಕಮಲದ ಹೂವಿನ ಗುರುತುಗಳನ್ನು ಕಂಡಾಗ ಬ್ರಹ್ಮದೇವನಿಗೆ ಪೃಥು ದೊರೆಯು ಭಗವಂತನ ಒಂದು ಭಾಗಶಃ ಅವತಾರವೆಂದು ಅರಿವಾಯಿತು. ಪೃಥು

ದೊರೆಗೆ ಕಿರೀಟಧಾರಣೆಯಾಯಿತು. ಹೀಗೆ ಎಲ್ಲವೂ ಸಂಪೂರ್ಣಗೊಂಡು, ಕುಬೇರನು ದೊರೆಗೆ ಸುವರ್ಣ ಸಿಂಹಾಸನವನ್ನೂ, ವರುಣನು ನೀರನ್ನು ಸತತವಾಗಿ ಸಂಪ್ರೋಕ್ಷಿಸುವ ಚಂದ್ರನಷ್ಟೇ ಪ್ರಕಾಶಮಾನವಾದ ಛತ್ರಿಯನ್ನು ನೀಡಿದನು. ವಿವಿಧ ಉಪದೇವತೆಗಳೂ ವಿವಿಧ ಬಗೆಯ ಉಡುಗೊರೆಗಳನ್ನು ನೀಡಿದರು. ದೊರೆ ಪೃಥುವು ಎಲ್ಲ ರೀತಿಗಳಲ್ಲೂ ಉನ್ನತ ಪುರುಷನಾಗಿದ್ದು ಅತ್ಯುನ್ನತ ವೈದಿಕ ಪಂಡಿತನಾಗಿದ್ದನು. ಸನತ್ಕುಮಾರನಿಂದ ಪಾಂಡಿತ್ಯವನ್ನು ಗಳಿಸಿದನು.

ಭೂಮಿತಾಯಿಯು ವಿವಿಧ ಆಕಾರಗಳಲ್ಲೇಕೆ ಕಾಣಿಸಿಕೊಳ್ಳುತ್ತಾಳೆ ಎಂಬುದನ್ನು ವಿದುರನು ಮೈತ್ರೇಯಿಯಿಂದ ತಿಳಿಯಲು ಬಯಸಿದನು. ಅವಳೇಕೆ ಹಸುವಿನ ಆಕಾರ ತಳೆಯುತ್ತಾಳೆ, ಪೃಥು ದೊರೆಯು ಅವಳನ್ನು ಕರೆದಾಗ ಯಾರು ಕರುವಾದರು ಹಾಗೂ ಯಾವುದು ಹಾಲನ್ನು ಹಿಂಡುವ ಮಡಿಕೆಯಾಯಿತು, ಭೂಮಿಯು ಸ್ವಾಭಾವಿಕವಾಗಿಯೇ ಕೆಲವು ಕಡೆ ತಗ್ಗುಗಳನ್ನೂ ಮಿಕ್ಕೆಲ್ಲೆಡೆ ಉಬ್ಬುಗಳನ್ನು ಹೊಂದಿದೆ, ದೊರೆ ಪೃಥುವು ಭೂಮಿಯನ್ನು ಹೇಗೆ ಮಟ್ಟಸಗೊಳಿಸಿದನು. ಹಾಗೂ ಸ್ವರ್ಗದ ಅಧಿಪತಿ ಇಂದ್ರನು ಯಜ್ಞಕ್ಕೆ ನಿಯಮಿತವಾದ ಕುದುರೆಯನ್ನೇಕೆ ಅಪಹರಿಸಿದನು ?

## ಪೃಥುವಿನಿಂದ ಭೂಮಿ ತಾಯಿಗೆ ಬೆದರಿಕೆ

ಪೃಥು ದೊರೆಯು ಸಿಂಹಾಸನಾರೋಹಣವಾದಾಗ ಆಹಾರ ಧಾನ್ಯಗಳ ಕೊರತೆಯು ಕಂಡು ಬಂದಿತು. ಪರಿತಪಿಸಿದ ಪ್ರಜೆಗಳು ದೊರೆಯಲ್ಲಿಗೆ ಬಂದರು. ದೊರೆಯು ಇದರ ಬಗ್ಗೆ ದೀರ್ಘವಾಗಿ ಆಲೋಚಿಸಿ ಇದಕ್ಕೆ ಕಾರಣಗಳನ್ನು ತಿಳಿಯ ಬಯಸಿ ನಿರ್ಣಯವೊಂದಕ್ಕೆ ಬಂದಾಗ ಕೋಪಾವಿಷ್ಟನಾದ ಈಶ್ವರನು ಇಡೀ ಜಗತ್ತನ್ನೇ ಸಂಹರಿಸುವ ರೀತಿಯಲ್ಲಿ ಬಿಲ್ಲು ಬಾಣಗಳನ್ನು ಹಿಡಿದು ಭೂಮಿಗೆ ಗುರಿಯನ್ನಿಟ್ಟನು. ದೊರೆಯ ಅಂಥ ಕೋಪವನ್ನು ಕಂಡಾಗ ಭೂಮಿತಾಯಿಯು ಗೋವಿನ ರೂಪ ತಾಳಿ ಓಡಲು ಪ್ರಾರಂಭಿಸಿದಳು. ದೊರೆಯು ಅವಳನ್ನು ಅಟ್ಟಿಸಿಕೊಂಡು ಹೋದನು. ಗೋವಿನ ರೂಪದ ಭೂಮಿತಾಯಿಯು ಅಲ್ಲಲ್ಲಿ, ಸ್ವರ್ಗಲೋಕಗಳಲ್ಲಿ ಹಾಗೂ ಭೂಮಿಯಲ್ಲೆಲ್ಲ ಓಡಿದರೂ ದೊರೆಯು ಅವಳನ್ನು ಹಿಂಬಾಲಿಸುತ್ತಲೇ ಹೋದಾಗ ಗೋವು ತನ್ನನ್ನು ರಕ್ಷಿಸುವಂತೆ ದೊರೆಯನ್ನು ಕೇಳಿತು. ಪೃಥು ದೊರೆಯು ಭೂಮಿ ತಾಯಿಯು ತನ್ನ ಆಜ್ಞೆ ಹಾಗೂ ಸೂಚನೆಗಳನ್ನು ಉಲ್ಲಂಘಿಸಿರುವುದಾಗಿ ಉತ್ತರಿಸಿದ . ಉಪ ದೇವತೆಯ ಆಕೃತಿಯಲ್ಲಿ ಭೂಮಿಯು ಯಜ್ಞದ ಸಮಯದಲ್ಲಿ ನೀಡಲಾದ ಹವಿಸ್ಸುಗಳನ್ನು ಸ್ವೀಕರಿಸಿದ್ದರೂ ಸಾಕಷ್ಟು ಆಹಾರ ಧಾನ್ಯವನ್ನು ಉತ್ಪಾದಿಸಿಲ್ಲ. ದೊರೆಯ ಅನ್ವಯ ಭೂಮಿ ತಾಯಿಯು ಅಪರಾಧಗೈದಿದ್ದು ಶಿಕ್ಷಾರ್ಹಳು.

ಹಸುವಿನಾಕೃತಿಯ ಭೂಮಿಯು ತನ್ನ ದುಃಖಗಳನ್ನು ತೋಡಿಕೊಂಡಿತು. ಆಕೆಯೆಂದಳು : "ಎಲೈ ಪ್ರಿಯ ದೊರೆಯೇ, ಹಿಂದೆ ಬ್ರಹ್ಮನು ಸೃಷ್ಟಿಸಿದ್ದ ಬೀಜ, ಮೂಲಬೇರು, ಮೂಲಿಕೆ ಮತ್ತು ಧಾನ್ಯಗಳು ಈಗ ಅಧ್ಯಾತ್ಮಿಕ ಅರಿವಿನಿಂದ ದೂರ

ಸರಿದಿರುವ ಭಕ್ತಾದಿಗಳಲ್ಲದವರಿಂದ ಬಳಸಲ್ಪಡುತ್ತಿವೆ. ಅವಳನ್ನು ದೊರೆಗಳು ಅನಾದರಿಸುತ್ತಿದ್ದು ಬೀಜ ಮತ್ತು ಧಾನ್ಯಗಳನ್ನು ಇಂದ್ರಿಯ ಸಂತೃಪ್ತಿಗಾಗಿ ಬಳಸುತ್ತಿರುವ ಕಳ್ಳರನ್ನು ದೊರೆಗಳು ಶಿಕ್ಷಿಸುತ್ತಿಲ್ಲ. ಆದ್ದರಿಂದ ಅವಳು ಯಜ್ಞದ ಆಚರಣೆಗಾಗಿ ಮೀಸಲಾದ ಎಲ್ಲ ಬೀಜಗಳನ್ನೂ ಬಚ್ಚಿಟ್ಟಿದ್ದಾಳೆ. ದೀರ್ಘ ಕಾಲ ಸಂಗ್ರಹದಲ್ಲಿದ್ದ ಬೀಜಗಳು ಈಗ ನಾಶ ಹೊಂದಿವೆ. ಹಸುವು ದೊರೆಗೆ ಈ ಬೀಜಗಳನ್ನೆಲ್ಲ ಹಿಂತೆಗೆದುಕೊಂಡು ಆಚಾರ್ಯರು ಹಾಗೂ ಶಾಸ್ತ್ರಗಳು ಮಾಡಿರುವ ಶಿಫಾರಸುಗಳ ರೀತಿಯಲ್ಲಿ ಅವನ್ನು ಪರಿಷ್ಕರಿಸಬೇಕೆಂದಿತು.

ಹಸುವೆಂದಿತು : "ನೀನು ಜೀವಿಗಳಿಗೆ ಸಾಕಷ್ಟು ಧಾನ್ಯಗಳನ್ನು ಸರಬರಾಜು ಮಾಡುವ ಮೂಲಕ ಅವರ ತೊಂದರೆಯನ್ನು ನಿವಾರಿಸಬೇಕೆಂಬ ಆಸೆಯುಳ್ಳವನಾಗಿದ್ದರೆ ಹಾಗೂ ನನ್ನ ಹಾಲನ್ನು ತೆಗೆದುಕೊಂಡು ಅವರನ್ನು ಪುಷ್ಟೀಕರಿಸಬೇಕೆಂದಿದ್ದರೆ ನೀನು ಈ ಉದ್ದೇಶಕ್ಕೆ ಸೂಕ್ತವಾದ ಒಂದು ಕರುವನ್ನು ಹಾಗೂ ಹಾಲನ್ನು ಸಂಗ್ರಹಿಸಲು ಒಂದು ಮಡಿಕೆಯನ್ನು ಮತ್ತು ಒಬ್ಬ ಹಾಲು ಕರೆಯುವವನನ್ನು ಕರೆತರಬೇಕೆಂದಿತು. ನಾನು ನನ್ನ ಕರುವಿನ ಬಗ್ಗೆ ತುಂಬಾ ವಿಶ್ವಾಸವನ್ನು ಬೆಳೆಸಿಕೊಳ್ಳುತ್ತೇನಾದ್ದರಿಂದ ನನ್ನಿಂದ ಹಾಲನ್ನು ತೆಗೆದುಕೊಳ್ಳುವ ನಿನ್ನ ಹಂಬಲ ಪೂರೈಸುತ್ತದೆ. ನೀನು ಭೂಮಂಡಲದ ಇಡೀ ಜಾಗವನ್ನು ಮಟ್ಟಸವಾಗಿಸು. ಇದರಿಂದಾಗಿ ಮಳೆಗಾಲ ಮುಗಿದ ಮೇಲೆ ಭೂತಾಯಿಗೆ ನೆರವಾಗುತ್ತದೆ". ದೊರೆಯು ಭೂ ತಾಯಿಯ ಈ ಮುದದ ಮಾತನ್ನೊಪ್ಪಿದನು. ಅವನು ಸ್ವಯಂಭು ಮನುವನ್ನು ಕರುವಾಗಿ ಪರಿವರ್ತಿಸಿ ಹಸುವಿನ ರೂಪದಲ್ಲಿದ್ದ ಇಡೀ ಭೂಮಿಯಿಂದ ಮೂಲಿಕೆಗಳು ಹಾಗೂ ಧಾನ್ಯಗಳನ್ನು ಬಟ್ಟಲಿನಂತಿದ್ದ ತನ್ನ ಕೈಗಳಲ್ಲಿ ಸಂಗ್ರಹಿಸಿದನು.

ಹಿರಿಯ ಮುನಿಗಳೆಲ್ಲರೂ ಬೃಹಸ್ಪತಿಯನ್ನೇ ಕರುವಾಗಿಸಿ, ಇಂದ್ರಿಯಗಳನ್ನು ಮಡಿಕೆಯಾಗಿಸಿ ಎಲ್ಲ ಮಾತು, ಬುದ್ಧಿ ಹಾಗೂ ಆಲಿಸುವಿಕೆಗೆ ಒಳಪಡುವ ವಿವಿಧ ವೈದಿಕ ಜ್ಞಾನಗಳನ್ನು ಕರೆದರು. ಉಪದೇವತೆಗಳು ಇಂದ್ರನನ್ನು ಕರುವಾಗಿಸಿ ಭೂಮಿಯಿಂದ ಅಮೃತವಾದ ಸೋಮವೆಂಬ ಪಾನೀಯವನ್ನು ಕರೆದರು. ಹೀಗೆ ಅವರು ಮಾನಸಿಕವಾಗಿ ಶಕ್ತಿಶಾಲಿಗಳಾದರು. ದಿತಿಯ ಪುತ್ರರು ಅಸುರ ಕುಟುಂಬಕ್ಕೆ ಜನಿಸಿದ ಪ್ರಹ್ಲಾದ ಮಹಾರಾಜನನ್ನು ಕರುವಾಗಿ ಪರಿವರ್ತಿಸಿ ವಿವಿಧ ವಿಧದ ಸಾರಾಯಿಗಳನ್ನು ತೆಗೆದು ಅದನ್ನು ಕಬ್ಬಿಣದ ಮಡಿಕೆಗಳಿಗೆ ಹಾಕಿದರು. ಗಂಧರ್ವ ಹಾಗೂ ಅಪ್ಸರ ಲೋಕಗಳ ನಿವಾಸಿಗಳು ವಿಶ್ವವಸುವನ್ನು ಕರುವಾಗಿಸಿ ಹಾಲನ್ನು ಕಮಲದ ಹೂವಿನ ಮಡಿಕೆಗೆ ಕರೆದರು. ಹಾಲು ಮಧುರ ಸಂಗೀತ ಕಲೆ ಮತ್ತು ಸೌಂದರ್ಯವನ್ನು ಪಡೆದುಕೊಂಡಿತು. ಅಂತ್ಯಸಂಸ್ಕಾರಗಳಿಗೆ ಅಧಿದೇವತೆಗಳಾದ ಪಿತೃಲೋಕದ ನಿವಾಸಿಗಳು ಆರ್ಯಮನನ್ನು ಕರುವಾಗಿಸಿದರು. ಅಪಾರ ನಂಬಿಕೆಯಿಂದ ಅವರು ಪಿತೃಗಳಿಗೆ ಒಪ್ಪಿಸುವ ಕಾರ್ಯ ಆಹಾರವನ್ನು ಸುಟ್ಟ ಮಣ್ಣಿನ ಮಡಿಕೆಗೆ ಕರೆದುಕೊಂಡರು. ಸಿದ್ಧ ಲೋಕ ಮತ್ತು ವಿಧ್ಯಾಧರ ಲೋಕಗಳ ಜನರು ಉನ್ನತ ಮುನಿ ಕಪಿಲನನ್ನು ಕರುವಾಗಿಸಿ, ಇಡೀ ಅಂತರಿಕ್ಷವನ್ನೇ ಮಡಿಕೆಯಾಗಿಸಿ ವಿಶಿಷ್ಟ ಯೋಗ ಶಕ್ತಿಗಳನ್ನೆಲ್ಲ ಕರೆದುಕೊಂಡರು.

ವಿದ್ಯಾಧರ ಲೋಕದ ನಿವಾಸಿಗಳು ಗಗನಕ್ಕೆ ಹಾರುವ ಕಲೆಯನ್ನು ಕರಗತವಾಗಿಸಿಕೊಂಡರು. ಕಿಂಪುರುಷ ಲೋಕವೆಂದು ಕರೆಯಲಾಗುವ ಗ್ರಹಗಳ ನಿವಾಸಿಗಳು ಮಾಯವೆಂಬ ರಾಕ್ಷಸನನ್ನು ಕರುವಾಗಿಸಿ ಒಬ್ಬರು ದೃಷ್ಟಿಯಿಂದ ಮರೆಯಾಗಿ ಮತ್ತೆ ವಿವಿಧ ಆಕಾರಗಳಲ್ಲಿ ಕಾಣಿಸಿಕೊಳ್ಳಬಹುದಾದಂಥ ಅತೀಂದ್ರಿಯ ಶಕ್ತಿಗಳನ್ನು ಕರೆದುಕೊಂಡರು. ಮಾಂಸವನ್ನು ಭುಜಿಸುವಂಥ ಯಕ್ಷರು ಮತ್ತು ರಾಕ್ಷಸರು, ಭೂತ ಪಿಶಾಚಿಗಳು ಶಿವನ ಸಾಕಾರ ರೂಪವಾದ ರುದ್ರನನ್ನು (ಭೂತನಾಥ) ಕರುವಾಗಿಸಿ ನೆತ್ತರಿನಿಂದ ಮಾಡಿದ ಪಾನೀಯಗಳನ್ನು ಕರೆದು ತಲೆ ಬುರುಡೆಗಳ ಮಡಿಕೆಗಳಿಗೆ ತುಂಬಿದರು. ಫಟಸರ್ಪಗಳು ಮತ್ತು ಹಾವುಗಳು ಹಾಗೂ ಇನ್ನಿತರ ವಿಷಪೂರಿತ ಜಂತುಗಳು ಭೂಮಿಯಿಂದ ವಿಷವನ್ನು ಹಾಲಾಗಿ ಪಡೆದುಕೊಂಡು ಹುತ್ತಗಳಲ್ಲಿ ಅವನ್ನಿಟ್ಟವು. ಅವು ತಕ್ಷಕನನ್ನು ಕರುವಾಗಿಸಿದವು. ಹಸುವಿನಂಥ ನಾಲ್ಕು ಕಾಲಿನ ಪ್ರಾಣಿಗಳು, ಶಿವನನ್ನು ಹೊರುವಂಥ ಹೋರಿಯನ್ನು ಕರುವಾಗಿಸಿ ಅರಣ್ಯವನ್ನೇ ಹಾಲು ಕರೆಯುವ ಮಡಿಕೆಯಾಗಿಸಿಕೊಂಡು ಹುಲ್ಲನ್ನು ಪಡೆದುಕೊಂಡರು. ದುಷ್ಟ ಮೃಗಗಳಿಂದ ಹುಲಿಗಳು ಸಿಂಹವನ್ನು ಕರುವಾಗಿಸುವ ಮೂಲಕ ಹಾಲಿನಿಂದ ಮಾಂಸವನ್ನು ಪಡೆಯುವುದನ್ನು ಸಾಧ್ಯವಾಗಿಸಿಕೊಂಡವು. ಪಕ್ಷಿಗಳು ಗರುಡನನ್ನು ಕರುವಾಗಿಸಿ ಓಡಾಡುವ ಕ್ರಿಮಿಕೀಟಗಳು ಮತ್ತು ಸಂಚರಿಸುವ ಗ್ರಹಗಳು ಹಾಗೂ ಗರಿಕೆಗಳ ರೂಪದಲ್ಲಿ ಹಾಲನ್ನು ಪಡೆದವು. ವೃಕ್ಷಗಳು ಆಲದ ಮರವನ್ನು ಕರುವಾಗಿಸಿ ರುಚಿಕರ ರಸದ ರೂಪದಲ್ಲಿ ಹಾಲನ್ನು ಗಳಿಸಿದವು. ಪರ್ವತಗಳು ಹಿಮಾಲಯವನ್ನೇ ಕರುವಾಗಿಸಿ ಪರ್ವತಗಳನ್ನು ರೂಪಿಸಿರುವ ವಿವಿಧ ಖನಿಜಗಳನ್ನು ಹಾಲಿನಂತೆ ಪಡೆದವು.

ಭೂ ತಾಯಿಯು ಪ್ರತಿಯೊಬ್ಬರಿಗೂ ಅವರವರಿಗೆ ಅಗತ್ಯವಾದ ಆಹಾರವನ್ನು ನೀಡಿದಳು. ಪೃಥು ದೊರೆಯ ಕಾಲದಲ್ಲಿ ಭೂಮಿಯು ದೊರೆಯ ಅಧೀನಕ್ಕೆ ಒಳಪಟ್ಟಿತ್ತು. ಹೀಗೆ ಭೂಮಿಯ ಎಲ್ಲ ನಿವಾಸಿಗಳೂ ವಿವಿಧ ರೀತಿಯ ಕರುಗಳನ್ನು ಸೃಷ್ಟಿಸುವ ಮೂಲಕ ಹಾಗೂ ಅವರದೇ ರೀತಿಯಿಂದ ಹಾಲುಗಳನ್ನು ವಿವಿಧ ಮಡಿಕೆಗಳಿಗೆ ತುಂಬಿಸಿಕೊಳ್ಳುವ ಮೂಲಕ ಆಹಾರ ಸರಬರಾಜನ್ನು ಪಡೆಯುವುದು ಸಾಧ್ಯವಾಯಿತು. ಭೂಮಿಯನ್ನು ಮಟ್ಟಸವಾಗಿಸುವ ಮೂಲಕ ಅವನು ಅಗತ್ಯವಾದಂಥ ವಾಸಗ್ರಹಗಳಿಗೆ ಸ್ಥಳಗಳನ್ನು ಕಾದಿರಿಸಿದನು.

ಸರಸ್ವತಿ ನದಿಯು ಪೂರ್ವಕ್ಕೆ ಹರಿಯುವೆಡೆಯಲ್ಲಿ ಪೃಥು ದೊರೆಯು ಒಂದು ನೂರು ಅಶ್ವಮೇಧ ಯಜ್ಞಗಳನ್ನು ನೆರವೇರಿಸಿದನು. ಭೂಮಿಯ ಈ ಸ್ಥಳವು ಬ್ರಹ್ಮಾವರ್ತವೆಂದು ಖ್ಯಾತಿ ಪಡೆದಿದ್ದ ಸ್ವಯಂಭು ಮನುವೊಬ್ಬನ ಅಧೀನದಲ್ಲಿದೆ. ದೊರೆ ಪೃಥು ಶಕ್ತಿಶಾಲಿಯಾಗುವುದನ್ನು ಕಂಡು ಇಂದ್ರನಿಗೆ ಸಹಿಸಲಾಗಲಿಲ್ಲ. ಇಂದ್ರನು ಅಶ್ವವನ್ನು ಅಪಹರಿಸಲು ನಿರ್ಧರಿಸಿದನು. ಅವನು ಕೊನೆಗೆ ಅಶ್ವವನ್ನು ಅಪಹರಿಸಿ, ಹೊರವಲಯಗಳನ್ನು ಪ್ರವೇಶಿಸಿದಾಗ ಉನ್ನತ ಮುನಿ ಅತ್ರಿಯು ಅವನನ್ನು ಕಂಡು ಇಡೀ ಪರಿಸ್ಥಿತಿಯನ್ನು ಅರ್ಥಮಾಡಿಕೊಂಡನು. ಅತ್ರಿಯು ದೊರೆಯ ಪುತ್ರನಿಗೆ ಇಂದ್ರನು ಅಟ್ಟಿಸಿಕೊಂಡು ಹೋದ ವಿಷಯವನ್ನು ತಿಳಿಸಿದನು. ಇಂದ್ರನು ಸನ್ಯಾಸಿಯಂತೆ ವೇಷವನ್ನು

ಧರಿಸಿದ್ದರಿಂದ ರಾಜಪುತ್ರನು ಅವನನ್ನು ಕೊಲ್ಲಲಿಲ್ಲ. ಇಂದ್ರ ದೊರೆಯು ಪೃಥು ದೊರೆಯ ಯಜ್ಞದಿಂದ ಅಶ್ವವನ್ನು ಕೊಲ್ಲಲು ಹಲವಾರು ವಿಧಾನಗಳನ್ನು ಅಳವಡಿಸಿಕೊಂಡನು. ಅಂತಿಮವಾಗಿ ಪೃಥು ದೊರೆಯು ಇಂದ್ರನನ್ನು ಕೊಲ್ಲಲೆಂದೇ ನಿರ್ಧರಿಸಿದಾಗ ಪುರೋಹಿತರು ಯಜ್ಞವೊಂದರಲ್ಲಿ ಬಲಿಪಶುಗಳನ್ನು ಮಾತ್ರ ಕೊಲ್ಲಬಹುದಾಗಿದ್ದು ಹಾಗೆ ಮಾಡಬೇಡವೆಂದು ಉಪದೇಶಿಸಿದರು. ಕೊನೆಗೆ ಪುರೋಹಿತರು ಇಂದ್ರನನ್ನು ಕರೆದು ವಿಫುಲ ಹವಿಸ್ಸನ್ನು ಹಾಕಿದಾಗ ಬ್ರಹ್ಮನು ಕಾಣಿಸಿಕೊಂಡು ಯಜ್ಞವನ್ನು ಪ್ರಾರಂಭಿಸದಂತೆ ಅವರಿಗೆ ತಿಳಿಸಿದನು. ಬ್ರಹ್ಮನು ಪೃಥುವಿಗೆ ಉಪದೇವತೆಗಳಲ್ಲಿಯೂ ಸಹ ಅನಪೇಕ್ಷಣೀಯ ಬಯಕೆಗಳಿರುವುದರಿಂದ ಈ ಯಜ್ಞಯಾಗಾದಿಗಳನ್ನು ನಿಲ್ಲಿಸಬೇಕೆಂದು ಉಪದೇಶಿಸಿದನು. ಬ್ರಹ್ಮನು ದೊರೆಗೆ ಅವನೇ ಭಾಗಶಃ ವಿಷ್ಣುವಿನ ತದ್ರೂಪನಾಗಿದ್ದು ಧರ್ಮವನ್ನು ಸಂರಕ್ಷಿಸಲು ಭೂಮಿಗೆ ಬಂದವನಾಗಿದ್ದಾನೆಂದನು. ಬ್ರಹ್ಮನಿಂದ ಬುದ್ಧಿವಾದವನ್ನು ಕೇಳಿದ ದೊರೆಯು ಯಜ್ಞವನ್ನು ಬಿಟ್ಟುಕೊಟ್ಟನು.

## ಪೃಥುವಿಗೆ ಭಗವಂತನ ಉಪದೇಶ

ಮೈತ್ರೇಯಿಯು ತನ್ನ ವಾಖ್ಯಾನವನ್ನು ಮುಂದುವರಿಸಿ ಹೇಳಿದನು : "ದೊರೆ ಪೃಥು ನಡೆಸಿದ ತೊಂಬತ್ತೊಂಬತ್ತು ಅಶ್ವಮೇಧ ಯಾಗಗಳಿಂದ ಸಂತೃಪ್ತನಾದ ಭಗವಂತನು ಇಂದ್ರನೊಡಗೂಡಿ ಆ ಸ್ಥಳದಲ್ಲಿ ಕಾಣಿಸಿಕೊಂಡು ನುಡಿದನು : "ಒಂದು ಅಶ್ವವನ್ನು ಕಳವು ಮಾಡುವ ಮೂಲಕ ಇಂದ್ರನು ನೀನು ಒಂದು ನೂರು ಅಶ್ವಮೇಧ ಯಜ್ಞಗಳನ್ನು ಮಾಡಲಾಗದ ಹಾಗೆ ಗೊಂದಲಗೊಳಿಸಿದ್ದಾನೆ. ಅವನು ನಿನ್ನಿಂದ ಕ್ಷಮೆ ಯಾಚಿಸಲು ನನ್ನೊಂದಿಗೆ ಬಂದಿದ್ದಾನೆ."

ಭಗವಂತನು ಮುಂದೆ ಹೇಳಿದನು : "ಎಲೈ ದೊರೆಯೇ, ಇತರರಿಗಾಗಿ ಕಲ್ಯಾಣ ಕಾರ್ಯಗಳನ್ನು ನಡೆಸಲು ಉತ್ಸುಕನಾಗಿರುವವನು ತಿಳುವಳಿಕೆಯಲ್ಲಿ ಮುಂದುವರಿದವನು ಮಾನವರಲ್ಲೆಲ್ಲ ಅತ್ಯುತ್ತಮನು. ಉನ್ನತ ವಿದ್ಯೆಯುಳ್ಳ ಮಾನವನು ಎಂದಿಗೂ ಇತರರ ಬಗ್ಗೆ ಮತ್ಸರವನ್ನು ಹೊಂದಿರುವುದಿಲ್ಲ. ಉನ್ನತ ವಿದ್ಯೆಯುಳ್ಳವನು ಸದಾ ಕಾಲವೂ ಈ ಐಹಿಕ ಶರೀರವು ಆತ್ಮದಿಂದ ಬೇರೆ ರೀತಿಯದಾಗಿದ್ದು ಎಂಬ ಬಗ್ಗೆ ಪ್ರಜ್ಞಾಪೂರ್ವಕ ನಾಗಿರುತ್ತಾನೆ" ಅನಂತರ ಭಗವಂತನು ದೊರೆಗೆ ತನ್ನ ಐಹಿಕ ಶಕ್ತಿಯ ಪ್ರಭಾವದಿಂದ ತನ್ನನ್ನೇ ಮರೆಯಕೂಡದೆಂದನು. ಯಾರು ಜೀವನದ ಶಾರೀರಿಕ ವಿಷಯಗಳ ಬಗ್ಗೆ ಸಂಪೂರ್ಣ ತಿಳಿವಳಿಕೆಯನ್ನು ಹೊಂದಿರುತ್ತಾರೋ ಹಾಗೂ ಈ ಶರೀರವು ಅಜ್ಞತೆ, ಆಸೆಗಳು ಮತ್ತು ಚಟುವಟಿಕೆಗಳಿಂದ ಕೂಡಿ ಇವುಗಳಿಂದ ಭ್ರಮೆಗಳುಂಟಾಗುತ್ತವೆ ಎಂದು ತಿಳಿದಿರುತ್ತಾರೋ ಅವರು ಶರೀರದ ಬಗ್ಗೆ ವ್ಯಾಮೋಹಗಳೊಳ್ಳುವುದಿಲ್ಲ. ಯಾರೂ ಜೀವನಕ್ಕೆ ಸಂಬಂಧಿಸಿದಂತೆ ದೇಹದ ಬಗ್ಗೆ ಹಾಗೂ ಮಕ್ಕಳು, ಮನೆ, ಐಶ್ವರ್ಯ ಹಾಗೂ ಇತರ ಶಾರೀರಿಕ ಉತ್ಪನ್ನಗಳ ಬಗ್ಗೆ ವಿಶ್ವಾಸವನ್ನು ಬೆಳೆಸಿಕೊಳ್ಳಕೂಡದು.

ವೈಯಕ್ತಿಕ ಆತ್ಮವು ಪರಿಶುದ್ಧವಾದ್ದು, ಅಲೌಕಿಕವಾದದ್ದು ಹಾಗೂ ಸ್ವಯಂ ಪ್ರಕಾಶಮಾನವಾದದ್ದು. ಪರಮಾತ್ಮನು ಪ್ರತಿಯೊಬ್ಬರಲ್ಲೂ ವಾಸವಾಗಿದ್ದಾನೆ ಎಂದು ತಿಳಿದವನೆಂದೂ ಐಹಿಕ ಸ್ವಭಾವದ ವಿಧಾನಗಳಿಂದ ಪ್ರಭಾವಿತನಾಗಕೂಡದು".

ಭಗವಂತನು ಮುಂದುವರಿದು ಹೇಳಿದನು : "ಹೃದಯವು ಎಲ್ಲ ಲೌಕಿಕ ಕಲ್ಮಶಗಳಿಂದ ಪರಿಶುದ್ಧಗೊಂಡಾಗ ಭಕ್ತನ ಮನಸ್ಸು ವಿಸ್ತಾರವಾಗಿ ಹಾಗೂ ಪಾರದರ್ಶಕವಾಗಿ ಅವನು ಎಲ್ಲವನ್ನೂ ಸಮಾನ ರೀತಿಯಲ್ಲಿ ಕಾಣಬಲ್ಲ. ಪಂಚಭೂತಗಳು, ಇಂದ್ರಿಯಗಳು, ಕಾರ್ಯದಲ್ಲಿ ತೊಡಗಬಲ್ಲ ಅಂಗಗಳು ಹಾಗೂ ಬುದ್ಧಿಯಿಂದ ಸಿದ್ಧಗೊಳಿಸಲ್ಪಟ್ಟ ಈ ಐಹಿಕ ಶರೀರವು ಕೇವಲ ಸ್ಥಿರವಾದ ಆತ್ಮದ ಮೇಲ್ವಿಚಾರಣೆಗೆ ಒಳಪಟ್ಟಿದೆ ಎಂಬುದನ್ನು ಅರಿತವರು ಐಹಿಕ ಸಂಕೋಲೆಗಳಿಂದ ಮುಕ್ತರಾಗಲು ಅರ್ಹರಾಗುತ್ತಾರೆ".

ಭಗವಂತನು ದೊರೆಗೆ ಒಬ್ಬರ ಸ್ಥಾನಮಾನಗಳೇನೇ ಇದ್ದರೂ ಎಲ್ಲ ಜನರನ್ನೂ ಸಮಾನ ರೀತಿಯಲ್ಲಿ ಕಾಣುವಂಥ ಸ್ಥಿಮಿತ ಸ್ಥಿತಿಯನ್ನು ಸಾಧಿಸಿಕೊಳ್ಳಬೇಕೆಂದು ಉಪದೇಶಿಸಿದನು. ತಾತ್ಕಾಲಿಕ ಬೇಗುದಿ ಅಥವಾ ಸಂತೋಷದಿಂದ ಸಂತಸಗೊಳ್ಳಲಾರದೆಂದು ಭಗವಂತನು ಬುದ್ಧಿವಾದ ಹೇಳಿದನು. ಅದಕ್ಕೆ ಬದಲಾಗಿ ಒಬ್ಬನು ಮನಸ್ಸು ಬುದ್ಧಿಗಳನ್ನು ನಿಯಂತ್ರಣದೊಳಗೆ ಇಟ್ಟುಕೊಳ್ಳಬೇಕು. ದೊರೆಯು ಪ್ರಜೆಗಳೆಲ್ಲರಿಗೂ ರಕ್ಷಣೆಯನ್ನು ನೀಡಬೇಕು. ಪ್ರಜೆಗಳಿಂದ ಕೇವಲ ತೆರಿಗೆಗಳನ್ನು ಸಂಗ್ರಹಿಸಿ ಅವರಿಗೆ ಸೂಕ್ತ ರಕ್ಷಣೆಯನ್ನು ನೀಡದವನು ತನ್ನ ಉದಾರ ಚಟುವಟಿಕೆಗಳನ್ನು ಪ್ರಜೆಗಳೇ ಅಪಹರಿಸಲು ಅವಕಾಶವನ್ನು ನೀಡುತ್ತಾನೆ. ದೊರೆಯ ಉನ್ನತ ಗುಣಗಳು ಮತ್ತು ಅತ್ಯುತ್ತಮ ವರ್ತನೆಯಿಂದ ಮುದಗೊಂಡ ಭಗವಂತನು ಅವನಿಗೆ ವರವನ್ನು ಬೇಡಬೇಕೆಂದು ತಿಳಿಸಿದನು. ಉನ್ನತ ಗುಣಗಳು ಮತ್ತು ಅತ್ಯುತ್ತಮ ವರ್ತನೆಗಳನ್ನು ಹೊಂದಿರದೆ ತಪಸ್ಸುಗಳು, ಕಠಿಣ ವಿಧಿಗಳು ಹಾಗೂ ಅತೀಂದ್ರಿಯ ಯೋಗಗಳನ್ನು ಮಾಡಿದಲ್ಲಿ ತಾನು ಅವುಗಳಿಂದ ಸಂಪ್ರೀತಗೊಳ್ಳುವುದಿಲ್ಲವೆಂದನು. (ವಿವರಣೆ: ದೊಡ್ಡ ತಪಸ್ಸುಗಳನ್ನು ಮಾಡುವುದು ಅಥವಾ ಅತೀಂದ್ರಿಯ ಯೋಗದ ವಿಧಿಗಳನ್ನು ನಡೆಸುವುದರಿಂದಾಗಿ ಅವನನ್ನು ತೃಪ್ತಿಪಡಿಸಲಾಗದು ಎಂಬುದಾಗಿ ಭಗವಂತನು ನಿರ್ದಿಷ್ಟವಾಗಿ ತಿಳಿಸುತ್ತಾನೆ. ಅವನು ಕೇವಲ ಉನ್ನತ ಚಾರಿತ್ರ್ಯ ಮತ್ತು ನಡೆವಳಿಕೆಯಿಂದ ಸಂತುಷ್ಟನಾಗುತ್ತಾನೆ).

ಭಗವಂತನೊಂದಿಗೆ ಆಗಮಿಸಿದ್ದ ಇಂದ್ರನು ತನ್ನ ಚಟುವಟಿಕೆಯಿಂದ ನಾಚಿದವನಾಗಿ ದೊರೆ ಪೃಥುವಿನ ಮುಂದೆ ಅವನ ಪದ್ಮಪಾದವನ್ನು ಸ್ಪರ್ಶಿಸಲು ಬಿದ್ದಾಗ ದೊರೆಯು ಅವನನ್ನು ಆಲಂಗಿಸಿಕೊಂಡು ಯಜ್ಞಕ್ಕೆ ಉದ್ದೇಶಿತವಾದ ಅಶ್ವವನ್ನು ಅವನು ಕಳುವು ಮಾಡಿದುದರ ಬಗ್ಗೆ ಇಂದ್ರನ ಮೇಲೆ ಹೊಂದಿರಬಹುದಾದ ಎಲ್ಲ ಶತೃತ್ವವನ್ನು ಮರೆತನು.

ದೊರೆ ಪೃಥುವು ಭಗವಂತನಲ್ಲಿ ಲೀನವಾಗುವಂಥ ವರವನ್ನು ತಾನು ಕೇಳಲು ಬಯಸುವುದಿಲ್ಲವೆಂದನು. ಅದಕ್ಕೆ ಬದಲಾಗಿ ತನ್ನ ಪರಿಶುದ್ಧ ಭಕ್ತಾದಿಗಳ ಬಾಯಿಂದ ಭಗವಂತನ ಪದ್ಮ ಪಾದದ ವೈಭವಗಳನ್ನು ಆಲಿಸಲು ಸಮರ್ಥನಾಗುವಂತೆ ಒಂದು

ದಶಲಕ್ಷ ಕಿವಿಗಳನ್ನು ತನಗೆ ದಯಪಾಲಿಸಬೇಕೆಂಬ ವರವನ್ನು ಬೇಡಿದನು. ದೊರೆಯು ಇದಕ್ಕಿಂತಲೂ ಹೆಚ್ಚಿನದನ್ನು ಏಕೆ ಬಯಸಲಿಲ್ಲವೆಂದರೆ ಅವನ ಅನ್ವಯ ವೇದಗಳೂ ಸಹ ಪರಿಶುದ್ಧ ಭಕ್ತಾದಿಗಳಿಗೆ ತಕ್ಕದಾದುಲ್ಲ. ಜನರು ಸಾಮಾನ್ಯವಾಗಿ ವೇದಗಳ ಮಧುರ ಮಾತುಗಳಿಂದ ಕಟ್ಟಲ್ಪಟ್ಟವರಾಗಿ, ತಮ್ಮ ಕ್ರಿಯೆಗಳ ಪರಿಣಾಮಗಳಿಂದ ಮುದಗೊಂಡವರಾಗಿ ಮತ್ತೆ ಮತ್ತೆ ತಮ್ಮ ಫಲಪ್ರದ ಚಟುವಟಿಕೆಗಳಲ್ಲಿ ತೊಡಗುತ್ತಾರೆ.

ದೊರೆಯ ಪ್ರಾರ್ಥನೆಯನ್ನು ಆಲಿಸಿದ ಭಗವಂತನೆಂದನು : "ಎಲೈ ನನ್ನ ಪ್ರಿಯ ದೊರೆಯೇ, ನೀನು ಸದಾ ಕಾಲವೂ ನನಗೆ ಭಕ್ತಿರೂಪಕ ಸೇವೆ ಸಲ್ಲಿಸುತ್ತಿರುವಂಥವನಾಗು. ಅಂಥ ಉದ್ದೇಶದ ಪರಿಶುದ್ಧತೆಯಿಂದಾಗಿ, ನೀನೇ ತುಂಬಾ ಜಾಣ್ಮೆಯಿಂದ ವ್ಯಕ್ತಪಡಿಸುವಂತೆ ಒಬ್ಬರು ಮಾಯೆಯ ಅಭೇಧ್ಯವಾದ ಭ್ರಮೆಯ ಲೋಕವನ್ನು ದಾಟಿ ಹೋಗಬಲ್ಲರು. ಇನ್ನು ಮುಂದೆ ನೀನು ನನ್ನ ಆಜ್ಞೆಗಳನ್ನು ಎಚ್ಚರದಿಂದ ಪಾಲಿಸುವಂಥವನಾಗಿ ಯಾವುದರಿಂದಲೂ ತಪ್ಪು ದಾರಿಗೆ ಎಳೆಯಲ್ಪಡಲಾರೆ. ಈ ವಿಧವಾಗಿ, ನನ್ನ ಆಜ್ಞೆಯನ್ನು ವಿಧೇಯನಾಗಿ ಪಾಲಿಸುವವರು ಸದಾ ಕಾಲವೂ ಜಗತ್ತಿನಾದ್ಯಂತ ಅದೃಷ್ಟವನ್ನೇ ಕಾಣುತ್ತಾರೆ. ಅನಂತರ ದೊರೆಯು ಅಲ್ಲಿ ನೆರೆದಿದ್ದ ಹಿರಿಯ ಜನರಿಗೆ ಪ್ರಾರ್ಥನೆಯನ್ನು ಸಲ್ಲಿಸಿದ ನಂತರ ಅವರೆಲ್ಲರೂ ತಮ್ಮ ತಮ್ಮ ಜಾಗಕ್ಕೆ ನಿರ್ಗಮಿಸಿದರು.

ದೊರೆಯು ತನ್ನ ಅರಮನೆಗೆ ಹಿಂತಿರುಗಿದಾಗ ಅವನನ್ನು ಎಲ್ಲ ವೈಭವಗಳಿಂದಲೂ ಬರಮಾಡಿಕೊಳ್ಳಲಾಯಿತು. ಇಡೀ ನಗರವನ್ನು ಬಾವುಟ ಹಾಗೂ ಕಮಾನುಗಳಿಂದ ಅಲಂಕರಿಸಲಾಗಿತ್ತು.

ಮೈತ್ರೇಯಿಯಿಂದ ಈ ಸಂಗತಿಗಳನ್ನು ಕೇಳುತ್ತಿದ್ದ ವಿದುರನು ಪೃಥು ದೊರೆಯ ಬಗ್ಗೆ ಮತ್ತಷ್ಟು ತಿಳಿದುಕೊಳ್ಳಲು ಬಯಸಿದನು. ಮೈತ್ರೇಯಿಯು ಪೃಥುವು ಗಂಗಾ ಮತ್ತು ಯಮುನಾ ಎಂಬ ಎರಡು ದೊಡ್ಡ ನದಿಗಳ ಮಧ್ಯಭಾಗದಲ್ಲಿದ್ದ ಭೂಪ್ರದೇಶದಲ್ಲಿ ವಾಸವಾಗಿದ್ದನು ಎಂದು ಹೇಳಿದನು. ಅವನು ಸಮೃದ್ಧನಾಗಿದ್ದರಿಂದ ತನ್ನ ಹಿಂದಿನ ಉತ್ತಮ ಚಟುವಟಿಕೆಗಳ ಪರಿಣಾಮಗಳನ್ನು ನಾಶಗೊಳಿಸುವ ಸಲುವಾಗಿ ತನ್ನ ಕರ್ಮಬದ್ಧ ಅದೃಷ್ಟವನ್ನು ಅನುಭವಿಸುತ್ತಿರುವಂತೆ ತೋರುತ್ತಿತ್ತು. ಮಹಾರಾಜ ಪೃಥುವು ಅದ್ವಿತೀಯ ದೊರೆಯಾಗಿದ್ದು ಪೃಥ್ವಿಯ ಮೇಲಿನ ಏಳು ದ್ವೀಪಗಳನ್ನು ಆಳುವ ದಕ್ಷತೆಯನ್ನು ಹೊಂದಿದ್ದಂಥವನಾಗಿದ್ದದು. (ಏಶಿಯಾ, ಯೂರೋಪ್, ಅಫ್ರಿಕಾ, ಉತ್ತರ ಅಮೇರಿಕಾ, ದಕ್ಷಿಣ ಅಮೆರಿಕಾ, ಆಸ್ಟ್ರೇಲಿಯಾ ಮತ್ತು ಸಾಗರಗಳು).

## ಪ್ರಜೆಗಳಿಗೆ ದೊರೆಯ ಪೃಥುವಿನಿಂದ ಬುದ್ಧಿವಾದ

ಒಮ್ಮೆ ದೊರೆಯು ಯಜ್ಞವೊಂದನ್ನು ನಡೆಸಿದಾಗ ಹಿರಿಯ ಮುನಿಗಳು, ಬ್ರಾಹ್ಮಣರು, ಉನ್ನತ ಲೋಕಗಳ ಉಪದೇವತೆಗಳು, ಋಷಿ ಸಮಾನರಾದ ದೊರೆಗಳು ಮತ್ತು ರಾಜರ್ಷಿಗಳು ಅಲ್ಲಿ ನೆರೆದಿದ್ದರು. ದೊರೆಯು ಅವರನ್ನು ಪೂಜಿಸಿ ಎಲ್ಲ

ಸಂದರ್ಶಕರನ್ನೂ ಗೌರವಿಸಿದನು. ಆ ಸಮಾವೇಶದಲ್ಲಿ ದೊರೆಯು ಹೀಗೆ ಮಾತನಾಡಿದನು: "ದೈವ ಕೃಪೆಯಿಂದ ನಾನು ಈ ನಾಡಿನ ದೊರೆಯಾಗಿ ನೇಮಕಗೊಂಡಿದ್ದು ನಾನು ಪ್ರಜೆಗಳನ್ನು ಆಳುವಂಥ, ಅವರನ್ನು ಎಲ್ಲ ಅಪಾಯಗಳಿಂದ ಸಂರಕ್ಷಿಸುವಂಥ ಹಾಗೂ ವೈದಿಕ ಸೂಚನೆಗಳ ಅನ್ವಯ ಸ್ಥಾಪನೆಗೊಂಡಿರುವ ಸಾಮಾಜಿಕ ವ್ಯವಸ್ಥೆಯಲ್ಲಿ ಅವರವರ ಸ್ಥಾನಮಾನಕ್ಕೆ ತಕ್ಕುದಾದ ಉದ್ಯೋಗವನ್ನು ಅವರಿಗೆ ದೊರಕಿಸಿಕೊಡುವಂಥ ದೀಕ್ಷೆಯನ್ನು ಹೊತ್ತಿದ್ದೇನೆ". ವರ್ಣ ಮತ್ತು ಆಶ್ರಮಕ್ಕೆ ಅನುಗುಣವಾಗಿ ಅವರವರ ಕರ್ತವ್ಯಗಳನ್ನು ಪ್ರಜೆಗಳಿಗೆ ಬೋಧಿಸಿದೆ. ಅವರಿಂದ ಕೇವಲ ಕಪ್ಪ ಕಾಣಿಕೆ ಹಾಗೂ ತೆರಿಗೆಗಳನ್ನು ವಸೂಲು ಮಾಡುವಂಥ ದೊರೆಯು ನಾಗರಿಕರಿಂದ ನಡೆಸಲ್ಪಟ್ಟ ಅಪವಿತ್ರ ಚಟುವಟಿಕೆಗೆ ಕಾರಣನಾಗುತ್ತಾನೆ. ಇಂಥ ಹೀನಾಯ ಸ್ಥಿತಿಗೆ .ಒಳಗಾಗುವುದಲ್ಲದೆ ದೊರೆಯು ತನ್ನ ಅದೃಷ್ಟವನ್ನು ಕಳೆದುಕೊಳ್ಳುತ್ತಾನೆ.

ದೊರೆಯು ತನ್ನ ನಾಗರಿಕರಿಗೆ ತಮ್ಮ ಕರ್ತವ್ಯಗಳನ್ನು ಪಾಲಿಸಬೇಕೆಂದು ಉಪದೇಶಿಸಿದ್ದಲ್ಲದೆ ಕಾನೂನಿಗೆ ಬದ್ಧರಾದ ಎಲ್ಲ ಜನರಿಂದಲೂ ಸಹಕಾರ ಮತ್ತು ಬೆಂಬಲವನ್ನು ಅಪೇಕ್ಷಿಸಿದನು. ಅವನು ಜನರಿಗೆ ತಮ್ಮ ಕರ್ತವ್ಯಗಳ ನೆನಪು ಮಾಡಿಕೊಟ್ಟು ತಾನು ಮನು, ಉತ್ತಾನಪಾದ ಹಾಗೂ ಇತರ ಪೂರ್ವಜರ ಹೆಜ್ಜೆ ಗುರುತುಗಳನ್ನು ಅನುಸರಿಸುವುದಾಗಿ ಭರವಸೆಯನ್ನು ನೀಡಿದನು. ಭಗವಂತನ ಪದ್ಮಪಾದವನ್ನು ಸೇವಿಸುವ ಉದ್ದೇಶ ಮಾತ್ರದಿಂದಲೇ ಮಾನವ ಜನಾಂಗವು ಅಸಂಖ್ಯಾತ ಜನ್ಮಗಳಲ್ಲಿ ತಮ್ಮ ಮನಸ್ಸಿನಲ್ಲಿ ತುಂಬಿಕೊಂಡಿರುವ ಕಲ್ಮಶವನ್ನು ತಕ್ಷಣವೇ ಶುಚಿಗೊಳಿಸಿಕೊಳ್ಳಬಹುದು. ಒಮ್ಮೆ ಭಗವಂತನ ಪದ್ಮಪಾದದ ಮೂಲದಲ್ಲಿ ಆಶ್ರಯ ಪಡೆದನೆಂದರೆ ಭಕ್ತನೊಬ್ಬ ಮೂರು ವಿಧದ ಸಂಕಷ್ಟಗಳಿಂದ ತುಂಬಿರುವಂಥ ಈ ಐಹಿಕ ಅಸ್ತಿತ್ವಕ್ಕೆ ಎಂದೂ ಹಿಂತಿರುಗುವುದಿಲ್ಲ.

ದೊರೆಯು ನಾಗರಿಕರಿಗೆ ಬುದ್ಧಿವಾದ ಮಾಡಿದನು : " ನಿಮ್ಮ ಮನಸ್ಸು, ಮಾತು, ಶರೀರ, ಹಾಗೂ ನಿಮ್ಮ ವೃತ್ತಿಪರ ಕರ್ತವ್ಯಗಳಲ್ಲಿ ತೊಡಗಿಸಿಕೊಂಡು ಸದಾ ಮುಕ್ತ ಮನಸ್ಸಿನವರಾಗಿ ನೀವೆಲ್ಲರೂ ಭಗವಂತನಿಗೆ ಭಕ್ತಿಪೂರ್ವಕ ಸೇವೆಯನ್ನು ಸಲ್ಲಿಸಬೇಕು. ನಿಮ್ಮ ಸಾಮರ್ಥ್ಯ ಮತ್ತು ನೀವಿರುವಂಥ ವೃತ್ತಿಗಳಲ್ಲಿ ನೀವು ಭಗವಂತನ ಪದ್ಮಪಾದಾರವಿಂದದ ಸಂಪೂರ್ಣ ವಿಶ್ವಾಸದಿಂದ ಯಾವ ಬಿಗುಮಾನವಿಲ್ಲದೆ ಸೇವೆಯಲ್ಲಿ ತೊಡಗಬೇಕು. ಆಗ ಮಾತ್ರ ನೀವು ನಿಮ್ಮ ಜೀವನಗಳಲ್ಲಿನ ಅಂತಿಮ ಉದ್ದೇಶಗಳನ್ನು ಸಾಧಿಸುವಲ್ಲಿ ಖಂಡಿತವಾಗಿಯೂ ಯಶಸ್ವಿಯಾಗುತ್ತೀರಿ. ಭಗವಂತನ ಅತ್ಯುನ್ನತ ವ್ಯಕ್ತಿತ್ವವು ಸರ್ವವ್ಯಾಪಿಯಾಗಿದ್ದರೂ ಅವನ ಐಹಿಕ ಸ್ವಭಾವ, ಕಾಲ, ಆಸೆಗಳು ಮತ್ತು ವೃತ್ತಿಪರ ಕರ್ತವ್ಯಗಳ ಸಮ್ಮಿಶ್ರಣದಿಂದ ಉಂಟಾಗಬಹುದಾದಂಥ ವಿವಿಧ ರೀತಿಯ ಶರೀರಗಳಲ್ಲಿ ಸಾಕಾರಗೊಂಡಿದ್ದಾನೆ. ಹೀಗೆ, ಮೂಲಭೂತವಾಗಿ ಒಂದೇ ರೀತಿಯಾಗಿರುವ ಅಗ್ನಿಯು ಕಟ್ಟಿಗೆಯ ಆಕಾರ ಮತ್ತು ಗಾತ್ರಕ್ಕೆ ಅನುಗುಣವಾಗಿ ವಿವಿಧ ರೀತಿಯಾಗಿ ಉರಿಯುವಂತೆ ವಿವಿಧ ಬಗೆಯ ಪ್ರಜ್ಞೆಗಳು ಬೆಳೆಯುತ್ತವೆ". ಆದ್ದರಿಂದ ದೊರೆಯು ಹಾಜರಿದ್ದ ಪ್ರಜೆಗಳೆಲ್ಲರ ಆಶೀರ್ವಾದವನ್ನು ಅಪೇಕ್ಷಿಸಿದನು.

ದೊರೆಯ ಮಾತುಗಳನ್ನು ಕೇಳಿದವರೆಲ್ಲರೂ ಅವನಿಗೆ ತಮ್ಮ ಅಭಿನಂದನೆಗಳನ್ನು ಸಲ್ಲಿಸಿದರು. ಅವನಿಗೆ ದೀರ್ಘಾಯುಷ್ಯವನ್ನು ಕೋರಿದನು.

## ಕುಮಾರರ ಉಪನ್ಯಾಸ

ಈ ಕಾಲಘಟ್ಟದಲ್ಲಿ ನಾಲ್ವರು ಕುಮಾರರು ಕಾಣಿಸಿಕೊಂಡಾಗ ದೊರೆಯು ಅವರನ್ನು ಸ್ವಾಗತಿಸಿ ಹಾಗೂ ಪ್ರಾರ್ಥಿಸಿ ನುಡಿದನು : " ನಿಮ್ಮ ಜನನದಿಂದಲೂ ನೀವು ಬ್ರಹ್ಮಚರ್ಯೆಯ ವಚನವನ್ನು ಪಾಲಿಸಿ, ವಿಮುಕ್ತಿಯ ಪಥದಲ್ಲಿ ಸಾಗಿದ್ದರೂ ಸಣ್ಣ ಮಕ್ಕಳ ರೀತಿಯಲ್ಲಿ ನಿಮ್ಮತನವನ್ನು ಇಟ್ಟುಕೊಂಡಿದ್ದೀರಿ". ದೊರೆಯು ಮುನಿಗಳನ್ನು ಹಿಂದಿನ ಜನ್ಮಗಳ ಕ್ರಿಯೆಗಳ ಕಾರಣದಿಂದಾಗಿ ಈ ಅಪಾಯಕಾರಿ ಐಹಿಕ ಅಸ್ತಿತ್ವಕ್ಕೆ ಸಿಲುಕಿರುವ ವ್ಯಕ್ತಿಗಳ ಬಗ್ಗೆ ಕೇಳಿದನು : ಇಂದ್ರಿಯ ಸಾರ್ಥಕತೆಯನ್ನು ಏಕೈಕ ಉದ್ದೇಶವನ್ನಾಗಿ ಹೊಂದಿರುವ ಅಂಥವರು ಯಾವುದೇ ಒಳ್ಳೆಯ ಅದೃಷ್ಟವನ್ನು ಪಡೆಯಬಲ್ಲರೇ ? ಈ ಐಹಿಕ ಜಗತ್ತಿನಲ್ಲಿ ಒಬ್ಬರು ಜೀವನದ ಅತ್ಯುತ್ತಮ ಗುರಿಯನ್ನು ಹೇಗೆ ಸಾಧಿಸಬಹುದೆಂಬುದನ್ನು ದೊರೆಯು ತಿಳಿದುಕೊಳ್ಳಲು ಬಯಸಿದನು.

ಕುಮಾರರು ಉತ್ತರಿಸಲು ಪ್ರಾರಂಭಿಸಿದರು : "ಸಾಕಷ್ಟು ಪರ್ಯಾಲೋಚಿಸಿದ ನಂತರ ಪುರಾಣಗ್ರಂಥಗಳಲ್ಲಿ ಮಾನವ ಸಮಾಜದ ಅಂತಿಮ ಗುರಿಯು ಶಾರೀರಿಕ ತತ್ತ್ವವನ್ನು ಬಿಟ್ಟುಕೊಟ್ಟು ಐಹಿಕ ವಿಧಾನಗಳೆಲ್ಲವಕ್ಕೂ ಅತೀತನಾಗಿರುವ ಅತಿಶಯನಾದ ಭಗವಂತನೊಂದಿಗೆ, ಹೆಚ್ಚಾದ ಮತ್ತು ನಿಶ್ಚಲವಾದ ವ್ಯಾಮೋಹವನ್ನು ಇಟ್ಟುಕೊಳ್ಳುವುದು ಎಂಬುದಾಗಿ ನಿರ್ಣಾಯಕ ರೀತಿಯಲ್ಲಿ ನಿರ್ಧರಿಸಲ್ಪಟ್ಟಿದೆ. ಭಗವಂತನೊಂದಿಗೆ ವ್ಯಾಮೋಹವನ್ನು ಭಕ್ತಿಪೂರ್ವಕ ಸೇವೆ, ಭಗವಂತನ ಬಗ್ಗೆ ಚಿಂತನೆ, ಜೀವನದಲ್ಲಿ ಭಕ್ತಿಯೋಗವನ್ನು ಅಳವಡಿಸಿಕೊಳ್ಳುವುದು, ಭಗವಂತ ಅಂದರೆ ಯೋಗೀಶ್ವರನನ್ನು ಪೂಜಿಸುವುದು ಮತ್ತು ಭಗವಂತನ ವೈಭವವನ್ನು ಆಲಿಸುವುದು ಹಾಗೂ ಪಠಿಸುವುದು ಇವುಗಳ ಮೂಲಕ ಹೆಚ್ಚಿಸಿಕೊಳ್ಳಬಹುದು. ಈ ಕ್ರಿಯೆಗಳು ತಮ್ಮದೇ ರೀತಿಯಲ್ಲಿ ಪವಿತ್ರವಾದವು. ಆತ್ಮಸಾಕ್ಷಾತ್ಕಾರಕ್ಕಿಂತಲೂ ಹೆಚ್ಚಿನ ಸಂತೋಷದ ವಿಷಯಗಳು ಆನಂದ ನೀಡುವಂಥವು ಎಂಬುದಾಗಿ ಆಲೋಚಿಸುವುದಕ್ಕಿಂತಲೂ ಒಬ್ಬರ ಹಿತಾಸಕ್ತಿಗೆ ಮತ್ಯಾವ ಪ್ರಭಾವಶಾಲಿಯಾದ ಅಡೆತಡೆಯೂ ಇಲ್ಲ. ಮಾನವ ಸಮಾಜಕ್ಕೆ ಹಣ ಗಳಿಸುವುದು ಹೇಗೆಂಬ ಬಗ್ಗೆ ಮತ್ತು ಅದನ್ನು ಇಂದ್ರಿಯ ಸಾರ್ಥಕತೆಗಾಗಿ ಅನ್ವಯಿಸುವ ಬಗ್ಗೆ ಸತತವಾದ ಆಲೋಚನೆ ಇರುವುದರಿಂದ ಅದು ಪ್ರತಿಯೊಬ್ಬರ ಹಿತಾಸಕ್ತಿಗೂ ಧಕ್ಕೆಯುಂಟು ಮಾಡುತ್ತವೆ. ನಾಲ್ಕು ತತ್ತ್ವಗಳಲ್ಲಿ ಮುಖ್ಯವಾದವು - ಅಂದರೆ ಧರ್ಮ, ಆರ್ಥಿಕ ಅಭಿವೃದ್ಧಿ, ಇಂದ್ರಿಯ ಸುಖ ಮತ್ತು ವಿಮುಕ್ತಿ - ವಿಮುಕ್ತಿಯನ್ನು ಹೆಚ್ಚು ಗಂಭೀರವಾಗಿ ತೆಗೆದುಕೊಳ್ಳಬೇಕು. ಇನ್ನಿತರ ಮೂರು ಪ್ರಕೃತಿಯ ಕಟ್ಟುನಿಟ್ಟು ನಿಯಮ - ಸಾವಿನಿಂದ ನಾಶಗೊಳ್ಳಬಹುದಾಗಿವೆ.

ಕುಮಾರರು ದೊರೆಗೆ ಬುದ್ಧಿವಾದ ಮಾಡಿದರು : "ಆದ್ದರಿಂದ ಪ್ರಿಯನಾದ ಎಲೈ ಪೃಥು ದೊರೆಯೇ, ಸ್ಥಾವರವಾದ ಅಥವಾ ಜಂಗಮವಾದ, ಪ್ರತಿಯೊಂದು

ಹಾಗೂ ಪ್ರತಿಯೊಬ್ಬರ ಶರೀರದಲ್ಲಿ ವೈಯಕ್ತಿಕ ಆತ್ಮದೊಂದಿಗೆ ಪ್ರತಿಯೊಬ್ಬರ ಹೃದಯದಲ್ಲಿ ವಾಸವಾಗಿರುವಂಥ ಭಗವಂತನನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸು. ವೈಯಕ್ತಿಕ ಆತ್ಮಗಳು ಸಂಪೂರ್ಣವಾಗಿ ಐಹಿಕ ಶರೀರದಿಂದ ಆವೃತವಾಗಿದ್ದು ಸೂಕ್ಷ್ಮಶರೀರಗಳು ಜೀವವಾಯು ಮತ್ತು ಬುದ್ಧಿಶಕ್ತಿಯಿಂದ ಮಾಡಲ್ಪಟ್ಟಿವೆ. ಭಗವಂತನು ಅತಿಶಯನಾದವನಾಗಿದ್ದು ಎಲ್ಲ ಐಹಿಕ ಕಲ್ಮಶಗಳಿಗೂ ಅತೀತನು. ಅವನಿಗೆ ಮಾತ್ರವೇ ಶರಣಾಗಬೇಕು. ಆದ್ದರಿಂದ ನೀನು ವಸುದೇವನ ಮಗನಾದ ಶ್ರೀ ಕೃಷ್ಣ ಪರಮಾತ್ಮನ ಭಕ್ತಿಪೂರ್ವಕ ಸೇವೆಯಲ್ಲಿ ನಿನ್ನನ್ನು ತೊಡಗಿಸಿಕೋ". ಹೀಗೆ ಬ್ರಹ್ಮನ ಪುತ್ರನಿಂದ ಅಧ್ಯಾತ್ಮಿಕ ಜ್ಞಾನದ ಬಗ್ಗೆ ಸಂಪೂರ್ಣ ತಿಳಿವಳಿಕೆಯಿದ್ದ ಕುಮಾರನೊಬ್ಬನಿಂದ ಸಂಪೂರ್ಣ ಅಧ್ಯಾತ್ಮಿಕ ತಿಳಿವಳಿಕೆ ಹೊಂದುವ ಮೂಲಕ ಜ್ಞಾನೋದಯವನ್ನು ಹೊಂದಿದ ಅವನು ಅವರನ್ನು ಪೂಜಿಸಿದನು.

ಭಕ್ತಿಪೂರ್ವಕ ಸೇವೆಯ ಒಡೆಯರಾದ ಕುಮಾರರು ಸಂತುಷ್ಟಗೊಂಡು ಅಲ್ಲಿಂದ ಹೊರಟರು. ಸ್ವಯಂ ಸಂತೃಪ್ತಗೊಂಡ ಮಹಾರಾಜ ಪೃಥುವು ತನ್ನ ಕರ್ತವ್ಯಗಳನ್ನು ಕಾಲ ಹಾಗೂ ಪರಿಸ್ಥಿತಿ, ಸಾಮರ್ಥ್ಯ ಹಾಗೂ ಆರ್ಥಿಕ ಸ್ಥಿತಿಗೆ ಅನುಗುಣವಾಗಿ ಸಾಧ್ಯವಾದಷ್ಟೂ ಪರಿಪೂರ್ಣವಾಗಿ ನೆರವೇರಿಸಿದನು. ಎಲ್ಲ ಬಗೆಯ ಚಟುವಟಿಕೆಗಳಲ್ಲಿ ಅವನ ಏಕೈಕ ಗುರಿಯು ಸಂಪೂರ್ಣ ಸತ್ಯವನ್ನು ತೃಪ್ತಿಪಡಿಸುವುದಾಗಿತ್ತು. ಈ ರೀತಿಯಾಗಿ ಅವನು ವರ್ತಿಸಿದನು. ದೊರೆಯು ಅತಿಶಯ ಐಹಿಕ ಸ್ವಭಾವಕ್ಕೆ ಅತೀತನಾದ ಭಗವಂತನಿಗೆ ಶಾಶ್ವತ ಸೇವಕನಾಗಲು ತನ್ನನ್ನೇ ಸಮರ್ಪಿಸಿಕೊಂಡನು. ವಿಜಿತಸ್ವ, ಧೂಮ್ರಕೇಶ, ಹರಿಯಾಕ್ಷ, ಧ್ರಾವಿಣ ಮತ್ತು ವಕ್ರರೆಂಬ ಐವರು ಪುತ್ರರನ್ನು ಪಡೆದ ನಂತರ ಅವನು ಅರಣ್ಯಗಳತ್ತ ತೆರಳಿದನು. ಅವನು ಅಲ್ಲಿ ಫಲಹಾರ ಮಾಡುತ್ತ, ಕೊನೆಗೆ ಕೇವಲ ವಾಯು ಸೇವನೆಯ ಮೂಲಕ ಜೀವಿಸಿದನು. ಕೊನೆಗೆ ದೊರೆಯು ತನ್ನ ಶರೀರವನ್ನು ತ್ಯಜಿಸಲು ಬಯಸಿದಾಗ ಅವನು ತನ್ನ ಮನಸ್ಸನ್ನು ಶ್ರೀ ಕೃಷ್ಣ ಪರಮಾತ್ಮನ ಪದ್ಮ ಪಾದದಲ್ಲಿ ಕೇಂದ್ರಿಕರಿಸಿ ಬ್ರಹ್ಮ ಭೂತ ವೇದಿಕೆಯ ಮೇಲೆ ಇಡಲ್ಪಟ್ಟವನಾಗಿ ತನ್ನ ಐಹಿಕ ಶರೀರವನ್ನು ಬಿಟ್ಟು ಕೊಟ್ಟನು. ಅವನ ಪತ್ನಿ ರಾಣಿ ಆರ್ಚಿಯು ತನ್ನ ಪತಿಯನ್ನು ಅನುಸರಿಸಿದಳು. ಈ ಐಹಿಕ ಜಗತ್ತಿನಲ್ಲಿ ಪ್ರತಿ ಮಾನವ ಜೀವಿಗೂ ಅಲ್ಪ ಜೀವಿತ ಕಾಲವಿದ್ದರೂ ಭಕ್ತಿಪೂರ್ವಕ ಸೇವೆಯಲ್ಲಿ ತೊಡಗಿರುವವರು, ಮನೆಗೆ, ಅಂದರೆ ಪರಮಾತ್ಮನಲ್ಲಿಗೆ ತೆರಳುವುದಕ್ಕೆ ಕಾರಣ ಅವರು ವಾಸ್ತವವಾಗಿ ಮೋಕ್ಷದ ಹಾದಿಯಲ್ಲಿರುವುದು. ಅಂಥ ವ್ಯಕ್ತಿಗಳಿಗೆ ಲಭ್ಯವಿಲ್ಲವೆನ್ನುವುದು ಯಾವುದೂ ಇಲ್ಲ.

## ಅಧ್ಯಾಯ - 8

# ಪ್ರಚೇತಸರಿಗೆ ಈಶ್ವರನ ಉಪದೇಶ

(ಪ್ರಚೇತಸರು ಪ್ರಚೆನ್ನಭರ್ಹಿ ಪುತ್ರರು ಹಾಗು ದೊರೆ ಪೃಥುವಿನ ಮರಿಮಕ್ಕಳು. ಶಿವನು ಪ್ರಚೇತಸರಿಗೆ ಅಂತಿಮವಾಗಿ ಮೋಕ್ಷವನ್ನು ಒದಗಿಸುವಂಥ ಅವರ ವೃತ್ತಿಪರ ಕರ್ತವ್ಯಗಳನ್ನು ನೆರವೇರಿಸಬೇಕೆಂದು ಉಪದೇಶಿಸಿದನು).

ದೊರೆ ಪೃಥುವಿನ ನಿಧನದ ನಂತರ ಅವನ ಹಿರಿಯ ಮಗ ವಿಜಿತಸ್ವನು ಚಕ್ರವರ್ತಿಯಾದನು. ಅವನು ತನ್ನ ಸಹೋದರರಿಗೆ ತನ್ನ ತಂದೆ ತನಗೆ ನೀಡಿದ್ದ ಸಾಮ್ರಾಜ್ಯವನ್ನು ಹಂಚಿದನು. ಚಕ್ರವರ್ತಿ ವಿಜಿತಸ್ವನಿಗೆ ಅಂತರ್ಧಾನನೆಂಬ ಹೆಸರೂ ಇತ್ತು. (ಮೊದಲು ವಿಜಿತಸ್ವನು ಸ್ವರ್ಗದೊಡೆಯನಾದ ಇಂದ್ರನನ್ನು ಮುದಗೊಳಿಸಿದ್ದು ಅವನಿಂದ ಅಂತರ್ಧಾನನೆಂದು ಬಿರುದನ್ನು ಪಡೆದಿದ್ದನು). ಅಂತರ್ಧಾನನಿಗೆ ಪಾವಕ, ಪವಮಾನ ಮತ್ತು ಶುಚಿಯೆಂಬ ಮೂವರು ಪುತ್ರರು. ಮೊದಲು ಈ ಮೂವರು ವ್ಯಕ್ತಿಗಳು ಅಗ್ನಿಯ ಉಪದೇವತೆಗಳಾಗಿದ್ದು ವಸಿಷ್ಠ ಮಹಾಮುನಿಯ ವರದಿಂದ ಅಂತಾರ್ಧಾನ ಮಹಾರಾಜನ ಪುತ್ರರಾದರು. ಹೀಗಾಗಿ ಅವರು ಅಗ್ನಿ ದೇವರುಗಳಷ್ಟೇ ಶಕ್ತಿಯುಳ್ಳವರಾಗಿದ್ದು ಅವರು ಅತೀಂದ್ರಿಯ ಶಕ್ತಿಯ ಗುರಿಯನ್ನು ಸಾಧಿಸಿದ್ದು ಮತ್ತೆ ಅಗ್ನಿದೇವನ ಉಪದೇವತೆಗಳಾಗಿ ಸ್ಥಾನವನ್ನು ಪಡೆದರು. ಮಹಾರಾಜ ಅಂತರ್ಧಾನನಿಗೆ ಸಭಸ್ವತಿ ಎಂಬ ಮತ್ತೊಬ್ಬಳು ಮಡದಿಯಿದ್ದು ಅವಳಿಂದ ಅವನು ಹವಿರ್ಧನನೆಂಬ ಪುತ್ರನನ್ನು ಪಡೆದನು.

ಮಹಾರಾಜ ಅಂತರ್ಧಾನನು ರಾಜ್ಯಭಾರಕ್ಕೆ ಸಂಬಂಧಿಸಿದ ಕರ್ತವ್ಯಗಳ ಆಚರಣೆಯಿಂದ ನಿವೃತ್ತನಾದರೂ ವಿವಿಧ ಯಾಗ ಯಜ್ಞಾದಿಗಳನ್ನು ನೆರೆವೇರಿಸುವಲ್ಲಿ ತೊಡಗಿದನು. ಭಗವಂತನನ್ನು ಅರಾಧಿಸುವ ಮೂಲಕ ಅವನು ಬಹುಬೇಗನೆ ದೇವ ಲೋಕವನ್ನು ತಲುಪಿದನು. ಹವಿರ್ಧನನಿಗೆ ವಿವಿಧ ವಿಧದ ಫಲಪ್ರದ ಯಾಗಗಳನ್ನು ಮಾಡುವಲ್ಲಿ ತಜ್ಞನಾಗಿದ್ದ ಹಾಗೂ ಅತೀಂದ್ರಿಯ ಯೋಗದಲ್ಲಿ ನಿಷ್ಣಾತನಾಗಿದ್ದ ಬರ್ಹಿಸುತನೆಂಬ ಶಕ್ತಿಶಾಲಿ ಮಗನಿದ್ದನು. ಅವನನ್ನು ಪ್ರಜಾಪತಿ ಎಂತಲೂ ಕರೆಯ ಲಾಗುತ್ತಿತ್ತು. ಪ್ರಚೇನ್ನಬಾರ್ಹಿ ಎಂಬುದಾಗಿಯೂ ಹೆಸರಾದ ಬರ್ಹಿಸುತನಿಗೆ ಬ್ರಹ್ಮನು ತುಂಬಾ ಚೆಲುವೆಯಾಗಿದ್ದ ಶತಧೃತಿಯೆಂಬ ಸಾಗರನ ಮಗಳನ್ನು ವಿವಾಹವಾಗಬೇಕೆಂದು ಆಜ್ಞಾಪಿಸಿದನು. ಪ್ರಚೇನ್ನಬರ್ಹಿಯು ಶತಧೃತಿಯಿಂದ ಹತ್ತು ಮಕ್ಕಳನ್ನು ಪಡೆದು ಅವರೆಲ್ಲರೂ ಪ್ರಚೇತಸರೆಂದು ಕರೆಯಲ್ಪಟ್ಟರು. ಈ ಎಲ್ಲಾ ಪ್ರಚೇತಸರು ವಿವಾಹವಾಗ ಬೇಕೆಂದು ಆಜ್ಞಾಪಿಸಲ್ಪಟ್ಟಾಗ ಅವರೆಲ್ಲರೂ ಸಾಗರವನ್ನು ಪ್ರವೇಶಿಸಿ ಹತ್ತು ಸಾವಿರ ವರ್ಷಗಳ ಕಾಲ ಯಜ್ಞಯಾಗಾದಿ ಹಾಗೂ ತಪಸ್ಸನ್ನು ಮಾಡಿದರು. ಹೀಗೆ ಅವರು ಎಲ್ಲ ವಿಷಯಗಳ ಒಡೆಯನಾದ ಭಗವಂತನನ್ನು ಆರಾಧಿಸಿದರು. ಪ್ರಚೇನಬಾರ್ಹಿಯ

ಪುತ್ರರೆಲ್ಲರೂ ಯಜ್ಞಯಾಗಾದಿಗಳನ್ನು ನಡೆಸಲು ಮನೆಯಿಂದ ಹೊರಟಾಗ ಅವರು ಪರಮ ಸತ್ಯದ ಬಗ್ಗೆ ಅವರಿಗೆ ಭೋಧಿಸುವ ಶಿವನನ್ನು ಭೇಟಿಯಾದರು.

ಶಿವನು ಆ ಯುವಕರಿಗೆ ಯಾವ ವ್ಯಕ್ತಿಯು ಪ್ರತಿಯೊಂದನ್ನು ನಿಯಂತ್ರಿಸುವ ಶ್ರೀ ಕೃಷ್ಣಪರಮಾತ್ಮನಿಗೆ ಶರಣಾಗುತ್ತಾನೋ ಅವನು ವಾಸ್ತವವಾಗಿ ತನಗೆ ಪ್ರಿಯನಾದವನು ಎಂದು ಹೇಳಿದನು. ಒಂದು ನೂರು ಜನ್ಮಗಳಲ್ಲಿ ಯಾವಾತನು ತನ್ನ ವೃತ್ತಿಪರ ಕರ್ತವ್ಯಗಳನ್ನು ನೆರವೇರಿಸುತ್ತಾನೋ ಅವನು ಬ್ರಹ್ಮನ ಸ್ಥಾನವನ್ನು ಆಕ್ರಮಿಸಿಕೊಳ್ಳಲು ಅರ್ಹನಾಗುತ್ತಿದ್ದು ಅವನಿನ್ನೂ ಉನ್ನತವಾದದ್ದನ್ನು ಸಾಧಿಸಿದರೆ ಅವನು ಶಿವನನ್ನು ಸಮೀಪಿಸಬಹುದು. ಶ್ರೀ ಕೃಷ್ಣ ಪರಮಾತ್ಮ ಅಥವಾ ವಿಷ್ಣುವಿಗೆ ಪರಿಶುದ್ಧ ಭಕ್ತಿಯ ಸೇವೆಯನ್ನು ಸಲ್ಲಿಸಿ ನೇರವಾಗಿ ಶರಣಾಗತನಾದವನು ತತ್‌ಕ್ಷಣದಲ್ಲೇ ದೇವಲೋಕಗಳಿಗೆ ಪ್ರವೇಶವನ್ನು ಪಡೆಯುತ್ತಾನೆ. ಈ ಐಹಿಕ ಜಗತ್ತು ವಿನಾಶ ಹೊಂದಿದ ನಂತರ ಶಿವ ಹಾಗೂ ಇನ್ನಿತರ ಉಪದೇವತೆಗಳು ಈ ಲೋಕವನ್ನು ಪ್ರವೇಶಿಸುತ್ತಾರೆ. ಈಶ್ವರನು ಜೀವನದ ಅತ್ಯುನ್ನತ ಗುರಿಯನ್ನು ಸಾಧಿಸಲು ಅತ್ಯುತ್ತಮ ಮಂತ್ರವಾದ ಒಂದನ್ನು ಪಠಿಸಿದನು. ಆದ್ದರಿಂದ ಅವನು ಯುವಕರು ಈ ಮಂತ್ರವನ್ನು ಆಲಿಸಬೇಕೆಂದು ಬಯಸಿದನು. "ಓ ಪರಮಾತ್ಮನೇ ನಿನಗೆ ಜಯವಾಗಲಿ. ಆತ್ಮ ಸಾಕ್ಷಾತ್ಕಾರ ಮಾಡಿಕೊಂಡವರೆಲ್ಲೆಲ್ಲ ನೀನೇ ಅತ್ಯುನ್ನತನಾದವನು. ನೀನು ನನಗೂ ಪವಿತ್ರತಮನಾಗಿರಲಿ ಎಂದು ಆಶಿಸುತ್ತೇನೆ. ನೀನು ನೀಡುವ ಪರಿಪೂರ್ಣ ಸೂಚನೆಗಳ ಗುಣದಿಂದ ನೀನು ಪೂಜಾರ್ಹನು. ನೀನು ಉನ್ನತಾತ್ಮನಾದ್ದರಿಂದ ನಾನು ನಿನಗೆ ಅತ್ಯುನ್ನತ ಜೀವಿಯೆಂಬುದಾಗಿ ಹವಿಸ್ಸನ್ನು ಸಲ್ಲಿಸುತ್ತೇನೆ. ನಿನ್ನ ನಾಭಿಯಿಂದ ಉಗಮಿಸುವ ಕಮಲ ಪುಷ್ಪದ ಗುಣದಿಂದಾಗಿ ಎಲೈ ಭಗವಂತನೇ, ನೀನೇ ಸೃಷ್ಟಿಯ ಮೂಲ. ನೀನು ಇಂದ್ರಿಯಗಳ ಮತ್ತು ಇಂದ್ರಿಯಗಳ ವಿಷಮಗಳ ಅತ್ಯುನ್ನತ ನಿಯಂತ್ರಕನು. ನೀನು ಸರ್ವಸ್ವನಾದ ವಾಸುದೇವ, ನೀನು ಆರು ವಿಷದ ಪರಿವರ್ತನೆಗಳಿಂದ (ಅವೆಂದರೆ ಹಸಿವು, ಬಾಯಾರಿಕೆ, ದುಃಖ, ಭ್ರಮೆ, ವೃದ್ಧಾಪ್ಯ ಮತ್ತು ಸಾವು) ಇವುಗಳಿಂದ ಭಾಧಿತನಾಗದವನು. ನೀನು ಕರ್ತೃ. ಇಂದ್ರಿಯ ಚಟುವಟಿಕೆಗಳು ಹಾಗೂ ಅವುಗಳ ಕರ್ಮಗಳ ಉನ್ನತ ನಿಯಂತ್ರಕನು. ಆದ್ದರಿಂದ ಶರೀರ, ಬುದ್ಧಿ ಮತ್ತು ಆಲೋಚನೆಯ ನಿಯಂತ್ರಕನು. ನೀನು ರುದ್ರನೆಂದು ಕರೆಯಲಾಗಿರುವ ಅಹಂಮಿಕೆಯ ಅತ್ಯುನ್ನತ ನಿಯಂತ್ರಕ. ನೀನು ಜ್ಞಾನದ ಮತ್ತು ವೈದಿಕ ವಿಧಿವಿಧಾನಗಳಿಗೆ ಸಂಬಂಧಿಸಿದ ಚಟುವಟಿಕೆಗಳ ಮೂಲ, ಶಿವನು ಪ್ರಚೇತಸನಿಗೆ ದೊರೆಗಳಾಗಿ ಅವರು ತಮ್ಮ ಕರ್ತವ್ಯಗಳನ್ನು ಪರಿಶುದ್ಧ ಹೃದಯದಿಂದ ನೆರವೇರಿಸಿ ಎಲ್ಲ ಶುಭಗಳನ್ನು ತಂದಿರುವಂಥ ಭಗವಂತನ ಪದ್ಮಪಾದಗಳಲ್ಲಿ ಏಕಾಗ್ರಚಿತ್ತವನ್ನಿರಿಸಿ ಅವರಿಗೆ ತಿಳಿಸಲಾದ ಪ್ರಾರ್ಥನೆಗಳನ್ನು ಪಠಿಸಬೇಕೆಂದನು. ಶಿವನು ದೊರೆಯ ಪುತ್ರರಿಗೆ ಹೇಳಿದನು: "ಭಗವಂತನು ಪ್ರತಿಯೊಬ್ಬರ ಹೃದಯದಲ್ಲೂ ವಾಸವಾಗಿದ್ದಾನೆ. ಅವನು ನಿಮ್ಮ ಹೃದಯಗಳಲ್ಲೂ ಇದ್ದಾನೆ. ಆದ್ದರಿಂದ ಭಗವಂತನ ವೈಭವಗಳನ್ನು ಪಠಿಸಿ ಸತತವಾಗಿ ಅವನನ್ನು ಕುರಿತು ಧ್ಯಾನಿಸಿ. ನನ್ನ ಪ್ರೀತಿಯ ರಾಜಕುಮಾರರೇ, ಪ್ರಾರ್ಥನಾ ರೂಪದಲ್ಲಿ, ಪವಿತ್ರನಾಮಸ್ಮರಣೆಯನ್ನು ಮಾಡುವಂಥ ಯೋಗವಿದ್ಯೆಯನ್ನು ನಾನು

ರೂಪಿಸಿದ್ದೇನೆ. ನೀವೆಲ್ಲರೂ ಈ ಮುಖ್ಯ ಸ್ತೋತ್ರವನ್ನು ನಿಮ್ಮ ಮನಸ್ಸಿಗೆ ತಂದುಕೊಂಡು ಉನ್ನತ ಋಷಿಗಳಾಗುವ ಸಲುವಾಗಿ ಅದನ್ನು ಉಳಿಸಿಕೊಳ್ಳುತ್ತೇವೆಂಬ ವಚನವನ್ನು ನೀಡಿ. ಉನ್ನತ ಮುನಿಯಂತೆ ಮೌನವಾಗಿ ಕ್ರಿಯೆಗೈಯುವುದರಿಂದ ಹಾಗೂ ಗಮನವನ್ನು ಮತ್ತು ಭಕ್ತಿಯನ್ನು ನೀಡುವ ಮೂಲಕ ನೀವು ಈ ವಿಧಾನವನ್ನು ಅಭ್ಯಾಸ ಮಾಡಬೇಕು. ಪ್ರಾರ್ಥನೆಯನ್ನು ನಮಗೆ ಮೊದಲು ಬ್ರಹ್ಮನು-ಅಂದರೆ ಎಲ್ಲಾ ಜೀವಿಗಳ ಒಡೆಯನು-ತಿಳಿಸಿಕೊಟ್ಟನು. ಭೃಗುವಿನ ನೇತೃತ್ವದಲ್ಲಿನ ಸೃಷ್ಟಿಕರ್ತರು ಸೃಷ್ಟಿಸಬಯಸಿದ್ದರಿಂದ ಅವರಿಗೆ ಈ ಪ್ರಾರ್ಥನೆಗಳನ್ನು ಭೋಧಿಸಲಾಯಿತು".

ಶ್ರೀ ಕೃಷ್ಣ ಪರಮಾತ್ಮನಲ್ಲೇ ಮಗ್ನನಾಗಿರುವ ಮನಸ್ಸುಳ್ಳ, ಗಮನವಿಡುವಿಕೆ ಮತ್ತು ಗೌರವದಿಂದ ಈ ಸ್ತೋತ್ರವನ್ನು ಪಠಿಸುವ ಶ್ರೀ ಕೃಷ್ಣ ಭಕ್ತನು ವಿಳಂಬವಿಲ್ಲದೆಯೇ ಜೀವನದಲ್ಲಿ ಅತ್ಯುನ್ನತ ಪರಿಶುದ್ಧತೆಯನ್ನು ಸಾಧಿಸುತ್ತಾನೆ. ಈ ಲೌಕಿಕ ಜಗತ್ತಿನಲ್ಲಿ ವಿವಿಧ ರೀತಿಯ ಸಾಧನೆಗಳಿದ್ದರೂ ಅವುಗಳಲ್ಲೆಲ್ಲ ಜ್ಞಾನಾರ್ಜನೆಯ ಸಾಧನೆಯನ್ನು ಅತ್ಯುನ್ನತವೆಂದು ಪರಿಗಣಿಸಿದೆ. ಏಕೆಂದರೆ ಒಬ್ಬನು ಪ್ರಜ್ಞಾಸಾಗರವನ್ನು ಜ್ಞಾನವೆಂಬ ನಾವೆಯ ಮೂಲಕವೇ ದಾಟಬೇಕು. ಇಲ್ಲದಿದ್ದರೆ ಆ ಸಾಗರವು ಅಭೇಧ್ಯವಾಗುತ್ತದೆ.

"ನನ್ನ ಪ್ರೀತಿಯ ರಾಜಪುತ್ರರೇ, ನಾನು ನಿಮಗೆ ಪಠಿಸಿರುವ ಪ್ರಾರ್ಥನೆಗಳು ಭಗವಂತನ, ಉನ್ನತಾತ್ಮಕನನ್ನು ಸಂಪ್ರೀತಗೊಳಿಸುವ ಉದ್ದೇಶವನ್ನು ಹೊಂದಿರುವಂಥದ್ದು. ಉನ್ನತ ವಿಧಿಗಳಷ್ಟೇ ಪರಿಣಾಮಕಾರಿಯಾದ ಈ ಪ್ರಾರ್ಥನೆಯನ್ನು ಪಠಿಸುವಂತೆ ನಾನು ಉಪದೇಶಿಸುತ್ತೇನೆ. ಈ ರೀತಿಯಾಗಿ ನೀವು ಪ್ರಬುದ್ಧರಾದಾಗ ನಿಮ್ಮ ಜೀವನ ಯಶಸ್ವಿಯಾಗುತ್ತದಲ್ಲದೆ ನೀವು ಆಶಿಸಿದಂಥ ಗುರಿಗಳನ್ನು ತಪ್ಪದೆ ಸಾಧಿಸುತ್ತೀರಿ".

## ನಾರದ ಮುನಿಯ ಉಪದೇಶ

ಶಿವನ ನಿರ್ಗಮನದ ನಂತರ ಪ್ರಚೇತಸರು ನೀರಿನಲ್ಲಿ ನಿಂತು ಶಿವನು ತಮಗೆ ಉಪದೇಶಿಸಿದ ಮಂತ್ರಗಳನ್ನು ಹತ್ತು ಸಾವಿರ ವರ್ಷಗಳ ಕಾಲ ಪಠಿಸಿದರು. ರಾಜಪುತ್ರರು ಹೀಗೆ ಪ್ರಾರ್ಥನೆ ಸಲ್ಲಿಸುತ್ತಿರುವಾಗ ರಾಜನಾದ ಅವರ ತಂದೆಯು ತನ್ನ ಅರಮನೆಯಲ್ಲಿ ಬೇರೆಯಾದ ರೀತಿಯಲ್ಲಿ ಫಲಪ್ರದ ಚಟುವಟಿಕೆಗಳಲ್ಲಿ ತೊಡಗಿದ್ದನು. ದೊರೆಯನ್ನು ಅಧ್ಯಾತ್ಮ ಜೀವನದತ್ತ ನಡೆಸಲು ಯೋಚಿಸಿದ ನಾರದ ಮುನಿಯು ಅವನಲ್ಲಿಗೆ ಹೋಗಲು ನಿರ್ಧರಿಸಿದನು. ನಾರದ ಮುನಿಯು ಪ್ರಚೀನ್‌ಬಾರ್ಹಿಸತ್ ದೊರೆಯನ್ನು ಸಮೀಪಿಸಿ ಜೀವನದ ಉದ್ದೇಶವು ಎಲ್ಲ ಸಂಕಷ್ಟಗಳನ್ನು ಹೋಗಲಾಡಿಸಿಕೊಂಡು ಸಂತೋಷವನ್ನು ಅನುಭವಿಸುವುದಾಗಿದೆ ಎಂದನು. ಆದರೆ ಇವೆರಡನ್ನು ಫಲಪ್ರದ ಚಟುವಟಿಕೆಗಳು ಅಥವಾ ತ್ಯಾಗದ ಮೂಲಕ ಸಾಧಿಸಲಾಗುವುದಿಲ್ಲ. ಅದಕ್ಕುತ್ತರವಾಗಿ ದೊರೆಯು ಋಷಿಯನ್ನು ಫಲಪ್ರದ ಚಟುವಟಿಕೆಗಳ ಬಂಧನಗಳನ್ನು ಹೋಗಲಾಡಿಸಿಕೊಳ್ಳಲು ಪರಿಶುದ್ಧ ಜ್ಞಾನದಲ್ಲಿ ಅವನಿಗೆ ಭೋಧನೆ ನೀಡಬೇಕೆಂದು ಕೇಳಿಕೊಂಡನು.

ನಾರದ ಮುನಿಯು ದೊರೆಗೆ ಗಗನದತ್ತ ನೋಡುವಂತೆ ತಿಳಿಸಿ ಅದರೊಳಗೆ ಕರುಣೆಯಿಲ್ಲದೆ, ದಯೆಯಿಲ್ಲದೆ ಯಜ್ಞಯಾಗಾದಿಗಳ ಸಂದರ್ಭದಲ್ಲಿ ಬಲಿಗೊಳಪಟ್ಟ ಪ್ರಾಣಿಗಳನ್ನು ನೋಡುವಂತೆ ತಿಳಿಸಿದನು. ನಾರದನು ದೊರೆಯ ಹೃದಯದಲ್ಲಿ ತ್ಯಾಗ ಮನೋಭಾವ ಹಾಗೂ ಜೀವನದ ಅತ್ಯುನ್ನತ ಗುರಿಯ ಬಗ್ಗೆ ಜ್ಞಾನೋದಯವನ್ನು ಉಂಟು ಮಾಡಬೇಕೆಂದು ಬಯಸಿದನು. ನಾರದನು ದೊರೆಗೆ ಅವನ ನಿಧನದ ನಂತರ ಅವನು ಮಾಡಿದ ಹಿಂಸೆಯ ವಿರುದ್ಧ ಪ್ರತೀಕಾರ ತೀರಿಸಿಕೊಳ್ಳಲು ಈ ಮೃಗಗಳು ಅವನ ದೇಹವನ್ನು ಚುಚ್ಚಲಿವೆ ಎಂದು ತಿಳಿಸಿದನು. ಮುನಿಯು ಅವನಿಗೆ ಪುರಂಜನನ ವೃತ್ತಾಂತವನ್ನು ತಿಳಿಸಿದನು.

ಹಿಂದೊಮ್ಮೆ ತನ್ನ ಉದಾತ್ತ ಚಟುವಟಿಕೆಗಳಿಗೆ ಹೆಸರಾಗಿದ್ದ ಪುರಂಜನನೆಂಬ ದೊರೆಯು ವಾಸವಾಗಿದ್ದನು. ಅವನಿಗೆ ಅವಿಜ್ಞಾತ ( ಅಪಖ್ಯಾತ) ಎಂಬ ಹೆಸರಿನ ಒಬ್ಬ ಗೆಳೆಯನಿದ್ದನು. ಅವಿಜ್ಞಾತನ ಚಟುವಟಿಕೆಗಳು ಏನೆಂಬುದು ಯಾರಿಗೂ ಅರ್ಥವಾಗಿರಲಿಲ್ಲ. (ಪ್ರತಿಯೊಬ್ಬ ಜೀವಿಯೂ ಪುರಂಜನ. ಪುರಂ ಎಂದರೆ ಶರೀರದೊಳಗೆ ಹಾಗೂ ಜನ ಎಂದರೆ ಜೀವಿತನಾದವನು). ಹೀಗೆ ಪ್ರತಿಯೊಬ್ಬರೂ ಪುರಂಜನೇಯ. ಅವಿಜ್ಞಾತನೆಂದರೆ ಅಪರಿಚಿತನಾದವನು. ದೊರೆ ಪುರಂಜನನು ವಾಸ ಮಾಡಲು ಸೂಕ್ತ ಸ್ಥಳವನ್ನು ಹುಡುಕುತ್ತಾ ಎಲ್ಲೆಡೆಗಳಲ್ಲೂ ಓಡಾಡಿದನು. ಆದರೆ ಅವನು ಇಚ್ಛಿಸಿದಂಥ ಸ್ಥಳವು ಸಿಗದಿದ್ದುದರಿಂದ ಅವನು ದುಃಖಿಗೊಂಡು ನಿರಾಶೆ ಹೊಂದಿದ್ದನು. ದೊರೆಯು ಇಂದ್ರಿಯಗಳ ಸುಖಗಳ ಬಗ್ಗೆ ಅನಿಯಮಿತ ಆಸೆಗಳನ್ನು ಹೊಂದಿದ್ದು ತನ್ನ ಆಸೆಗಳನ್ನು ಪೂರೈಸಿಕೊಳ್ಳುವ ಸಲುವಾಗಿ ಜಗತ್ತಿನಲ್ಲೆಲ್ಲಾ ಅಲೆದಾಡಿದನು. ಆದರೆ ಎಲ್ಲೆಡೆಯಲ್ಲೂ ಅವನಿಗೆ ಕೊರತೆಯಿರುವ ಭಾವನೆಯೇ ಉಂಟಾಯಿತು. ಒಮ್ಮೆ ಸುತ್ತಾಡುತ್ತಿರುವಾಗ ಅವನಿಗೆ ಇಂದ್ರಿಯ(ಭಾರತ ವರ್ಷ) ಎಂಬ ನಗರವು ಕಂಡಿತು. ಅದು ಒಂಬತ್ತು ದ್ವಾರಗಳನ್ನು ಹಾಗೂ ಪವಿತ್ರ ಸೌಕರ್ಯಗಳನ್ನು ಹೊಂದಿದ್ದಿತು(ಶರೀರವನ್ನು ಒಂಬತ್ತು ದ್ವಾರಗಳುಳ್ಳ, ಎರಡು ಕಿವಿಗಳು, ಎರಡು ಕಣ್ಣುಗಳು, ಎರಡು ಹೊಳ್ಳೆಗಳು, ಒಂದು ಬಾಯಿ, ಒಂದು ಶಿಶ್ನ, ಮತ್ತು ಒಂದು ಗುದನಾಳ ಇರುವ ನಗರವೆಂದು ಕರೆಯಲಾಗಿದೆ). ಅವನು ಕಂಡ ನಗರವು ಅತ್ಯುತ್ತಮವಾದದ್ದನ್ನೆಲ್ಲ ಹೊಂದಿದ್ದಿತು. ನಗರದಲ್ಲಿ ಸುತ್ತಾಡುತ್ತಿರುವಾಗ ದೊರೆಗೆ ಸುಂದರಿಯಾದ ತರುಣಿಯೊಬ್ಬಳ ಸಂಪರ್ಕವಾಯಿತು. ಅವಳ ಜೊತೆ ಹತ್ತು ಸೇವಕರಿದ್ದು, ಪ್ರತಿ ಸೇವಕನೂ ನೂರಾರು ಪತ್ನಿಯೊರೊಡನಿದ್ದನು. ಹೆಂಗಸನ್ನು ಎಲ್ಲ ಬದಿಗಳಿಂದ ಐದು ಹೆಡೆಗಳ ಸರ್ಪವು ಸಂರಕ್ಷಿಸುತ್ತಿದ್ದಿತು. ಅವಳು ಸೂಕ್ತನಾದ ಪತಿಯನ್ನು ದೊರಕಿಸಿಕೊಳ್ಳುವ ಬಗ್ಗೆ ಆತಂಕಗೊಂಡಿದ್ದಂತೆ ಕಂಡಿತು. (ಜೀವಂತನಾದವನೊಬ್ಬನಲ್ಲಿ ಸತ್ವಯುತ ಶಕ್ತಿಯ ಐದು ವಿಧವಾದ ವಾಯುವನ್ನು ಪ್ರಾಣ, ಅಪಾನ, ವ್ಯಾನ, ಸಮಾನ ಮತ್ತು ಉದಾನ ಒಳಗೊಂಡಿರುತ್ತದೆ) ಕೇವಲ ಗಾಳಿಯನ್ನು ಸೇವಿಸುತ್ತಲೇ ಸರ್ಪವು ಬದುಕಿರ ಬಹುದಾದ್ದರಿಂದ ಸತ್ವವನ್ನು ಸರ್ಪವೊಂದಕ್ಕೆ ಹೋಲಿಸಲಾಗುತ್ತದೆ. ವಾಯುವು ಕೊಂಡೊಯ್ಯುವ ಸತ್ವವನ್ನು ಪ್ರತೀಹಾರ ಅಥವ ಅಂಗರಕ್ಷಕನೆಂದು ವರ್ಣಿಸಲಾಗಿದೆ. ಬುದ್ಧಿ ಶಕ್ತಿಯನ್ನು ಪ್ರತಿನಿಧಿಸುವ ಹೆಂಗಸು

ಪತಿಯೊಬ್ಬನಿಗಾಗಿ ಹುಡುಕಾಡುತ್ತಿದ್ದಳು. ಪುರಂಜನ ಮಹಾರಾಜನು ಹೆಂಗಸಿನ ಸೌಂದರ್ಯಕ್ಕೆ ಮನಸೋತನು. ಅವನು ಅವಳನ್ನು ಮಾತನಾಡಿಸಿದನಲ್ಲದೆ ಅವಳ ಆಗಮನದ ಉದ್ದೇಶವನ್ನು ಹಾಗೂ ಅವಳೇನನ್ನು ಮಾಡಲು ಪ್ರಯತ್ನಿಸುತ್ತಿದ್ದಾಳೆ ಎಂಬುದನ್ನು ತಿಳಿದುಕೊಳ್ಳಲು ಬಯಸಿದನು. ದೊರೆಯು ಅವಳ ಅಂಗರಕ್ಷಕರು ಹಾಗೂ ಅವರ ಸಂವಾದವನ್ನು ಕುರಿತು ತಿಳಿದು ಕೊಳ್ಳಲು ಬಯಸಿದನು. ಅವಳ ಸೌಂದರ್ಯವನ್ನು ಹಾಡಿ ಹೊಗಳಿದನು. ಹೆಂಗಸು ಅದಕ್ಕೆ ಉತ್ತರವಾಗಿ ತನಗೆ ಜನ್ಮವಿತ್ತವರು ಯಾರೆಂಬುದು ತಿಳಿಯದಿರುವುದರಿಂದ ಅಧಿಕಾರಯುತವಾಗಿ ಮಾತನಾಡಲಾರೆನೆಂದಳು. ಅವಳು ಎಲ್ಲದರ ಬಗ್ಗೆಯೂ ಅಮಾಯಕತೆಯನ್ನು ವ್ಯಕ್ತಪಡಿಸಿದಳು. ಹೇಗಾದರೂ ಅವಳು ತನ್ನೊಂದಿಗಿದ್ದ ಪುರುಷರು ಹಾಗೂ ಸ್ತ್ರೀಯರು ಅವಳ ಬಳಿ ಸದಾ ಎಚ್ಚರದಿಂದಿರುವ ಸರ್ಪವು ಅವಳು ನಿದ್ರಿಸುತ್ತಿರುವಾಗಲೂ ನಗರವನ್ನು ಕಾಪಾಡುತ್ತದೆಯೆಂದಳು. ದೊರೆಯು ತನ್ನ ಇಂದ್ರಿಯಗಳನ್ನು ತೃಪ್ತಿಪಡಿಸಿಕೊಳ್ಳುವ ಆಸೆಯನ್ನು ಹೊಂದಿರುವುದರಿಂದ ಅವಳು ಹಾಗೂ ಅವಳ ಸಹಚರಿಗಳು ಅವನ ಆಸೆಗಳನ್ನು ಪೂರೈಸಲು ಸಾಧ್ಯವಾದದ್ದನ್ನೆಲ್ಲ ಮಾಡುತ್ತೇವೆಂದು ಹೇಳಿದರು. ಅವಳು ಅವನಿಗಾಗಿ ಒಂಬತ್ತು ದ್ವಾರಗಳುಳ್ಳ ನಗರವೊಂದನ್ನು ಏರ್ಪಡಿಸಿದ್ದು ಅವನೊಂದಿಗೆ ಸೇರಿಕೊಳ್ಳುವ ನಿರೀಕ್ಷೆಯನ್ನು ವ್ಯಕ್ತಪಡಿಸಿದಳು. ಅವಳು ಮುಂದುವರಿದು ಐಹಿಕ ಜಗತ್ತಿನಲ್ಲಿ ಗೃಹಸ್ಥನೊಬ್ಬನ ಜೀವನವು ಧರ್ಮ, ಅರ್ಥ, ಕಾಮ ಪೂರೈಕೆ ಮುಂತಾದವನ್ನು ತಂದೀಯುತ್ತವೆ ಎಂದಳು. ಉನ್ನತ ಲೋಕಗಳಿಗೆ ಅವನನ್ನು ಕೊಂಡಯ್ಯಲು ಅನುವಾಗುವಂಥ ತ್ಯಾಗಗಳನ್ನು ಪರಿಣಾಮಗಳನ್ನು ಅವನು ಮೆಚ್ಚಬಲ್ಲವ ನಾಗಿದ್ದು ಈ ಬಗೆಯ ಸಂತೋಷವು ಅತಿಶಯರಾದವರಿಗೆ ಅಪರಿಚಿತವಾದ ವೆಂದಳು. ಗೃಹಸ್ಥನೊಬ್ಬನ ಜೀವನವು ತನಗೊಬ್ಬನಿಗೇ ಅಲ್ಲದೆ ಪಿತೃಗಳು, ಉಪದೇವತೆಗಳು, ಮುನಿಗಳು ಹಾಗೂ ಇತರರಿಗೆ ಮುದವನ್ನು ತಂದೀಯುತ್ತವೆ ಎಂದಳು. ಅವನು ಪ್ರಖ್ಯಾತ, ಅದ್ಭುತ ಹಾಗೂ ಸುಂದರನಾಗಿರುವುದರಿಂದ ಅವಳು ಅವನನ್ನು ಪತಿಯಾಗಿ ಸ್ವೀಕರಿಸುತ್ತೇನೆಂದಳು. ಇದಲ್ಲದೆ ಪುರಂಜನನು ಅವಳು ಧೃಡಕಾಯನಾಗಿದ್ದು ಹೆಂಗಸರ ಕಷ್ಟಗಳನ್ನು ಮುಕ್ತಗೊಳಿಸ ಬಲ್ಲವನಾಗಿದ್ದನು.

ನಾರದ ಮುನಿಯು ಮುಂದುವರಿದು ಅವರಿಬ್ಬರೂ-ಗಂಡಸು ಮತ್ತು ಹೆಂಗಸು-ಪರಸ್ಪರರನ್ನು ಅರಿಯುವ ಮೂಲಕ ಪರಸ್ಪರರನ್ನು ಬೆಂಬಲಿಸುತ್ತ ನಗರವನ್ನು ಪ್ರವೇಶಿಸಿ ಒಂದು ನೂರು ವರ್ಷಗಳ ಕಾಲ ಸಂತೋಷವನ್ನು ಅನುಭವಿಸಿದರು. ಮುನಿಯೆಂದನು: ಒಂಬತ್ತು ದ್ವಾರಗಳಲ್ಲಿ ಐದು ದಕ್ಷಿಣಕ್ಕೆ ಮುಖ ಮಾಡಿದ್ದು, ಎರಡು ಪಶ್ಚಿಮದ ಕಡೆಗೂ(ಏಳು ದ್ವಾರಗಳಲ್ಲಿ-ಎರಡು ಕಣ್ಣುಗಳು, ಎರಡು ಕಿವಿಗಳು, ಎರಡು ಹೊಳ್ಳೆಗಳು ಹಾಗೂ ಒಂದು ಬಾಯಿ), ಐದು ಎದುರು ಮುಖನಾಗಿಯೂ ಇದ್ದು ಇವನ್ನು ಪೂರ್ವದ ಕಡೆಗಿರುವ ದ್ವಾರಗಳೆಂದು ವಿವರಿಸಲಾಗಿದೆ. ಎದುರುಗಡೆ ನೋಡುವುದೆಂಬುದರ ಅರ್ಥ ಸೂರ್ಯನತ್ತ ನೋಡುವುದೆಂದಿದ್ದು ಇದನ್ನು ಪೂರ್ವದ್ವಾರವೆಂದು ವಿವರಿಸಲಾಗಿದೆ. ಉತ್ತರ ಹಾಗೂ ದಕ್ಷಿಣ ದ್ವಾರಗಳು ಎರಡು ಕಿವಿಗಳನ್ನು ಹಾಗೂ ಪಶ್ಚಿಮ ದ್ವಾರವು ಗುದದ್ವಾರ ಹಾಗೂ ಜನನೇಂದ್ರಿಯಗಳನ್ನು ಪ್ರತಿನಿಧಿಸುತ್ತವೆ. ಪೂರ್ವದ ದಿಕ್ಕಿಗಿರುವ

ದ್ವಾರಗಳು ಕದ್ಯೋತ ಮತ್ತು ಅವಿರ್ಮುಖಿಯೆಂದು ಹೆಸರಾಗಿದ್ದು ಅವೆರಡೂ ಒಂದೇ ಸ್ಥಳದಲ್ಲಿವೆ. ಈ ದ್ವಾರಗಳ ಮೂಲಕ ದೊರೆಯು ದ್ಯುಮನ ಎಂಬ ಗೆಳೆಯನೊಂದಿಗೆ ವಿಭ್ರಜಿತ ನಗರಕ್ಕೆ ಹೋಗುತ್ತಿದ್ದನು. (ಕದ್ಯೋತ ಮತ್ತು ಅವಿರ್ಮುಖಿ ಎಂಬ ಹೆಸರುಗಳ ಅರ್ಥ "ಮಿಣುಕು ಹುಳ" ಮತ್ತು "ದೀಪದ ಬೆಳಕು" ಎಂದು. ಇದು ಎಡಗಡೆಯ ಕಣ್ಣಿಗೆ ಕಡಿಮೆ ನೋಡುವ ಸಾಮರ್ಥ್ಯವಿದೆ ಎಂಬುದನ್ನು ಸೂಚಿಸುತ್ತದೆ. ದ್ಯುಮನವೆಂದರೆ ಸೂರ್ಯ. ಈ ಎರಡು ಕಣ್ಣುಗಳು ಪೂರ್ವದ ಕಡೆಗಿದ್ದು ಸೂರ್ಯನ ನೆರವಿಲ್ಲದೆಯೇ ಅವು ತಾವಾಗಿಯೇ ನೋಡಲಾಗುವುದಿಲ್ಲ). ಎರಡು ಹೊಳ್ಳೆಗಳು ನಳಿನಿ ಮತ್ತು ನಾಳಿನಿಯೆಂದು ಹೆಸರುಗಳನ್ನು ಹೊಂದಿದ್ದು ಅವೆರಡೂ ಒಂದೇ ಸ್ಥಳದಲ್ಲಿವೆ. ದ್ವಾರದ ಮೂಲಕ ದೊರೆಯು ಅವಧೂತನೆಂಬುವನೊಡನೆ ನಗರಕ್ಕೆ ಹೋಗುತ್ತಿದ್ದನು. (ನಳಿನಿ ಮತ್ತು ನಾಳಿನಿ ಎಂಬುದು ಹೊಳ್ಳೆಯ ನಾಳಗಳಾಗಿದ್ದು ಇಂದ್ರಿಯ ಸುಖದ ಕಂಪನ್ನು ಅನುಭವಿಸುತ್ತ ಒಬ್ಬರು ಉಶ್ವಾಸ ನಿಶ್ವಾಸಗಳನ್ನು ಸಾಧ್ಯಮಾಡಿಕೊಳ್ಳುತ್ತಾರೆ). ಐದನೇ ದ್ವಾರವಾದ ಬಾಯಿಗೆ ಮುಖ್ಯ ಅಥವಾ ಮುಖಂಡನೆಂದು ಹೆಸರಿಡಲಾಗಿದೆ. ಈ ದ್ವಾರದ ಮೂಲಕ ರಸಜ್ಞ ಅಥವಾ ವಿಪನ ಎಂಬ ಗೆಳೆಯರೊಡಗೊಂಡು ದೊರೆಯು ಬಹುದನ ಮತ್ತು ಅಪಾನ ಎಂಬ ಎರಡು ಸ್ಥಳಗಳನ್ನು ಸಂದರ್ಶಿಸುತ್ತಿದ್ದನು.

ದಕ್ಷಿಣ ದ್ವಾರಕ್ಕೆ ಪಿತೃವೆಂದು ಹೆಸರಿದ್ದು ಉತ್ತರದ ದ್ವಾರ ದೇವಹು (ಎರಡು ಕಿವಿಗಳು ಉತ್ತರ ಮತ್ತು ದಕ್ಷಿಣ ಭಾಗಗಳಲ್ಲಿವೆ. ದಕ್ಷಿಣ ಭಾಗ ಯಾವಾಗಲೂ ಅಧ್ಯಾತ್ಮ ಗುರುವಿನಿಂದ ಕೇಳಲು ಕಾತುರವಾಗಿರುತ್ತದೆ).

ಪಶ್ಚಿಮ ದಿಕ್ಕಿನಿಂದ ದ್ವಾರಗಳಿಗೆ ಅಸುರಿ ಮತ್ತು ಅರನಿರ್ತಿ ಎಂದು ಹೆಸರು. ಮೊದಲನೆಯದು ಲೌಕಿಕ ಸುಖಕ್ಕಾಗಿದ್ದರೆ ಎರಡನೆಯದು ಮೃತ್ಯುವಿಗಾಗಿ. ಸಾಮಾನ್ಯ ಜೀವಿಯು ತನ್ನ ಪ್ರಸ್ತುತ ಶರೀರವನ್ನು ತ್ಯಜಿಸಿದಾಗ ಅವನು ಗುದದ್ವಾರದ ಮೂಲಕ ಹಾದು ಹೋಗುತ್ತಾನೆ.

ಕಾಲುಗಳು ಹಾಗೂ ಬಾಹುಗಳು ತಾವಾಗಿಯೇ ಏನನ್ನೂ ನೋಡಲು ಸಮರ್ಥವಾಗದಿರುವುದರಿಂದ ಅದನ್ನು ಅಂಧವೆಂದು ಕರೆಯಲಾಗಿದೆ ಎಂಬುದಾಗಿ ಮುನಿಯು ಹೇಳಿದನು. ದೊರೆಯು ಇವುಗಳೊಂದಿಗೆ-ಕಾಲುಗಳು ಹಾಗೂ ಕೈಗಳೊಂದಿಗೆ, ಅಂಧರೆಂದು ಕರೆಯಲ್ಪಟ್ಟವುಗಳೊಂದಿಗೆ ನಗರದ ಯಾವುದೇ ಭಾಗಕ್ಕೆ ಹೋಗುತ್ತಿದ್ದ ಅವನು ಕೆಲವೊಮ್ಮೆ ತನ್ನ ಮುಖ್ಯ ಸೇವಕ "ವಿನೂಚಿನಾ"ನೆಂಬ ಹೆಸರಿನ ಬುದ್ಧಿಯೊಂದಿಗೆ ಖಾಸಗಿ ಮನೆಗಳಿಗೆ ಹೋಗುತ್ತಿದ್ದ. (ಈ ಸಮಯದಲ್ಲಿ ಅವನ ಹೆಂಡತಿ ಮತ್ತು ಮಕ್ಕಳಿಂದ ಭ್ರಮೆ, ತೃಪ್ತಿ ಮತ್ತು ಸಂತಸವು ಉಂಟಾಗುತ್ತಿದ್ದವು).

ಪುರಂಜನ ದೊರೆಯು ತನ್ನ ರಾಣಿ ಹಾಗೂ ತನ್ನ ಮಡದಿಯ ಎಲ್ಲ ಅಭಿಲಾಷೆಗಳನ್ನು ಪೂರೈಸುತ್ತಿದ್ದರೂ ಕೂಡ ವಿವಿಧ ರೀತಿಯ ಮಾನಸಿಕ ಕಟ್ಟು ಕಲ್ಪನೆಗಳಿಗೆ ಸಿಲುಕಿಕೊಂಡು, ಚಟುವಟಿಕೆಗಳಲ್ಲಿ ತೊಡಗಿ, ಐಹಿಕ ಜಾಣ್ಮೆಯ ನಿಯಂತ್ರಣಕ್ಕೆ ಸಂಪೂರ್ಣವಾಗಿ ಸಿಲುಕಿ ವಂಚನೆಗೊಳಗಾದನು. ತನ್ನ ಮಡದಿ ಮಾಡಿದುದೆಲ್ಲವನ್ನು

ದೊರೆಯು ಮಾಡುತಿದ್ದ. (ಬುದ್ದಿಯು ಅಹಂ ಅಸ್ತಿತ್ವದಲ್ಲಿರುವ ಸ್ಥಳವಾಗಿದ್ದು ಬುದ್ಧಿಯನ್ನು ಜಾಣ್ಮೆಯನ್ನು ಜಾಣ್ಮೆ ನಡೆಸುತ್ತದೆ. ಹೃದಯದೊಳಗಿರುವ ಜೀವಿಯು ಈ ಬುದ್ಧಿಯನ್ನು ಅನುಸರಿಸುತ್ತಾನೆ. ಜಾಣ್ಮೆಯನ್ನು ರಾಣಿಯಾಗಿ ತೋರಿಸಿದ್ದು ಮಾನಸಿಕ ನಿಯಂತ್ರಣದ ಕೆಳಗೆ ಆತ್ಮವು, ದೊರೆಯು ತನ್ನ ಹೆಂಡತಿಯನ್ನು ಹಿಂಬಾಲಿಸುವಂತೆ ಐಹಿಕ ಬುದ್ಧಿ, ಶಕ್ತಿಯನ್ನು ಅನುಸರಿಸುತ್ತದೆ. ನಿರ್ಣಯವೇನೆಂದರೆ: ಈ ಜೀವಿಯ ಬಂಧನಕ್ಕೆ ಐಹಿಕ ಬುದ್ದಿಶಕ್ತಿಯು ಕಾರಣ. ಈ ಬಂಧನದಿಂದ ಕಳಚಿಕೊಳ್ಳಬೇಕಾದರೆ ಒಬ್ಬರ ಅಧ್ಯಾತ್ಮಿಕ ಬುದ್ದಿಶಕ್ತಿಯನ್ನು ಪಡೆದುಕೊಳ್ಳಬೇಕು).

ಈ ರೀತಿಯಾಗಿ ಪುರಂಜನ ಮಹಾರಾಜನು ತನ್ನ ಮಡದಿಯ ದಾಸನಾಗಿ ವಂಚಿಸಲ್ಪಟ್ಟನು. ಒಟ್ಟಿನಲ್ಲಿ ಅಧ್ಯಾತ್ಮಿಕ ಮುಂದುವರಿಕೆಗಾಗಿ ಒಬ್ಬರು ಸ್ತ್ರೀಯ ಸಹವಾಸವನ್ನು ಬಿಡಬೇಕು.

ಕಥೆಯನ್ನು ಮುಂದುವರಿಸಿದ ನಾರದ ಮುನಿಗಳು ಪುರಂಜನ ಮಹಾರಾಜನು ಒಮ್ಮೆ ಬೇಟೆಗಾಗಿ ಅರಣ್ಯಕ್ಕೆ ತೆರಳಿದನು. ಅವನು ತನ್ನೊಂದಿಗೆ ಆ ರಥದಲ್ಲಿ ಎರಡು ಸ್ಫೋಟಿಸಬಲ್ಲ ಬಾಣಗಳನ್ನು ತೆಗೆದುಕೊಂಡು ಹೊರಟನು. ರಥವು, ಗಾಲಿಗಳು ಮತ್ತು ಸುತ್ತುವ ಒಂದು ಅಕ್ಷದ ಮೇಲೆ ನಿಂತಿತ್ತು. ರಥದ ಮೇಲೆ ಎರಡು ಸ್ತಂಭಗಳಿದ್ದು ಅದಕ್ಕೆ ರಕ್ಷಾಕವಚವನ್ನು ಬಿಗಿದು ಅದರಲ್ಲಿ ಐದು ಶಸ್ತ್ರಾಸ್ತ್ರಗಳನ್ನು ಹಾಗೂ ಏಳು ಕವಚಗಳನ್ನು ಇಡಲಾಯಿತು. ಐದು ಆಯುಧಗಳು ಮತ್ತು ಏಳು ಕಂದರಗಳಿದ್ದವು. ರಥದ ಅಲಂಕಾರಗಳೆಲ್ಲವನ್ನೂ ಸುವರ್ಣದಿಂದ ತಯಾರಿಸಲಾಗಿತ್ತು. (ಇದು ಜೀವಿಯ ಐಹಿಕ ಶರೀರವು ಹೇಗೆ ಬಾಹ್ಯ ಶಕ್ತಿಯ ಮೂರು ಗುಣಗಳ ನಿಯಂತ್ರಣದಲ್ಲಿದೆ ಎಂಬುದನ್ನು ವಿವರಿಸುತ್ತದೆ. ದೇಹವೇ ರಥವಾಗಿದ್ದು ಜೀವಿಯು ಆ ಶರೀರದ ಒಡೆಯ. ಶರೀರದ ಒಡೆಯನನ್ನು ದೇಹಿಯೆಂದು ಕರೆದಿದ್ದು ಅವನು ಹೃದಯದೊಳಗೆ ವಾಸವಾಗಿದ್ದಾನೆ. ಜೀವಿಯನ್ನು ಒಬ್ಬ ಸಾರಥಿಯು ನಡೆಸುತ್ತಾನೆ. ರಥವು ಐಹಿಕ ಸ್ವಭಾವದ ಮೂರು ಗುಣಗಳಾದ ಸತ್ತ್ವ, ರಜಸ್ ಮತ್ತು ತಮಸ್ ಗುಣಗಳಿಂದ ಮಾಡಲ್ಪಟ್ಟಿದ್ದು ಜೀವಿಯು ಸದಾ ಈ ಮೂರು ಗುಣಗಳಿಂದ ಪ್ರಭಾವಿಸಲ್ಪಡುತ್ತಾನೆ. ಈ ಮೂರು ಗುಣಗಳನ್ನು ಮೂರು ಧ್ವಜಗಳೆಂದು ವಿವರಿಸಲಾಗಿದೆ. ರಾಜನು ಮೃಗಗಳನ್ನು ಕೊಲ್ಲಲು ಅರಣ್ಯಕ್ಕೆ ಹೋಗುತ್ತಿದ್ದುದರಿಂದ ಅದು ದೊರೆಯ ಮೇಲೆ ತಮಸ್ ಗುಣವು ಹೊಂದಿರುವ ಪ್ರಭಾವವನ್ನು ತೋರಿಸುತ್ತದೆ. ಪಂಚ ಪ್ರಸ್ಥವೆಂದು ಅರಣ್ಯದ ಹೆಸರು ಐದು ಇಂದ್ರಿಯಗಳನ್ನು ಸೂಚಿಸುತ್ತದೆ. ಶರೀರವು ಕೈ, ಕಾಲು, ನಾಲಗೆ, ಗುದದ್ವಾರ ಮತ್ತು ಜನನೇಂದ್ರಿಯ ಎಂಬ ಪಂಚಮ ಕಾರ್ಯ ಗುಣಗಳನ್ನು ಹೊಂದಿರುತ್ತದೆ. ಇವುಗಳ ಮೂಲಕ ದೇಹವು ಐಹಿಕ ಜೀವನವನ್ನು ಅನುಭವಿಸುತ್ತದೆ. ರಥವನ್ನು ಐದು ಕುದುರೆಗಳು ಅಂದರೆ ಕಣ್ಣು, ಕಿವಿ, ಮೂಗು, ತ್ವಚೆ ಮತ್ತು ನಾಲಗೆಯು ಈ ಐದು ಇಂದ್ರಿಯಗಳು ನಡೆಸುತ್ತವೆ. ಈ ಇಂದ್ರಿಯ ಅವಯವಗಳು ಸುಲಭವಾಗಿ ಇಂದ್ರಿಯ ವಸ್ತುಗಳತ್ತ ಆಕರ್ಷಣೆಗೊಳ್ಳುತ್ತವೆ. ಪರಿಣಾಮವಾಗಿ ಕುದುರೆಗಳು ವೇಗವಾಗಿ ಚಲಿಸುವುವೆಂದು ವಿವರಿಸಲಾಗಿದೆ. ರಥದಲ್ಲಿ ದೊರೆಯು ಎರಡು ಸ್ಫೋಟಕ ವಸ್ತುಗಳನ್ನು ಇಟ್ಟುಕೊಂಡಿದ್ದು ಅವನ್ನು ಅಹಂಕಾರಕ್ಕೆ

(ಅಹಂ ಅಥವಾ ಸುಳ್ಳು ಅಹಂ) ಹೋಲಿಸಲಾಗಿದೆ. ಸುಳ್ಳು ಅಹಂಮಿಕೆಯು ಎರಡು ಮನೋಭಾವಗಳನ್ನು ಹೊಂದಿರುತ್ತದೆ. "ನಾನೇ ಶರೀರ ಮತ್ತು ನನ್ನ ಶಾರೀರಿಕ ಸಂಬಂಧಗಳೆಲ್ಲವೂ ನನಗೆ ಸೇರಿದವು." ರಥದ ಎರಡು ಚಕ್ರಗಳನ್ನು, "ಸರಳ ಜೀವನ" ಮತ್ತು "ಧಾರ್ಮಿಕ ಜೀವನ" ವೆಂಬ ಎರಡು ಚಲಿಸುವ ಸೌಲಭ್ಯಗಳಿಗೆ ಹೋಲಿಸಲಾಗುತ್ತದೆ. ಐದು ವಿಧದ ಅಡೆತಡೆಗಳು ದೇಹದೊಳಗೆ ಸಂಚರಿಸುತ್ತಿರುವ - ಪ್ರಾಣ, ಅಪಾನ, ಉದಾನ, ಸಮಾನ ಮತ್ತು ವ್ಯಾನ - ಎಂಬ ಐದು ವಿಧಗಳು ವಾಯುವನ್ನು ಪ್ರತಿನಿಧಿಸುತ್ತವೆ, ಶರೀರವು ಏಳು ಹೊದಿಕೆಗಳಿಂದ - ತ್ವಚೆ, ಸ್ನಾಯು, ಕೊಬ್ಬು, ರಕ್ತ, ಎಲುಬು, ಮೂಳೆ ಮತ್ತು ವೀರ್ಯದಿಂದ ಮುಚ್ಚಲ್ಪಟ್ಟಿವೆ. ಹಗ್ಗವು ಬುದ್ಧಿಯನ್ನು ಪ್ರತಿನಿಧಿಸುತ್ತವೆ. "ನಿದ" ಎಂಬುದು ಹೃದಯವಾಗಿದ್ದು ಅಲ್ಲಿ ಜೀವಿಯು ವಾಸವಾಗಿದ್ದಾನೆ. ಕಳವಳ (ಪರಿತಾಪ) ಮತ್ತು ಭ್ರಮೆಯನ್ನು ಜೀವದ ಎರಡು ಭಾಗಗಳೆಂದು ವಿವರಿಸಲಾಗಿದೆ. ಚಿನ್ನದ ಆಭರಣಗಳು ಹಾಗೂ ಉಡುಪು ಜೀವಿಯು ರಜೋಗುಣದಿಂದ ಅಂದರೆ ಕಾಮುಕತೆಯ ಗುಣದಿಂದ ಪ್ರಭಾವಿತಗೊಂಡಿದ್ದಾನೆ ಎಂಬುದನ್ನು ಸೂಚಿಸುತ್ತದೆ. ಐಶ್ವರ್ಯವಂತನಾದವನು ಸಾಮಾನ್ಯವಾಗಿ ಕಾಮುಕತೆಯಿಂದ ನಿರ್ದೇಶಿಸಲ್ಪಡುತ್ತಾನೆ. ಹನ್ನೊಂದು ಭಟರು, ಹತ್ತು ಇಂದ್ರಿಯಗಳು ಮತ್ತು ಬುದ್ಧಿಯನ್ನು ಪ್ರತಿನಿಧಿಸುತ್ತವೆ).

ನಾರದ ಮುನಿಯು ಐಹಿಕ ದೇಹದ ಸ್ಥಾನಮಾನವನ್ನು ಹಾಗೂ ಅದರೊಂದಿಗೆ ಜೀವಿಯ ಸಂಬಂಧವನ್ನು ವಿವರಿಸುತ್ತಾನೆ. ದೊರೆಗೆ ತನ್ನ ರಾಣಿಯ ಸಹವಾಸದಿಂದ ಒಂದು ಗಳಿಗೆಯೂ ದೂರವಿರುವುದು ಅಸಾಧ್ಯವಾಗಿತ್ತು. ಆ ಒಂದು ನಿರ್ದಿಷ್ಟ ದಿನ ಬೇಟೆಯಾಡುವ ಹಂಬಲದಿಂದ ಸ್ಫೂರ್ತಿ ಪಡೆದವನಾಗಿ ದೊರೆಯು ರಾಣಿಯಿಲ್ಲದೆ ಬೇಟೆಯ ಸಾಹಸಕ್ಕೆ ಹೊರಟನು. ಇವನು ಬೇಟೆಯಾಡುತ್ತಿದ್ದಾಗ ಅನೇಕ ಮುಗ್ಧ ಪ್ರಾಣಿಗಳನ್ನು ಕೊಂದನು. ಕಾಮುಕತೆ ಮತ್ತು ಮೌಢ್ಯದ ವಿಧಾನಗಳಿಂದ ಪ್ರಭಾವಿತರಾದ ಮೂರ್ಖ ಜನರ ಅತಿರೇಕತೆಯನ್ನು ತಡೆಯಲು ವೇದಗಳು ಪ್ರಾಣಿ ಹತ್ಯೆಯನ್ನು ನಿಷೇಧಿಸುತ್ತವೆ. ವೈದಿಕ ಸಾಹಿತ್ಯದ ಸೂಚನೆಗಳ ಪ್ರಕಾರ ಕಾರ್ಯವೆಸಗುವ ಯಾರೇ ಆಗಲಿ ಫಲಪ್ರದ ಚಟುವಟಿಕೆಗಳಲ್ಲಿ ತೊಡಗುವುದಿಲ್ಲ ಎಂಬುದಾಗಿ ನಾರದ ಮುನಿಯು ಹೇಳುತ್ತಾನೆ (ಭಗವಂತನು ಭಗದ್ಗೀತೆ 16.23 ರಲ್ಲಿ ಹೇಳುತ್ತಾನೆ: ಯಾರು ಪುರಾಣ ಗ್ರಂಥಗಳಲ್ಲಿನ ಸೂಚನೆಗಳನ್ನು ಹೀನಾಯ ಮಾಡಿ ತನ್ನ ಆಮಿಷಗಳಿಗೆ ಅನುಗುಣವಾಗಿ ವರ್ತಿಸುತ್ತಾನೋ ಅಂಥವನಿಗೆ ಪರಿಪೂರ್ಣತೆಯಾಗಲಿ ಅಥವಾ ಸಂತಸವಾಗಲೀ ಇಲ್ಲವೇ ಉನ್ನತ ಗುರಿಯಾಗಲಿ ದೊರೆಯುವುದಿಲ್ಲ).

ಕರುಣಾಮಯಿಗಳಾದ ಜನರು ದೊರೆಯು ಮುಗ್ಧ ಪ್ರಾಣಿಗಳನ್ನು ಕೊಲ್ಲುವುದನ್ನು ಕಂಡು ದುಃಖಿತರಾಗುತ್ತಾರೆ. ಬೇಟೆಯ ಸಾಹಸ ಯಾತ್ರೆಯ ನಂತರ ದೊರೆಯು ತನ್ನ ಅರಮನೆಗೆ ಹಿಂತಿರುಗಿ ವಿಶ್ರಾಂತಿಯನ್ನು ತೆಗೆದುಕೊಂಡನು. ಅನಂತರ ದೊರೆಯು ತನ್ನ ರಾಣಿಯ ಬಳಿಗೆ ಹೋದನು. ಆವನು ಪರಿಚಾರಕರಿಂದ ರಾಣಿಯ ಯೋಗಕ್ಷೇಮವನ್ನು ಕುರಿತು ವಿಚಾರಿಸಿದನು. ಆದರೆ ದೊರೆಯು ಹಿಂದಿನಂತೆ ಆಕರ್ಷಣೆಗೆ ಒಳಗಾಗಲಿಲ್ಲ.

ಆವನು ತನ್ನ ಹೆಂಡತಿಯ ಬಗ್ಗೆ ಸೇವಕರನ್ನು ವಿಚಾರಿಸಿದಾಗ ಅವರು ರಾಜನಿಗೆ ರಾಣಿಯು ಹಾಸಿಗೆಯನ್ನು ಬಿಟ್ಟು ನೆಲದ ಮೇಲೆ ಮಲಗಿದ್ದಾಳೆಂಬುದಾಗಿ ಹೇಳಿದರು. ಅದನ್ನು ಕಂಡ ದೊರೆಯು ಭಯ ವಿಹ್ವಲನಾದ. ಆನಂತರ ದೊರೆಯು ರಾಣಿಯನ್ನು ಮುದಗೊಳಿಸುವ ಸಲುವಾಗಿ ಅವಳನ್ನು ವಿವಿಧ ರೀತಿಗಳಲ್ಲಿ ವಿಚಾರಿಸಿದನು.

ನಾರದ ಮುನಿಯು ಮುಂದುವರಿದು ಪುರಂಜನ ರಾಜನು ತನ್ನ ರಾಣಿಗೆ ಸಂಪೂರ್ಣವಾಗಿ ವಶನಾಗಿ ಅವರಿಬ್ಬರೂ ಸುಖದಲ್ಲಿ ಮುಳುಗುವ ಮೂಲಕ ಕಾಲವನ್ನು ಕಳೆದರು ಎಂದರು. ಪುರಂಜನ ರಾಜನು ತನ್ನ ಹೆಂಡತಿಯ ಗುಲಾಮನಾಗಿ ಆತ್ಮಸಾಕ್ಷಾತ್ಕಾರದ ಅರ್ಥವನ್ನು ಅರಿಯಲಾರದಾದ. ತನ್ನ ರಾಣಿಯಿಂದ ದೊರೆಯು ಒಂದು ಸಾವಿರದ ಒಂದು ನೂರು ಪುತ್ರಿಯರನ್ನು ಪಡೆದು ಅವರು ಕೋಮಲರಾಗಿ, ಉದಾರರಾಗಿ ಹಾಗೂ ಸದ್ಗುಣಗಳಿಂದ ಕೂಡಿದ್ದರು. ಅವನ ಪುತ್ರರು ಹಾಗೂ ಪುತ್ರಿಯರೆಲ್ಲರೂ ವಿವಾಹವಾಗಿ ಅನೇಕ ಮಕ್ಕಳನ್ನು ಪಡೆದಾಗ ರಾಜ್ಯವು ಜನರಿಂದ ತುಂಬಿ ಹೋಯಿತು. ಆದರೆ ಪುತ್ರರು ಹಾಗೂ ಮೊಮ್ಮಕ್ಕಳು ದೊರೆಯು ಯಾವುದರ ಬಗ್ಗೆ ವ್ಯಾಮೋಹವನ್ನು ಬೆಳೆಸಿಕೊಂಡಿದ್ದನೋ ಅಂಥ ಐಶ್ವರ್ಯವನ್ನು ಲೂಟಿ ಹೊಡೆಯುವಂತಾದರು ಎಂದನು.

ನಾರದ ಮುನಿಯು ಮುಂದುವರೆದು ಹೇಳಿದನು: ಪುರಂಜನ ರಾಜನು ಉಪದೇವತೆಗಳು, ಪಿತೃಗಳು, ಹಾಗೂ ಇತರರನ್ನು ವಿವಿಧ ವಿಧಿಗಳ ಮೂಲಕ ಆರಾಧಿಸಿ ಈ ಎಲ್ಲ ವಿಧಿಗಳೂ ಮೃಗಗಳನ್ನು ಕೊಲ್ಲುವ ಬಯಕೆಯಿಂದ ಸ್ಫೂರ್ತಿಗೊಂಡವಾದ್ದರಿಂದ ಭಯಂಕರವಾಗಿ ತೋರಿದವು. ದೊರೆಯು ವೃದ್ಧನಾಗಿ ದಾರುಣ ಜೀವನವನ್ನು ನಡೆಸಿದನು.

ಕಥೆಯನ್ನು ಮುಂದುವರಿಸಿದ ನಾರದ ಮುನಿಯು ಗಂಧರ್ವ ಲೋಕದ ಚಂದವೇದನೆಂಬ ದೊರೆಯು ತನ್ನ ಮುನ್ನೂರರವತ್ತು ಸೈನಿಕರಿಂದ ಒಡಗೂಡಿ ಪುರಂಜನನ ನಗರದ ಮೇಲೆ ಧಾಳಿ ಮಾಡಿ ಅದನ್ನು ಲೂಟಿ ಮಾಡಿದನು. ಆದರೆ ನಗರವನ್ನು ಐದು ಹೆಡೆಗಳ ಸರ್ಪವೊಂದು ಕಾಯುತ್ತಿತ್ತು. (ಒಬ್ಬರು ನಿದ್ರಿಸುತ್ತಿರುವಾಗ ಜೀವ ವಾಯುವು ವಿವಿಧ ಕನಸುಗಳಲ್ಲಿ ಸಕ್ರಿಯವಾಗಿ ಉಳಿಯುತ್ತದೆ. ಸರ್ಪದ ಐದು ಹೆಡೆಗಳು ಜೀವವಾಯುವನ್ನು ಐದು ವಿಧದ ವಾಯುವು ಆವರಿಸಿವೆ ಎಂಬುದನ್ನು ಸೂಚಿಸುತ್ತದೆ) ಐದು ಹೆಡೆ ಸರ್ಪವು ಏಕಾಕಿಯಾಗಿ ಒಂದು ನೂರು ವರ್ಷಗಳ ಕಾಲ ಗಂಧರ್ವರೊಡನೆ ಸೆಣೆಸಾಡಿತು. ಸರ್ಪವು ಒಂಟಿಯಾಗಿ ಹೋರಾಡಿದ್ದರಿಂದ ಅದು ದುರ್ಬಲವಾಗಿ, ತನ್ನ ಅತ್ಯಂತ ನಿಕಟ ಗೆಳೆಯನು ದುರ್ಬಲವಾಗುತ್ತಿರುವುದನ್ನು ಕಂಡ ಪುರಂಜನ ರಾಜ ಮತ್ತು ನಾಗರಿಕರು ಧಾವಂತಗೊಂಡರು. ದೊರೆಯು ಸಾವನ್ನು ಸಮೀಪಿಸಿದ್ದನು.

ಈ ಘಟ್ಟದಲ್ಲಿ, ಅಜೇಯನಾದ ಕಾಲನ ಪುತ್ರಿಯು ತನ್ನ ಪತಿಗಾಗಿ ಜಗತ್ತಿನಾದ್ಯಂತ ಹುಡುಕಾಡುತ್ತಿದ್ದಳು. ಆದರೆ ಅವಳನ್ನು ಯಾರೂ ವಿವಾಹವಾಗಲು ಒಪ್ಪಲಿಲ್ಲ. (ಅವಳನ್ನು ಜರನೆಂಬ ಹೆಸರಿನ ವೃದ್ಧಾಪ್ಯದ ವಿಕಲತೆಯೆಂಬುದಾಗಿ ವಿವರಿಸಿದೆ, ಯಾರೂ ಅವಳ ಬಗ್ಗೆ ಆಸೆ ಪಡಲಿಲ್ಲ. ಯಾರೂ ಅವಳನ್ನು ವಿವಾಹವಾಗಲು

ಕಾತರಿಸಲಿಲ್ಲ). ಕಾಲನ ಪುತ್ರಿಯು ತುಂಬಾ ನತದೃಷ್ಟಳು. ಅವಳ ಹೆಸರೇ ದುರ್ಭಗ (ನತದೃಷ್ಟೆ). ಏನೇ ಆಗಲಿ ಅವಳೊಮ್ಮೆ ಒಬ್ಬ ರಾಜನನ್ನು ಮುದಗೊಳಿಸಿ ಅವನು ಅವಳನ್ನು ಅಂಗೀಕರಿಸಿದ್ದರಿಂದಾಗಿ ಅವನಿಗೆ ವರವನ್ನಿತ್ತಳು. ನಾರದ ಮುನಿಯು ಹೇಗಾದರೂ ಕಾಲನ ಪುತ್ರಿಯು ತನ್ನನ್ನೇ (ನಾರದ) ವಿವಾಹವಾಗಲು ಬಯಸಿದಳು. ಅವನು ಅವಳನ್ನು ನಿರಾಕರಿಸಿದಾಗ ಅವಳು ಅವನು ದೀರ್ಘಕಾಲ ಎಂದೂ ಒಂದೆಡೆಯಲ್ಲಿ ನಿಲ್ಲದಂತಾಗಲಿ ಎಂದು ಶಪಿಸಿದಳು. ಆನಂತರ ಅವಳು ಭಯ ಎಂಬ ಹೆಸರಿನ ಯವನ ರಾಜನನ್ನು ತನ್ನ ಪತಿಯನ್ನಾಗಿ ಸ್ವೀಕರಿಸಿದಳು.

ಯವನರ ದೊರೆಯು ಅವಳಿಗೆ ದೀರ್ಘಕಾಲದ ನಂತರ ತನ್ನ ಒಪ್ಪಿಗೆಯನ್ನಿತ್ತನು. ದೊರೆಯೆಂದನು : “ಈ ಜಗತ್ತು ಫಲಪ್ರದ ಚಟುವಟಿಕೆಗಳಿಂದ ಕೂಡಿದ್ದು ನೀನು ಸಾಮಾನ್ಯವಾಗಿ ಯಾವ ಸಾಕ್ಷ್ಯಧಾರವೂ ಇಲ್ಲದೆ ಜನರ ಮೇಲೆ ಬೀಳಬಹುದು.ನನ್ನ ಸೈನಿಕರ ನೆರವನ್ನು ಪಡೆದು ಅವರಿಂದ ಯಾವ ವಿರೋಧವುಂಟಾಗದಿದ್ದರೂ ಅವರನ್ನು ಸಾಯಿಸಲೂ ಬಹುದು. ಯವನ ದೊರೆಯು ನಂತರ ಅವಳನ್ನು ಈ ಜಗತ್ತಿನೊಳಗೆ ಪುರಾವೆಗಳಿಲ್ಲದೆಯೇ ಕಾರ್ಯವೆಸಗಲು ಅನುಕೂಲವಾಗುವಂತೆ ಅವಳು ತನ್ನ ಸಹೋದರ ಪ್ರಜ್ವರ ವಿವಾಹವಾಗಬೇಕೆಂದು ತಿಳಿಸಿದನು. (ಪ್ರಜ್ವರನೆಂದರೆ ತೀವ್ರಜ್ವರ). ನಾರದ ಮುನಿಯು ಮುಂದುವರಿದು ಯವನ ದೊರೆ ಹಾಗೂ ಪ್ರಾಜ್ವರರು, ಕಾಲಕನ್ಯ ಮತ್ತು ಅವಳ ಸ್ನೇಹಿತರು ಜಗತ್ತಿನಲ್ಲೆಲ್ಲ ಪ್ರಯಾಣ ಮಾಡಲು ಪ್ರಾರಂಭಿಸಿದರು ಎಂದನು.

ಒಮ್ಮೆ ಅಪಾಯಕಾರಿ ಸೈನಿಕರು ಪುರಂಜನನ ನಗರದ ಮೇಲೆ ಧಾಳಿ ಮಾಡಿದರು. ನಗರವು ಸುಖವನ್ನು ನೀಡುವ ಸಲುವಾಗಿ ಸಂಪೂರ್ಣ ಪರಿವಾರವನ್ನು ಹೊಂದಿದ್ದರೂ ಅದು ವೃದ್ಧ ಸರ್ಪದಿಂದ ಸಂರಕ್ಷಿಸಲ್ಪಟ್ಟಿತ್ತು. (ಸರ್ಪ ಇಂದ್ರಿಯ ಸಾರ್ಥಕತೆಯಲ್ಲಿ ತೊಡಗಿರುವುದರಿಂದಾಗಿ ಅದನ್ನು ವೃದ್ಧ ಹಾಗೂ ದುರ್ಬಲ ಮನುಷ್ಯನಲ್ಲಿರುವ ಸಜೀವ ಶಕ್ತಿಗೆ ಹೋಲಿಸಲಾಗಿದೆ). ಕಾಲನ ಪುತ್ರಿಯಾದ ಕಾಲಕನ್ಯೆಯು ಸೈನಿಕರೊಂದಿಗೆ ನಗರವನ್ನು ಪ್ರವೇಶಿಸಿ ಪ್ರಜೆಗಳನ್ನು ಹಿಂಸಿಸಲು ತೊಡಗಿದಳು. (ದೇಹಕ್ಕೆ ಒಂಬತ್ತು ದ್ವಾರಗಳಿದ್ದು ವೃದ್ಧಾಪ್ಯದಿಂದ ಪೀಡನೆಗೊಂಡಾಗ ವಿವಿಧ ಕಾಯಿಲೆಗಳು ಈ ದ್ವಾರಗಳಲ್ಲಿ ದ್ವಿಗುಣಗೊಂಡು ದೇಹವನ್ನು ಪ್ರವೇಶಿಸುತ್ತದೆ. ಹೀಗೆ ದಾಳಿಗೊಳಗಾದ ಪುರಂಜನನು ಕಷ್ಟಕ್ಕೆ ಸಿಲುಕಿದ). ದೊರೆಯು ಗಂಧರ್ವರಿಂದ ಪರಾಭವಗೊಂಡು ಹಾಗೂ ಪ್ರಜ್ವರನಿಂದ ಪರಿತ್ಯಕ್ತಗೊಂಡು ಏಕಾಕಿಯಾಗಿ ಉಳಿದ ಯವನರಾಜನಾದನು. ನಗರಕ್ಕೆ ಬೆಂಕಿಯನ್ನಿಟ್ಟನು. (ವೈದಿಕ ವ್ಯವಸ್ಥೆಗೆ ಅನುಗುಣವಾಗಿ ಮೃತ ದೇಹವನ್ನು ಸುಡಲಾಗುತ್ತದೆ). ಸರ್ಪವನ್ನೂ ಸಹ ಸೆರೆ ಹಿಡಿಯಲಾಯಿತು. ಪುರಂಜನನು ತನ್ನ ಹೆಂಡತಿಯನ್ನೇ ಸ್ಮರಿಸುತ್ತ ತನ್ನ ದೇಹವನ್ನು ಬಿಟ್ಟಾಗ ಅವನು ತನ್ನ ಮುಂದಿನ ಜನ್ಮದಲ್ಲಿ ತುಂಬಾ ಸುಂದರಿಯಾದ ಹೆಂಗಸಾಗಿ, ವಿದರ್ಭನ ಮಗಳಾಗಿ ಜನಿಸಿದ. (ಭಗವದ್ಗೀತೆ 8.6. ಒಬ್ಬರು ಶರೀರವನ್ನು ತ್ಯಜಿಸುವಾಗ ಯಾವ ಸ್ಥಿತಿಯನ್ನು ಸ್ಮರಿಸುತ್ತಾರೋ ಆ ಸ್ಥಿತಿಯನ್ನೇ ತಪ್ಪದೆ ಗಳಿಸುತ್ತಾರೆ).

ವಿದರ್ಭ ದೊರೆಯ ಮಗಳಾದ ವೈದರ್ಭಿಯು ಆನಂತರ ಪಾಂಡು ರಾಜ್ಯದ ನಿವಾಸಿಯಾದ ಮಲಯಧ್ವಜನನ್ನು ವಿವಾಹವಾದಳು. ಅವನು ಶಕ್ತಿಶಾಲಿಯಾಗಿದ್ದ. ರಾಜರಾಣಿಯರು ಒಬ್ಬಳು ಪುತ್ರಿ ಹಾಗೂ ಏಳು ಪುತ್ರರನ್ನು ಪಡೆದು ಅವರು ಆನಂತರ ದ್ರಾವಿಡನಾಡೆಂದು ಕರೆಯಲಾದ ಭೂಪ್ರದೇಶದ ಒಡೆಯರಾದರು, (ಈ ಮಗಳು ಕೃಷ್ಣ ಪರಮಾತ್ಮನ ಪರಮ ಭಕ್ತಳು). ಏಳು ಪುತ್ರರು ಭಕ್ತಿಪೂರ್ವಕ ಸೇವೆಯ ಏಳು ಘಟ್ಟಗಳನ್ನು ಪ್ರತಿನಿಧಿಸುತ್ತಾರೆ - ಕೇಳುವುದು, ಪಠಿಸುವುದು, ಸ್ಮರಿಸುವುದು, ಪೂಜಿಸುವುದು, ಪ್ರಾರ್ಥಿಸುವುದು ಮತ್ತು ಅತಿಶಯವಾದ ಪ್ರೇಮಪೂರ್ವಕವಾಗಿ ಭಗವಂತನ ಪದ್ಮಪಾದಕ್ಕೆ ಸೇವೆ ಸಲ್ಲಿಸುವುದು. ನಾರದನು ಪ್ರಾಚೀನಬರ್ಹಿಸತನಿಗೆ ಮಲಯಧ್ವಜನ ಸಾವಿರಾರು ಪುತ್ರರು ಮನುವಿನ ಜೀವಿತದ ಕೊನೆಯವರೆಗೂ ಬದುಕಿದ್ದು ಜಗತ್ತನ್ನು ಸಂರಕ್ಷಿಸಿದರು ಎಂದು ಹೇಳಿದರು.

ಮಲಯಧ್ವಜನು ತನ್ನ ರಾಜ್ಯವನ್ನು ತನ್ನ ಪುತ್ರರಿಗೆ ಹಂಚಿ ಶ್ರೀ ಕೃಷ್ಣ ಪರಮಾತ್ಮನನ್ನು ಪೂಜಿಸುವ ಸಲುವಾಗಿ ಕುಲಾಚಲದಿಂದ ಹೊರಟನು. ಸತತ ಭಕ್ತಿಯಿಂದ ಐಹಿಕ ದೇಹವು ಆತ್ಮವಾಗಿರದಿದ್ದರೂ ಆತ್ಮವು ಐಹಿಕ ಶರೀರಕ್ಕೆ ಸಾಕ್ಷಿಯಾಗಿದೆ ಎಂಬುದರ ಬಗ್ಗೆ ದೊರೆಯು ಸಂಪೂರ್ಣ ತಿಳಿವಳಿಕೆಯನ್ನು ಪಡೆದನು. ವೈಯಕ್ತಿಕ ಆತ್ಮವು ಸ್ಥಳೀಯವಾಗಿದ್ದು ಉನ್ನಾತಾತ್ಮವು ಸರ್ವವ್ಯಾಪಿ ಎಂಬುದಾಗಿಯೂ ಅವನು ಅರಿತನು. ದೊರೆಯ ಮರಣದ ನಂತರ ರಾಣಿಯೂ ಮೃತಳಾದಳು. ನಾರದ ಮುನಿಯು ಪ್ರಾಚೀನಬರ್ಹಿಸತನಿಗೆ ಭಗವಂತನು ಎಲ್ಲ ಕಾರಣಗಳಿಗೂ ಕಾರಣೀಭೂತನಾಗಿದ್ದಾನೆಂದು ತಿಳಿಸಿದನು. ಕಥೆಯ ವಿವರಣೆಯನ್ವಯ ಆತ್ಮಸಾಕ್ಷಾತ್ಕಾರವನ್ನು ಕುರಿತ ಸೂಚನೆಯಾಗಿ ಈ ಘಟನೆಯನ್ನು ಪರಿಗಣಿಸಬಹುದಾಗಿದೆ.

ನಾರದ ಮುನಿಯು ಮುಂದುವರಿದು ಹೇಳಿದನು:" ಜೀವಿಯಾದ ಪುರಂಜನನು ತನ್ನದೇ ಸ್ವಯಂ ಕಾರ್ಯಕ್ಕೆ ಅನುಗುಣವಾಗಿ ವಿವಿಧ ರೀತಿಯ ಶರೀರಗಳಿಗೆ ವರ್ಗಾವಣೆಗೊಂಡು ಒಂದು, ಎರಡು, ಮೂರು, ನಾಲ್ಕು ಅಥವಾ ಅನೇಕ ಕಾಲುಗಳನ್ನು ಉಳ್ಳವನಾಗಿ ಅಥವಾ ಕಾಲಿಲ್ಲದವನಾಗಿ ಬದುಕನ್ನು ನಡೆಸಿದ". (ಒಂದು ಕಾಲನ್ನು ಹೊಂದಿರುವುದು ಭೂತ, ಎರಡು ಕಾಲುಗಳನ್ನು ಹೊಂದಿರುವವನು ಮಾನವ, ಮೂರು ಕಾಲುಳ್ಳವನು ವೃದ್ಧ, ನಾಲ್ಕು ಕಾಲುಗಳನ್ನುಳ್ಳವು ಮೃಗಗಳು, ಅನೇಕ ಕಾಲುಗಳನ್ನುಳ್ಳವು ಜರಿ. ಹಾಗೂ ಕೆಲವು ಜಲಚರಗಳು ಮತ್ತು ಕಾಲಿಲ್ಲದವು ಸರ್ಪಗಳು. ಪುರಂಜನನೆಂಬ ಹೆಸರು ವಿವಿಧ ರೀತಿಯ ಶರೀರಗಳನ್ನು ಹೊಂದಿ ಅವನ್ನು ಅನುಭವಿಸುವವನೆಂಬುದನ್ನು ಸೂಚಿಸುತ್ತದೆ.)

ಜೀವಿಯು ಐಹಿಕ ಬದುಕನ್ನು ಅನುಭವಿಸಲು ಬಯಸುವಾಗ ಅವನು ಒಬ್ಬ ಮಾನವನಾಗ ಬಯಸುತ್ತಾನೆ. ಇಲ್ಲಿ ಅವನು "ನಾನು" ಮತ್ತು "ನನ್ನದು" ಇವೆರಡನ್ನೇ ಕುರಿತು ಯೋಚಿಸುವುದರಿಂದ ಅವನು ಬಂಧನಕ್ಕೆ ಸಿಲುಕುತ್ತಾನೆ. ಹನ್ನೊಂದು ಇಂದ್ರಿಯಗಳು ಪುರಂಜನನ ಪುರುಷ ಗೆಳೆಯರು. ಈ ಇಂದ್ರಿಯಗಳ ಸಮಾಯೋಗವನ್ನು ಗೆಳತಿಯರೆನ್ನಲಾಗಿದ್ದು ಐದು ಹೆಡೆಗಳನ್ನು ಉಳ್ಳದ್ದು ಎಂದು ವಿವರಿಸಲಾಗಿರುವ

ಸರ್ಪವು ಐದು ಪರಿಚಲನೆಯ ಪ್ರಕ್ರಿಯೆಗಳನ್ನು ಉಂಟು ಮಾಡುವ ಜೀವ ವಾಯು. ಹನ್ನೊಂದನೇ ಇಂದ್ರಿಯವಾದ ಬುದ್ಧಿಯು ಇತರರನ್ನು ಆಳುತ್ತದೆ. ಎರಡು ಕಣ್ಣುಗಳು ಸದಾ ಕಾಲವೂ ವಿವಿಧ ಬಗೆಯ ಆಕಾರಗಳನ್ನು ನೋಡುವುದರಲ್ಲೇ ತೊಡಗಿರುತ್ತವೆ. (ಕಣ್ಣುಗಳನ್ನು ಕದ್ಯೂತ ಮತ್ತು ಅವಿಮುರ್ಖಿವೆಂದು, ಮಾತುಗಾರಿಕೆಯನ್ನು ವಿಪುನವೆಂದು, ರುಚಿಯನ್ನು ರಸಜ್ಞವೆಂದು ಕರೆಯಲಾಗುತ್ತದೆ.)

ನಾರದ ಮುನಿಯು "ಜೀವಿಗಳು ಅದೃಷ್ಟ, ಇತರ ಜೀವಿಗಳು ಅಥವಾ ಶರೀರ ಮತ್ತು ಬುದ್ಧಿಗೆ ಸಂಬಂಧಿಸಿದಂತೆ ವಿವಿಧ ಕಷ್ಟಕರ ಪರಿಸ್ಥಿತಿಗಳ ಜತೆ ಪ್ರಕ್ರಿಯಿಸಲು ಪ್ರಯತ್ನಿಸುತ್ತದೆ. ಆದರೂ ಪ್ರಕೃತಿ ನಿಯಮಗಳನ್ನು ಉಲ್ಲಂಘಿಸಲು ಪ್ರಯತ್ನಗಳು ನಡೆಯುತ್ತವಾದರೂ ಅವುಗಳಿಗೆ ಬದ್ಧವಾಗಿರಬೇಕು. ಮನುಷ್ಯನೊಬ್ಬ ತನ್ನ ತಲೆಯ ಮೇಲೆ ಒಂದು ಹೊರೆಯನ್ನು ಹೊರಬಹುದು. ಆದರೆ ಅದು ತುಂಬಾ ಭಾರವೆಂದು ಅವನಿಗನ್ನಿಸಿದಾಗ ಅವನು ಅದನ್ನು ಬೇರೆ ಹೆಗಲಿಗೆ ಬದಲಾಯಿಸಿಕೊಳ್ಳುತ್ತಾನೆ. ಅಂತಿಮವಾಗಿ ಅದೇ ಹೊರೆಯುನ್ನು ಒಂದು ಸ್ಥಳದಿಂದ ಬೇರೆ ಸ್ಥಳಕ್ಕೆ ವರ್ಗಾಯಿಸಿಕೊಳ್ಳುವುದಕ್ಕಿಂತಲೂ ಬೇರೆಯದಲ್ಲ. ಯಾರೂ ಫಲಪ್ರದ ಚಟುವಟಿಕೆ ಗಳನ್ನು ಭಗವಂತನನ್ನು ಹೊರಗಿಟ್ಟು ಬೇರೆಯದಾದ ಚಟುವಟಿಕೆಯನ್ನು ಸೃಷ್ಟಿಸುವ ಮೂಲಕ ವಿರೋಧಿಸಲಾಗದು. ಅಂತಿಮ ಪರಿಹಾರಕ್ಕೆ ನಾವು ಭಗವಂತನಿಗೆ ಮೊರೆ ಹೋಗಲೇ ಬೇಕು.

ಸದಾ ಕಾಲವೂ ದೈವ ಪ್ರಜ್ಞೆಯ ಪರಿಷ್ಕಾರದಲ್ಲಿ ತೊಡಗಿ ಅವನ ಚಟುವಟಿಕೆಗಳನ್ನು ಕುರಿತು ಕೇಳುತ್ತಿರುವವರು ಭಗವಂತನನ್ನು ಮುಖಾಮುಖಿಯಾಗಿ ಕಾಣಲು ಅರ್ಹರಾಗುತ್ತಾರೆ. ಯಾರು ಭಗವಂತನ ವೈಭವವನ್ನು ಕುರಿತು ಸದಾ ಆಲಿಸುತ್ತಿರುತ್ತಾರೋ ಅವರು ಹಸಿವು ಬಾಯಾರಿಕೆಗಳಂಥ ಬದುಕಿನ ಆವಶ್ಯಕತೆಗಳನ್ನು ಮರೆಯುತ್ತಾರೆ. ಭಗವಂತನನ್ನು ತಿಳಿದುಕೊಳ್ಳುವುದು ಕಷ್ಟಕರ. ಉನ್ನತರಾದ ಬ್ರಹ್ಮ, ಮಹೇಶ್ವರ, ದಕ್ಷ ಮತ್ತು ನಾರದ ಮುನಿಯನ್ನು ಒಳಗೊಂಡಂತೆ ಹಿರಿಯ ಋಷಿಗಳೂ ಸಹ ಅವನನ್ನು ಸಂಪೂರ್ಣವಾಗಿ ಅರ್ಥಮಾಡಿಕೊಂಡಿಲ್ಲ. ಅನಿಯಮಿತ ವೈದಿಕ ಜ್ಞಾನವನ್ನು ಅಭ್ಯಸಿಸಿದರೂ ಉಪದೇವತೆಗಳ ಆರಾಧನೆಯು ಒಬ್ಬರಿಗೆ ಪರಮಾತ್ಮನನ್ನು ಅರ್ಥಮಾಡಿಕೊಳ್ಳಲು ನೆರವಾಗುವುದಿಲ್ಲ. ಒಂದು ಕಾರಣರಹಿತ ಕರುಣೆಯನ್ನು ನೀಡುವಂಥ ಭಗವಂತನ ಭಕ್ತಿಪೂರ್ವಕ ಸೇವೆಯಲ್ಲಿ ಸದಾ ತೊಡಗಬೇಕು. ಅಂಥ ಸಮಯದಲ್ಲಿ ಜ್ಞಾನೋದಯವನ್ನು ಹೊಂದಿದ ಭಕ್ತನು ವೇದಗಳಲ್ಲಿ ಉಲ್ಲೇಖವಾಗಿರುವ ಎಲ್ಲ ಐಹಿಕ ಚಟವಟಿಕೆಗಳನ್ನು ಹಾಗೂ ವಿಧಿ ವಿಧಾನಗಳನ್ನು ಬಿಟ್ಟುಕೊಡುತ್ತಾನೆ. ಯಾರೂ ಹೃದಯವನ್ನು ಮುದಗೊಳಿಸುವಂಥ ಫಲಪ್ರದ ಚಟುವಟಿಕೆಗಳನ್ನು ಅಥವಾ ಅದನ್ನೇ ಜೀವನದ ಅಂತಿಮ ನುಡಿಯೆಂಬುದಾಗಿ ತೆಗೆದುಕೊಳ್ಳಕೊಡದು.

ನಾರದ ಮುನಿಯು ತನ್ನ ಮುಂದೆ ಅಥವಾ ಹಿಂದೆ ಏನಿದೆಯೆಂಬುದನ್ನೇ ತಿಳಿಯದೆ ಹುಲ್ಲನ್ನು ತಿನ್ನುತ್ತಿದ್ದ ಜಿಂಕೆಯ ವೃತ್ತಾಂತವನ್ನು ಹೇಳಿದನು. ಜಿಂಕೆಯು ಹಿಂದೆ

ಬೇಟೆಗಾರನಾಗಿದ್ದು ಅದು ಜಿಂಕೆಗೆ ತಿಳಿಯದಿರಬಹುದು. ಅದರಂತೆಯೇ ಹಿಂದುಮುಂದು ತಿಳಿಯದೆ ಸುಖವನ್ನು ಅನುಭವಿಸುವ ಪತಿಪತ್ನಿಯರು. ನಾರದ ಮುನಿಯು, ದೊರೆಗೆ ಎಲ್ಲ ಆಕರ್ಷಣೆಗಳನ್ನು ಬಿಟ್ಟುಕೊಟ್ಟು ಭಗವಂತನ ಪಾದಾರವಿಂದಗಳಲ್ಲಿ ಆಶ್ರಯ ಪಡೆಯಬೇಕೆಂದು ತಿಳಿಸಿದನು.

ಈ ಘಟ್ಟದಲ್ಲಿ ದೊರೆಯು ನಾರದನಿಗೆ ತನ್ನನ್ನು ಫಲಪ್ರದ ಚಟುವಟಿಕೆಗಳಲ್ಲಿ ತೊಡಗಿಸಿರುವ ಆಚಾರ್ಯರೇಕೆ ತನಗೆ ರಹಸ್ಯ ಜ್ಞಾನವನ್ನು ತಿಳಿಸಿಕೊಡಲಿಲ್ಲವೆಂಬುದಾಗಿ ಕೇಳಿದನು. ನಾರದ ಹಾಗೂ ಆಚಾರ್ಯರ ಬೋಧನೆಗಳಲ್ಲಿ ದ್ವಂದ್ವಗಳಿವೆ. ದೊರೆಯು ಈಗ ಭಕ್ತಿಪೂರ್ವಕ ಸೇವೆ, ಜ್ಞಾನ ಮತ್ತು ತ್ಯಾಗದ ಮಧ್ಯದಲ್ಲಿನ ವ್ಯತ್ಯಾಸಗಳನ್ನು ತಿಳಿದು ಕೊಂಡನು. ಈ ಜೀವನದಲ್ಲಿನ ತನ್ನ ಚಟುವಟಿಕೆಯ ಪರಿಣಾಮವನ್ನು ಅವನು ಮುಂದಿನ ಜನ್ಮದಲ್ಲಿ ಅನುಭವಿಸಬಹುದು.

ದೊರೆಯು ಹೇಳಿದನು : "ವೈದಿಕ ನಿರ್ಣಯಗಳನ್ನು ತಿಳಿದುಕೊಂಡಿರುವಂಥ ತಜ್ಞರೊಬ್ಬರು ತಮ್ಮ ಹಿಂದಿನ ಚಟುವಟಿಕೆಗಳ ಪರಿಣಾಮವಾಗಿ ಸಂತೋಷ ಅಥವಾ ದುಃಖವನ್ನು ಅನುಭವಿಸುತ್ತಾರೆ ಎಂಬುದಾಗಿ ಹೇಳುತ್ತಾರೆ. ಆದರೆ ವಾಸ್ತವವಾಗಿ ಹಿಂದಿನ ಮುಂದಿನ ಜನ್ಮದಲ್ಲಿ ಕಾರ್ಯಮಗ್ನವಾಗಿದ್ದ ಶರೀರವು ಈಗಾಗಲೇ ಹಾಳಾಗಿರುತ್ತದೆ. ಬೇರೆಯ ಶರೀರದಲ್ಲಿ ಆ ಕಾರ್ಯದ ಪ್ರತಿಕ್ರಿಯೆಗಳನ್ನು ಸಂತೋಷಿಸುವುದು ಅಥವಾ ಅನುಭವಿಸುವುದು ಹೇಗೆ ಸಾಧ್ಯವಾಗುತ್ತದೆ?" ಈ ಪ್ರಶ್ನೆಗೆ ನಾರದ ಮುನಿಯು ಉತ್ತರಿಸಿದನು. "ಜೀವಿಯು (ಅದಕ್ಕೆ ಎರಡು ವಿಧಗಳ ಶರೀರ - ಒಂದು ಸೂಕ್ಷ್ಮ, ಮತ್ತೊಂದು ಜಡ ) ಬುದ್ದಿ ಶಕ್ತಿ ಮತ್ತು ಅಹಂಮಿಕೆಯಿಂದ ಒಳಗೂಡಿದ ಶರೀರದಲ್ಲಿ ಕ್ರಿಯೆಗೈಯುತ್ತದೆ. ಒಟ್ಟು ಶರೀರವು ವಿನಾಶ ಹೊಂದಿದ ನಂತರ ಸೂಕ್ಷ್ಮ ಶರೀರವು ಸಂತೋಷ ಅಥವಾ ದುಃಖ ಪಡುವ ಸಲುವಾಗಿ ಅಲ್ಲಿಯೇ ಉಳಿದಿರುತ್ತದೆ. ಹೀಗೆ ಅಲ್ಲಿ ಯಾವ ಬದಲಾವಣೆಯೂ ಇಲ್ಲ (ಬೇಗುದಿ ಮತ್ತು ಸಂತೋಷದ ಮೂಲವು ಮನಸ್ಸು ಬುದ್ದಿಶಕ್ತಿ ಹಾಗೂ ಅಹಂಮಿಕೆಯೇ ಆಗಿದ್ದರೂ ಸಂತೋಷವನ್ನು ಅನುಭವಿಸಲು ಒಟ್ಟು ಶರೀರವು ಒಂದು ಉಪಕರಣವಾಗಿ ಅಗತ್ಯವಾಗುತ್ತದೆ. ಒಟ್ಟು ಶರೀರವು ಬದಲಾಗಬಹುದಾದರೂ ಸೂಕ್ಷ್ಮಶರೀರವು ಕ್ರಿಯೆಗೈಯುವುದನ್ನು ಮುಂದುವರಿಸುತ್ತದೆ. ಜೀವಿಯು ಮತ್ತೊಂದು ಮಾರ್ಗ ಶರೀರವನ್ನು ಪಡೆಯದ ಹೊರತು ಅವನು ಸೂಕ್ಷ್ಮ ಶರೀರ ಅಥವಾ ಜಡ ಶರೀರದಲ್ಲಿ ಮುಂದುವರಿಯಬೇಕಾಗುತ್ತದೆ).

ಜೀವಿಯು ಶಾರೀರಿಕ ನಿಯಮಗಳಾದ "ನಾನು ಮತ್ತು ನನ್ನದು" ಕಾಯುವದಕ್ಕಾಗಿಯೇ ಶ್ರಮಿಸುತ್ತಾನೆ. ಆದರೆ ಇವೆಲ್ಲವೂ ತಾತ್ಕಾಲಿಕವಾದ ಮಾನಸಿಕ ಕಲ್ಪನೆಗಳು. ದೈವಕೃಪೆಯಿಂದ ಜೀವಿಯು ತನ್ನೆಲ್ಲ ಮಾನಸಿಕ ಕಲ್ಪನೆಗಳನ್ನು ಪೂರೈಸಿಕೊಳ್ಳಲು ಅವಕಾಶವನ್ನು ಪಡೆಯುತ್ತಾನೆ. ಹೀಗೆ ಅವನು ಮತ್ತೊಂದು ಶರೀರವನ್ನು ಪಡೆಯುತ್ತಾನೆ. (ಕರ್ಮ, ಈ ಶರೀರವನ್ನು ಸೌಕರ್ಯ ಅಥವಾ ಅಸೌಕರ್ಯವನ್ನಾಗಿಸಿಕೊಳ್ಳಲು ನಡೆಸಿದ ಫಲಪ್ರದ ಚಟುವಟಿಕೆಗಳ ಸಂಗ್ರಹ). ಸಾಮಾನ್ಯವಾಗಿ ಒಬ್ಬನು ಸಾಯಲಿರುವಾಗ ತನ್ನ

ಯೋಜನೆಗಳನ್ನು ಕುರಿತು ಆಲೋಚಿಸುತ್ತಾನೆ. ಅವನ ಶರೀರವು ನಾಶ ಹೊಂದಿದ ನಂತರ ಅವನ ಸೂಕ್ಷ್ಮ ಶರೀರವೂ (ಮನಸ್ಸು, ಬುದ್ಧಿ ಮತ್ತು ಅಹಂಮಿಕೆಯಿಂದ ಕೂಡಿರುವಂಥದ್ದು) ತನ್ನ ಯೋಜನೆಗಳನ್ನು ನಡೆಸುತ್ತದೆ. ಹೀಗೆ ಅವನು ಸದಾ ತನ್ನ ಹೃದಯದಲ್ಲಿ ನೆಲೆಸಿರುವ ದೈವ ಕೃಪೆಯಿಂದ ಮತ್ತೊಂದು ಅವಕಾಶವನ್ನು ಪಡೆಯುತ್ತಾನೆ. ಮುಂದಿನ ಜನ್ಮದಲ್ಲಿ ಅವನು ಉನ್ನತಾತ್ಮದ ಸ್ಮರಣೆಯನ್ನು ಪಡೆದುಕೊಂಡು ತನ್ನ ಯೋಜನೆಗಳನ್ನು ಆಚರಣೆಗೆ ತರಲು ಪ್ರಾರಂಭಿಸುತ್ತಾನೆ.

ನಾರದ ಮುನಿಯೆಂದನು : ಆದ್ದರಿಂದ ನನ್ನ ಪ್ರೀತಿಪಾತ್ರನಾದ ಎಲೈ ದೊರೆಯೇ, ಸೂಕ್ಷ್ಮ ಮಾನಸಿಕ ಕವಚವನ್ನು ಹೊಂದಿರುವ ಜೀವಿಯು ತನ್ನ ಹಿಂದಿನ ಶರೀರದಿಂದಾಗಿ ಎಲ್ಲ ಬಗೆಯ ಆಲೋಚನೆಗಳನ್ನು ಹಾಗೂ ಭಾವನೆಗಳನ್ನು ಶುದ್ಧಿಗೊಳಿಸಿಕೊಳ್ಳುತ್ತಾನೆ. ನಾನು ಹೇಳುತ್ತಿರುವುದನ್ನು ಖಂಡಿತವೆಂದು ತಿಳಿ. ಮೊದಲಿನ ಶರೀರದಲ್ಲಿ ಯಾವುದನ್ನು ಹೊಂದಿರದ ಹೊರತು ಅದನ್ನು ಮಾನಸಿಕವಾಗಿ ಕಲ್ಪಿಸಿಕೊಳ್ಳುವ ಸಾಧ್ಯತೆಯೇ ಇಲ್ಲ" ಈ ಉಪದೇಶದ ನಂತರ ನಾರದ ಮುನಿಯು ನಿರ್ಗಮಿಸಿದರು.

ಪ್ರಾಚೀನ್ನ ಬರ್ಹಿ ದೊರೆಯು ಅನಂತರ ತಪ್ಪಸ್ಸನ್ನು ಆಚರಿಸಲು ಕಪಿಲಾಶ್ರಮವೆಂಬ ಪವಿತ್ರ ನಗರಕ್ಕೆ ತೆರಳಿದನು. ದೊರೆಯು ಅನಂತರ ಸಂಪೂರ್ಣ ಮೋಕ್ಷವನ್ನು ಪಡೆದುಕೊಂಡನು.

ಈ ಮುಂಚಿನ ವೃತ್ತಾಂತಕ್ಕೆ ಹಿಂತಿರುಗಿ ಹೇಳಬೇಕೆಂದರೆ ಶಿವನನ್ನು ಸಂತೃಪ್ತಗೊಳಿಸಿದ ನಂತರ ಪ್ರಚೇತಸರು (ಪ್ರಾಚೀನ್ನ ಬರ್ಹಿಯ ಪುತ್ರರು) ಏನನ್ನು ಸಾಧಿಸಿದರೆಂದು ವಿಧುರನು ಮೈತ್ರೇಯಿಯಿಂದ ತಿಳಿದುಕೊಳ್ಳಲು ಬಯಸಿದನು. ಅದಕ್ಕೆ ಮೈತ್ರೇಯಿಯು ಪ್ರಚೇತಸರು ಶಿವಮಂತ್ರವನ್ನು ಜಪಿಸುವ ಮೂಲಕ ಭಗವಾನ್ ವಿಷ್ಣುವನ್ನು ಸಂತೃಪ್ತಗೊಳಿಸಿದಾಗ ಅವನು ಅವರ ಮುಂದೆ ಪ್ರತ್ಯಕ್ಷನಾಗಿ ವರವನ್ನು ಕೇಳುವಂತೆ ತಿಳಿಸಿದನೆಂದನು. ಭಗವಂತನು ಬ್ರಹ್ಮದೇವನಿಗಿಂತಲೂ ಯಾವ ರೀತಿಯಲ್ಲೂ ಕೆಳಗಿರದ ಉತ್ತಮ ಪುತ್ರನೊಬ್ಬನನ್ನು ಪ್ರಚೇತಸರು ಪಡೆಯುತ್ತಾರೆಂದನು. ಅನಂತರದಲ್ಲಿ ಅವನು ಇಡೀ ಜಗತ್ತಿನಲ್ಲೇ ಪ್ರಖ್ಯಾತನಾಗಿ ಅವನಿಂದ ಜನಿಸಿದ ಮಿತ್ರರು ಹಾಗೂ ಮೊಮ್ಮಕ್ಕಳು ಮೂರು ಜಗತ್ತುಗಳಲ್ಲೂ ತುಂಬಿಕೊಳ್ಳುತ್ತಾರೆ ಎಂದನು. ಭಗವಂತನು ಅವರಿಗೆ ಅಪ್ಸರೆ ಪ್ರೇಮಲೋಚ ಮತ್ತು ಕಂದು ಮುನಿಯಿಂದ ಜನಿಸಿದ ಕನ್ಯೆಯನ್ನು ವಿವಾಹವಾಗಬೇಕೆಂದು ತಿಳಿಸಿ ಅವಳು ಅರಣ್ಯವೃಕ್ಷಗಳ ಆಶ್ರಯದಲ್ಲಿದ್ದಾಳೆ ಎಂದನು. ಪ್ರಚೇತಸರನ್ನು ಆಶೀರ್ವದಿಸಿ ಭಗವಂತನು ಹಿಂತಿರುಗಿದನು. ಪ್ರಚೇತಸರು ಭಗವಂತನನ್ನು ಕೊಂಡಾಡಿ ನೀರಿನಿಂದ ಹೊರಬಿದ್ದರು. ಆದರೆ ಅವರಿಗೆ ಸುತ್ತಲೆಲ್ಲ ಮರಗಳು ಬೆಳೆದು ಸ್ವರ್ಗದ ದಾರಿಗೆ ಅಡ್ಡಿಯಾಗಿರುವುದು ಕಂಡಿತು. ಪ್ರಚೇತಸರು ಕೋಪಗೊಂಡು ಬೆಂಕಿಯನ್ನು ಉಗುಳಿ ಮರಗಳನ್ನೆಲ್ಲ ನಾಶ ಪಡಿಸಿದರು. ಇದನ್ನು ಕಂಡ ಬ್ರಹ್ಮನು ಅವರ ಬಳಿಗೆ ಬಂದು ಅವರನ್ನು ಸಮಾಧಾನಗೊಳಿಸಿದನು. ಅಗ್ನಿಗೆ ಅಹುತಿಯಾಗದೆ ಉಳಿದ ವೃಕ್ಷಗಳು ತಮ್ಮ ಪುತ್ರಿಯನ್ನು ಪ್ರಚೇತಸರಿಗೆ ನೀಡಿದವು. ಅವರೆಲ್ಲರೂ ಆಕೆಯನ್ನು

ಅಂಗೀಕರಿಸಿದರು. ಈ ಕನ್ಯೆಯಿಂದ ದಕ್ಷನು ಜನಿಸಿದನು. (ದಕ್ಷನು ಮೂಲತಃ ಬ್ರಹ್ಮದೇವನ ಪುತ್ರನು. ಅವನ ಅಹಂಕಾರ ಹಾಗೂ ಶಿವನನ್ನು ಅವಹೇಳನ ಮಾಡಿದ್ದರಿಂದಾಗಿ ಶಿವನ ಶಿಷ್ಯನಾದ ವೀರಭದ್ರನು ದಕ್ಷ ಯಜ್ಞದ ಸಂದರ್ಭದಲ್ಲಿ ದಕ್ಷನನ್ನು ಕೊಂದಿದ್ದನು. ಅದೇ ದಕ್ಷನು ಪ್ರಚೇತಸರ ಪುತ್ರನಾಗಿ ಜನಿಸಿದನು). ಜನಿಸಿದ ನಂತರ ದಕ್ಷನು ತನ್ನ ಶಾರೀರಿಕ ಪ್ರಭೆಯ ಅತ್ಯುನ್ನತೆಯಿಂದಾಗಿ ಮಿಕ್ಕೆಲ್ಲರ ಶಾರೀರಿಕ ಸಮೃದ್ಧತೆಯನ್ನು ಮುಚ್ಚಿ ಹಾಕಿದನು. ಅವನು ಫಲಪ್ರದ ಚಟುವಟಿಕೆಗಳನ್ನು ನಡೆಸುವಲ್ಲಿ ತಜ್ಞನಾಗಿದ್ದರಿಂದಲೇ ಅವನನ್ನು "ದಕ್ಷ" ಅಂದರೆ "ತಜ್ಞ" ನೆಂದು ಕರೆಯಲಾಯಿತು. ಕಾಲಾಂತರದಲ್ಲಿ ಸಂತತಿ ಮುಂದುವರಿಕೆಯ ಪ್ರಕ್ರಿಯೆಯಲ್ಲಿ ದಕ್ಷನು ಇನ್ನಿತರ ಪ್ರಜಾಪತಿಗಳನ್ನು ತೊಡಗಿಸಿದನು.

## ಪ್ರಚೇತಸರಿಗೆ ನಾರದರ ಉಪದೇಶ

ಪುತ್ರನೊಬ್ಬನನ್ನು ಪಡೆದ ನಂತರ ಪ್ರಚೇತಸರು ಭಗವಂತನ ಆಶೀರ್ವಾದದಂತೆ ಮನೆಯಿಂದ ಹೊರಟರು. ಪ್ರಚೇತಸರು ಪಶ್ಚಿಮದಲ್ಲಿರುವ ಕರಾವಳಿ ತೀರಕ್ಕೆ ತೆರಳಿ ಜಾಬಾಲಿಯೆಂಬ ಹಿರಿಯ ಋಷಿಯ ಪಾದಾರವಿಂದದಲ್ಲಿ ಅಧ್ಯಾತ್ಮಿಕ ಜ್ಞಾನವನ್ನು ಪರಿಪೂರ್ಣಗೊಳಿಸಿಕೊಂಡರು. ಅಲ್ಲಿ ಅವರು ಪ್ರಾಣಾಯಾಮವನನ್ನು ಅಭ್ಯಸಿಸಿದರು. ಆ ಘಟ್ಟದಲ್ಲಿ ನಾರದ ಮುನಿಯು ಅವರನ್ನು ಕಾಣಲು ಅಲ್ಲಿಗೆ ಬಂದರು. ಪ್ರಚೇತಸರು ನಾರದ ಮುನಿಯನ್ನು ಅತ್ಯಂತ ಗೌರವದಿಂದ ಬರಮಾಡಿಕೊಂಡು ಜ್ಞಾನೋದಯವನ್ನು ಕುರಿತಂತೆ ಕೆಲವು ಪ್ರಶ್ನೆಗಳನ್ನು ಕೇಳಿದರು. ಅವರು ಅತಿಶಯ ಜ್ಞಾನದ ಬಗ್ಗೆ ತಿಳಿದು ಕೊಳ್ಳಲು ಬಯಸಿದರು.

ಮೈತ್ರೇಯ ಮುನಿಯು ವಿದುರನಿಗೆ ಉಪನ್ಯಾಸವನ್ನು ಮುಂದುವರಿಸುತ್ತ ಅಲ್ಲಿಗೆ ಬಂದಿದ್ದ ನಾರದ ಮುನಿಯು ಪ್ರಚೇತಸರಿಗೆ ಈ ರೀತಿಯಾಗಿ ತಿಳಿಸಿದನೆಂಬುದಾಗಿ ಹೇಳಿದರು. "ಜೀವಿಯೊಂದು ಪರಮಾತ್ಮನಿಗೆ ಭಕ್ತಿಪೂರ್ವಕ ಸೇವೆ ಸಲ್ಲಿಸುವಲ್ಲಿ ನಿರತವಾಗಲೆಂದೇ ಜನಿಸಿದ್ದರೆ ಅವನ ಜನನ, ಅವನ ಭವಿಷ್ಯ, ಅವನ ಜೀವಿತಾವಧಿ, ಅವನ ಮನಸ್ಸು ಮತ್ತು ಅವನ ಮಾತು ಇವೆಲ್ಲವೂ ವಾಸ್ತವವಾಗಿ ಪರಿಪೂರ್ಣವಾಗಿರುತ್ತದೆ". ಸಾಮಾನ್ಯವಾಗಿ ನಾಗರಿಕನಾದ ಮಾನವನಿಗೆ ಮೂರು ವಿವಿಧ ಜನನಗಳಿರುತ್ತವೆ - ಸಾಧಾರಣ ಜನನ, "ಪವಿತ್ರ" ಎಂದು ಕರೆಯಲಾಗುವ ಅಧ್ಯಾತ್ಮಿಕ ಗುರುತಿನ ಪ್ರೇರಣೆಯಿಂದ ಉಂಟಾದ ಜನನ ಹಾಗೂ ವಿಷ್ಣುವನ್ನು ಪೂಜಿಸಲು ಒಬ್ಬನಿಗೆ ಅನುಮತಿ ದೊರೆತಾಗ ಸಂಭವಿಸುವ "ಯಾಜ್ಞಿಕವೆಂಬ" ಹುಟ್ಟು. ಪರಮಾತ್ಮನ ಸೇವೆಯಲ್ಲಿ ಕಳೆಯಲಾಗದ ಯಾವುದೇ ಜೀವನ ನಿರರ್ಥಕ. ಭಕ್ತಿಪೂರ್ವಕ ಸೇವೆಯನ್ನುಳಿದರೆ ಮಿಕ್ಕೆಲ್ಲ ಸೇವೆಗಳೂ ಅರ್ಥಹೀನ. ಮಿಕ್ಕೆಲ್ಲಾ ಸೇವೆಗಳೂ, ಅದು ಯಾವುದೇ ಆಗಿರಲಿ, ಉಗ್ರ ತಪಸ್ಸೇ ಆಗಿರಲಿ, ಸನ್ಯಾಸವನ್ನು ಅಥವಾ ವೈದಿಕ ಸಾಹಿತ್ಯದ ಅಧ್ಯಯನವನ್ನು ಅಂಗೀಕರಿಸುವುದೇ ಆಗಲಿ ಅವನ್ನು ಉನ್ನತ ಅಧ್ಯಾತ್ಮಿಕ ಮುನ್ನಡೆಯ ಪ್ರಮುಖ ಅಂಶವಾಗಿ ಅರ್ಥೈಸಲಾಗಿದ್ದು ಒಬ್ಬರ ಮನಸ್ಸು ಶ್ರೀಹರಿಯನ್ನು ಅರ್ಥಮಾಡಿಕೊಳ್ಳದೆಯೇ ಹೋದರೆ ಈ ಎಲ್ಲ

ಪ್ರಕ್ರಿಯೆಗಳೂ ವ್ಯರ್ಥ. ಶ್ರೀಹರಿಯು ಎಲ್ಲ ಸ್ವಯಂ ಸಾಕ್ಷಾತ್ಕಾರಗಳ ಮೂಲ, ಎಲ್ಲ ಪವಿತ್ರ ಚಟುವಟಿಕೆಗಳ - ಕರ್ಮ, ಜ್ಞಾನ, ಯೋಗ ಮತ್ತು ಭಕ್ತಿ- ಉದ್ದೇಶ ಪರಮಾತ್ಮನೇ.

ಉನ್ನತಾತ್ಮನಲ್ಲಿ ಕಾಮ, ಕತ್ತಲು ಮತ್ತು ಒಳಿತುಗಳು ಅನಂತರ ಬಂದ ಶಕ್ತಿಗಳಾಗಿ ತೋರುತ್ತವೆ. ಅವನು ಎಲ್ಲ ಕಾರಣಗಳಿಗೂ ಕಾರಣೀಭೂತನು. ಎಲ್ಲ ಜೀವಿಗಳಿಗೂ ಕರುಣೆಯನ್ನು ತೋರಿಸುವ ಮೂಲಕ, ಯಾವ ರೀತಿಯಲ್ಲಾದರೂ ಸಂತೃಪ್ತನಾಗಿ, ಇಂದ್ರಿಯ ಸುಖಗಳಿಂದ, ಇಂದ್ರಿಯಗಳನ್ನು ನಿಯಂತ್ರಿಸಿಕೊಳ್ಳುವ ಮೂಲಕ ಒಬ್ಬನು ಬಹು ಬೇಗನೆ ಭಗವಂತನನ್ನು ತೃಪ್ತಿಪಡಿಸಬಹುದು. ಒಬ್ಬರು ಎಲ್ಲ ಐಹಿಕ ಆಸೆಗಳನ್ನು ಸಂಪೂರ್ಣವಾಗಿ ಶುಚಿಗೊಳಿಸಬೇಕು. ಭಕ್ತರು ಭಗವಂತನನ್ನು ನಿಯಂತ್ರಿಸುವದರಿಂದ ಅವನು ಒಂದು ಕ್ಷಣವೂ ಅವರನ್ನು ಬಿಟ್ಟಿರಲಾರ. ಐಹಿಕ ಶಿಕ್ಷಣ, ಐಶ್ವರ್ಯ, ಸಂಪತ್ತು ಮತ್ತು ಫಲಪ್ರದ ಚಟುವಟಿಕೆಗಳಲ್ಲಿ ತೊಡಗುವ ಮೂಲಕ ಉಬ್ಬಿ ಹೋದುದರಿಂದ ಭಗವಂತನು ಸೇವೆಯನ್ನು ಸ್ವೀಕರಿಸುವುದಿಲ್ಲ. ಪರಮಾತ್ಮನು ಸ್ವಾವಲಂಬಿಯಾಗಿದ್ದರೂ ಅವನು ತನ್ನ ಭಕ್ತಾದಿಗಳ ಅವಲಂಬಿಯಾಗಿರುತ್ತಾನೆ. ಅವನು ಶ್ರೀಲಕ್ಷ್ಮಿಯನ್ನಾಗಲಿ ಅಥವಾ ಶ್ರೀಲಕ್ಷ್ಮಿಯನ್ನು ಒಲಿಸಿಕೊಳ್ಳಲು ಹಂಬಲಿಸುತ್ತಿರುವ ದೊರೆಗಳು ಹಾಗೂ ಉಪದೇವತೆಗಳತ್ತ ಗಮನವನ್ನು ನೀಡುವುದೇ ಇಲ್ಲ.

ಪ್ರಚೇತಸನ ಪ್ರಶ್ನೆಯನ್ನು ಉತ್ತರಿಸಿದ ನಂತರ ನಾರದ ಮುನಿಯು ಬ್ರಹ್ಮಲೋಕಕ್ಕೆ ಹಿಂತಿರುಗಿದರು. ಪ್ರಚೇತಸರೂ ಭಗವಂತನನ್ನು ಸಮಿಪಿಸಲಾಗಲಿಲ್ಲ. ಅವನ ಪದ್ಮಪಾದವನ್ನೇ ಧ್ಯಾನಿಸುತ್ತ ಅವರು ಅಂತಿಮ ಗುರಿಯತ್ತ ನಡೆದರು. (ಭಗವದ್ಗೀತೆ 18.65 ರಲ್ಲಿ ಪರಮಾತ್ಮನೆನ್ನುತ್ತಾನೆ. ಸದಾಕಾಲವೂ ನನ್ನನ್ನು ಕುರಿತು ಆಲೋಚಿಸಿ ನನ್ನ ಭಕ್ತನಾಗು. ನನ್ನನ್ನು ಪೂಜಿಸಿ ನಿನ್ನ ಪ್ರಣಾಮಗಳನ್ನು ನನಗೆ ಸಲ್ಲಿಸು. ಹೀಗೆ ನೀನು ತಪ್ಪದೆಯೇ ನನ್ನ ಬಳಿಗೆ ಬರುತ್ತೀ. ನೀನು ನನ್ನ ಪ್ರಿಯನಾದ ಸ್ನೇಹಿತನಾದ್ದರಿಂದ ನಾನು ನಿನಗೆ ವಚನವನ್ನು ನೀಡುತ್ತೇನೆ"). ಶ್ರೀ ಶುಕಾಚಾರ್ಯರು ಮುಂದುವರಿಸಿ, ಸ್ವಯಂ ಮನುವಿನ ಪ್ರಥಮ ಪುತ್ರನಾದ ಉತ್ತಾನಪಾದನ ಸಂತತಿಯನ್ನು ಕುರಿತ ವಿವರಗಳನ್ನು ತಾವು ಪೂರೈಸಿರುವುದಾಗಿ ತಿಳಿಸಿದರು. ಶ್ರೀ ಶುಕ್ರಾಚಾರ್ಯರು ಸ್ವಯಂಭು ಮನುವಿನ ದ್ವಿತೀಯ ಪುತ್ರನಾದ ಪ್ರಿಯವ್ರತನನ್ನು ಕುರಿತು ಹೇಳಿದರು.

ಮೈತ್ರೇಯಿ ಮುನಿಯ ಪ್ರವಚನವನ್ನು ಕೇಳುತ್ತಿದ್ದ ವಿದುರನು ಆನಂದ ತುಂಬಿದವನಾಗಿ ಮೈತ್ರೇಯಿಯ ಅನುಮತಿ ಪಡೆದು ಹಸ್ತಿನಾಪುರಕ್ಕೆ ಹೊರಟನು.

## ಅಧ್ಯಾಯ-9

# ಪ್ರಿಯವ್ರತನ ಆಳ್ವಿಕೆ

(ಈ ಅಧ್ಯಾಯವು ಲೌಕಿಕ ಜೀವನದ ಸಂಪರ್ಕವನ್ನು ಹಿಂದೇ ಕಡಿದುಕೊಂಡಿದ್ದ ಪ್ರಿಯವ್ರತನನ್ನು ಹೇಗೆ ಭಗವಂತನು ರಾಜ್ಯವನ್ನು ಅಂಗೀಕರಿಸುವಂತೆ ಒಲಿಸಿದ ಹಾಗೂ ರಾಜನು ಹೇಗೆ ಅನಂತರ ಮತ್ತೊಮ್ಮೆ ವೈರಾಗ್ಯವನ್ನು ಬೆಳೆಸಿಕೊಂಡ ಎಂಬುದನ್ನು ವಿವರಿಸುತ್ತದೆ. ಈ ಅಧ್ಯಾಯವು ನಭಿ, ಋಷಭದೇವ ಹಾಗೂ ಅನಂತರ ಜಡಭರತನೆಂದು ಪ್ರಸಿದ್ಧನಾದ ಭರತನ ಆಳ್ವಿಕೆಯನ್ನು ವಿವರಿಸುತ್ತದೆ. ಅಜಾಮಿಳ ಮತ್ತು ದಕ್ಷನ ಕಥೆಗಳೂ ಇಲ್ಲಿ ಕಂಡು ಬರುತ್ತವೆ).

ಪರೀಕ್ಷಿತ ರಾಜನು ಭಾಗವತದ ನಿರೂಪಕನಿಂದ ಉನ್ನತ ಭಕ್ತನಾಗಿದ್ದ ಹಾಗೂ ರಾಜ್ಯವನ್ನೊಮ್ಮೆ ತ್ಯಜಿಸಿದ್ದ ಪ್ರಿಯವ್ರತನು ಏಕೆ ರಾಜನ ಪಾತ್ರವನ್ನು ಮತ್ತೆ ಅಂಗೀಕರಿಸಿದ ಎಂಬುದನ್ನು ವಿಚಾರಿಸಿದ. ಶ್ರೀ ಶುಕಾಚಾರ್ಯರು ದೊರೆಯ ಮಾತಿಗೆ ಒಪ್ಪಿ ಪ್ರಿಯವ್ರತನು ಆಡಳಿತವನ್ನು ನಡೆಸುವ ಉತ್ಸಾಹವನ್ನು ಕಳೆದುಕೊಂಡಿದ್ದಾಗ ಬ್ರಹ್ಮದೇವನು ಸಲಹೆಗಾಗಿ ರಾಜಕುಮಾರನ ಬಳಿಗೆ ಬಂದನೆಂಬುದಾಗಿ ತಿಳಿಸಿದ. ಅವನ ಆಗಮನವಾದಾಗ ಬ್ರಹ್ಮದೇವನನ್ನು ನಾರದ ಮುನಿ, ಸ್ವಯಂಭು ಮನು ಮತ್ತು ಪ್ರಿಯವ್ರತರು ಸ್ವಾಗತಿಸಿದರು.

ಅವರೆಲ್ಲರೂ ಪರಮಾತ್ಮನ ಆಶಯಗಳಿಗೆ ಬದ್ಧರಾಗಿರುವುದರಿಂದ ಯಾರೊಬ್ಬರೂ ಅವನ ಆಜ್ಞೆಯಿಂದ ದೂರ ಸರಿಯಲಾರರೆಂದು, ಯಾರೂ ಅವನ ಶಕ್ತಿಯನ್ನು, ಅದು ಧಾರ್ಮಿಕವಾಗಿರಲಿ, ಸಮೃದ್ಧವಾದ ಅಥವಾ ಇನ್ಯಾವುದೇ ವಿಧಾನದ್ದಾಗಲಿ ಭಗವಂತನ ಆಜ್ಞೆಯನ್ನು ಉಲ್ಲಂಘಿಸಲು ಶಕ್ತಿಯನ್ನು ಬಳಸಿಕೊಳ್ಳಲಾಗದು ಎಂದು ತಿಳಿಸಿದನು.

(ಗಾರ್ಗಿ ಉಪನಿಷತ್ತಿನಲ್ಲಿ ಗಾರ್ಗ ಮುನಿಯು ತನ್ನ ಪತ್ನಿಗೆ ಹೀಗೆನ್ನುತ್ತಾನೆ: "ಗಾರ್ಗಿ, ಪ್ರತಿಯೊಂದೂ ಭಗವಂತನ ನಿಯಂತ್ರಣಕ್ಕೆ ಒಳಪಟ್ಟಿದೆ. ಸೂರ್ಯ, ಚಂದ್ರ ಮತ್ತು ಇತರ ನಿಯಂತ್ರಕರು ಹಾಗೂ ಬ್ರಹ್ಮ ಮತ್ತು ಇಂದ್ರರಂಥ ದೇವತೆಗಳೂ ಸಹ ಭಗವಂತನ ನಿಯಂತ್ರಣದಲ್ಲಿದ್ದಾರೆ. ಭಗವಂತನ ಆಜ್ಞೆಯನ್ವಯ ಎಲ್ಲ ಜೀವಿಗಳು ಹುಟ್ಟು ಮತ್ತು ಸಾವು, ಚಟುವಟಿಕೆ, ಚಿಂತೆ, ಭ್ರಮೆ, ಭವಿಷ್ಯದ ಅಪಾಯಗಳ ಬಗ್ಗೆ ಭಯ, ಸಂತೋಷ ಮತ್ತು ಬೇಗುದಿಗಳಿಗಾಗಿ ವಿವಿಧ ಬಗೆಯ ಶರೀರಗಳನ್ನು ಒಪ್ಪಿಕೊಳ್ಳುತ್ತಾರೆ).

ಬ್ರಹ್ಮದೇವನು ಪ್ರಿಯವ್ರತನಿಗೆ ಪದ್ಮವನ್ನು ಹೋಲುವ ನಾಭಿಯನ್ನು ಹೊಂದಿರುವಂಥ ಭಗವಂತನ ಪದ್ಮಪಾದದಲ್ಲಿ ಆಶ್ರಯವನ್ನು ಪಡೆದುಕೊಳ್ಳುವಂತೆ ಉಪದೇಶಿಸಿದನು. ಹೀಗೆ ಭಗವಂತನು ಆಜ್ಞೆಮಾಡಿರುವುದರಿಂದ ಆರು ಇಂದ್ರಿಯಗಳನ್ನು ಜಯಿಸಿ, ಐಹಿಕ ವಿಷಯಗಳನ್ನು ಅನುಭವಿಸಿದನು. "ಹೀಗೆ ನೀನು ಲೌಕಿಕ ಸಂಪರ್ಕದಿಂದ

ವಿಮುಕ್ತನಾಗಿ ನಿನ್ನ ಸಂವಿಧಾತ್ಮಕ ಸ್ಥಾನದಿಂದ ಭಗವಂತನ ಅನುಜ್ಞೆಯನ್ನು ನಡೆಸಲು ಸಮರ್ಥನಾಗಿರುತ್ತೀಯೆ". ಹೀಗೆ ಉಪದೇಶಿಸಿಕೊಂಡ ಪ್ರಿಯವ್ರತನು ಭಗವಂತನ ಆಜ್ಞೆಯನ್ನು ಒಪ್ಪಿಕೊಂಡನು. ನಂತರ ಬ್ರಹ್ಮದೇವನು ತನ್ನ ವಾಸಸ್ಥಾನಕ್ಕೆ ಹೊರಟನು.

ಭಗವಂತನ ಆಜ್ಞೆಯನ್ನು ಗೌರವಿಸುವ ಸಲುವಾಗಿಯೇ ಪ್ರಿಯವ್ರತನು ಆಡಳಿತವನ್ನು ನಡೆಸಿದನು. ವಿಶ್ವಕರ್ಮನ ಪುತ್ರಿಯಾದ ಬೃಹಸ್ಮಿತಿಯನ್ನು ವಿವಾಹವಾದನು. ಅವಳಲ್ಲಿ ಅವನು ಹತ್ತು ಪುತ್ರರನ್ನು ಹಾಗೂ ಉರ್ಜಸ್ವತಿ ಎಂಬ ಪುತ್ರಿಯನ್ನು ಪಡೆದನು. ಅವನ ಹತ್ತು ಪುತ್ರರೆಂದರೆ ಅಗ್ನಿದ್ರಾಹ, ಇಧ್ಮಜಿಹ್ವ, ಯಜ್ಞಭಲಿ, ಮಹಾವೀರ, ಹಿರಣ್ಯರೇತ, ಘೃತಪ್ರಷ್ಟ, ಸಾವನ, ಮೇಧಾತಿಥಿ, ವಿತಿಹೋತ್ರ, ಮತ್ತು ಕವಿ. ಇವೆಲ್ಲವೂ ಅಗ್ನಿಯೊಡೆಯನ ನಾಮಧೇಯಗಳು. ಇದರಲ್ಲಿ ಕವಿ, ಮಹಾವೀರ ಹಾಗೂ ಸಾವನರು ಬ್ರಹ್ಮಚಾರಿಗಳಾಗಿ ಭಗವಂತನ ಸೇವೆಗಾಗಿಯೇ ಉಳಿದುಕೊಂಡರು.

ಪ್ರಿಯವ್ರತನು ಮತ್ತೊಬ್ಬ ಪತ್ನಿಯಿಂದ ಉತ್ತಮ, ತಾಮಸ ಹಾಗೂ ರೈವತ ಎಂಬ ಮೂವರು ಪುತ್ರರನ್ನು ಪಡೆದನು. ಈ ಮೂವರೂ "ಮನ್ವಂತರ" ಅಂದರೆ ಯುಗವನ್ನು ವಹಿಸಿಕೊಂಡರು. ಪ್ರಿಯವ್ರತನು ದಕ್ಷನಾದ ರಾಜನಾದರೂ ಒಮ್ಮೆ ಸೂರ್ಯದೇವನನ್ನು ಬೇಸರಗೊಳಿಸಿದ್ದ. ಭೂಮಿಯ ಒಂದು ಭಾಗದಲ್ಲಿ ಬೆಳಕು ಇರುವಾಗ ಮತ್ತೊಂದು ಕಡೆ ಕತ್ತಲಿರುವ ಪರಿಸ್ಥಿತಿಯ ಬಗ್ಗೆ ಬೇಸರಗೊಂಡ ರಾಜನು ರಾತ್ರಿಯಿರುವೆಡೆಯಲ್ಲಿ ಬೆಳಕನ್ನು ಮೂಡಿಸಲು ನಿರ್ಧರಿಸಿ ತನ್ನ ರಥದಲ್ಲಿ ಕುಳಿತು ಸೂರ್ಯನನ್ನು ಹಿಂಬಾಲಿಸಿದ. ಹೀಗೆ ಸಾಗುತ್ತಿದ್ದಾಗ ಅವನ ರಥದ ಚಕ್ರಗಳು ಮೂಡಿಸಿದ ಗುರುತುಗಳು ನಂತರ ಏಳು ಸಾಗರಗಳಾಗಿ ಭೂಮಂಡಲವೆಂದು ಹೆಸರಾದ ಗ್ರಹ ವ್ಯವಸ್ಥೆಯನ್ನು ಏಳು ದ್ವೀಪಗಳಾಗಿ ವಿಭಜಿಸಿದವು. ಈ ದ್ವೀಪಗಳೆಂದರೆ ಜಂಭು, ಪ್ಲಾಕ್ಷ, ಸಲಿನಾಲಿ, ಕುಶ, ಕ್ರಂಚ, ಶಕ ಮತ್ತು ಸುಷ್ಕರ. ಪ್ರಿಯವ್ರತನು ಈ ಸಾಗರಗಳ ನೇತೃತ್ವವನ್ನು ತನ್ನ ಏಳು ಪುತ್ರರಿಗೆ ವಹಿಸಿಕೊಟ್ಟನು.

ಪ್ರಿಯವ್ರತ ರಾಜನು ತನ್ನ ಮಗಳಾದ ಉರ್ಜಸ್ವತಿಯನ್ನು ರಾಕ್ಷಸರ ಅಧ್ಯಾತ್ಮ ಗುರುವಾದ ಶುಕ್ರಾಚಾರ್ಯರಿಗೆ ವಿವಾಹ ಮಾಡಿಕೊಟ್ಟಾಗ ಅವಳು ಅವನಿಂದ ದೇವಯಾನಿಯೆಂಬ ಮಗಳನ್ನು ಪಡೆದಳು. ನಾರದನಿಗೆ ತಾನು ಶರಣಾಗಿದ್ದರೂ ಸಹ ತಾನು ಲೌಕಿಕ ಚಟುವಟಿಕೆಗಳಿಗೆ ಸಿಲುಕಿ ಹಾಕಿಕೊಳ್ಳುತ್ತಿದ್ದೇನೆಂಬುದಾಗಿ ದೊರೆಯು ಭಾವಿಸಿದ್ದರಿಂದ ವಿಷಾದಗೊಂಡು ತ್ಯಾಗ ಮನೋಭಾವದಿಂದ ಮಾತನಾಡಲು ತೊಡಗಿದನು. ಅವನು ತನ್ನನ್ನೇ ಖಂಡಿಸಿಕೊಳ್ಳತೊಡಗಿದನು. ಅವನು ಮತ್ತೆ ಪ್ರಜ್ಞಾವಸ್ಥೆಗೆ ಬಂದು ತನ್ನೆಲ್ಲ ಐಹಿಕ ಸಂಪತ್ತನ್ನು ತನ್ನ ವಿಧೇಯ ಮಕ್ಕಳಿಗೆ ನೀಡಿ ಅಧ್ಯಾತ್ಮಿಕ ಜೀವನಕ್ಕೆ ಹಿಂತಿರುಗಲು ನಿರ್ಧರಿಸಿದ. ಅವರ ಮಧ್ಯೆ ವ್ಯಾಜ್ಯವನ್ನು ನಿಲ್ಲಿಸುವ ಸಲುವಾಗಿ ಪ್ರಿಯವ್ರತ ಮಹಾರಾಜನು ನದಿಗಳಲ್ಲಿ, ಪರ್ವತದ ಹಾಗೂ ಅರಣ್ಯದ ಸರಹದ್ದುಗಳಲ್ಲಿ ಒಬ್ಬರು ಮತ್ತೊಬ್ಬರ ಆಸ್ತಿಗೆ ಕಾಲಿಡದಂತೆ ಸರಹದ್ದುಗಳನ್ನು ಮಾಡಿಸಿದನು.

ಪ್ರಿಯವ್ರತನ ನಿರ್ಗಮನದ ನಂತರ ಅವನ ಪುತ್ರ ಅಗ್ನಿಧಾರನು ಧಾರ್ಮಿಕ ತತ್ವಗಳನ್ನು ಅನುಸರಿಸುತ್ತ ಜಗತ್ತನ್ನು ಆಳಿದನು. ಅವನು ಜಂಭುದ್ವೀಪದ ನಿವಾಸಿಗಳಿಗೆ ರಕ್ಷಣೆಯನ್ನು ನೀಡಿದ. ಪರಿಪೂರ್ಣವಾದ ಮಗನನ್ನು ಪಡೆಯುವ ಸಲುವಾಗಿ ಬ್ರಹ್ಮದೇವನನ್ನು ಕುರಿತು ಕಠಿಣ ತಪಸ್ಸನ್ನು ಆಚರಿಸಲು ಅಗ್ನಿಧಾರನು ಮಂದಾರ ಪರ್ವತದ ಕಣಿವೆಗೆ ಹೊರಟನು. ಅಗ್ನಿಧಾರನ ಅಪೇಕ್ಷೆಯನ್ನು ಅರಿತ ಬ್ರಹ್ಮದೇವನು ಪೂರ್ವಚಿತ್ತಿಯೆಂಬ ಅತ್ಯುತ್ತಮ ಅಪ್ಸರೆಯನ್ನು ಆಯ್ದು ಅವಳನ್ನು ಅಗ್ನಿಧಾರನ ಬಳಿಗೆ ಕಳಿಸಿದನು. ಅಪ್ಸರೆಯು ಕಣಿವೆಗೆ ಬಂದು ಅಗ್ನಿಧಾರನ ಗಮನವನ್ನು ಸೆಳೆಯುವ ಸಲುವಾಗಿ ಅವನ ಸುತ್ತಮುತ್ತಲೂ ಓಡಾಡಲು ತೊಡಗಿದಳು. ದೊರೆಯು ಅವಳಾರೆಂದು ತಿಳಿದುಕೊಳ್ಳಲು ಬಯಸಿದನು. ಅವನು ಅವಳ ಸೌಂದರ್ಯ ಹಾಗೂ ವ್ಯಕ್ತಿತ್ವವನ್ನು ಪ್ರಶಂಸಿಸಿದನು. ದೊರೆಯು ಅವಳಲ್ಲಿ ತುಂಬಾ ಮೋಹಿತಗೊಂಡು ಅವಳ ಪ್ರೇಮಕ್ಕೆ ಸಿಲುಕಿದ. ಮಧುರ ಮಾತುಗಳಿಂದ ಅವಳನ್ನು ಸಂಪ್ರೀತಗೊಳಿಸಿ ಅವಳ ಒಲುಮೆಯನ್ನು ಪಡೆದುಕೊಂಡನು.

ದೊರೆಯ ಬುದ್ಧಿಶಕ್ತಿ. ವ್ಯಾಸಂಗ, ಯೌವ್ವನ, ಸೌಂದರ್ಯ, ನಡತೆ ಇವುಗಳಿಂದ ಆಕರ್ಷಿತಳಾದ ಪೂರ್ವಚಿತ್ತಿಯು ಅವನೊಂದಿಗೆ ಜೀವಿಸುತ್ತಾ ಸಂತೋಷವನ್ನು ಅನುಭವಿಸಿದಳು. ದೊರೆಯು ಅವಳಿಂದ ಒಂಬತ್ತು ಮಕ್ಕಳನ್ನು ಪಡೆದ. ಅವರೆಂದರೆ ನಭಿ, ಕಿಂಪುರುಷ, ಹರಿವರ್ಷ. ಇಳಾವ್ರತ, ರಮ್ಯಕ, ಹಿರಣ್ಮಯ, ಕುರು, ಭದ್ರಾಶ್ವ ಮತ್ತು ರೇತುಮಾಲಾ. ಈ ಮಕ್ಕಳಿಗೆ ಜನ್ಮ ನೀಡಿದ ನಂತರ ಪೂರ್ವಚಿತ್ತಿಯು ತನ್ನ ವಾಸಸ್ಥಾನಕ್ಕೆ ಹೊರಟಳು. ದೊರೆಯು ತನ್ನ ಪುತ್ರರೆಲ್ಲರಿಗೂ ಸ್ವತಂತ್ರ ರಾಜ್ಯಗಳನ್ನು ನೀಡಿದನು. ಆದರೆ ಪೂರ್ವಚಿತ್ತಿಯ ನಿರ್ಗಮನದ ನಂತರ ತನ್ನ ಕಾಮುಕ ಅಭೀಪ್ಸೆಗಳು ಪೂರೈಕೆಯಾಗದೆ ಇದ್ದುದರಿಂದ ದೊರೆಯು ಪರಿತಪಿಸತೊಡಗಿದನು. ತಮ್ಮ ತಂದೆಯ ನಿರ್ಗಮನದ ನಂತರ ಒಂಬತ್ತು ಸೋದರರೂ ಮೇರುವಿನ ಒಂಬತ್ತು ಪುತ್ರಿಯರನ್ನು- ಮೇರುದೇವಿ, ಪ್ರತಿರೂಪ, ಉಗ್ರದಂಷ್ಟ್ರಿ, ಲತಾ, ರಮ್ಯಾ, ಶ್ಯಾಮಾ, ನಾರಿ, ಭದ್ರಾ ಮತ್ತು ದೇವವಿತಿ- ವಿವಾಹವಾದರು.

## ನಭಿ

ಶ್ರೀ ಶುಕಾಚಾರ್ಯರು ಭಾಗವತದ ನಿರೂಪಣೆಯನ್ನು ಮುಂದುವರಿಸಿದರು. ಅಗ್ನಿಧಾರನ ಪುತ್ರನಾದ ನಭಿಯು ಪುತ್ರನೊಬ್ಬನನ್ನು ಬಯಸಿ ಭಗವಾನ್ ವಿಷ್ಣುವಿಗೆ ಪ್ರಾರ್ಥನೆ ಸಲ್ಲಿಸಿ ಪೂಜಿಸಿದನು. ನಭಿಯ ಪತ್ನಿಯಾದ ಮೇರು ದೇವಿಯೂ ಸಹ ವಿಷ್ಣುವನ್ನು ಪೂಜಿಸಿದಳು. ಭಗವಂತನು ನಭಿ ಹಾಗೂ ಅವನ ಪತ್ನಿಯ ಪ್ರಾರ್ಥನೆಯಿಂದ ಸಂಪ್ರೀತಗೊಂಡು ಅವನು ತನ್ನ ಸುಂದರ ರೂಪದಲ್ಲಿ ಅವನ ಮುಂದೆ ಕಾಣಿಸಿಕೊಂಡನು. ತಮ್ಮ ಮುಂದೆ ಭಗವಂತನು ಪ್ರತ್ಯಕ್ಷನಾದದ್ದನ್ನು ಕಂಡ ದೊರೆ ಹಾಗೂ ರಾಣಿಯರು ಅವನನ್ನು ಅತ್ಯಂತ ಗೌರವದಿಂದ ಬರಮಾಡಿಕೊಂಡು ಕೊಂಡಾಡಿದರು. ಆ ಸಂದರ್ಭದಲ್ಲಿ ಅಲ್ಲಿ ಹಾಜರಿದ್ದ ಪುರೋಹಿತರು ಹಾಗೂ ದೊರೆಯ ಅನುಯಾಯಿಗಳು ಭಗವಂತನನ್ನು

ಪ್ರಾರ್ಥಿಸಿ ವಿನಂತಿಸಿಕೊಂಡರು. "ದೊರೆಯ ಅತ್ಯುನ್ನತ ಉದ್ದೇಶವು ನಿನ್ನಂಥ ಪುತ್ರನೊಬ್ಬನನ್ನು ಪಡೆಯುವುದು. ನಭಿ ಮಹಾರಾಜನು ಪುತ್ರನೊಬ್ಬನನ್ನು ಪಡೆಯುವ ಸಲುವಾಗಿ ನಿನ್ನನ್ನು ಧ್ಯಾನಿಸುತ್ತಿದ್ದಾನೆ." ದೊರೆಯು ಪ್ರಾರ್ಥನೆಯನ್ನು ಸಲ್ಲಿಸಿ ಭಗವಂತನ ಪಾದಗಳಿಗೆ ನಮಸ್ಕರಿಸಿದಾಗ ದೊರೆಯ ಬಗ್ಗೆ ಸಂತುಷ್ಟಗೊಂಡ ಭಗವಂತನು ಹೇಳಿದನು: "ನನ್ನಂಥ ಪುತ್ರನೊಬ್ಬನನ್ನು ಪಡೆದುಕೊಳ್ಳಲು ವರವನ್ನು ಕೊಡುವದು ಕಷ್ಟಕರ. ಏಕೆಂದರೆ ನಾನು ಅದ್ವಿತೀಯನಾದ ಶ್ರೇಷ್ಠತಮನಾಗಿದ್ದು ನನಗೆ ಯಾರೂ ಸಮರಿಲ್ಲವಾಗಿ ನನ್ನಂಥ ಮತ್ತೊಬ್ಬ ವ್ಯಕ್ತಿತ್ವವನ್ನು ಪಡೆಯುವುದು ದುಸ್ಸಾಧ್ಯ. ನಾನು ನನಗೆ ಸರಿಸಮನಾದ ಮತ್ತೊಬ್ಬನನ್ನು ಕಂಡು ಹಿಡಿಯಲು ಅಸಾಧ್ಯವಾದ್ದರಿಂದ ನಾನೇ ಸ್ವತಃ ನಿರುಪಾಧಿಕ ಭಾಗದೊಳಗೆ ವಿಸ್ತಾರಗೊಂಡು, ಮೇರು ದೇವಿಯ ಗರ್ಭವನ್ನು ಪ್ರವೇಶಿಸುತ್ತೇನೆ." ಹೀಗೆ ನುಡಿದ ಭಗವಂತನು ಕಣ್ಮರೆಯಾದನು.

ಭಗವಂತನು ನಭಿ ಹಾಗೂ ಆತನ ಮಡದಿಗೆ ಪುತ್ರನಾಗಿ ಕಾಣಿಸಿಕೊಂಡನು. ಶಿಶುವು ಪರಮಾತ್ಮನ ಚಿಹ್ನೆಗಳೆಲ್ಲವನ್ನೂ ಆವಿರ್ಭವಿಸಿಕೊಂಡಿತ್ತು. ಪುತ್ರನ ವಿಶೇಷ ಗುಣಗಳಿಂದಾಗಿ ಅವನನ್ನು ಋಷಭ ದೇವನೆಂದು ಕರೆಯಲಾಯಿತು. ರಾಜ್ಯದ ಪ್ರಜೆಗಳು ಅವನು ತಮ್ಮ ದೊರೆಯಾಗಬೇಕೆಂದು ಬಯಸಿದರು. ಶಕ್ತಿ, ಸೌಂದರ್ಯ, ವಿವೇಚನೆ, ಹೆಸರು, ಖ್ಯಾತಿ, ಪ್ರಭಾವ ಮತ್ತು ಉತ್ಸಾಹ ಮೊದಲಾದ ಗುಣಗಳನ್ನು ನಭಿಯು ಅವನಲ್ಲಿ ಕಂಡನು. ದೊರೆಯು ಅವನನ್ನು ಋಷಭ - ಅಥವಾ ಅತ್ಯುತ್ತಮ ಎಂಬುದಾಗಿ ಕರೆದನು.

ಇಂದ್ರದೇವನು ದೊರೆಯ ಬಗ್ಗೆ ಅಸೂಯೆಗೊಂಡನು. ಅವನು ರಾಜ್ಯದಲ್ಲಿ ಮಳೆಯನ್ನು ನಿಲ್ಲಿಸಿದನು. ಆದರೆ ಋಷಭ ದೇವನು ಯೋಗ ಮಾಯೆಯ ಮೂಲಕ ಅಜನಭ ಎಂಬಂಥ ತನ್ನ ಸ್ವಂತ ಸ್ಥಳದಲ್ಲಿ ವಿಪುಲವಾಗಿ ಮಳೆಯನ್ನು ಸುರಿಸಿದನು. ಮಗನ ಸಾಮರ್ಥ್ಯವನ್ನು ಅರ್ಥಮಾಡಿಕೊಂಡ ನಭಿಯು ರಾಜ್ಯವನ್ನು ಋಷಭ ದೇವನಿಗೆ ಒಪ್ಪಿಸಿ ರಾಣಿಯೊಂದಿಗೆ ತನ್ನ ನಿರುಪಾಧಿಕ ವಿಸ್ತರಣೆಯಲ್ಲಿ ಕೃಷ್ಣನಾಗಿರುವ ನರ ನಾರಾಯಣನನ್ನು ಆರಾಧಿಸಲು ಬದರೀಕಾಶ್ರಮಕ್ಕೆ ತೆರಳಿದನು. ಈ ಭಕ್ತಿಯಿಂದಾಗಿ ನಭಿ ಮತ್ತು ಅವನ ಪತ್ನಿ ವೈಕುಂಠವೆಂಬ ಹೆಸರಾದ ದೇವಲೋಕಕ್ಕೆ ಎತ್ತರಿಸಲ್ಪಟ್ಟರು.

ಮಹಾರಾಜ ನಭಿಯನ್ನು ವೈಭವೀಕರಿಸುವ ಸಲುವಾಗಿ ವೃದ್ಧ ಮುನಿಗಳು ಎರಡು ಪದ್ಯಗಳನ್ನು ರಚಿಸಿದರು. ಇವುಗಳಲ್ಲೊಂದು: "ಮಹಾರಾಜ ನಭಿಯ ಪರಿಪೂರ್ಣತೆಯನ್ನು ಯಾರು ಸಾಧಿಸಬಲ್ಲರು? ಆತನ ಚಟುವಟಿಕೆಗಳನ್ನು ಯಾರು ಸಾಧಿಸಬಲ್ಲರು? ಅವನ ಭಕ್ತಿಪೂರ್ವಕ ಸೇವೆಯಿಂದಾಗಿ ಪರಮಾತ್ಮನು ಅವನ ಮಗನಾಗಿ ಕಾಣಿಸಿಕೊಳ್ಳಲು ಒಪ್ಪಿದನು." ಎರಡನೇ ಪದ್ಯವು: "ಮಹಾರಾಜ ನಭಿಯಲ್ಲದೆ ಬ್ರಾಹ್ಮಣರ ಸೇವೆಗೈಯ್ಯುವಲ್ಲಿ ಮತ್ಯಾರು ಉತ್ತಮರು? ಅರ್ಹರಾದ ಬ್ರಾಹ್ಮಣರನ್ನು ಅವರಿಗೆ ಸಂಪೂರ್ಣ ತೃಪ್ತಿಯಾಗುವ ರೀತಿಯಲ್ಲಿ ಪೂಜಿಸಿದ್ದರಿಂದಲೇ ಬ್ರಾಹ್ಮಣರು

ತಮ್ಮ ಬ್ರಾಹ್ಮಣೀಯ ಶಕ್ತಿಯಿಂದ, ಮಹಾರಾಜ ನಭಿಗೆ ಪರಮಾತ್ಮನ ಅತ್ಯುನ್ನತ ವ್ಯಕ್ತಿತ್ವ ಅಂದರೆ ವ್ಯಕ್ತಿ ರೂಪದಲ್ಲಿರುವ ನಾರಾಯಣನನ್ನು ತೋರಿಸಿದರು."

## ಋಷಭ ದೇವ

ನಭಿಯ ನಿರ್ಗಮನದ ನಂತರ ಋಷಭ ದೇವನು ಗುರುಕುಲದಲ್ಲಿ ಶಿಕ್ಷಣವನ್ನು ಪೂರೈಸಿದನು. ಜಯಂತಿಯೆಂಬ ಮಡದಿಯನ್ನು ಹೊಂದಿ ನೂರು ಪುತ್ರರನ್ನು ಪಡೆದನು. ಅವಳ ನೂರು ಪುತ್ರರಲ್ಲಿ ಹಿರಿಯವನಿಗೆ ಭರತನೆಂಬ ಹೆಸರನ್ನಿಟ್ಟು ಅವನು ಅವಿಚ್ಛಿನ್ನ ಭಕ್ತ ಮಾತ್ರನಲ್ಲದೆ ಉನ್ನತ ಅರ್ಹತೆಗಳನ್ನು ಹೊಂದಿದವನಾಗಿದ್ದನು. ಅವನ ಗೌರವಾರ್ಥ ಈ ಗ್ರಹವನ್ನು ಭರತ ವರ್ಷವೆಂದು ಕರೆಯಲಾಯಿತು, (ದುಷ್ಯಂತನ ಮಗನಾದ ಭರತನ ಹೆಸರಿನಿಂದ ಈ ಪ್ರದೇಶವನ್ನು ಭರತ ವರ್ಷವೆಂದು ಕರೆಯಲಾಗಿದೆ ಎಂಬುದು ಸಾಮಾನ್ಯ ತಿಳಿವಳಿಕೆ).

ಪರಮಾತ್ಮನ ಅಪರಾವತಾರವಾದ ಋಷಭ ದೇವನು ವರ್ಣಾಶ್ರಮ ತತ್ತ್ವಗಳನ್ನು ಕಟ್ಟುನಿಟ್ಟಾಗಿ ಅನುಸರಿಸಿದನು. ಅವನು ತಪಸ್ಸುಗಳನ್ನಾಚರಿಸಿ ಭಗವಾನ್ ವಿಷ್ಣುವನ್ನು ಸಂತೃಪ್ತಿಗೊಳಿಸಿದನು. ಅವನ ಆಳ್ವಿಕೆಯಲ್ಲಿ ಪ್ರತಿಯೊಬ್ಬರೂ ಸಂತೋಷದಿಂದಿದ್ದರು.

ಒಮ್ಮೆ ಅವನು ಸಂಚಾರದಲ್ಲಿದ್ದಾಗ ತನ್ನ ಪುತ್ರರೂ ಭಾಗವಹಿಸಿದ್ದ ಸಮ್ಮೇಳನವೊಂದು ನಡೆಯುತ್ತಿದ್ದ ಬ್ರಹ್ಮಾವರ್ತಕ್ಕೆ ಆಗಮಿಸಿದನು, ದೊರೆಯು ತನ್ನ ಪುತ್ರರನ್ನು ಹೀಗೆ ಸಂಭೋಧಿಸಿದನು:

"ಮಾನವ ರೂಪವನ್ನು ನೀಡಲ್ಪಟ್ಟವನು ಸದಾ ಕಾಲವೂ ಲೌಕಿಕ ಸಂತೋಷ ಹಾಗೂ ಲೌಕಿಕ ಗಳಿಕೆಗಾಗಿಯೇ ಕೆಲಸ ಮಾಡಕೂಡದು. ಆದರೆ ಒಬ್ಬರು ಭಕ್ತಿಪೂರ್ವಕ ಸೇವೆಯ ದೈವಿಕ ಸ್ಥಾನವನ್ನು ಪಡೆದುಕೊಳ್ಳಲು ತಪಸ್ಸು ಮತ್ತು ನೇಮಗಳಲ್ಲಿ ತೊಡಗಬೇಕು. ಇಂಥ ಚಟುವಟಿಕೆಗಳಿಂದಾಗಿ ಒಬ್ಬರ ಹೃದಯ ಪರಿಶುದ್ಧವಾಗಿ ಅವರು ಈ ಸ್ಥಾನವನ್ನು ಪಡೆದುಕೊಂಡಾಗ ಅವರು ಐಹಿಕ ಜೀವನದಿಂದ ಅತಿಶಯವಾಗಿರುವ, ಶಾಶ್ವತ ಆಹ್ಲಾದತೆಯಿಂದ ಕೂಡಿದ, ಎಂದೆಂದಿಗೂ ಮುಂದುವರಿಯುವಂಥ ಜೀವನವನ್ನು ಪಡೆದುಕೊಳ್ಳುತ್ತಾರೆ.

ಭಗವಂತನ ಅಸ್ತಿತ್ವದಲ್ಲಿ ಸೇರಿ ಹೋಗುವ ಸಲುವಾಗಿ ಒಬ್ಬರು ಮಹಾತ್ಮರಿಗೆ ಸೇವೆಯನ್ನು ಸಲ್ಲಿಸಬೇಕು. ಮಹಾತ್ಮರು ಕೋಪರಹಿತರಾಗಿದ್ದು ಪ್ರತಿಯೊಬ್ಬರ ಪ್ರಯೋಜನಕ್ಕಾಗಿ ಕೆಲಸ ಮಾಡುತ್ತಾರೆ. ಅವರು ಯಾವುದೇ ವಿಚಾರರಾಹಿತ್ಯತೆಯಿಂದ ವರ್ತಿಸದವರಾದ್ದರಿಂದ ಅವರನ್ನು ಮಹಾತ್ಮರೆಂದು ಕರೆಯಲಾಗಿದೆ. ಒಬ್ಬರು ಭಗವಂತನ ಬಗ್ಗೆ ಮಾತ್ರ ಆಸಕ್ತರಾಗಿ ಲೈಂಗಿಕತೆಯನ್ನು ಜೀವನದ ಉದ್ದೇಶವೆಂದು ಪರಿಗಣಿಸಬಾರದು" ಎಂದು ಋಷಭ ದೇವನು ಹೇಳಿದನು "ಆದ್ದರಿಂದ ಬುದ್ಧಿವಂತನಾದ ಮನುಷ್ಯನಿಗೆ ಇಂದ್ರಿಯ ಪೂರೈಕೆಗೆ ಸಂಬಂಧಪಟ್ಟ ಚಟುವಟಿಕೆಯಲ್ಲಿ, ಯಾವುದರಿಂದ ಅವನ

ಮುಂದುವರಿಕೆಯು ಒಂದಾದ ನಂತರ ಒಂದರಂತೆ ಮಾನವ ಶರೀರದಲ್ಲಿ ಕಾಣಿಸಿಕೊಳ್ಳುವುದೋ ಅಂಥಹವುಗಳಲ್ಲೇ ಮುಳುಗುವುದು ಶೋಭೆ ತರುವಂಥದ್ದಲ್ಲ. ಒಬ್ಬರು ಫಲಾಪೇಕ್ಷೆಯಿಂದ ಚಟುವಟಿಕೆಗಳಲ್ಲಿ ತೊಡಗಬಾರದು. ಈ ಲೌಕಿಕ ಶರೀರವನ್ನು ನಿವಾರಿಸಿಕೊಳ್ಳಲು ಒಬ್ಬರು ಭಗವಂತನನ್ನು ಪ್ರೀತಿಸಬೇಕು. ಒಬ್ಬರು ಭ್ರಮೆಯ ತತ್ತ್ವಗಳನ್ನು (ನಾನು ಮತ್ತು ನನ್ನದು) ಬಿಟ್ಟು ಕೊಟ್ಟು ವಿಮುಕ್ತಗೊಳ್ಳಬೇಕು. ಹೀಗೆ ಒಬ್ಬರು ಅತಿಶಯ ಜಗತ್ತನ್ನು ತಲಪುತ್ತಾರೆ.

ಋಷಭ ದೇವನು ತನ್ನ ಪುತ್ರರಿಗೆ ಹೀಗೆ ಉಪದೇಶಿಸಿದನು: (1) ಉನ್ನತ ಮಟ್ಟದಲ್ಲಿನ ಸ್ಥಿತಿಯಲ್ಲಿ ಪರಮಹಂಸವನ್ನು ಸ್ವೀಕರಿಸುವದು (2) ದೇವರಲ್ಲಿ ಪ್ರೀತಿ ಹಾಗೂ ನಂಬಿಕೆಯನ್ನಿರಿಸುವುದು (3) ಇಂದ್ರಿಯ ಸಾರ್ಥಕತೆಯ ಬಗ್ಗೆ ಜಿಗುಪ್ಸೆ ಹೊಂದಿ ನೋವು ನಲಿವುಗಳ ದ್ವಂದ್ವವನ್ನು ಸಹಿಸುವುದು (4) ಜೀವಿಗಳ ಸಂಕಷ್ಟಕರ ಪರಿಸ್ಥಿತಿಯನ್ನು ಅರ್ಥಮಾಡಿಕೊಳ್ಳುವುದು (5) ಸತ್ಯದ ಬಗ್ಗೆ ಅಧ್ಯಾತ್ಮಿಕವಾಗಿ ಅನ್ವೇಷಿಸುವುದು (6) ಎಲ್ಲ ನಿಯಮಗಳನ್ನೂ ಪಾಲಿಸುವುದು (7) ಭಗವಂತನನ್ನು ಕುರಿತು ಚರ್ಚೆಗಳನ್ನು ಆಲಿಸುವುದು (8) ಅವನ ವೈಭವಗಳ ಗುಣಗಾನ ಮಾಡುವುದು (9) ದೈವಿಕ ಮಟ್ಟದಲ್ಲಿ ಪ್ರತಿಯೊಬ್ಬನನ್ನೂ ಒಂದೇ ರೀತಿಯಲ್ಲಿ ಕಾಣುವುದು (10) ಶತ್ರುತ್ವ ಹಾಗೂ ಕೋಪವನ್ನು ತ್ಯಜಿಸುವುದು (11) ತನ್ನನ್ನು ಶರೀರದೊಂದಿಗೆ ಹಾಗೂ ವಾಸಸ್ಥಳದೊಂದಿಗೆ ಗುರುತಿಸಿಕೊಳ್ಳುವುದನ್ನು ಬಿಟ್ಟು ಬಿಡುವುದು (12) ಧರ್ಮಗ್ರಂಥಗಳನ್ನು ಓದುವುದು (13) ಬ್ರಹ್ಮಚರ್ಯವನ್ನು ಪಾಲಿಸುವುದು (14) ಸೂಚಿತ ಕರ್ತವ್ಯಗಳನ್ನು ನೆರವೇರಿಸುವುದು ಮತ್ತು ಅನಾವಶ್ಯಕ ಮಾತುಕತೆಯನ್ನು ನಿಲ್ಲಿಸುವುದು (15) ಸದಾ ಭಗವಂತನನ್ನು ಸ್ಮರಿಸುವುದು.

ಹೀಗೆ "ಭಕ್ತಿಯೋಗ" ವನ್ನು ಅಭ್ಯಸಿಸಿ ಅದರ ಮೂಲಕ ತಾಳ್ಮೆ ಮತ್ತು ಉತ್ಸಾಹದಿಂದ ಜ್ಞಾನಾರ್ಜನೆಯಲ್ಲಿ ಮೇಲ್ಮಟ್ಟಕ್ಕೆ ಸರಿದಲ್ಲಿ ಸುಳ್ಳು ಅಹಂಮಿಕೆಯನ್ನು ತ್ಯಜಿಸುವ ಸಾಧ್ಯತೆಯನ್ನು ಪಡೆಯುತ್ತೀರಿ.

"ಒಬ್ಬರು ಆತ್ಮೋದ್ಧಾರಕ್ಕಾಗಿ ಮಾತ್ರ ಚಟುವಟಿಕೆಗಳನ್ನು ಕೈಗೊಳ್ಳಬೇಕು. ಮಿಕ್ಕ ಯಾವುದೇ ಚಟುವಟಿಕೆಯನ್ನು ಬಿಟ್ಟು ಕೊಡಬೇಕು. ಒಬ್ಬರು ಈ ಬಗೆಯ ಪರಿಸ್ಥಿತಿಯಲ್ಲಿ ಇದ್ದಾರೆಂದರೆ ಅವರು ಆಸೆರಹಿತರಾಗಿದ್ದಾರೆ ಎಂಬುದಾಗಿ ಹೇಳಲಾಗುತ್ತದೆ. ವಾಸ್ತವವಾಗಿ ಜೀವಿಯು ಸಂಪೂರ್ಣವಾಗಿ ಆಸೆರಹಿತರಾಗಿರಲು ಸಾಧ್ಯವಿಲ್ಲದಿದ್ದರೂ, ಆತ್ಮೋದ್ಧಾರಕ್ಕಾಗಿ ವಿನಃ ಮತ್ಯಾವುದರ ಬಗ್ಗೆಯೂ ಆಸೆ ಪಡದೆ ಇದ್ದವನನ್ನು ಆಶಾರಹಿತನೆನ್ನಲಾಗುತ್ತದೆ.

ಋಷಭ ದೇವನು ತನ್ನ ಉಪದೇಶಕ್ಕೆ ಅನುಗುಣವಾಗಿ ಕಾರ್ಯಪ್ರವೃತ್ತನಾಗಬೇಕೆಂದು ತನ್ನ ಪುತ್ರರಿಗೆ ತಿಳಿಸಿದನು: "ಅವಲಂಬಿಗಳನ್ನು ಜನನ ಮರಣಗಳ ಪುನರಾವೃತ್ತಿ ಮಾರ್ಗದಿಂದ ತಪ್ಪಿಸಲಾಗದವನು ಎಂದಿಗೂ ಒಬ್ಬ ಅಧ್ಯಾತ್ಮಗುರು, ಒಬ್ಬ ತಂದೆ, ಒಬ್ಬ ಪತಿ, ಒಬ್ಬಳು ಮಾತೆ ಅಥವಾ ಪೂಜೆಗರ್ಹನಾದ ದೇವತೆಯಾಗ ಕೂಡದು."

ಅವನು ಮುಂದುವರಿದು ಹೀಗೆ ತಿಳಿಸಿದ: " ನನ್ನ ಧ್ಯಾನಮಗ್ನ ಶರೀರವು (ಸತ್ ಚಿತ್ ಆನಂದ ವಿಗ್ರಹ) ನಿರ್ದಿಷ್ಟವಾಗಿ ಒಬ್ಬ ಮಾನವಾಕಾರದಂತೆ ತೋರುತ್ತಿದ್ದರೂ ಅದು ಐಹಿಕ ಮಾನವ ಶರೀರವಲ್ಲ. ನಾನು ಶರೀರವನ್ನು ನನ್ನ ಇಚ್ಛೆಗೆ ಅನುಗುಣವಾಗಿ ಪಡೆದುಕೊಳ್ಳುತ್ತೇನೆ. ನನ್ನ ಹೃದಯದೊಳಗೆ ಭಕ್ತರಿಗೆ ಅಗತ್ಯವಾದ ಭಕ್ತಿಪೂರ್ವಕ ಸೇವೆಯ ಕ್ರಿಯೆಯನ್ನು ಕಾಣಬಹುದು. ಈ ಎಲ್ಲ ಅತಿಶಯ ಗುಣಗಳಿಂದಾಗಿ ಜನರು ಸಾಮಾನ್ಯವಾಗಿ ನನ್ನನ್ನು ಋಷಭ ದೇವನೆಂಬ ಹೆಸರಿನಲ್ಲಿ ಪ್ರಾರ್ಥಿಸುತ್ತಾರೆ.

ದೊರೆಯು ಮುಂದೆ ತನ್ನ ಪುತ್ರರಿಗೆ ಭಕ್ತಿ ಪೂರ್ವಕ ಸೇವೆಯಿಂದ ಉನ್ನತ ಮಟ್ಟಕ್ಕೇರಿದ ತಮ್ಮ ದೊಡ್ಡಣ್ಣ ಭರತನನ್ನು ಅನುಸರಿಸಬೇಕೆಂದು ಉಪದೇಶಿಸಿದನು. ಅವರು ಭರತನಿಗೆ ಸಲ್ಲಿಸುವ ಸೇವೆಯು ತನಗೇ ಮಾಡಿದ ಸೇವೆಯಾಗಿರುತ್ತದೆ ಎಂದನು. ಋಷಭನು ಮುಂದೆ ಉಪದೇಶಿಸಿದನು." ಅಧ್ಯಾತ್ಮಿಕ ಹಾಗೂ ನಿಸ್ತೇಜ ಎರಡರಲ್ಲಿ ಜೀವಂತ ಶಕ್ತಿಯನ್ನು ಹೊಂದಿದ ತರಕಾರಿ, ಹುಲ್ಲು, ಮರಗಿಡಗಳು, ಜಡವಾದ ಕಲ್ಲು, ಭೂಮಿ, ಇವುಗಳಿಗಿಂತಲೂ ಶ್ರೇಷ್ಠವಾಗಿರುತ್ತವೆ. ಚಲನಶೀಲ ಜಂತುಗಳು ಹಾಗೂ ಸರ್ಪಗಳು, ತರಕಾರಿ ಹಾಗೂ ಗಿಡಗಳಿಗಿಂತಲೂ ಶ್ರೇಷ್ಠ ಬುದ್ಧಿ ಶಕ್ತಿಯನ್ನು ಬೆಳೆಸಿಕೊಂಡಂಥ ಮೃಗಗಳು, ಸರ್ಪಗಳು, ಹಾಗೂ ಜಂತುಗಳಿಗಿಂತಲೂ ಶ್ರೇಷ್ಠ. ಮಾನವರು ಮೃಗಗಳಿಗಿಂತಲೂ ಶ್ರೇಷ್ಠ. ಭೂತಗಳು ಯಾವುದೇ ಲೌಕಿಕ ಶರೀರವನ್ನು ಹೊಂದದಿರುವುದರಿಂದ ಅವು ಮಾನವರಿಗಿಂತಲೂ ಶ್ರೇಷ್ಠ. ಗಂಧರ್ವರು ಭೂತಗಳಿಗಿಂತಲೂ ಶ್ರೇಷ್ಠರಾಗಿದ್ದು, ಸಿದ್ಧರು ಗಂಧರ್ವರಿಗಿಂತಲೂ ಶ್ರೇಷ್ಠ. ಕಿನ್ನರರು ಸಿದ್ಧರಿಗಿಂತಲೂ ಶ್ರೇಷ್ಠರಾಗಿದ್ದು, ಅವರಿಗಿಂತಲೂ ಉತ್ತಮರೆಂದರೆ ಅಸುರರು. ದೇವತೆಗಳು ಅಸುರರಿಗಿಂತಲೂ ಶ್ರೇಷ್ಠ. ದೇವತೆಗಳಲ್ಲಿ ಇಂದ್ರನು ಶ್ರೇಷ್ಠನಾಗಿದ್ದು ಬ್ರಹ್ಮನ ನೇರ ಪುತ್ರರು ಅವನಿಗಿಂತಲೂ ಶ್ರೇಷ್ಠರು, ಬ್ರಹ್ಮನು ಮಹೇಶ್ವರನಿಗಿಂತಲೂ ಶ್ರೇಷ್ಠನಾಗಿದ್ದರೂ ನನಗಿಂತ ಕೆಳಗಿನವನು. ನಾನು ಬ್ರಾಹ್ಮಣನಾಗೇ ಚಲಿಸದಿರುವುದರಿಂದ ಬ್ರಾಹ್ಮಣರು ಎಲ್ಲರಿಗಿಂತಲೂ ಅತ್ಯುತ್ತಮರು. ವೇದಗಳು ನನ್ನ ಅತಿಶಯ ಧ್ವನಿ. ಆದುದರಿಂದಲೇ ವೇದಗಳು ಶಬ್ದ- ಬ್ರಹ್ಮ ಬ್ರಾಹ್ಮಣರು ವೇದಗಳನ್ನು ಕರಗತವಾಗಿಸಿಕೊಂಡು ಎಲ್ಲ ಇಂದ್ರಿಯಗಳನ್ನು ನಿಯಂತ್ರಿಸಿಕೊಳ್ಳುವುದರಿಂದ ಅವರು ಶ್ರೇಷ್ಠರಾದವರು. ನಾನು ಸಂಪೂರ್ಣವಾಗಿ ಸಮೃದ್ಧನು. ಸರ್ವ ಶಕ್ತನಾದ್ದರಿಂದಲೇ ಪ್ರತಿಯೊಬ್ಬರಿಗೂ ಶ್ರೇಷ್ಠನಾದವನು."

ದೊರೆಯು ತನ್ನ ಪುತ್ರರಿಗೆ ಯಾವುದೇ ಸ್ಥಾವರ ಅಥವಾ ಜಂಗಮರಾದ ಜೀವಿಯನ್ನು ದ್ವೇಷಿಸಬಾರದು ಎಂಬುದಾಗಿ ತಿಳಿಸಿದನು. ನಾನು ಅವುಗಳಲ್ಲಿ ವಾಸವಾಗಿರುವುದರಿಂದ ಪ್ರತಿಯೊಂದು ಕ್ಷಣದಲ್ಲೂ ಅವೆಲ್ಲವುಗಳಲ್ಲೂ ಗೌರವವನ್ನು ಸಲ್ಲಿಸಬೇಕೆಂದರು. "ಈ ರೀತಿಯಾಗಿ ನೀನು ನನಗೆ ಗೌರವವನ್ನು ಸಲ್ಲಿಸಬೇಕು." ಅವರು ತಮ್ಮೆಲ್ಲ ಇಂದ್ರಿಯಗಳನ್ನು ಭಗವಂತನ ಸೇವೆಯಲ್ಲಿ ತೊಡಗಿಸುವಂತೆ ಅವನು ಸಲಹೆ ಮಾಡಿದನು.

ಹೀಗೆ ತಿಳಿಸಿದ ನಂತರ ಋಷಭ ದೇವನು ಜಗತ್ತಿನಲ್ಲಿ ಪರ್ಯಟನೆ ಮಾಡಲು ಬ್ರಹ್ಮಾವರ್ತದಿಂದ ಹೊರಟನು. ಅವನು ಮಾರ್ಗದಲ್ಲಿ ಒಬ್ಬ ಕುರುಡ, ಕಿವುಡ ಹಾಗೂ ಮೂಕನನ್ನು, ಜಡ ಶಿಲೆಯನ್ನು, ಭೂತವೊಂದನ್ನು, ಹುಚ್ಚನೊಬ್ಬನನ್ನು ಕಂಡರೂ ಮೌನವಾಗಿದ್ದು ಯರೊಂದಿಗೂ ಮಾತನಾಡಲಿಲ್ಲ.

ಈ ಸಂದರ್ಭದಲ್ಲಿ ಪರೀಕ್ಷಿತ ರಾಜನು ಶುಕಾಚಾರ್ಯರನ್ನು ಈ ರೀತಿ ಕೇಳಿದನು: " ನನ್ನ ಪ್ರೀತಿಯ ಭಗವಂತನೇ, ಹೃದಯದಲ್ಲಿ ಸಂಪೂರ್ಣವಾಗಿ ಪರಿಶುದ್ಧರಾದವರು ಭಕ್ತಿ ಯೋಗವನ್ನು ಬುದ್ಧಿ ಶಕ್ತಿಯಿಂದ ಅಭ್ಯಸಿಸುತ್ತಾರೆ. ಮತ್ತು ಫಲಪ್ರದ ಚಟುವಟಿಕೆಯ ಬಗೆಗಿನ ವ್ಯಾಮೋಹವು ಸಂಪೂರ್ಣವಾಗಿ ಸುಟ್ಟು ಭಸ್ಮವಾಗುತ್ತದೆ. ಅಂಥವರಲ್ಲಿ ಅತೀಂದ್ರಿಯ ಯೋಗವು ತನ್ನಾನೇ ಹುಟ್ಟಿಕೊಳ್ಳುತ್ತದೆ. ಅದು ಅವರಿಗೆ ಬೇಗುದಿಯನ್ನುಂಟು ಮಾಡುವುದಿಲ್ಲ. ಹೀಗಾದಾಗ ಋಷಭದೇವನೇಕೆ. ಅವರನ್ನು ಅನಾದರಿಸಿದನು."

ಅಧ್ಯಾತ್ಮಿಕ ಜೀವನದಲ್ಲಿ ಮುಂದುವರಿದವರು ಮನಸ್ಸಿನಲ್ಲಿ ನಂಬಿಕೆ ಯನ್ನಿಟ್ಟುಕೊಳ್ಳುವುದಿಲ್ಲ ಎಂಬುದಾಗಿ ಶ್ರೀ ಶುಕಾಚಾರ್ಯರು ಉತ್ತರಿಸಿದರು. ಅವರು ಸದಾ ಎಚ್ಚರದಿಂದಿರುತ್ತಾರೆ. ಮನಸ್ಸು ಸ್ವಾಭಾವಿಕವಾಗಿಯೇ ತಳಮಳಿಸುತ್ತಿರುತ್ತದೆ. ಯಾರೂ ಅವರೊಂದಿಗೆ ಸ್ನೇಹ ಬೆಳೆಸಕೂಡದು. ಮನಸ್ಸು ಮೋಸಗೊಳಿಸಬಹುದು. ಶಿವನೂ ಸಹ ಶ್ರೀ ಕೃಷ್ಣ ಪರಮಾತ್ಮನ ಮೋಹಿನಿ ಅವತಾರವನ್ನು ಕಂಡಾಗ ಗೊಂದಲಕ್ಕೆ ಸಿಲುಕಿದ. ಸೌಭರಿ ಮುನಿಯೂ ಸಹ ಯೋಗ ಪರಿಪೂರ್ಣತೆಯ ಪ್ರಬುದ್ಧ ಸ್ಥಿತಿಯಿಂದ ಕೆಳಗಿಳಿದ. ಮನಸ್ಸನ್ನು ನಿಯಂತ್ರಿಸಿಕೊಳ್ಳದಿದ್ದರೆ ಅದು ಕಾಮ, ಕ್ರೋಧ ಮತ್ತು ದುರಾಸೆಗೆ ಅನುಕೂಲಗಳನ್ನು ಕಲ್ಪಿಸಿಕೊಡುತ್ತವೆ. ಎಲ್ಲ ಕೆಡುಕುಗಳಿಗೂ ಮನಸ್ಸೇ ಕಾರಣ. ಇವೆಲ್ಲವೂ ಒಟ್ಟಾಗಿ ಸೇರ್ಪಡೆಯಾದಾಗ ಫಲಪ್ರದ ಚಟುವಟಿಕೆಗಳಿಗೆ ಕಾರಣಗಳಾಗುತ್ತವೆ. ಇದರಿಂದಾಗಿಯೇ ಋಷಭ ದೇವನು ಹುಚ್ಚನೊಬ್ಬನ ವೇಷವನ್ನು ಧರಿಸಿ ಎಲ್ಲ ಸ್ಥಳಗಳನ್ನು ಸಂದರ್ಶಿಸಲು ಪ್ರಾರಂಭಿಸಿದ. (ಋಷಭ ದೇವನು ದಕ್ಷಿಣ ಭಾರತದ ಕರ್ನಾಟಕಕ್ಕೆ ಬಂದಿದ್ದು ಕೊಂಕ, ವೆಂಕ ಮುಂತಾದ ಮಾರ್ಗಗಳನ್ನು ಹಾದು ಹೋದನು. ಸಂಧಿ 5, ಅಧ್ಯಾಯ 6, ಟಿಪ್ಪಣಿ 17) ಈ ಪ್ರದೇಶಗಳನ್ನು ಹಾದು ಹೋಗುವಾಗ ಅರಣ್ಯದ ಬೆಂಕಿಯಲ್ಲಿ ಋಷಭ ದೇವನು ಸುಟ್ಟು ಹೋದನು.

ಶ್ರೀ ಶುಕಾಚಾರ್ಯರು ಮುಂದುವರಿಸಿ ಅರ್ಹತನೆಂಬ ಹೆಸರಿನ ಕೊಂಕ, ವೆಂಕ ಮತ್ತು ಕೂಟಕದ ದೊರೆಯು ಋಷಭ ದೇವನ ಕಾರ್ಯಗಳ ಬಗ್ಗೆ ಕೇಳಿದ್ದರೂ ತಪ್ಪುಗಳನ್ನು ಮಾಡುತ್ತ, ದೈವಿಕ ತತ್ತ್ವಗಳನ್ನು ಕಡೆಗಣಿಸಿ ಜೈನ ಹಾಗೂ ಇತರ ಧರ್ಮಗಳ ಹೊಸ ವ್ಯವಸ್ಥೆಯೊಂದನ್ನು ಜಾರಿಗೆ ತಂದನು. (ಹೀಗೆ ವೈದಿಕ ತತ್ತ್ವಗಳಿಗೆ ಇತಿಶ್ರೀಯಾಯಿತು. ಇದು ಕಲಿಯುಗ ಕಾಣಿಸಿಕೊಂಡದ್ದನ್ನು ಸೂಚಿಸುತ್ತದೆ. ಜೈನ ಧರ್ಮದ ಮೇಲಿನ ನಂಬಿಕೆಯನ್ನೂ ಇದು ಘೋಷಿಸಿತು).

ಪರಮಾತ್ಮನು ಪಾಂಡವ ಹಾಗೂ ಯಾದವ ಕುಲಗಳ ಪಾಲಕನೆಂದು ಶ್ರೀ ಶುಕಾಚಾರ್ಯರು ಪರೀಕ್ಷಿತ ರಾಜನಿಗೆ ತಿಳಿಸಿದರು. ಅವನು ಈ ಮನೆತನಗಳ ಅಧ್ಯಾತ್ಮ

ಗುರು. ಋಷಭದೇವನು ಭಗವಂತನ ಅವತಾರ. ಅವನು ಆತ್ಮದ ನಿಜವಾದ ಗುರುತು. ಮತ್ತು ಜೀವನ ಧ್ಯೇಯವನ್ನು ಭೋಧಿಸಿದವನು.

## ಭರತ

## - ಜಡಭರತ

ಋಷಭದೇವನ ನಿರ್ಗಮನದ ನಂತರ ಅವನ ಹಿರಿಯ ಮಗನಾದ ಭರತನು ಜಗತ್ತನ್ನಾಳಿದನು. ಅವನು ವಿಶ್ವರೂಪನ ಪುತ್ರಿಯಾದ ಪಾಂಚಜನಿಯನ್ನು ವಿವಾಹವಾದನು.

ಭರತನಿಗೆ ಮುಂಚೆ ಈ ಗ್ರಹವು ಅಜನಭ ವರ್ಷವೆಂದು ಕರೆಯಲ್ಪಟ್ಟಿತ್ತು. ಭರತ ಮಹಾರಾಜನ ಆಳ್ವಿಕೆಯ ನಂತರ ಅದು ಭರತವರ್ಷವೆಂದು ಹೆಸರಾಯಿತು. (ಈ ಗ್ರಹವನ್ನು ನಭಿ ದೊರೆಯ ದಿಸೆಯಿಂದಾಗಿ ಅಜನಭ ವರ್ಷವೆಂದು ಕರೆಯಲಾಯಿತು). ಭರತ ಮಹಾರಾಜನು ಎಲ್ಲ ವಿಧದಲ್ಲೂ ಆದರ್ಶ ದೊರೆಯಾಗಿದ್ದನು. ವಿವಿಧ ಯಾಗಯಜ್ಞಾದಿಗಳನ್ನು ನಡೆಸುವ ಮೂಲಕ ದೊರೆಯು ಭಗವಂತನನ್ನು ಪೂಜಿಸಿದನು. ಹೀಗೆ ಭರತನು ಲೌಕಿಕ ಕಲ್ಮಶದಿಂದ ಮುಕ್ತನಾದನು. ಜಗತ್ತನ್ನು ಸಾವಿರಾರು ವರ್ಷಗಳ ಕಾಲ ಆಳಿದ ನಂತರ ಅವನು ತನ್ನ ಪುತ್ರರಿಗೆ ತನ್ನೆಲ್ಲ ಐಶ್ವರ್ಯಗಳನ್ನು ಹಂಚಿ ಹರಿದ್ವಾರದಲ್ಲಿರುವ ಪುಲ್ಹಾಶ್ರಮಕ್ಕೆ ಹೊರಟನು. ಭರತನು ಭಗವಂತನನ್ನು ಅಲ್ಲಿ ಪೂಜಿಸಿದನು.

ಭರತ ಮಹಾರಾಜನು ನದಿ ತೀರದಲ್ಲಿ ಕುಳಿತು ಮಂತ್ರವನ್ನು ಪಠಿಸುತ್ತ ದೊರೆಯನ್ನು ಪೂಜಿಸಿದನು. ಒಂದು ದಿನ ಹೀಗೆ ಮಾಡುತ್ತಿರುವ ಸಂದರ್ಭದಲ್ಲಿ ಅವನು ಜಿಂಕೆಯೊಂದು ತೀವ್ರ ಭಾಯಾರಿಕೆಯಿಂದ ನೀರನ್ನು ಕುಡಿಯಲು ನದಿಯನ್ನು ಸಮೀಪಿಸುತ್ತಿದ್ದುದನ್ನು ಕಂಡನು. ಜಿಂಕೆಯು ನೀರನ್ನು ಕುಡಿಯುತ್ತಿರುವಾಗ ಸುತ್ತಮುತ್ತಲಿನಲ್ಲಿದ್ದ ಸಿಂಹವು ದೊಡ್ಡದಾಗಿ ಘರ್ಜಿಸಿದಾಗ ಗರ್ಭಿಣಿಯಾಗಿದ್ದ ಜಿಂಕೆಯು ಭೀತಿಗೊಂಡು ಅದಕ್ಕೆ ಜನಿಸಿದ ಮರಿ ಜಿಂಕೆಯು ನದಿಯ ನೀರಿಗೆ ಬಿದ್ದಿತು. ತಾಯಿ ಜಿಂಕೆಯು ಈ ಗರ್ಭಪಾತದಿಂದಾಗಿ ದುಃಖಗೊಂಡು ಕೆಳಗೆ ಬಿದ್ದು ಮರಣ ಹೊಂದಿತು.

ಭರತ ಮಹಾರಾಜನು ನೀರಿನಲ್ಲಿ ತೇಲಾಡುತ್ತಿದ್ದ ಜಿಂಕೆ ಮರಿಯನ್ನು ಕಂಡು ಅದನ್ನೆತ್ತಿಕೊಂಡು ತನ್ನ ಆಶ್ರಮಕ್ಕೆ ತಂದನು. ಕಾಲಕ್ರಮೇಣ ಭರತನು ಆ ಮರಿಯ ಬಗ್ಗೆ ತುಂಬಾ ವಿಶ್ವಾಸವನ್ನು ಬೆಳೆಸಿಕೊಂಡನು. ಈ ಸಂದರ್ಭದಲ್ಲಿ ಭರತನು ಎಲ್ಲ ನಿಯಮಗಳನ್ನು ಹಾಗೂ ತನ್ನ ಅಧ್ಯಾತ್ಮಿಕ ಏಳಿಗೆಯನ್ನು ಮರೆತನು. ಅವನು ಸದಾಕಾಲವೂ ಜಿಂಕೆಮರಿಯನ್ನು ಕುರಿತು ಆಲೋಚಿಸ ತೊಡಗಿದನು. ಭರತ ಮಹಾರಾಜನು ಮರಿ ಜಿಂಕೆಯ ಬಗ್ಗೆ ಎಷ್ಟರಮಟ್ಟಿನ ವ್ಯಾಮೋಹವನ್ನು ಬೆಳೆಸಿಕೊಂಡನೆಂದರೆ ಅವನ ಹೃದಯವು ಮರಿಯ ಬಗ್ಗೆ ಕಟ್ಟಿ ಹಾಕಲ್ಪಟ್ಟಿತು.

ಅವನು ಭಗವಂತನನ್ನು ಪೂಜಿಸುತ್ತಿದ್ದ ಸಂದರ್ಭದಲ್ಲೂ ಮರಿಯು ಅವನ ಮುಂದೆ ಕಾಣಿಸಿಕೊಳ್ಳುತ್ತಿತ್ತು.

ಭರತ ಮಹಾರಾಜನು ಜಿಂಕೆಯಾಗಿ ರೂಪಾಂತರಗೊಂಡಿದ್ದ ಅನಿಯಂತ್ರಿಕ ಬಯಕೆಯಿಂದ ಅಹ್ಲಾದಗೊಂಡನು. ತನ್ನ ಹಿಂದಿನ ಕರ್ಮಗಳ ಫಲದಿಂದಾಗಿ ಅವನು ಅತೀಂದ್ರಿಯ ಯೋಗ, ಸರಳತೆ ಹಾಗೂ ಭಗವಂತನ ಧ್ಯಾನದಿಂದ, ಉನ್ನತ ಮಟ್ಟದಿಂದ ಕೆಳಗೆ ಬಿದ್ದನು.

ಕೊನೆಗೆ ಸಾವಿನ ಸಂದರ್ಭದಲ್ಲಿ ಜಿಂಕೆಯೊಂದು ಅವನ ಬಳಿ ಕೂತು ಅವನ ಸಾವಿಗಾಗಿ ಪರಿತಪಿಸುತ್ತಿತ್ತು. ದೊರೆಯ ಮನಸ್ಸು ಜಿಂಕೆಯ ದೇಹದಲ್ಲಿ ಮಗ್ನವಾಗಿತ್ತು. ಅವನು ಮಾನವ ಶರೀರವನ್ನು ಕಳೆದುಕೊಂಡರೂ ಜಿಂಕೆಯ ಶರೀರವನ್ನು ಪಡೆದುಕೊಂಡರೂ ತನ್ನ ಪೂರ್ವಜನ್ಮದ ಘಟನೆಯನ್ನು ಮರೆಯಲಿಲ್ಲ.

ಹರಿದ್ವಾರಕ್ಕೆ ಬರುವುದಕ್ಕೆ ಮೊದಲು ಎಲ್ಲರನ್ನೂ ಪೂಜಿಸಿ ತನ್ನ ಇನ್ನುಳಿದ ಜೀವನವನ್ನು ಅಲ್ಲಿ ಕಳೆಯಬೇಕೆಂದಿದ್ದರೂ ಕೊನೆಗೂ ಜಿಂಕೆಯೊಂದರ ವ್ಯಾಮೋಹಕ್ಕೆ ಸಿಗುವ ಹಂಬಲವನ್ನು ತಡೆದುಕೊಳ್ಳಲಾಗದೆ ಜಿಂಕೆಯ ಶರೀರವನ್ನು ಪಡೆದುಕೊಂಡದ್ದಕ್ಕಾಗಿ ಅವನು ಪರಿತಪಿಸಿದನು. ಪಶ್ಚಾತ್ತಾಪದಿಂದಾಗಿ ಅವನು ಐಹಿಕ ಜೀವನದಿಂದ ದೂರವಾದನು. ದೊರೆಯು ಜಿಂಕೆಯ ರೂಪದಲ್ಲಿ ಆಶ್ರಮವನ್ನು ಬಿಟ್ಟು ಮೃತ್ಯುವನ್ನು ಎದುರು ನೋಡುತ್ತಿದ್ದನು.

ಸಾವಿನ ನಂತರ ಭರತನು ಪರಿಶುದ್ಧ ಬ್ರಾಹ್ಮಣ ಕುಟುಂಬವೊಂದರಲ್ಲಿ ಜನಿಸಿದನು. ಭಗವಂತನ ವಿಶೇಷ ಕರುಣೆಗೆ ಪಾತ್ರನಾಗಿ ಭರತ ಮಹಾರಾಜನು ತನ್ನ ಪೂರ್ವ ಜನ್ಮದ ಸ್ಮರಣೆಯನ್ನು ಪಡೆದುಕೊಂಡನು. ಕೆಟ್ಟ ಸಹವಾಸದಿಂದ ದೂರವಿರುವ ಸಲುವಾಗಿ ಅಂತರ್ಯದಲ್ಲಿ ಭಗವಂತನನ್ನು ಸ್ಮರಿಸುತ್ತಿದ್ದರೂ ಹುಚ್ಚನಂತೆ ವರ್ತಿಸಿದನು. ಭರತನು ತನ್ನ ಹೊಸ ಜನ್ಮದಲ್ಲಿ ಜಡ ಭರತನೆಂದು ಕರೆಯಲ್ಪಟ್ಟನು.

ಬಾಹ್ಯವಾಗಿ ಜಡ ಭರತನು ಮಂಕ, ಮೂಕ ಹಾಗೂ ಕುರುಡನೆಂದು ಹೀನಾಯಕ್ಕೆ ಒಳಗಾದರೂ ತನ್ನೊಳಗೇ ಭಗವಂತನ ಬಗ್ಗೆ ಭಕ್ತಿಯನ್ನು ಬೆಳೆಸಿಕೊಂಡನು. ತನ್ನ ತಂದೆಯ ಮರಣದ ನಂತರ ಜಡ ಭರತನು ಒಂಟಿಯಾಗಿ ಆಹಾರಕ್ಕಾಗಿ ದುಡಿದಾಗ ಅವನ ಸೋದರರು ಅವನನ್ನು ಕೃಷಿ ಕೆಲಸಕ್ಕೆ ನೇಮಿಸಿಕೊಂಡರು.

ಈ ಸಮಯದಲ್ಲಿ ದರೋಡೆಕಾರರ ಮುಖಂಡನೊಬ್ಬ ಪುತ್ರನನ್ನು ಪಡೆಯುವ ಆಸೆಯಿಂದ ಕಾಳಿಗೆ ಮನುಷ್ಯನೊಬ್ಬನ ಬಲಿಯನ್ನು ನೀಡುವ ಸಲುವಾಗಿ ಒಬ್ಬಾತನನ್ನು ಸೆರೆ ಹಿಡಿದ. ಆದರೆ ಆ ಮನುಷ್ಯ ಅವನಿಂದ ತಪ್ಪಿಸಿಕೊಂಡು ಓಡಿ ಹೋದ. ಮತ್ತೊಬ್ಬನನ್ನು ಪತ್ತೆ ಹಚ್ಚಲು ಆ ದರೋಡೆಕಾರನ ಅನುಯಾಯಿಗಳು ಹೊಲಗದ್ದೆಗಳಲ್ಲಿ ಸುತ್ತಾಡುತ್ತಿದ್ದಾಗ ಅಲ್ಲಿದ್ದ ಜಡಭರತನನ್ನು ಹಿಡಿದುಕೊಂಡು ಹೊರಟರು. ಸೇವಕರು ಜಡಭರತನಿಗೆ ಮಜ್ಜನ ಮಾಡಿಸಿ ಅವನನ್ನು ಕಾಳಿಗೆ ಬಲಿಯಾಗಿ ನೀಡಲು ನಿರ್ಧರಿಸಿದರು. ಅವನನ್ನು ಒಪ್ಪಿಸುತ್ತಿರುವಾಗ ಅವರಿಗೆ ಕಾಳಿಯ ವಿಗ್ರಹ ಛಿದ್ರಗೊಂಡು ಸ್ವತಃ ಕಾಳಿಯೇ ಹೊರಬಂದು ಜಡಭರತನನ್ನು ರಕ್ಷಿಸಿದ್ದು ಕಂಡಿತು.

ಈ ಘಟನೆಯ ನಂತರ ಜಡಭರತನು ಇಕ್ಷುಮಲೆ ನದಿಯತ್ತ ಹೊರಟನು. ಆ ಸಂದರ್ಭದಲ್ಲಿ ಅಲ್ಲಿ ಸಿಂಧು-ಸಂವಿರದ ದೊರೆಯಾದ ರಹುಗುಣನು ಪಲ್ಲಕ್ಕಿಯಲ್ಲಿ ಕುಳಿತು ಕಪಿಲಾಶ್ರಮಕ್ಕೆ ಹೊರಟಿದ್ದನು.

ದೊರೆಯ ಜನರು ಪಲ್ಲಕ್ಕಿಯನ್ನು ಹೊರಲು ಮನುಷ್ಯನನ್ನು ಹುಡುಕುತ್ತಿದ್ದಾಗ ಅಲ್ಲಿ ಮಲಗಿದ್ದ ಜಡಭರತನನ್ನು ಕಂಡು ಅವನನ್ನು ಕೆಲಸದಲ್ಲಿ ತೊಡಗಿಸಿದಾಗ ತುಂಬಾ ಭಾರವಾಗಿದ್ದ ಪಲ್ಲಕ್ಕಿಯನ್ನು ಜಡಭರತನು ಅತ್ತಿತ್ತ ಓಲಾಡಿಸುತ್ತ ಹೊತ್ತುಕೊಂಡು ಹೊರಟನು. ಸೇವಕರು ಜಡಭರತನನ್ನು ಶಿಕ್ಷಿಸಲು ಬಯಸಿದರಲ್ಲದೆ ದೊರೆಯು ಕೋಪಗೊಂಡು ಜಡಭರತನನ್ನು ನಿಂದಿಸಿ ಛೀಮಾರಿ ಹಾಕಿದನು.

ಜಡಭರತನು ದೊರೆಯೊಂದಿಗೆ ಮಾತನಾಡಿದನು. ತನ್ನ ಶರೀರವೇ ತನಗೆ ಸೇರಿದ್ದಲ್ಲವೆಂದು ತಿಳಿಸಿದನು. ಅವನು ಮುಂದುವರೆದು ಐಹಿಕ ಶರೀರದಲ್ಲಿ ಮುಳುಗಿರುವವರಿಗೆ ಮಾತ್ರ ದೊರೆಯ ಬೈಗಳ ತಟ್ಟುವುದೆಂದು ತನಗೆ ಅದು ತಾಕುವುದೇ ಇಲ್ಲವೆಂದು ತಿಳಿಸಿ ರಾಜ ಮತ್ತು ಸೈನಿಕ ಎಂಬ ಸ್ಥಾನಮಾನವು ಕೇವಲ ಭ್ರಮೆ ಎಂಬುದಾಗಿ ರಾಜನಿಗೆ ಬುದ್ಧಿವಾದ ಮಾಡಿದನು. ಸ್ಥಾನಮಾನವು ಬದಲಾಗಬಹುದೆಂದನು. ದೊರೆಗೆ ತನ್ನ ತಪ್ಪಿನ ಅರಿವಾಗಿ ಜಡಭರತನ ಪಾದದ ಮೇಲೆ ಬಿದ್ದನು. ಅವನು ಜಡಭರತನ ಬಗ್ಗೆ ಹೆಚ್ಚು ತಿಳಿದುಕೊಳ್ಳಲು ಬಯಸಿದನು. ಅವನು ಉನ್ನತನಾದವನು ಹಾಗೂ ಪ್ರಾಜ್ಞನೆಂದು ದೊರೆಯು ಅರಿತಿದ್ದರಿಂದ ಅವನ ಬಗ್ಗೆ ಹೆಚ್ಚೆಚ್ಚು ತಿಳಿದುಕೊಳ್ಳಲು ಆಶಿಸಿದನು.

ಜಡಭರತನು ದೊರೆಗೆ ಹೇಳಿದನು. " ನನ್ನ ಪ್ರೀತಿಯ ದೊರೆಯೇ, ನೀನು ಅನುಭವಿಯಲ್ಲದಿದ್ದರೂ ಪಂಡಿತನಂತೆ ಮಾತನಾಡುತ್ತಿದ್ದೀಯೆ. ನಿನಗೆ ಒಡೆಯ ಸೇವಕರ ಮಧ್ಯದಲ್ಲಿನ ಸಂಬಂಧದ ಬಗ್ಗೆಯಾಗಲಿ ಅಥವಾ ಐಹಿಕ ನೋವು ನಲಿವುಗಳ ಬಗ್ಗೆಯಾಗಲಿ ತಿಳಿದಿಲ್ಲ. ಅವೆಲ್ಲವೂ ಬಾಹ್ಯ ಚಟುವಟಿಕೆಗಳು. ಅನುಭವಿ ವ್ಯಕ್ತಿಯು ಪರಿಪೂರ್ಣ ಸತ್ಯವನ್ನು ಪರಿಗಣಿಸಿ ಈ ರೀತಿಯಾಗಿ ಮಾತನಾಡುವುದೇ ಇಲ್ಲ.

" ಐಹಿಕ ಲಾಭಗಳಲ್ಲಿ ಆಸಕ್ತರಾದವರಿಗೆ ಆಧ್ಯಾತ್ಮಿಕ ಲಾಭಗಳ ಪರಿಗಣನೆಯಿಲ್ಲ. ಮನಸ್ಸಿನಿಂದಾಗಿ ಜೀವಂತನಾಗಿರುವವನು ಕಷ್ಟಗಳಿಗೆ ಸಿಲುಕಿ ಐಹಿಕ ಬೇಗುದಿ ಹಾಗೂ ಸಂತೋಷವನ್ನು ಅನುಭವಿಸುತ್ತಾನೆ. ಭೌತಿಕ ಅಂಶ, ಸ್ವಭಾವ, ಸಂಸ್ಕೃತಿ, ಕರ್ಮ ಮತ್ತು ಕಾಲದ ಅಂಶಗಳು ಇವೆಲ್ಲವೂ ಐಹಿಕ ಕಾರಣಗಳು.

ಎರಡು ಬಗೆಯ ಕ್ಷೇತ್ರಜ್ಞನಿದ್ದು ಒಂದು ಜೀವಿಯಾಗಿದ್ದರೆ ಮತ್ತೊಂದು ಪರಮಾತ್ಮ. ಅವನು ಸೃಷ್ಟಿಯ ಸರ್ವವ್ಯಾಪಕಕ್ಕೆ ಕಾರಣನು. ಅವನು ತನ್ನೊಳಗೇ ಪೂರ್ಣನಾಗಿದ್ದು ಇತರರನ್ನು ಅವಲಂಬಿಸುವವನಲ್ಲ. ಅವನನ್ನು ನಾರಾಯಣನೆಂದು ಕರೆಯಲಾಗಿದೆ. ಸರ್ವವೂ ಅವನೇ (ಭಗವದ್ಗೀತಾಃ 9.4, ಭಗವಂತನೆನ್ನುತ್ತಾನೆ: "ನನ್ನಿಂದ, ನನ್ನ ಅಪ್ರಕಟಿತ ರೂಪದಲ್ಲಿ ಈ ಇಡೀ ಬ್ರಹ್ಮಾಂಡವನ್ನು ನಾನು ಆವರಿಸಿಕೊಂಡಿದ್ದೇನೆ. ಎಲ್ಲ ಜೀವಿಗಳೂ ನಾನೇ. ಆದರೆ ನಾನು ಅವರೊಳಗಿಲ್ಲ.)"

ಜಡಭರತನು ದೊರೆಗೆ ಎಲ್ಲಿಯವರೆಗೆ ನಿಯಮಕ್ಕೆ ಸಿಲುಕಿದ ಆತ್ಮವು ಐಹಿಕ ಶರೀರವನ್ನು ಅಂಗೀಕರಿಸುತ್ತದೋ ಅಲ್ಲಿಯವರೆಗೂ ಅದು ಐಹಿಕ ಸಂತಸದ ಕಲ್ಮಶದಿಂದ ಮುಕ್ತವಾಗದೆ, ಅವನು ಎಲ್ಲಿಯವರೆಗೂ ತನ್ನ ಆರು ಶತೃಗಳನ್ನು ಜಯಿಸಿ ತನ್ನ ಅಧ್ಯಾತ್ಮಿಕ ಬುದ್ಧಿಶಕ್ತಿಯನ್ನು ಕಂಡುಕೊಳ್ಳುವುದಿಲ್ಲವೋ ಅಲ್ಲಿಯವರೆಗೆ ಅವನು ವಿವಿಧ ಸ್ಥಳಗಳಲ್ಲಿ ಹಾಗೂ ಐಹಿಕ ಜಗತ್ತಿನ ವಿವಿಧ ಬಗೆಯ ಜೀವಿಗಳಲ್ಲಿ ಅಲೆದಾಡುತ್ತಿರಬೇಕು ಎಂದನು. " ಅನಿಯಂತ್ರಿತ ಮನಸ್ಸು ಜೀವಗಳ ಅತ್ಯಂತ ದೊಡ್ಡ ಶತೃ. ಮನಸ್ಸಿಗೆ ಒಂದು ಅವಕಾಶವನ್ನು ನೀಡಿದರೆ ಅದು ಮಾನವನ ಹೆಗಲೇರಿ ಕೂರುತ್ತದೆ."

ಜಡಭರತನು ದೊರೆಗೆ ಮನಸ್ಸನ್ನು ಜಯಿಸುವಂತೆ ಉಪದೇಶಿಸಿದನು.

ರಾಹುರಣ ದೊರೆಯು ಜಡಭರತನಿಗೆ ಅವನು ನೀಡಿದ ವಿವರಗಳಿಗೆ ಧನ್ಯವಾದ ಹಾಗೂ ಗೌರವವನ್ನು ಸಲ್ಲಿಸಿದನು. ತನ್ನ ಸಂದೇಹಗಳು ನಿವಾರಣೆಯಾದ ಬಗ್ಗೆ ದೊರೆಗೆ ಸಮಧಾನವಾಯ್ತು. ಆದರೆ ದೊರೆಯ ನಿಗೂಢ ಯೋಗ ಸೂಚನೆಗಳ ಬಗ್ಗೆ ಇನ್ನೂ ಹೆಚ್ಚಿನ ವಿವರಗಳನ್ನು ಹಾಗೂ ಇನ್ನು ಹೆಚ್ಚು ಬೆಳಕನ್ನು ಮೂಡಿಸಿಕೊಳ್ಳಲು ತಾನು ಬಯಸುವೆನೆಂದನು.

ವಿವಿಧ ರೀತಿಯ ಐಹಿಕ ಸಂಯೋಗಗಳು ಹಾಗೂ ಹೊಂದಾಣಿಕೆಗಳ ಮದ್ಯೆ ವಿವಿಧ ಆಕಾರಗಳು ಹಾಗೂ ಐಹಿಕ ಪರಿವರ್ತನೆಗಳಿವೆ ಎಂಬುದಾಗಿ ಜಡಭರತನು ನುಡಿದನು. ಯಾವುದೋ ಕಾರಣಕ್ಕಾಗಿ ಅವರು ಭೂಮಿಗೆ ಸಾಗಿದ್ದು ಅವರನ್ನು ಪಲ್ಲಕ್ಕಿ ಹೊರುವವರೆಂದು ಕರೆಯಲಾಗುತ್ತದೆ. ಐಹಿಕ ಶರೀರವು ವ್ಯಕ್ತಿಯೊಬ್ಬನ ವಿವಿಧ ಅಂಗಾಂಗಗಳನ್ನು ಪ್ರತಿನಿಧಿಸುತ್ತದೆ. ಪಲ್ಲಕ್ಕಿಯಲ್ಲಿ ಕುಳಿತಿರುವ ದೊರೆಯು ಭೂಮಿಯ ಮತ್ತೊಂದು ರೂಪ.

ಅವನು ದೊರೆಗೆ ಪಲ್ಲಕ್ಕಿಯನ್ನು ಹೊರಲು ಜನರನ್ನು ನೇಮಿಸಿಕೊಳ್ಳುವ ಮೂಲಕ ಹಾಗೂ ಐಹಿಕ ಆಕೃತಿಯೇ ಆದ ತಾನು ಪಲ್ಲಕ್ಕಿಯಲ್ಲಿ ಕೂಡುವ ಮೂಲಕ ಅನ್ಯಾಯ ಮಾಡುತ್ತಿದ್ದೀಯೆಂದು ತಿಳಿಸಿದನು. (ಬ್ರಹ್ಮಸೂತ್ರದಲ್ಲಿ 2.1.14- " ಈ ಬ್ರಹ್ಮಾಂಡ ರಚನೆಯ ದ್ರವ್ಯ ಹಾಗೂ ಚೇತನ ಮಿಶ್ರಣವಾಗಿದ್ದರೂ ಕಾರಣೀಭೂತನಾದವನು ಅತ್ಯುನ್ನತ ಬ್ರಹ್ಮನ್ - ಪರಮಾತ್ಮ" ಎಂದಿದೆ).

ಜಗತ್ತು ಮೊಟ್ಟ ಮೊದಲು ಅಣುಗಳ ಮಿಶ್ರಣದಿಂದ ಸೃಷ್ಟಿಗೊಂಡರೂ ಈ ಅಣುಗಳು ಸ್ಥಾಯಿಯಲ್ಲ. ವಾಸ್ತವವಾಗಿ ಜಗತ್ತಿಗೆ ಅಣುಗಳು ಕಾರಣವಲ್ಲ.

ಹಾಗಾದರೆ ಯಾವುದು ಅಂತಿಮ ಸತ್ಯ? ಇದಕ್ಕೆ ಉತ್ತರವೆಂದರೆ ದ್ವಂದ್ವವಿಲ್ಲದ ಬುದ್ಧಿ ಶಕ್ತಿಯು ಅಂತಿಮ ಸತ್ಯ ಎಂಬುದು. ಅದು ಐಹಿಕ ಗುಣಗಳ ಕಲುಕುವಿಕೆಯಿಂದ ಹೊರನಿಂತಿರುವಂಥದ್ದು. ಅದು ನಮಗೆ ವಿಮೋಚನೆಯನ್ನು ಒದಗಿಸುತ್ತದೆ. ಆ

ತಿಳಿವಳಿಕೆಯಿಂದ ಸಂಪೂರ್ಣ ಅರಿಯುವಿಕೆಯನ್ನು ಅತ್ಯುನ್ನತ ವ್ಯಕ್ತಿಯು ಸಾಧಿಸಿಕೊಳ್ಳುತ್ತಾನೆ. ಎಲ್ಲ ವಿದ್ವಾಂಸರೂ ಅತ್ಯುನ್ನತ ವ್ಯಕ್ತಿಯನ್ನು ಬ್ರಹ್ಮನ್, ಪರಮಾತ್ಮ ಹಾಗೂ ಇತರರಿಗೆ ಕಾರಣನಾದ ವಾಸುದೇವನೆಂದು ವಿವರಿಸುತ್ತಾರೆ.

ಜಡಭರತನು ರಹುಗುಣನಿಗೆ ಹೇಳಿದನು. "ಒಬ್ಬನು ತನ್ನ ಇಡೀ ದೇಹಕ್ಕೆ ಹಿರಿಯ ಭಕ್ತಾದಿಗಳ ಪಾದಾರವಿಂದದ ಧೂಳನ್ನು ಲೇಪಿಸಿಕೊಳ್ಳಲು ಅವಕಾಶವನ್ನು ಪಡೆದ ಹೊರತು ಅವನು ಸತ್ಯ ಹಾಗೂ ಸಂಪೂರ್ಣ ಸತ್ಯವನ್ನು ಸಾಕ್ಷಾತ್ಕಾರ ಗೊಳಿಸಿಕೊಳ್ಳಲಾರ. ಕೇವಲ ಬ್ರಹ್ಮಚರ್ಯವನ್ನು ಹಾಗೂ ಗೃಹಸ್ಥನ ನಿಯಮ -ನಿಬಂಧನೆಗಳನ್ನು ಕಟ್ಟುನಿಟ್ಟಾಗಿ ಅನುಸರಿಸುವ ಮೂಲಕ ಅಥವಾ ಸನ್ಯಾಸಿಯಾಗಿ ಇಲ್ಲವೇ ನೀವು ತಪಸ್ಸನ್ನು ಮಾಡಿ ಅಥವಾ ಚಳಿಗಾಲದಲ್ಲಿ ನೀರಿನಲ್ಲಿ ಮುಳುಗಿ ಅಥವಾ ಬೇಸಿಗೆಯಲ್ಲಿ ಅಗ್ನಿಯ ಮಧ್ಯದಲ್ಲಿ ಕೊಡುವ ಮೂಲಕ ಇದು ಸಾಧ್ಯವಿಲ್ಲ. ಸಂಪೂರ್ಣ ಸತ್ಯವನ್ನು ಅರಿವಾಗಿಸಿಕೊಳ್ಳಲು ಇನ್ನೂ ಅನೇಕ ವಿಧಾನಗಳಿವೆ. ಆದರೆ ಹಿರಿಯ ಭಕ್ತನೊಬ್ಬನ ಕರುಣೆಗೆ ಪಾತ್ರನಾದವನಿಗೆ ಪರಿಪೂರ್ಣ ಸತ್ಯವು ಪ್ರಕಟಗೊಳ್ಳುತ್ತದೆ".

ಮುಂದೇಳುವ ಪ್ರಶ್ನೆ: ಪರಿಶುದ್ಧ ಭಕ್ತನಾದವನು ಯಾರು ? ಸದಾ ಭಗವಂತನನ್ನು ಉಳಿದು ಬೇರೆ ಯಾರನ್ನು ಕುರಿತೂ ಚರ್ಚಿಸದೇ ಇರುವವನೇ ಪರಿಶುದ್ಧ ಭಕ್ತ. ಜಡಭರತನು ತನ್ನ ಪೂರ್ವಜನ್ಮದ ವೃತ್ತಾಂತವನ್ನು ಹಾಗೂ ಜಿಂಕೆಯೊಂದರ ಸಲುವಾಗಿ ತಾನು ಭಗವಂತನ ಸೇವೆಯನ್ನು ಬಿಟ್ಟದ್ದನ್ನು ಕುರಿತು ತಿಳಿಸಿದನು.ಈಗ ಪೂರ್ವಜನ್ಮದಲ್ಲಿ ತಾನು ಮಾಡಿದ ತಪಸ್ಸನ್ನು ಅರಿತುಕೊಂಡು ಇನ್ನಿತರರ ಸಹವಾಸವನ್ನು ಬಿಟ್ಟಿದ್ದೇನೆ. ಕೆಟ್ಟಸಂಪರ್ಕಕ್ಕೆ ಭಯಪಟ್ಟು ಒಬ್ಬನೇ ಅಲೆದಾಡುತ್ತೇನೆ ಎಂದನು.

ಜಡಭರತನು ಮುಂದುವರಿದು ಐಹಿಕ ಆನಂದದಿಂದ ದೂರವಿದ್ದು ಪರಮಾತ್ಮನ ಸೇವೆಗೇ ತನ್ನನ್ನು ಭಕ್ತನೊಬ್ಬನು ಮಿಸಲಿಟ್ಟುಕೊಳ್ಳಬೇಕೆಂದು ತಿಳಿಸಿದನು. ಜಡಭರತನು ಅರಣ್ಯ ನೀಡಬಲ್ಲ ಆನಂದವನ್ನು ವಿವರಿಸಿ ಭಗವಂತನ ಪಾದಾರವಿಂದವನ್ನು ಪಡೆದುಕೊಳ್ಳಲು ಐಹಿಕ ಆನಂದವನ್ನು ಹೇಗೆ ನಿವಾರಿಸಿಕೊಳ್ಳಬೇಕೆಂದು ವಿವರಿಸಿದನು.

ಪರೀಕ್ಷಿತ ರಾಜನು ಆನಂದದ "ಅರಣ್ಯ" ರಹಸ್ಯವನ್ನು ತಿಳಿದುಕೊಳ್ಳಲು ಬಯಸಿದನು. ಅದಕ್ಕೆ ಶ್ರೀ ಶುಕಾಚಾರ್ಯರು ವರ್ತಕರ ಗುಂಪಿಗೆ ಸೇರಿದ ಒಬ್ಬಾತ ಹೆಚ್ಚೆಚ್ಚು ಹಣವನ್ನು ಸಂಪಾದಿಸಲು ಸದಾ ಉತ್ಸುಕನಾಗಿರುತ್ತಾನೆ ಎಂದನು. ಅವನು ಮೊದಲು ಅರಣ್ಯವನ್ನು ಪ್ರವೇಶಿಸಿ, ಮರಗಳನ್ನು ಕಡಿದು ಹೆಚ್ಚಿಗೆ ಸಂಪಾದನೆಗಾಗಿ ಅದನ್ನು ನಗರದಲ್ಲಿ ಮಾರುತ್ತಾನಲ್ಲದೆ ಅವನ ದುರಾಸೆ ಹೆಚ್ಚುತ್ತಲೇ ಹೋಗುತ್ತದೆ.

ಐಹಿಕ ಜಗತ್ತನ್ನು ಅರಣ್ಯಕ್ಕೆ ಹೋಲಿಸಲಾಗಿದೆ. ಐಹಿಕ ಅಸ್ತಿತ್ವದಲ್ಲಿ ಅನಿಯಂತ್ರಿತ ಇಂದ್ರಿಯಗಳು ದರೋಡೆಕಾರರು. ಮನೆಯ ಸದಸ್ಯರು ದೋಚಿಕೊಳ್ಳುವರೇ. ಕೌಟುಂಬಿಕ ಜೀವನವನ್ನು ಅನುಭವಿಸುವ ಆಸೆಯು ಸಂಪೂರ್ಣವಾಗಿ ಭಸ್ಮವಾದ ಹೊರತು ಅದು

ಮತ್ತೆ ಮತ್ತೆ ಬೆಳೆಯುತ್ತಲೇ ಹೋಗುತ್ತದೆ. ಆಸೆಯ ಬೀಜಗಳನ್ನು ನಾಶಪಡಿಸದ ಜಗತ್ತಿನಲ್ಲಿ ಕುಟುಂಬ ಜೀವನ ನಿರ್ದಿಷ್ಟವಾಗಿ ಅರಣ್ಯದೊಳಗಿನ ಉರಿಯುವ ಬೆಂಕಿಯಂತಿರುತ್ತದೆ. ಅಲ್ಲಿ ಆನಂದವೆಂಬುದೇ ಇಲ್ಲ. ಆದ್ದರಿಂದ ಒಬ್ಬರು ಭಗವಂತನ ಪಾದಗಳಲ್ಲಿ ಆಶ್ರಯ ಪಡೆಯಬೇಕೇ ಹೊರತು ಮಾನವ ನಿರ್ಮಿತ ಅನಧಿಕೃತ ದೇವರುಗಳ ಪಾದಗಳಿಂದಲ್ಲ. ಯಾರೂ ಸುಳ್ಳು ಯೋಗಿಗಳನ್ನು ನಂಬಕೂಡದು.

ಶ್ರೀ ಶುಕಾಚಾರ್ಯರು ಹೇಳುತ್ತಾರೆ. "ಭಕ್ತಿಯ ಮಾರ್ಗವನ್ನು ಅಂಗೀಕರಿಸಿದ ಹೊರತು ಒಬ್ಬರು ಐಹಿಕ ಅಸ್ತಿತ್ವದ ಹಿಡಿತದಿಂದ ಪಾರಾಗಲಾರರು. ನಿರ್ಣಾಯಕ ವಾದದ್ದೆಂದರೆ, ಐಹಿಕ ಬದುಕಿನಲ್ಲಿ ಯಾರೂ ಸುಖವಾಗಿರಲಾರರು. ಪರಮಾತ್ಮನತ್ತ ನೋಡಬೇಕು."

ಜಡಭರತನ ಭೋದನೆಗಳನ್ನು ಸಾರಾಂಶಗೊಳಿಸುತ್ತ ಶ್ರೀಶುಕಾಚಾರ್ಯರು ಆ ಜಡಭರತನು ಸೂಚಿಸಿರುವ ಮಾರ್ಗವು ಭಗವಂತನ ವಾಹನ ಗರುಡನ ಮಾರ್ಗವಾಗಿದ್ದು ಸಾಮಾನ್ಯ ರಾಜರುಗಳು ಕೇವಲ ಪತಂಗಗಳು ಎಂದರು. ಪತಂಗಗಳು ಗರುಡನ ಮಾರ್ಗವನ್ನು ಅನುಸರಿಸಲಾರವು. ಇದುವರೆಗೆ ಯಾರೇ ದೊಡ್ಡ ದೊರೆಗಳು ಹಾಗೂ ಜಯಶಾಲಿಯೆನ್ನಿಸಿಕೊಂಡವರು ಈ ಭಕ್ತಿಮಾರ್ಗವನ್ನು, ಮಾನಸಿಕವಾಗಿ ಕೂಡ, ಅನುಸರಿಸಲು ಸಾಧ್ಯವಾಗಿಲ್ಲ."

## ಗಂಗೆಯ ಉಗಮ

ಶ್ರೀ ಶುಕಾಚಾರ್ಯರು ಗಂಗೆಯ ಅವತರಣದ ವಿವರವನ್ನು ತಿಳಿಸಿದರು. ವಿಷ್ಣುವು ವಾಮನನ ಅವತಾರದಲ್ಲಿ ಬಲಿ ಮಹಾರಾಜನನ್ನು ಸಮೀಪಿಸಿ ಮೂರು ಹೆಜ್ಜೆಗಳಷ್ಟು ಭೂಮಿಯನ್ನು ಕೇಳಿದನು. ಬಲಿ ಮಹಾರಾಜನು ಇದಕ್ಕೊಪ್ಪಿದನು. ವಾಮನ ದೇವನು ತನ್ನ ಎಡಗಾಲನ್ನು ಜಗತ್ತಿನ ಕೊನೆಯವರೆಗೆ ವಿಸ್ತರಿಸಿ ತನ್ನ ಹೆಬ್ಬೆಟ್ಟಿನ ಉಗುರಿನಿಂದ ಅದರ ಹೊದಿಕೆಯಲ್ಲಿ ರಂಧ್ರವನ್ನು ಕೊರೆದನು. ಈ ರಂಧ್ರದಿಂದ ಕಾರಣೀಭೂತ ಸಾಗರದಿಂದ ಪರಿಶುದ್ಧ ನೀರು ಈ ಜಗತ್ತನ್ನು ಗಂಗಾ ನದಿಯಾಗಿ ಪ್ರವೇಶಿಸಿತು. ಈ ನದಿಯು ಕೆಂಪನೆಯ ಭಸ್ಮದಿಂದ ಕೂಡಿದೆ. ಗಂಗಾ ನದಿಯು ಜಗತ್ತಿಗೆ ಧುಮುಕುವ ಮೊದಲು ನೇರವಾಗಿ ಪರಮಾತ್ಮನ ಪದ್ಮಪಾದವನ್ನು ಸೋಕುವುದರಿಂದ ಅವಳನ್ನು ವಿಷ್ಣುಪಾದಿಯೆಂದು ಕರೆಯಲಾಗಿದೆ. ಅನಂತರ ಗಂಗಾ ನದಿಯು ಜಾಹ್ನವಿ ಮತ್ತು ಭಾಗೀರಥಿಯೆಂಬ ಹೆಸರುಗಳನ್ನು ಪಡೆದುಕೊಂಡಳು. ಒಂದು ಸಾವಿರ ವರ್ಷಗಳ ನಂತರ ಗಂಗೆಯ ನೀರು ಧ್ರುವಲೋಕಕ್ಕೆ ಅಂದರೆ ಬ್ರಂಹಾಂಡದ ಅತಿ ಎತ್ತರದ ಗ್ರಹಕ್ಕೆ ಧುಮುಕಿತು. ಆದ್ದರಿಂದ ಪ್ರಾಜ್ಞಮುನಿಗಳು ಹಾಗೂ ವಿದ್ವಾಂಸರು ಧ್ರುವಲೋಕವನ್ನು ವಿಷ್ಣುಪಾದ ಸಾಗರ ಎಂಬುದಾಗಿ ಘೋಷಿಸಿದ್ದಾರೆ.

ಧ್ರುವ ಮಹಾರಾಜನು ತನ್ನ ಗ್ರಹದಿಂದ ಮತ್ತು ಧ್ರುವಲೋಕಕ್ಕಿಂತಲೂ ಕೆಳಗಿನ ಲೋಕದಲ್ಲಿ ವಾಸವಾಗಿರುವ ಸಪ್ತಋಷಿಗಳು ಗಂಗೆಯನ್ನು ಗೌರವದಿಂದ ದೃಷ್ಟಿಸುತ್ತಾರಲ್ಲದೆ

ಅವಳನ್ನು ತಮ್ಮ ಪರಿಶುದ್ಧಿಗಾಗಿ ಬಳಸಿಕೊಳ್ಳುತ್ತಾರೆ. (ಅತಿಶಯರನ್ನು ಎರಡು ಶ್ರೇಣಿಗಳ ಕೆಳಗೆ ವಿಭಜಿಸಬಹುದು-ನಿರ್ವಿಶೇಷವಾದಿಗಳು ಅಥವಾ ನಿರ್ವಿಕಾರವಾದಿಗಳು ಮತ್ತು ಇತರ ಭಕ್ತರು). ನಿರ್ವಿಕಾರವಾದಿಗಳು ಜೀವನ ಅಧ್ಯಾತ್ಮಿಕ ವೈವಿಧ್ಯತೆಯನ್ನು ಒಪ್ಪಲಾರರು. ಪರಮಾತ್ಮನ ಅಸ್ತಿತ್ವದಲ್ಲಿ ಮುಳುಗಲು ಬಯಸುತ್ತಾರೆ. ಭಕ್ತಾದಿಗಳು ಹೇಗಾದರೂ ಪರಮಾತ್ಮನ ಅತಿಶಯ ಚಟುವಟಿಕೆಗಳಲ್ಲಿ ಭಾಗವಹಿಸಲು ಆಶಿಸುತ್ತಾರೆ. ಎಲ್ಲ ಹಿರಿಯ ಋಷಿಗಳೂ ಭಕ್ತಿಪೂರ್ವಕ ಸೇವೆಯನ್ನು ಜೀವನದ ಅತ್ಯುನ್ನತ ಪರಿಶುದ್ಧತೆಯೆಂಬುದಾಗಿ ಭಾವಿಸುತ್ತಾರೆ.

ಗಂಗೆಯು ತನ್ನ ಮಾರ್ಗದಲ್ಲಿ ಸಿಗುವ ವಿವಿಧ ಲೋಕಗಳನ್ನು ಹಾದು ಭೂಮಿಗೆ ಪಯಣಿಸುತ್ತಾಳೆ. ಮೇರುಪರ್ವತವು ಗಂಗೆಯನ್ನು ನಾಲ್ಕು ಶಾಖೆಗಳಾಗಿ ವಿಭಜಿಸಿದ್ದು ಪ್ರತಿಯೊಂದು ಶಾಖೆಯ ವಿವಿಧ ದಿಕ್ಕುಗಳಲ್ಲಿ ನುಗ್ಗುತ್ತದೆ. ಈ ಶಾಖೆಗಳು-ಸೀತಾ, ಅಲಕನಂದ, ಚಕ್ಷು ಮತ್ತು ಭದ್ರೆ-ಸಾಗರಕ್ಕೆ ಹರಿಯುತ್ತವೆ. ಬಂಗಾಳಕೊಲ್ಲಿಯ ಉಪ್ಪು ನೀರಿನತ್ತ ಗಂಗೆ ಹರಿದು ಹೋಗುವ ಸ್ಥಳವನ್ನು ಇಂದಿಗೂ ಗಂಗಾ ಸಾಗರವೆಂದೇ ಕರೆಯಲಾಗುತ್ತದೆ. ಮಕರ ಸಂಕ್ರಾಂತಿಯಂದು ಲಕ್ಷಾಂತರ ಜನರು ಇಲ್ಲಿ ಸ್ನಾನ ಮಾಡುತ್ತಾರೆ.

ಜಂಬೂ ದ್ವೀಪವನ್ನು ವಿವರಿಸುವಾಗ ಭಾಗವತ ಪುರಾಣವು ವಿವಿಧ ಹಾದಿಗಳನ್ನು ವಿವರಿಸುತ್ತದೆ.

## ಜಂಬೂ ದ್ವೀಪ

(1) ಭದ್ರಸ್ವ ವರ್ಷವನ್ನು ಆಳುವವನು ಭದ್ರಸ್ವವ. ಅವನು ಹಾಗೂ ಅವನ ಸಹಚರಿಗಳು ಭಗವಂತನ ಸಾಕಾರ ರೂಪವಾಗಿರುವ ಹಯಗ್ರೀವನನ್ನು ಪೂಜಿಸುತ್ತಾರೆ. ಪ್ರತಿಯೊಂದು ಕಲ್ಪದ ಕೊನೆಯಲ್ಲಿ ಅಜ್ಞಾನವೆಂಬ ರಾಕ್ಷಸರು ವೈದಿಕ ಜ್ಞಾನವನ್ನು ಅಪಹರಿಸುವಾಗ ಹಯಗ್ರೀವನು ಅದನ್ನು ರಕ್ಷಿಸಿ ಬ್ರಹ್ಮದೇವನಿಗೆ ಅದನ್ನು ನೀಡುತ್ತಾನೆ.

(2) ಹರಿವರ್ಷವನ್ನು ನರಸಿಂಹ ದೇವರನ್ನು ಪೂಜಿಸುವ ಪ್ರಹ್ಲಾದ ಮಹಾರಾಜನು ಆಳುತ್ತಾನೆ.

(3) ಕೇತುಮಾಲ ವರ್ಷದಲ್ಲಿ ಭಗವಂತನು ಹೃಷಿಕೇಷನೆಂಬ ಮನ್ಮಥನ ರೂಪದಲ್ಲಿ ಕಾಣಿಸಿಕೊಳ್ಳುತ್ತಾನೆ.

(4) ರಮ್ಯಕ ವರ್ಷದಲ್ಲಿ ಮನು ಮತ್ತು ಇನ್ನಿತರರೆಲ್ಲರೂ ಒಳಿತಿನ ಸಾಕಾರ ರೂಪವಾದ ಮತ್ತು ಇಡೀ ಜಗತ್ತನ್ನು ಆಳುವ ಹಾಗೂ ನಡೆಸುವ ಮತ್ಸ್ಯ ದೇವನನ್ನು ಆರಾಧಿಸುತ್ತಾರೆ.

(5) ಹಿರಣ್ಮಯ ವರ್ಷದಲ್ಲಿ ಭಗವಂತನು ಆಮೆಯ(ಕೂರ್ಮ)ರೂಪವನ್ನು ತಾಳುತ್ತಾನೆ.

(6) ಉತ್ತರ ಕುರು ವರ್ಷದಲ್ಲಿ ಭಗವಂತನು ವರಾಹ ರೂಪವನ್ನು ತಾಳುತ್ತಾನೆ.

ಮೇಲೆ ವಿವರಿಸಲಾದ ವರ್ಷಗಳ ಎಲ್ಲ ನಿವಾಸಿಗಳೂ ಭಗವಂತನನ್ನು ಆತನ ವಿವಿಧ ರೂಪಗಳಲ್ಲಿ ಹಾಡಿ ಹೊಗಳುತ್ತಾರೆ. ಭಾಗವತವು ಜಗತ್ತು, ಗ್ರಹಗಳು, ಇತ್ಯಾದಿಗಳ ರೂಪು ರೇಖೆಗಳನ್ನು ವಿವರಿಸುತ್ತದೆ.

"ತೀವ್ರ ನೋವನ್ನು ಅನುಭವಿಸುವಂಥ ನರಕ ಸದೃಶ ಪರಿಸ್ಥಿತಿಗಳನ್ನು ಪ್ರವೇಶಿಸುವ ಮಾನವರನ್ನು ಉಳಿಸುವುದು ಹೇಗೆಂಬ ಬಗ್ಗೆ" ಪರೀಕ್ಷಿತ ರಾಜನು ಶ್ರೀಶುಕಾಚಾರ್ಯರಿಂದ ತಿಳಿದುಕೊಳ್ಳಲು ಬಯಸಿದನು. ಸಾಯುವ ಮುನ್ನ ಒಬ್ಬರು ತಾವು ಮಾಡಿದ ಪಾಪಗಳಿಗಾಗಿ ಪಶ್ಚಾತ್ತಾಪ ಪಡಬೇಕೆಂದು ಶ್ರೀ ಶುಕಾಚಾರ್ಯರು ತಿಳಿಸಿದರು.

ಪಾಪಗಳ ಪರಿಣಾಮಗಳ ಬಗ್ಗೆ ಒಬ್ಬರಿಗೆ ತಿಳಿವಳಿಕೆಯಿದ್ದರೂ ಸಹ ಅವನು ಪಶ್ಚಾತ್ತಾಪ ಪಟ್ಟನಂತರವೂ ಮತ್ತೆ ಮತ್ತೆ ಪಾಪಗಳನ್ನು ಮಾಡಲು ಒತ್ತಾಯಿಸಲ್ಪಟ್ಟರೆ ಅಂಥ ಪಶ್ಚಾತ್ತಾಪಕ್ಕೆ ಇರುವ ಬೆಲೆಯೇನು ಎಂಬ ಬಗ್ಗೆ ಪರೀಕ್ಷಿತರಾಜನು ಶ್ರೀ ಶುಕಾಚಾರ್ಯರಿಂದ ತಿಳಿದುಕೊಳ್ಳಲು ಬಯಸಿದನು.

ಶ್ರೀ ಶುಕಾಚಾರ್ಯರು ಅವನ ಪ್ರಶ್ನೆಗೆ ಈ ರೀತಿ ಉತ್ತರಿಸಿದರು. ಫಲಪ್ರದ ಚಟುವಟಿಕೆಗಳು ಹಾಗೂ ಪಶ್ಚಾತ್ತಾಪಕ್ಕೆ ಯಾವ ಅರ್ಥವೂ ಇಲ್ಲ. ನಿಜವಾದ ಪಶ್ಚಾತ್ತಾಪವೆಂದರೆ ಪರಮಾತ್ಮನನ್ನು ಅರ್ಥವಾಗಿಸಬಲ್ಲಂಥ ಪರಿಶುದ್ಧ ತಿಳಿವಳಿಕೆಯಿಂದ, ಅಂದರೆ ವೇದಾಂತದ ಮೂಲಕ, ಜ್ಞಾನೋದಯವನ್ನು ಪಡೆಯುವುದೇ ನಿಜವಾದ ಪಶ್ಚಾತ್ತಾಪವು. ಒಬ್ಬರು ಜ್ಞಾನದ ಕ್ರಮಬದ್ಧ ತತ್ತ್ವಗಳನ್ನು ಅನುಸರಿಸಿ ಕಾಲಕ್ರಮೇಣ ಐಹಿಕ ದೋಷಗಳನ್ನು ನಿವಾರಿಸಿಕೊಳ್ಳಲು ಮುಕ್ತಿಯತ್ತ ಸಾಗಬೇಕು. ಸುವರ್ಣ ನಿಯಮಗಳೆಂದರೆ. (1) ಬ್ರಹ್ಮಚರ್ಯ (2) ಸರಳತೆ (ನೇಮ) ಮತ್ತು ಇಂದ್ರಿಯ ಸುಖದ ತ್ಯಾಗ (3) ಮನಸ್ಸನ್ನು ನಿಯಂತ್ರಿಸಿಕೊಳ್ಳುವದು (4) ದಾನ (5) ಸತ್ಯಸಂಧತೆ (6) ಶುಚಿ ಮತ್ತು ಅಹಿಂಸೆ (7) ಕ್ರಮಬದ್ಧ ತತ್ತ್ವಗಳ ಆಚರಣೆ ಮತ್ತು ಪವಿತ್ರ ನಾಮಸ್ಮರಣೆ. (ಭಗವದ್ಗೀತೆ, 65, 1 - ಭಗವಂತನೆನ್ನುತ್ತಾನೆ: ಯಾರು ತಿನ್ನುವುದು, ನಿದ್ರಿಸುವುದು, ಕೆಲಸ ಮಾಡುವುದು ಹಾಗೂ ಮನೋರಂಜನೆ ಪಡೆಯುವುದು ಇಂಥ ಹವ್ಯಾಸಗಳಲ್ಲಿ ಮಿತಿಯಿಂದಿರುತ್ತಾರೋ ಅಂಥವರು ಯೋಗಾಭ್ಯಾಸದ ಮೂಲಕ ಎಲ್ಲ ಐಹಿಕ ನೋವುಗಳನ್ನು ಹೋಗಲಾಡಿಸಿ ಕೊಳ್ಳಬಹುದು).

ಭಗವಂತನಿಗೆ ಸಂಬಂಧಿಸಿದಂತೆ ಪರಿಪೂರ್ಣವಾದ, ಅಕಲುಷಿತ ಭಕ್ತಿಪೂರ್ವಕ ಸೇವೆಯನ್ನು ಅಳವಡಿಸಿಕೊಂಡಿರುವಂಥ ಅಪರೂಪ ವ್ಯಕ್ತಿ ಮಾತ್ರ ಸರಳ ಕ್ರಿಯೆಗಳ ಕಳೆಗಳನ್ನು ಕಿತ್ತೊಗೆಯಬಹುದು. ಭಗವಂತನಿಗೇ ತನ್ನನ್ನು ಸಮರ್ಪಿಸಿಕೊಂಡಿರುವವನು ಮಾತ್ರ ಪರಿಶುದ್ಧಗೊಳ್ಳಬಹುದು. ಆದರೆ ಒಬ್ಬರು ತಪಸ್ಸು, ನೇಮ, ಇತ್ಯಾದಿಗಳ

ಮೂಲಕ ಪರಿಶುದ್ಧಗೊಳ್ಳಲಾರರು. ಪರಿಶುದ್ಧ ಭಕ್ತರು ಅನುಸರಿಸುವ ಮಾರ್ಗವು ಪವಿತ್ರವಾದ ಮಾರ್ಗ. ಭಕ್ತರಲ್ಲದವರು ಮಾಡಿದ ಪಾಪಗಳನ್ನು ಶುದ್ಧೀಕರಿಸಲಾಗದು.

## ಅಜಾಮಿಳನ ಕಥೆ

ಸಾಯುವ ಕಾಲದಲ್ಲಿ ಭಗವಂತನ ನಾಮಸ್ಮರಣೆ ಮಾಡಿದ ಅಜಾಮಿಳನ ಕಥೆಯನ್ನು ಶ್ರೀ ಶುಕಾಚಾರ್ಯರು ಉಲ್ಲೇಖಿಸುತ್ತಾರೆ. ಯಮರಾಜನ ದೂತರು ಅಜಾಮಿಳನನ್ನು ಕೊಂಡೊಯ್ಯಲು ಬಂದ ಸಂದರ್ಭದಲ್ಲಿ ಭಗವಂತನ ದೂತರು ಅವನನ್ನು ಕರೆದೊಯ್ಯಲು ಆಗಮಿಸುತ್ತಾರೆ. ವಾದವಿವಾದಗಳು ನಡೆದಾಗ ಯಮರಾಜನ ದೂತರು ಹಿಂತಿರುಗಿ ಅವನಿಗೆ ನಡೆದ ಸಂಗತಿಗಳನ್ನು ತಿಳಿಸುತ್ತಾರೆ. ಯಮರಾಜ ಹಾಗೂ ಅವನ ದೂತರ ಮಧ್ಯೆ ಸಂವಾದವೇರ್ಪಡುತ್ತದೆ.

ಅಜಾಮಿಳನು ಕನ್ಯಾಕುಬ್ಜವೆಂಬ ನಗರದಲ್ಲಿ ವಾಸವಾಗಿದ್ದ ಬ್ರಾಹ್ಮಣ. ಅವನು ವೇಶ್ಯೆಯೊಬ್ಬಳನ್ನು ವಿವಾಹವಾಗಿದ್ದರಿಂದ ಬ್ರಾಹ್ಮಣ ಗುಣಗಳನ್ನೆಲ್ಲ ಕಳೆದುಕೊಂಡಿರುತ್ತಾನೆ. ನೀತಿಗೆಟ್ಟ ಬ್ರಾಹ್ಮಣನು ಇನ್ನಿತರರನ್ನು ಬಯಸಿ ದ್ಯೂತದಲ್ಲಿ ಅವರನ್ನು ಮೋಸಗೊಳಿಸಿ ಅಥವಾ ಅವರನ್ನು ನೇರವಾಗಿ ಮೋಸಗೊಳಿಸುವ ಮೂಲಕ ತನ್ನ ಜೀವನೋಪಾಯವನ್ನು ಕಲ್ಪಿಸಿಕೊಂಡಿರುತ್ತಾನೆ. ಅವನಿಗೆ ಹತ್ತು ಪುತ್ರರಿದ್ದು ಅವರಲ್ಲಿ ಅತ್ಯಂತ ಕಿರಿಯವನಿಗೆ ನಾರಾಯಣನೆಂಬ ಹೆಸರಿಡಲಾಗುತ್ತದೆ. ಅಜಾಮಿಳನಿಗೆ ಇವನು ಅತ್ಯಂತ ಪ್ರಿಯನಾದ ಪುತ್ರ. ತನ್ನ ಸಾವು ಖಚಿತವಾದಾಗ ಅವನು ತನ್ನ ಮಗ ನಾರಾಯಣನನ್ನು ಸ್ಮರಿಸಿ ಅವನನ್ನು ಕೂಗಿ ಕರೆಯುತ್ತಾನೆ. ಅಜಾಮಿಳನು ನಿಧನ ಹೊಂದಿದಾಗ ಯಮದೂತರು ಹಾಗೂ ವಿಷ್ಣು ದೂತರು ಅವನ ಆತ್ಮವನ್ನು ಸೆಳೆದುಕೊಳ್ಳಲು ಏಕಕಾಲಕ್ಕೆ ಅಲ್ಲಿಗೆ ಆಗಮಿಸುತ್ತಾರೆ. ಅಲ್ಲಿ ಇಬ್ಬರು ದೂತರ ಮಧ್ಯೆ ಕದನವೇ ಏರ್ಪಡುತ್ತದೆ. ಈ ಮಧ್ಯೆ ಅವರಲ್ಲಿ ವಾದ ವಿವಾದಗಳು ಏಳುತ್ತವೆ. ಭಗವಾನ್ ವಿಷ್ಣುವಿನ ದೂತರು ಯಮದೂತರನ್ನು ಧಾರ್ಮಿಕ ತತ್ತ್ವಗಳು ಮತ್ತು ಅಧಾರ್ಮಿಕತೆಯ ಚಿಹ್ನೆಗಳ ಅರ್ಥವನ್ನು ವಿವರಿಸುವಂತೆ ಕೇಳುತ್ತಾರೆ. ಅವರು ಅದಕ್ಕೂ ಮುಂದೆ "ಇತರರನ್ನು ಶಿಕ್ಷಿಸುವ ವಿಧಾನವ್ಯಾವುದು - ಶಿಕ್ಷೆಗೆ ನಿಜವಾದ ಅಭ್ಯರ್ಥಿಗಳ್ಯಾರು? ನಿಷ್ಫಲ ಚಟುವಟಿಕೆಗಳಲ್ಲಿ ತೊಡಗಿರುವ ಎಲ್ಲ ಕರ್ಮಿಗಳೂ ಶಿಕ್ಷಾರ್ಹರೋ ಅಥವಾ ಅವರಲ್ಲಿ ಕೆಲವರು ಮಾತ್ರರೋ ?" ಎಂಬುದಾಗಿ ಪ್ರಶ್ನಿಸುತ್ತಾರೆ.

ಯಮದೂತರು ಉತ್ತರಿಸುತ್ತಾರೆ." ವೇದಗಳಲ್ಲಿ ಸೂಚಿತವಾಗಿರುವಂಥವು ಧರ್ಮ, ಧಾರ್ಮಿಕ ತತ್ತ್ವಗಳಾಗಿದ್ದು ಅದಕ್ಕೆ ವಿರುದ್ಧವಾದದ್ದು ಅಧರ್ಮ. ವೇದಗಳು ಭಗವಂತನಿಂದ - ನಾರಾಯಣನಿಂದ - ನೇರವಾಗಿ ಬಂದಂಥವಾಗಿದ್ದು ಸ್ವಯಂ ಜನ್ಯವಾದವು. ಎಲ್ಲವಕ್ಕೂ ಕಾರಣೀಭೂತನಾದ ನಾರಾಯಣನು ತನ್ನ ಆವಾಸಸ್ಥಾನದಲ್ಲಿದ್ದುಕೊಂಡು ಮೂರು ವಿಧಾನಗಳ ಮೂಲಕ - ಸತ್ತ್ವ, ರಜಸ್ ಮತ್ತು

ತಪಸ್ಸಿಗೆ ಅನುಗುಣವಾಗಿ ಇಡೀ ಬ್ರಹ್ಮಾಂಡವನ್ನು ನಿಯಂತ್ರಿಸುತ್ತಾನೆ. ನಾರಾಯಣನು ಇಡೀ ವಿಶ್ವಕ್ಕೆ ಕಾರಣನಾದವನು.

ನಿಷ್ಫಲ ಚಟುವಟಿಕೆಗಳಲ್ಲಿ ತೊಡಗಿರುವವರೆಲ್ಲರಿಗೂ ಅವರವರ ಪಾಪಪೂರಿತ ಕೆಲಸಗಳಿಗೆ ಅನುಗುಣವಾಗಿ ಅನುಮತಿ ನೀಡಬೇಕಾಗುತ್ತದೆ. ಐಹಿಕ ಶರೀರವನ್ನು ಅಂಗೀಕರಿಸಿದವನು ಕ್ರಿಯೆಗೈಯ್ಯದೆ ಇರುವುದು ಅಸಾಧ್ಯವಾಗಿದ್ದು ಐಹಿಕ ಪ್ರಕೃತಿಯ ನಿಯಮಗಳಿಗೆ ಅನುಸಾರವಾಗಿ ಪಾತ್ರವಹಿಸುತ್ತಿರುವವನಿಗೆ ಪಾಪಕೃತ್ಯವೂ ಅನಿವಾರ್ಯ. ಆದ್ದರಿಂದ ಐಹಿಕ ಜಗತ್ತಿನೊಳಗಿನ ಎಲ್ಲ ಜೀವಿಗಳೂ ಶಿಕ್ಷಾರ್ಹರು. ಒಬ್ಬರು ಧರ್ಮ ಅಥವಾ ಅಧರ್ಮ, ಈ ಜೀವನದಲ್ಲಿನ ಕ್ರಿಯೆಗಳು ಇವುಗಳ ಗಾತ್ರಕ್ಕೆ ಅನುಗುಣವಾಗಿ ಸಂತಸವನ್ನು ಪಡೆಯಬೇಕು ಅಥವಾ ಮುಂದಿನ ಜನ್ಮದಲ್ಲಿ ತನ್ನ ಕರ್ಮದ ಪ್ರತಿಕ್ರಿಯೆಗಳನ್ನು ಅನುಭವಿಸಬೇಕು.

ಯಮದೂತರ ಹೇಳಿಕೆಗಳನ್ನು ಆಲಿಸಿದ ನಂತರ ವಿಷ್ಣುದೂತರು ಉತ್ತರಿಸಿದರು: "ಧಾರ್ಮಿಕ ತತ್ತ್ವಗಳನ್ನು ಅನುಸರಿಸುತ್ತಿಲ್ಲದವರು ಪಾಪರಹಿತವಾದ, ಶಿಕ್ಷೆಗೆ ಅರ್ಹರಲ್ಲದವರನ್ನು ಅನಾವಶ್ಯಕವಾಗಿ ಶಿಕ್ಷಿಸುತ್ತಿದ್ದಾರೆ. ಅಜಾಮಿಳನು ತನ್ನ ಅಸಹಾಯಕ ಪರಿಸ್ಥಿತಿಯಿಂದಾಗಿ ನಾರಾಯಣನ ನಾಮಸ್ಮರಣೆಯನ್ನು ಮಾಡಿದ್ದರಿಂದ ಅವನ ಪಾಪಕ್ರಿಯೆಗಳಿಂದ ಕ್ಷಮಿಸಲ್ಪಟ್ಟಿದ್ದಾನೆ. ಅವನು ಪರಿಶುದ್ಧನಾಗಿ ಅದನ್ನು ಪಠಿಸದಿದ್ದರೂ ಅವನು ನಿಂದನೆಯೋಪಾದಿಯಲ್ಲಿ ಅದನ್ನು ಪಠಿಸದೆ ಇರುವುದರಿಂದ ಈಗ ಪರಿಶುದ್ಧನಾಗಿದ್ದು ಮೋಕ್ಷಕ್ಕೆ ಅರ್ಹನಾಗಿರುತ್ತಾನೆ.

ಅಜಾಮಿಳನಿಗೆ ನಾರಾಯಣನೆಂಬ ಹೆಸರಿನ ಮಗನಿದ್ದು ಅವನು ಯಾವುದೇ ಚಟುವಟಿಕೆಗಳನ್ನು ಮಾಡಬೇಕಾದಾಗಲೆಲ್ಲ ನಾರಾಯಣನ ಹೆಸರನ್ನು ಹೇಳುತ್ತಿದ್ದ. ಪವಿತ್ರ ನಾಮಸ್ಮರಣೆಯು ಪಶ್ಚಾತ್ತಾಪದ ಅಂತಿಮ ಶಬ್ದ. ಇದು ಅತ್ಯಂತ ಉತ್ತಮವಾದ ಪಶ್ಚಾತ್ತಾಪ. ಪಾಪಿಷ್ಠರು ಧಾರ್ಮಿಕ ಆಚರಣೆಗಳ ಮೂಲಕ ಪರಿಶುದ್ಧರಾಗುವುದಿಲ್ಲ. ಅವು ಕೊನೆಯಲ್ಲಿ ಭಗವಂತನ ಹೆಸರನ್ನು ಸ್ಮರಿಸುವುದು. ಧಾರ್ಮಿಕ ಕ್ರಿಯೆಗಳು ಮಾತ್ರ ಸಾಲದು. ಅಜಾಮಿಳನು ಭಗವಾನ್ ನಾರಾಯಣನ ನಾಮಸ್ಮರಣೆ ಮಾಡಿರುವುದರಿಂದ ಅವನ ಶರೀರವನ್ನು ಮುಟ್ಟಕೂಡದೆಂದು ವಿಷ್ಣುದೂತರು ಯಮದೂತರಿಗೆ ತಿಳಿಸಿದರು.

ಶ್ರೀ ಶುಕಾಚಾರ್ಯರು ಮುಂದುವರಿಸಿದರು : "ಎಲೈ ಪ್ರೀತಿಪಾತ್ರನಾದ ದೊರೆಯೇ, ಹೀಗೆ ಆಲೋಚನೆ ಮತ್ತು ವಾದಗಳ ಮೂಲಕ ಭಕ್ತಿಪೂರ್ವಕ ಸೇವೆಯ ತತ್ತ್ವಗಳನ್ನು ಸಂಪೂರ್ಣವಾಗಿ ನಿರ್ಧರಿಸಿ ಭಗವಾನ್ ವಿಷ್ಣುವಿನ ಆಜ್ಞಾಪಾಲಕರು ಅಜಾಮಿಳನನ್ನು ಯಮದೂತರ ಜೀತದಿಂದ ತಪ್ಪಿಸಿದರು." ನಂತರ ಯಮದೂತರು ಹಿಂತಿರುಗಿ ವಿಷಯವನ್ನು ಯಮರಾಜನಿಗೆ ತಿಳಿಸಿದರು.

ವಿಷ್ಣುದೂತರ ಹಾಗೂ ಯಮದೂತರ ಮಧ್ಯದಲ್ಲಿನ ಸಂಭಾಷಣೆಗಳನ್ನು ಆಲಿಸಿದ ನಂತರ ಅಜಾಮಿಳನು ಜ್ಞಾನೋದಯವನ್ನು ಹೊಂದಿದವನಾಗಿ ಹಾಗೂ

ಭಗವಂತನ ಪರಿಪೂರ್ಣ ಪರಿಶುದ್ಧ ಭಕ್ತನಾದನು. ಅವನು ತನ್ನ ಹಿಂದಿನ ಪಾಪಗಳನ್ನು ಸ್ಮರಿಸಿಕೊಂಡು ತನ್ನ ಹಿಂದಿನ ವರ್ತನೆಗಾಗಿ ಪರಿತಪಿಸಿದನು. ಅಜಾಮಿಳನು ಅನಂತರ ಹರಿದ್ವಾರಕ್ಕೆ ಹೊರಟು ಭಗವಂತನ ಸೇವೆಯಲ್ಲಿ ಕಾಲವನ್ನು ಕಳೆದನು. ಲೌಕಿಕ ಬಂಧನಗಳಿಂದ ಅವನು ಸಂಪೂರ್ಣವಾಗಿ ಬಿಡುಗಡೆಯಾದ ನಂತರ ಅವನಿಗೆ ಮೋಕ್ಷ ದೊರೆಯಿತು.

ಯಮರಾಜನು ಜೀವಿಗಳೆಲ್ಲರ ಧಾರ್ಮಿಕ ಹಾಗೂ ಅಧಾರ್ಮಿಕ ಚಟುವಟಿಕೆಗಳ ನಿಯಂತ್ರಿಕನಾಗಿದ್ದರೂ ಅಜಾಮಿಳನ ವಿಷಯದಲ್ಲಿ ಅವನ ಆಜ್ಞೆಯ ಉಲ್ಲಂಘನೆಯಾದ ಬಗ್ಗೆ ಪರೀಕ್ಷಿತನು ತನ್ನ ಸಂಶಯವನ್ನು ವ್ಯಕ್ತಪಡಿಸಿದನು. ಈ ವಿಷಯವನ್ನು ದೂತರು ಯಮರಾಜನಿಗೆ ವರದಿ ಮಾಡಿದಾಗ ಯಮನ ಪ್ರತಿಕ್ರಿಯೆ ಯಾವುದಾಗಿತ್ತು?

ಯಮದೂತರು ಯಮರಾಜನಿಗೆ ವಿಷಯವನ್ನು ವರದಿ ಮಾಡಿ ಮಾನವ ಜಗತ್ತಿನಲ್ಲಿ ಎಷ್ಟು ಜನ ನಿಯಂತ್ರಕರು ಅಥವಾ ಆಳುವವರು ಹಾಗೂ ನ್ಯಾಯಗಳಿವೆ ಎಂಬುದನ್ನು ತಿಳಿದುಕೊಳ್ಳಲು ಬಯಸಿದರು ಎಂಬುದಾಗಿ ಶ್ರೀ ಶುಕಾಚಾರ್ಯರು ಉತ್ತರಿಸಿದರು.

ಅದಕ್ಕೆ ಯಮರಾಜನು ತನ್ನ ದೂತರು ತನ್ನನ್ನು ಶ್ರೇಷ್ಠನಾದವನೆಂದು ಭಾವಿಸಿದ್ದರು. ತಾನು ಹಾಗಲ್ಲವೆಂಬುದಾಗಿ ಮಾರುತ್ತರಿಸಿದರು. ಅವನಿಗಿಂತಲೂ ಮೇಲೆ ದೇವತೆಗಳಿದ್ದು. ಭಗವಂತನ ಕೆಲವು ರೂಪಗಳೆಂದರೆ ಬ್ರಹ್ಮ ವಿಷ್ಣು, ಮಹೇಶ್ವರನೆಂದನು. ಅವರು ಸೃಷ್ಟಿ, ಮುನ್ನಡೆ ಮತ್ತು ನಿರ್ನಾಮದ ನೇತೃತ್ವವನ್ನು ಹೊಂದಿದ್ದಾರೆ. ಇಡೀ ಜಗತ್ತು ಭಗವಂತನಿಂದ ನಿಯಂತ್ರಿಸಲ್ಪಟ್ಟಿದೆ (ಕೃಷ್ಣ ಪರಮಾತ್ಮನು ಭಗವದ್ಗೀತಾ 7.7 ರಲ್ಲಿ ಹೇಳುತ್ತಾರೆ "ಎಲೈ ನನ್ನ ಪ್ರೀತಿಯ ಧನಂಜಯನೇ, ನನಗಿಂತಲೂ ಶ್ರೇಷ್ಠರಾದವರು ಯಾರೂ ಇಲ್ಲ") ಯಾರೊಬ್ಬರೂ ಅವನನ್ನು ನೋಡಲು ಸಾಧ್ಯವಿಲ್ಲದಿದ್ದರೂ ಅವನು ಪ್ರತಿಯೊಬ್ಬರ ಹೃದಯದಲ್ಲೂ ವಾಸವಾಗಿದ್ದಾನೆ. (ಭಗವಂತನು ಭಗವದ್ಗೀತೆ 15.15 ರಲ್ಲಿ ಹೇಳಿದ್ದಾನೆ: "ನಾನು ಪ್ರತಿಯೊಬ್ಬರ ಹೃದಯದಲ್ಲಿ, ಸ್ಮರಿಸಿಕೊಳ್ಳಲು ಅಗತ್ಯವಾದ ಸೂಚನೆಗಳನ್ನು, ಬುದ್ಧಿಶಕ್ತಿಯನ್ನು ಹಾಗೂ ಮರವೆಯನ್ನು ನೀಡುತ್ತಾ ವಾಸವಾಗಿದ್ದೇನೆ)

ಪರಮಾತ್ಮನು ಸ್ವಯಂ ಸಮರ್ಥನು ಹಾಗೂ ಸಂಪೂರ್ಣ ಸ್ವತಂತ್ರನು. ಅವನು ಎಲ್ಲರಿಗೂ ಒಡೆಯನಾಗಿದ್ದು ಭ್ರಮಾ ಶಕ್ತಿಯನ್ನೂ ಒಳಗೊಂಡಂತೆ ಎಲ್ಲವೂ ಆಗಿದ್ದಾನೆ. ನಿಜವಾದ ಧಾರ್ಮಿಕ ತತ್ತ್ವಗಳನ್ನು ಭಗವಂತನು ರೂಪಿಸುತ್ತಾನೆ. ಋಷಿಗಳು ಹಾಗೂ ದೇವತೆಗಳನ್ನು ಒಳಗೊಂಡಂತೆ ವಾಸ್ತವ ಧಾರ್ಮಿಕ ತತ್ತ್ವಗಳನ್ನು ಯಾರೂ ನಿರ್ಣಯಿಸಲಾರರು. ಬ್ರಹ್ಮ ನಾರದ, ಶಿವ, ನಾಲ್ವರು ಕುಮಾರರು, ಕಪಿಲ, ಮನು, ಪ್ರಹ್ಲಾದ, ಭೀಷ್ಮ ಬಲಿ ಮತ್ತು ಯಮರಾಜರು ಭಾಗವತ ಧರ್ಮ ಅಥವಾ ಪರಮಾತ್ಮನಿಗೆ ಶರಣಾಗತಿ ಎಂಬುದಾಗಿ ಜನಜನಿತಗೊಂಡಂಥ ಧಾರ್ಮಿಕ ತತ್ತ್ವಗಳನ್ನು ಬಲ್ಲವರಾಗಿದ್ದಾರೆ.

ಯಮರಾಜನು ಹೇಳಿದನು: "ಭಗವಂತನ ಪವಿತ್ರ ನಾಮವನ್ನು ಪಠಿಸುವುದರಿಂದ ಆರಂಭವಾಗುವ ಭಕ್ತಿ ಸೇವೆಯು ಮಾನವ ಸಮಾಜದಲ್ಲಿನ ಜೀವಿಗಳಿಗೆ ಅತ್ಯುನ್ನತ ಧಾರ್ಮಿಕ ತತ್ತ್ವವಾಗಿದೆ".

ಪರೀಕ್ಷಿತ ರಾಜನು ಶುಕಾಚಾರ್ಯರಿಂದ ಸವಿಸ್ತಾರವಾಗಿ ದೇವತೆಗಳು, ದಾನವರು, ಮಾನವರು, ನಾಗರು, ಮೃಗಗಳು ಹಾಗೂ ಪಕ್ಷಿಗಳು ಇವುಗಳ ಸೃಷ್ಟಿಯನ್ನು ಕುರಿತಂತೆ ತಿಳಿದುಕೊಳ್ಳಲು ಬಯಸಿದನು.

ಜೀವಿಗಳಿಂದ ಜಗತ್ತನ್ನು ತುಂಬಿಸಿದಂಥ ದಕ್ಷನ ಜನನದ ಬಗ್ಗೆ ಈಗಾಗಲೇ ಹಿಂದಿನ ಅಧ್ಯಾಯಗಳಲ್ಲಿ ಚರ್ಚಿಸಲಾಗಿದೆ. ಪ್ರಜಾಪತಿ ದಕ್ಷನು ತನ್ನ ವೀರ್ಯ ಹಾಗೂ ಬುದ್ಧಿಶಕ್ತಿಯ ಮೂಲಕ ವಿವಿಧ ರೀತಿಯ ಜೀವಿಗಳನ್ನು ಸೃಷ್ಟಿಸಿದ. (ದಕ್ಷನು ಸ್ವಯಂಭು ಮನುವಿನ ಆಳ್ವಿಕೆಯಲ್ಲಿ ಮೊದಲು ಜನಿಸಿದ್ದರೂ ಶಿವನನ್ನು ನೋಯಿಸಿದ ಕಾರಣಕ್ಕಾಗಿ ಮೇಕೆಯ ತಲೆಯನ್ನು ಹೊಂದುವ ಶಿಕ್ಷೆಗೆ ಈಡಾದ. ಅವಮಾನಿತಗೊಂಡ ದಕ್ಷನು ತನ್ನ ಶರೀರವನ್ನೇ ಬಿಟ್ಟುಕೊಟ್ಟು ಚಕ್ಷುಷ ಮನ್ವಂತರವೆಂದು ಕರೆಯಲಾದ ಆರನೇ ಮನ್ವಂತರದಲ್ಲಿ ಮತ್ತೆ ಜನಿಸಿದನು.)

## ದಕ್ಷನಿಂದ ಸಂತತಿಯ ನಿರ್ಮಾಣ

ಪ್ರಜಾಪತಿ ದಕ್ಷನು ತನ್ನ ಬುದ್ಧಿಶಕ್ತಿಯಿಂದ ಮೊದಲು ಎಲ್ಲ ದೇವತೆಗಳು, ರಾಕ್ಷಸರು, ಮಾನವರು, ಪಕ್ಷಿಗಳು, ಜಲಜಂತುಗಳು ಮುಂತಾದವರನ್ನು ಸೃಷ್ಟಿಸಿದನು. ಇವೆಲ್ಲವನ್ನೂ ಸೃಷ್ಟಿಸಿದ ನಂತರ ಇವೆಲ್ಲವೂ ಹರಿಯನ್ನು ಸಮೀಪಿಸಿ "ಹಂಸಗ್ರಾಹ್ಯ" ಪ್ರಾರ್ಥನೆಗಳನ್ನು ಸಲ್ಲಿಸಿದವು. ಈ ಪ್ರಾರ್ಥನೆಗಳು ವೇದಗಳ ಭಾಗವು. ತನ್ನ ವಂದನೆಗಳನ್ನು ಸಲ್ಲಿಸುವ ಸಲುವಾಗಿ ಭೂಮಿಗೆ ಬಿದ್ದ ದಕ್ಷನ ಮುಂದೆ ಪರಮಾತ್ಮನು ಪ್ರತ್ಯಕ್ಷನಾದನು. ಭಗವಂತನು ಪರಿಪೂರ್ಣತೆಯನ್ನು ಸಾಧಿಸಿದ ದಕ್ಷನನ್ನು ಕಂಡು ಸಂತುಷ್ಟನಾಗಿ ವರವೊಂದನ್ನು ಬೇಡುವಂತೆ ಕೇಳಿದನು. ಭಗವಂತನೆಂದನು:

"ಧ್ಯಾನದ ರೂಪದಲ್ಲಿರುವ ಸರಳ ಸ್ಥಿತಿಯು ನನ್ನ ಹೃದಯ. ಶ್ಲೋಕ ಮತ್ತು ಮಂತ್ರಗಳ ರೂಪದಲ್ಲಿರುವ ವೈದಿಕ ತಿಳಿವಳಿಕೆಯಿಂದ ನನ್ನ ಶರೀರವು ರೂಪಗೊಳ್ಳುತ್ತದೆ. ಆಧ್ಯಾತ್ಮಿಕ ಚಟುವಟಿಕೆಗಳು ಮತ್ತು ಉತ್ತುಂಗ ಭಾವನೆಗಳು ನನ್ನ ನಿಜವಾದ ರೂಪ. ಧಾರ್ಮಿಕ ಕ್ರಿಯೆಗಳು ಮತ್ತು ಯಜ್ಞಯಾಗಾದಿಗಳು ಸೂಕ್ತ ರೀತಿಯಲ್ಲಿ ನೆರವೇರಿಸಲ್ಪಟ್ಟಂತೆ ನನ್ನ ಶರೀರದ ವಿವಿಧ ಅಂಗಾಂಗಗಳಾಗುತ್ತವೆ. ಧರ್ಮಶ್ರದ್ಧೆಯಿಂದ ಅಥವಾ ಧಾರ್ಮಿಕ ಚಟುವಟಿಕೆಗಳ ಮೂಲಕ ಉಂಟಾದ ಅಗೋಚರ ಅದೃಷ್ಟದಿಂದ ನನ್ನ ಬುದ್ಧಿಶಕ್ತಿ ರೂಪಿತವಾಗಿದ್ದು ವಿವಿಧ ವಿಷಯಗಳಲ್ಲಿ ನನ್ನ ಆಜ್ಞೆಯನ್ನು ಪಾಲಿಸುವ ದೇವತೆಗಳು ನನ್ನ ಜೀವ ಹಾಗೂ ಆತ್ಮ."

"ಈ ಜಗತ್ತು ಸೃಷ್ಟಿಯಾಗುವುದಕ್ಕೆ ಮುಂಚೆ ನಾನು ನನ್ನ ನಿರ್ದಿಷ್ಟ ದೈವಿಕ ಸಾಮರ್ಥ್ಯಗಳಿಂದಾಗಿ ಅಸ್ತಿತ್ವದಲ್ಲಿದ್ದೆ. ಆಗ ಪ್ರಜ್ಞೆಯು, ನಿದ್ರಾವಸ್ಥೆಯಲ್ಲಿ ಒಬ್ಬರು

ಪ್ರಜ್ಞಾಶಕ್ತಿಯ ರೂಪನ್ನು ತಾಳದಿರುವಂತೆಯೇ, ಯಾವ ರೂಪವನ್ನೂ ಹೊಂದಿರಲಿಲ್ಲ. ನನ್ನ ಐಹಿಕ ಶಕ್ತಿಯಿಂದಾಗಿ ನನ್ನೊಳಗೇ ವಿಶ್ವವು ವ್ಯಕ್ತಗೊಂಡು ಈ ಜಗತ್ತಿನ ರೂಪದಲ್ಲಿ ಪ್ರಮುಖವಾದ ಹಾಗೂ ನಿಮ್ಮ ಶಕ್ತಿಯಾದ ಮತ್ತು ಐಹಿಕ ಜನನಿಯಿಂದಲ್ಲದ ಬ್ರಹ್ಮನು ಕಾಣಿಸಿಕೊಂಡನು.

"ನನ್ನ ಶಕ್ತಿಯಿಂದ ಸ್ಫೂರ್ತಿಯನ್ನು ಪಡೆದುಕೊಂಡವನಾಗಿ ಸೃಷ್ಟಿಸಲು ಪ್ರಯತ್ನಿಸುತ್ತಿದ್ದಾಗ ಅವನು ತಾನು ಅಸಮರ್ಥನೆಂಬುದಾಗಿ ಭಾವಿಸಿದನು. ಆದ್ದರಿಂದ ಬುದ್ಧಿವಾದವನ್ನು ತಿಳಿಸಿದಾಗ ಅವನು ಅತ್ಯಂತ ಕಷ್ಟಕರವಾದ ತಪಸ್ಸನ್ನು ಕೈಗೊಂಡನು. ಹೀಗಾಗಿ ಅವನು ನಿನ್ನನ್ನೂ ಒಳಗೊಂಡಂತೆ ಸೃಷ್ಟಿಕಾರ್ಯದಲ್ಲಿ ನೆರವಾಗಲೆಂದು ಒಂಬತ್ತು ವ್ಯಕ್ತಿತ್ವಗಳನ್ನು ರೂಪಿಸಿದನು.

ಭಗವಂತನು ದಕ್ಷನಿಗೆ ಪಾಂಚಜನ್ಯನ ಪುತ್ರಿಯಾದ ಅಸಿಕೆನಿಯನ್ನು ವಿವಾಹವಾಗಿ ಲೈಂಗಿಕತೆಯ ಮೂಲಕ ಜನಸಂಖ್ಯೆಯನ್ನು ಹೆಚ್ಚಿಸುವಂತೆ ಸಲಹೆ ಮಾಡಿದನು.

ನೂರಾರು ಸಾವಿರ ಮಕ್ಕಳಿಗೆ ಜನ್ಮ ನೀಡಿದ ನಂತರ ಭಗವಂತನು ದಕ್ಷನಿಗೆ ಅವರೂ ಸಹ ತನ್ನ ಭ್ರಮಶಕ್ತಿಯಿಂದ ಜಯಿಸಲ್ಪಟ್ಟವರಾಗಿ ನಿನ್ನಂತೆಯೇ ಲೈಂಗಿಕತೆಯಲ್ಲಿ ತೊಡಗುತ್ತಾರೆ ಎಂದನು. ಆದರೆ ನಿನ್ನ ಹಾಗೂ ಅವರ ಮೇಲೆ ನಾನು ತೋರುವ ಕರುಣೆಯಿಂದಾಗಿ ಅವರೂ ಸಹ ಭಕ್ತಿಯ ರೂಪದಲ್ಲಿ ನನಗೆ ಉಡುಗೊರೆಯನ್ನು ನೀಡಲು ಸಮರ್ಥರಾಗುತ್ತಾರೆ.

ವಿಷ್ಣು ಪರಮಾತ್ಮನ ಭ್ರಮಶಕ್ತಿಯಿಂದ ಒತ್ತಾಯಿಸಲ್ಪಟ್ಟವನಾಗಿ ಪ್ರಜಾಪತಿ ದಕ್ಷನು ತನ್ನ ಪತ್ನಿಯಿಂದ ಸಾವಿರ ಪುತ್ರರನ್ನು ಪಡೆದನು. ಅವರನ್ನು ಹರ್ಯಸ್ವರೆಂದು ಕರೆಯಲಾಯಿತು. ಅವರೆಲ್ಲರೂ ಸಾಕಷ್ಟು ವಿಧೇಯರಾಗಿದ್ದು ಸದ್ವರ್ತನೆಯಿಂದ ಕೂಡಿದ್ದರು. ಪ್ರಜಾಪತಿ ದಕ್ಷನು ಅವರಿಗೆ ಮಕ್ಕಳನ್ನು ಪಡೆಯುವಂತೆ ತಿಳಿಸಿದನು. ಅವರೆಲ್ಲರೂ ಪಶ್ಚಿಮ ದಿಕ್ಕಿಗೆ ಸಾಗಿದರು. ಪಶ್ಚಿಮದಲ್ಲಿ ಸಿಂಧೂ ನದಿಯು ಸಮುದ್ರವನ್ನು ಸೇರುವ ಸ್ಥಳದಲ್ಲಿ ನಾರಾಯಣಸಾರವೆಂಬ ತೀರ್ಥಕ್ಷೇತ್ರವಿದೆ. ಅಧ್ಯಾತ್ಮಿಕ ತಿಳಿವಳಿಕೆಯಲ್ಲಿ ಮುಂದುವರಿದಿರುವಂಥ ಅನೇಕ ಋಷಿಗಳು ಅಲ್ಲಿ ವಾಸವಾಗಿದ್ದಾರೆ. ಈ ಹರ್ವಸರು ಜನಸಂಖ್ಯೆಯನ್ನು ಹೆಚ್ಚಿಸಲು ತಪಸ್ಸುಗಳನ್ನು ನಡೆಸುತ್ತಿದ್ದಾಗ ನಾರದ ಮುನಿಗಳು ಅವರಲ್ಲಿಗೆ ಬಂದರು.

ನಾರದ ಮುನಿಯು ಬಾಲಕರಿಗೆ ಅವರ ಪಿತನಾದ ಪ್ರಜಾಪತಿ ದಕ್ಷನು ಸ್ವಯಂ ಪ್ರಕಾಶನಾಗಿದ್ದರೂ ಅವರು ತಮ್ಮ ತಂದೆಯ ನಿಜವಾದ ಆಜ್ಞೆಯನ್ನು ತಿಳಿಯದಿದ್ದು ಹೀಗಿರುವಾಗ ಅವರು ಸಂತತಿಯನ್ನು ಸೃಷ್ಟಿಸುವುದು ಹೇಗೆಂದನು. ಇದನ್ನು ಕೇಳಿದ ಪುತ್ರರು ಗೊಂದಲಗೊಂಡವರಾಗಿ ಇತರರ ನೆರವಿಲ್ಲದೆಯೇ ತಮ್ಮ ಸಹಜ ಬುದ್ಧಿ ಶಕ್ತಿಯನ್ನು ಉಪಯೋಗಿಸಿದಾಗ ಕೊನೆಗೆ ಅವನ ಮಾತನ್ನು ಅರ್ಥ ಮಾಡಿಕೊಂಡರು.

'ಭೂವ' (ಭೂಮಿ)ಎಂಬ ಅಕ್ಷರವು ಚಟುವಟಿಕೆಗಳ ಕ್ಷೇತ್ರವನ್ನು ಸೂಚಿಸುವಂಥದ್ದಾಗಿದೆ. ಜೀವಿತನಾದವನ ಕ್ರಿಯೆಯ ಫಲಿತಾಂಶವಾದ ಐಹಿಕ ಶರೀರವು

ಅವನ ಚಟುವಟಿಕೆಗಳ ಕ್ಷೇತ್ರವಾಗಿದ್ದು ಅದು ಅವನಿಗೆ ಹುಸಿ ಸ್ಥಾನವನ್ನು ಒದಗಿಸುತ್ತದೆ. ಅನಾದಿ ಕಾಲದಿಂದಲೂ ಐಹಿಕ ಜಗತ್ತಿನೊಂದಿಗೆ ಬಂಧನವನ್ನು ಹೊಂದಿದ್ದಂಥ ಮೂಲಗಳಿರುವ ವಿವಿಧ ರೀತಿಯ ಐಹಿಕ ಶರೀರಗಳನ್ನು ಅವನು ಪಡೆದಿದ್ದಾನೆ. ಒಬ್ಬಾತನು ಮೂರ್ಖತನದಿಂದ ವ್ಯರ್ಥ ಚಟುವಟಿಕೆಗಳಲ್ಲಿ ತೊಡಗಿ ತನ್ನ ಬಂಧನವನ್ನು ಕಡಿದು ಕೊಳ್ಳುವತ್ತ ಗಮನ ಹರಿಸದಿದ್ದಲ್ಲಿ ಅವನ ಕ್ರಿಯೆಯಿಂದ ಉಂಟಾಗುವ ಪ್ರಯೋಜನವೇನು?

ನಾರದ ಮುನಿಯು ಪ್ರಜಾಪತಿ ದಕ್ಷನ ಮಕ್ಕಳಾದ ಹರ್ಯಸ್ವರರನ್ನು ಕುರಿತು ರಾಜ, ರಾಜ್ಯ, ನದಿ, ಗೃಹ, ಭೌತಿಕ ಅಂಶಗಳು ಹಾಗೂ ಇತರ ವಿಷಯಗಳನ್ನು ಕುರಿತು ಮಾತನಾಡಿದನು. ಇವೆಲ್ಲವನ್ನೂ ತಾವಾಗಿಯೇ ಪರಿಗಣಿಸುವ ಮೂಲಕ ಹವ್ಯಸ್ವರು ಜೀವಿಯು ತನ್ನ ಶರೀರದಲ್ಲಿ ಆನಂದವನ್ನು ಹುಡುಕಿಕೊಂಡರೂ ತನ್ನ ಕಾರ್ಯದಿಂದ ಹೇಗೆ ಸ್ವತಂತ್ರನಾಗಬೇಕೆಂದು ತಿಳಿದುಕೊಳ್ಳಲು ಆಸಕ್ತಿಯನ್ನು ವಹಿಸುವುದಿಲ್ಲ ಎಂಬುದನ್ನು ತಿಳಿದುಕೊಂಡರು.

ನಾರದ ಮುನಿಯು ಒಬ್ಬನೇ ಒಬ್ಬ ಅನುಭವಿಸುವವನಿದ್ದು ಅವನೇ ಭಗವಂತನೆಂದನು. ಅವನು ಆರು ಸಮೃದ್ಧ ಗುಣಗಳನ್ನು ಹೊಂದಿಯೂ ಸರ್ವ ಸ್ವತಂತ್ರನು. ಒಬ್ಬರು ಅವನನ್ನು ಬುದ್ಧಿಶಕ್ತಿಯ ಹಾಗೂ ಚಟುವಟಿಕೆಯ ಔನ್ನತ್ಯದಿಂದ ಅರ್ಥಮಾಡಿಕೊಳ್ಳಬೇಕಲ್ಲದೆ ಬೆಕ್ಕು ನಾಯಿಗಳಂತೆ ಹಗಲು ರಾತ್ರಿ ಕ್ಷಣಿಕ ಸುಖಕ್ಕಾಗಿ ಕೆಲಸ ಮಾಡಬಾರದು. ವೈಕುಂಠವು ಭಗವಂತನ ಆವಾಸಸ್ಥಾನವಾಗಿದ್ದು ಅಲ್ಲಿಗೆ ಪ್ರವೇಶಿಸಿದಾತನು ಹಿಂತಿರುಗುವುದಿಲ್ಲ ಎಂದು ನಾರದ ಮುನಿಯು ಹೇಳಿದನು. ತಾತ್ಕಾಲಿಕ ವ್ಯರ್ಥ ಚಟುವಟಿಕೆಗಳಲ್ಲಿ ತೊಡಗುವುದರಿಂದ ಯಾವ ಪ್ರಯೋಜನವೂ ಇಲ್ಲ. ಪರಮಾತ್ಮನು ಇಪ್ಪತ್ತೈದು ಅಂಶಗಳ ಆಗರವಾಗಿದ್ದು ಉನ್ನತನಾಗಿ ಕಾರಣ ಪರಿಣಾಮಗಳ ನೇಕಾರನಾಗಿ ಅವರ ವಿಶ್ವವನ್ನು ರೂಪಿಸುತ್ತಾನೆ. ಒಬ್ಬರು ಪರಮಾತ್ಮನನ್ನು ತಿಳಿದುಕೊಳ್ಳದೆಯೇ ಕ್ಷಣಿಕ ವ್ಯರ್ಥ ಚಟುವಟಿಕೆಗಳಲ್ಲಿ ತೊಡಗುವುದರಿಂದ ಅವನು ಯಾವ ಪ್ರಯೋಜನವನ್ನು ಪಡೆದಾನು?

ವೈದಿಕ ಸಾಹಿತ್ಯವು ಎಲ್ಲ ಐಹಿಕ ಮತ್ತು ಅಧ್ಯಾತ್ಮಿಕ ಮೂಲವಾದ ಪರಮಾತ್ಮನನ್ನು ಹೇಗೆ ಅರ್ಥಮಾಡಿಕೊಳ್ಳಬೇಕೆಂಬುದನ್ನು ವಿವರಿಸುತ್ತದೆ. ಐಹಿಕ ಚಟುವಟಿಕೆಗಳಲ್ಲಿ ತೊಡಗುವಂತೆ ತನ್ನ ಪುತ್ರನನ್ನು ಒತ್ತಾಯಿಸುವ ಐಹಿಕ ತಂದೆಯ ಮಾತುಗಳು ತಂದೆಯ ನಿಜವಾದ ಸೂಚನೆಗಳಾಗುವುದಿಲ್ಲ ಎಂದು ನಾರದನೆಂದನು.

ದಕ್ಷನ ಪುತ್ರರು ನಾರದ ಮುನಿಯ ಬುದ್ಧಿವಾದವನ್ನು ಅಂಗೀಕರಿಸಿ ಈ ಜಗತ್ತಿಗೆ ಹಿಂತಿರುಗಲಾರದಂಥ ಮಾರ್ಗವನ್ನು ಅನುಸರಿಸಿದರು. ದಕ್ಷನಿಗೆ ನಾರದಮುನಿಯ ಬುದ್ಧಿವಾದದ ಸಮಾಚಾರ ತಿಳಿದಾಗ ಅವನು ಪರಿತಪಿಸಿದನು. ಬ್ರಹ್ಮದೇವನು ದಕ್ಷನನ್ನು

ಸಮಾಧಾನ ಪಡಿಸಿದ ನಂತರ ದಕ್ಷನು ಸವಲ್ಯಸರೆಂದು ಕರೆಯಲಾಗುವ ಇನ್ನೂ ಒಂದು ಸಾವಿರ ಪುತ್ರರನ್ನು ಪಡೆದನು. ಈ ಪುತ್ರರೂ ಸಹ ಅದೇ ಸರೋವರಕ್ಕೆ ತೆರಳಿ ಪ್ರಾರ್ಥನೆಯನ್ನು ಸಲ್ಲಿಸಿದರು. ನಾರದ ಮುನಿಯು ಮತ್ತೆ ಅವರನ್ನು ಸಮೀಪಿಸಿ ತಮ್ಮ ಹಿರಿಯ ಸಹೋದರರನ್ನು ಅನುಸರಿಸುವಂತೆ ಅವರಿಗೆ ತಿಳಿಸಿದನು. ದಕ್ಷನು ಕೋಪಾವಿಷ್ಟನಾಗಿ ನಾರದನನ್ನು ಈ ರೀತಿ ಶಪಿಸಿದನು. "ಅಯ್ಯ ನಾರದ ಮುನಿಯೇ, ನೀನು ಸನ್ಯಾಸಿಯ ವೇಷ ಧರಿಸಿದ್ದರೂ ನಿಜವಾಗಿಯೂ ಸನ್ಯಾಸಿಯಲ್ಲ. ನಾನೀಗ ಗ್ರಾಹಸ್ಥ ಜೀವನದಲ್ಲಿದ್ದರೂ ಋಷಿ ಸದೃಶನಾದವನು. ನನ್ನ ಪುತ್ರರಿಗೆ ವೈರಾಗ್ಯಮಾರ್ಗವನ್ನು ತೋರುವ ಮೂಲಕ ನೀನು ನನಗೆ ಅಕ್ಷಮ್ಯ ಅನ್ಯಾಯವನ್ನು ಮಾಡಿದ್ದೀಯೆ. ಐಹಿಕ ಅನಂತವು ಎಲ್ಲ ಅಸಂತೋಷಗಳಿಗೆ ಕಾರಣವಾದರೂ ಅದು ಎಷ್ಟು ಸಂಕಷ್ಟಗಳಿಂದ ಕೂಡಿದೆ ಎಂಬುದನ್ನು ಒಬ್ಬರು ವೈಯಕ್ತಿಕವಾಗಿ ಅನುಭವಿಸಿದ ಹೊರತೂ ಅದನ್ನು ಬಿಟ್ಟುಕೊಡಲಾಗದು. ಆದ್ದರಿಂದ ಒಬ್ಬರಿಗೆ ಐಹಿಕ ಸಂತೋಷವೆಂದು ಕಾಣಲಾಗುವ ಸಂತೋಷದಲ್ಲಿ ಇರುವುದಕ್ಕೆ ಅನುಮತಿ ನೀಡಿ ಅದೇ ಕಾಲಕ್ಕೆ ಈ ಹುಸಿ ಐಹಿಕ ಸಂತಸದ ಕಷ್ಟಗಳನ್ನು ತಿಳಿದುಕೊಳ್ಳಲು ಅಗತ್ಯವಾದಂಥ ಜ್ಞಾನವನ್ನು ಪಡೆಯಲು ಅವಕಾಶ ನೀಡಬೇಕು. ಇತರರಿಂದಾಗಿ ಬದಲಾದ ಮನಸ್ಸು ಸ್ವತಃ ಅನುಭವವನ್ನು ಪಡೆದವರಂತೆ ವೈರಾಗ್ಯವನ್ನು ತಳೆಯಲಾರದು!

ಕೊನೆಗೆ ದಕ್ಷನು ನಾರದನನ್ನು ಶಪಿಸಿದನು" ನೀನು ಜಗತ್ತಿನಲ್ಲೆಲ್ಲ ಸಂಚರಿಸಿದರೂ ನಿನಗೆ ಎಲ್ಲಿಯೂ ನಿನ್ನದೇ ಆದ ಮನೆಯಿಲ್ಲದೆ ಹೋಗಲಿ."

ಬ್ರಹ್ಮದೇವನ ಇಚ್ಛೆಯಂತೆ ಪ್ರಚೇತಸನೆಂಬ ಹೆಸರನ್ನು ಪಡೆದ ಪ್ರಜಾಪತಿ ದಕ್ಷನು ತನ್ನ ಮಡದಿ ಅಸ್ಕಿನಿಯ ಗರ್ಭದಲ್ಲಿ ಅರವತ್ತು ಪುತ್ರಿಯರನ್ನು ಪಡೆದನು. ಅವನು ಹತ್ತು ಪುತ್ರಿಯರನ್ನು ಯಮರಾಜನಿಗೂ, ಹದಿಮೂರು ಪುತ್ರಿಯರನ್ನು ಕಶ್ಯಪನಿಗೂ, ಇಪ್ಪತ್ತೇಳು ಪುತ್ರಿಯರನ್ನು ಚಂದ್ರನಿಗೂ ಹಾಗೂ ತಲಾ ಇಬ್ಬರನ್ನು ಅಂಗೀರ, ಕೃಶವ ಮತ್ತು ಭೂತನಿಗೂ ನೀಡಿದನು. ಇನ್ನುಳಿದ ನಾಲ್ವರು ಪುತ್ರಿಯರನ್ನು ಮತ್ತೆ ಕಶ್ಯಪನಿಗೇ ನೀಡಲಾಯಿತು. ನಾರದ ಮುನಿಯು ಈ ಪುತ್ರಿಯರನ್ನು ಐಹಿಕ ಜೀವನವನ್ನು ತ್ಯಜಿಸುವಂತೆ ಮಾಡಲು ಪ್ರಯತ್ನಿಸಲಿಲ್ಲ. ವಿವಿಧ ಜ್ಞಾನೋದಯಗೊಂಡ ವ್ಯಕ್ತಿತ್ವದಿಂದ ಒಡಗೂಡಿದ ಈ ಅರವತ್ತು ಪುತ್ರಿಯರ ಸಮಾಯೋಗದಿಂದಾಗಿ ಇಡೀ ಜಗತ್ತು ಮಾನವರು, ದೇವತೆಗಳು, ರಾಕ್ಷಸರು, ಮೃಗಗಳು, ಪಕ್ಷಿಗಳು ಮತ್ತು ಸರ್ಪಗಳಿಂದ ಆವೃತಗೊಂಡಿತು.

ದಕ್ಷನ ಮೊಮ್ಮಕ್ಕಳಲ್ಲಿ ಒಬ್ಬನಾದ ವಿದ್ಯೋತ, ಮೋಡಗಳನ್ನು ಉಂಟು ಮಾಡಿದನು. ಮತ್ತೊಬ್ಬಳ ಮಗಳಾದ ಕಿಕಾತಳಿಂದ ದುರ್ಗಾ ಎಂಬ ದೇವತೆಯು ಹುಟ್ಟಿಕೊಂಡಳು.

ವಸುವಿನ ಮಡದಿ ಅಂಗೀರಸಿಯಿಂದ ದೇವಲೋಕದ ಶಿಲ್ಪಿ ವಿಶ್ವಕರ್ಮನು ಜನಿಸಿದನು. ವಿಶ್ವಕರ್ಮನಿಗೆ ಚಕ್ಷುಷ ಮನುವು ಜನಿಸಿದನು. ಅವರಿಗೆ ವಿಶ್ವದೇವರು ಮತ್ತು ಸಾಧ್ಯರೆಂದು ಹೆಸರು.

ಭೂತನ ಪತ್ನಿಯಾದ ಸರೂಪಳು ಹತ್ತು ದಶಲಕ್ಷ ರುದ್ರರಿಗೆ ಜನ್ಮನೀಡಿ ಅವರಲ್ಲಿ ಪ್ರಮುಖರಾದ ರುದ್ರರೆಂದರೆ ರೈವತ, ಅಜ, ಬವ, ಭೀಮ, ವಾಮ, ಉಗ್ರ, ವೇಸಕಪಿ, ಅಜೈಕಪತ್, ಅಹಿಭ್ರಾಥನ, ಬಹುರೂಪ ಮತ್ತು ಮಹಾನ್. ಭಯಂಕರರಾದ ಅವರ ಅನುಯಾಯಿಗಳಾದ ಭೂತ ಪಿಶಾಚಿಗಳು ಮತ್ತೊಬ್ಬ ಮಡದಿ ಭೂತಳಿಗೆ ಜನಿಸಿದರು.

ಪ್ರಜಾಪತಿ ಅಂಗೀರನಿಗೆ ಸ್ವಾದ ಮತ್ತು ಸತಿಯೆಂಬ ಇಬ್ಬರು ಮಡದಿಯರು. ಸ್ವಾಧಳು ಎಲ್ಲ ಪಿತರರನ್ನೂ ಪುತ್ರರೆಂದು ಅಂಗೀಕರಿಸಿ ಸತಿಯು ಈ ಅಥರ್ವಾಂಗೀರಸ ವೇದವನ್ನು ತನ್ನ ಪುತ್ರನೆಂದು ಒಪ್ಪಿಗೊಂಡಳು.

## ಧೂಮಕೇತು

ಕೃಷವನಿಗೆ ಅರ್ಚಿಸ ಮತ್ತು ಧೀಸನರೆಂಬ ಇಬ್ಬರು ಪತ್ನಿಯರು, ಅರ್ಚಿಸ ಧೂಮಕೇತುವಿಗೆ ಜನ್ಮ ನೀಡಿದಳು.

ತಾರ್ಕಶ್ಯನೆಂದೂ ಹೆಸರಾದ ಕಶ್ಯಪನಿಗೆ ನಾಲ್ವರು ಪತ್ನಿಯರು, ಅವರೆಂದರೆ ವಿನಾತ (ಸುಪರ್ಣ), ಕದ್ರಿ, ಪತಂಗಿ ಮತ್ತು ಯಾಮಿನಿ. ಪತಂಗಿ ಅನೇಕ ವಿಧದ ಪಕ್ಷಿಗಳಿಗೆ ಜನ್ಮ ನೀಡಿದರೆ ಯಾಮಿನಿಯು ಮಿಡತೆಯನ್ನು ಹುಟ್ಟಿಸಿದಳು. ವಿನುತಳು ವಿಷ್ಣುವಿನ ವಾಹನನಾದ ಗರುಡನನ್ನೂ ಅನುರು, ಸೂರ್ಯದೇವನ ಸಾರಥಿ ಯಾದ ಅರುಣನಿಗೆ ಜನ್ಮವಿತ್ತಳು. ಕದ್ರು ವಿವಿಧ ಸರ್ಪಗಳಿಗೆ ಮಾತೆಯಾದಳು.

ಕೃತ್ತಿಕವೆಂಬ ಹೆಸರಿನ ನಕ್ಷತ್ರ ಮಂಡಲಗಳು ಚಂದ್ರ ದೇವನ ಪತ್ನಿಯರು. ಕ್ರಮೇಣ ವಿನಾಶ ಹೊಂದುವಂಥ ರೋಗಕ್ಕೆ ಈಡಾಗಬೇಕೆಂಬುದಾಗಿ ದಕ್ಷನಿಂದ ಶಪಿಸಲ್ಪಟ್ಟವನಾದ್ದರಿಂದ ಚಂದ್ರನಿಗೆ ತನ್ನ ಯಾವ ಪತ್ನಿಯಿಂದಲೂ ಮಕ್ಕಳನ್ನು ಪಡೆಯಲು ಸಾಧ್ಯವಾಗಲಿಲ್ಲ (ಚಂದ್ರನು ರೋಹಿಣಿಗೆ ಅತ್ಯಂತ ಹತ್ತಿರದವನಾಗಿ ಮಿಕ್ಕ ಪತ್ನಿಯರನ್ನು ಅನಾದರಿಸಿದ್ದರಿಂದ ಪ್ರಜಾಪತಿ ದಕ್ಷನು ಅವನಿಗೆ ಶಾಪವಿತ್ತನು). ಆನಂತರ ದಕ್ಷನು ಸಮಾಧಾನ ಹೊಂದಿದಾಗ ರೋಗದ ಸಂದರ್ಭದಲ್ಲಿ ತಾನು ಕಳೆದುಕೊಂಡಿದ್ದ ಬೆಳಕನ್ನು ಚಂದ್ರನು ಮತ್ತೆ ಪಡೆದುಕೊಂಡನು.

ಕಶ್ಯಪನ ಪತ್ನಿಯರ ಹೆಸರುಗಳೆಂದರೆ - ಅದಿತಿ, ದಿತಿ, ಧನು, ಕಾಸ್ತ, ಅರಿಷ್ಟಾ, ಸುರಸ, ಇಳ, ಮುನಿ, ಕ್ರೋಧಾವಾಸ, ತಂಪಾ, ಸುರಭಿ, ಸರಮ, ಮತ್ತು ತಿಮಿ.

ತಿಮಿಯಿಂದ ಎಲ್ಲ ಜಲಚರಗಳೂ ಜನಿಸಿದವು. ಸರಮಳಿಂದ ಹುಲಿ ಸಿಂಹಗಳಂಥ ವ್ಯಾಘ್ರ ಮೃಗಗಳು ಜನಿಸಿದವು.

ಸುರಭಿಯಿಂದ ಎಮ್ಮೆ, ಹಸು ಹಾಗೂ ಕೊಂಬುಗಳುಳ್ಳ ಇತರ ಪ್ರಾಣಿಗಳು ಜನಿಸಿ ತಾಮ್ರಳಿಂದ ಹದ್ದುಗಳು ಹಾಗೂ ರಣ ಹದ್ದುಗಳು ಮತ್ತು ಇತರ ದೊಡ್ಡ ಹಕ್ಕಿಗಳೂ ಜನಿಸಿದವು. ಮುನಿಯ ಗರ್ಭದಿಂದ ಅಪ್ಸರೆಯರು ಹುಟ್ಟಿದರು.

ಕ್ರೋಧಾರಸಳು ದೂತಸೂಕವೆಂಬ ಹೆಸರಿನ ಸರ್ಪ ಹಾಗೂ ಇತರ ಹಾವುಗಳು ಮತ್ತು ಸೊಳ್ಳೆಗಳನ್ನು ಹುಟ್ಟಿಸಿದಳು. ಇಲಾಳಿಂದ ಬಳ್ಳಿಗಳು ಮತ್ತು ಮರಗಳು ಜನಿಸಿದವು. ಸುರಸಳಿಂದ ರಾಕ್ಷಸರು ಹಾಗೂ ದುಷ್ಟಚೇತನಗಳು ಜನಿಸಿದವು.

ಗಂಧರ್ವರು ಅರಿಸ್ತಾಳ ಗರ್ಭದಲ್ಲಿ ಜನಿಸಿದರು. ಕೊಂಬುಗಳು ಬೇರ್ಪಡದಿರುವ ಕುದುರೆಗಳಂಥ ಪ್ರಾಣಿಗಳು ಕಸ್ತಾಳ ಉದರದಿಂದ ಉಂಟಾದವು. ಧನುವು ಅರವತ್ತೊಂದು ಪುತ್ರರಿಗೆ ಜನ್ಮವಿತ್ತಳು. ಅವರಲ್ಲಿ ಹದಿನೆಂಟು ಜನರು ಮುಖ್ಯರು. ಸುಪ್ರಭ ಎಂಬ ಹೆಸರುಳ್ಳ ಸ್ವರಭಾನುವಿನ ಪುತ್ರಿಯನ್ನು ನಾಮುಚಿಯು ವಿವಾಹವಾದನು. ಶರ್ಮಿಷ್ಠಳೆಂಬ ಹೆಸರಿನ ವೃಷಪರ್ವಳ ಪುತ್ರಿಯನ್ನು ನಹುಷನ ಮಗನಾದ ಯಯಾತಿಗೆ ನೀಡಲಾಯಿತು.

ಕಶ್ಯಪನ ಪತ್ನಿ ಅದಿತಿಯು ವಿವಸ್ವನ್, ಆರ್ಯಮ, ಪೂಸ, ತ್ಯಸ್ಥ, ಮುಂತಾದವರಿಗೆ ಜನ್ಮ ನೀಡಿದಳು.

ವಿವಸ್ವನ್ ಪತ್ನಿ ಸಂಜ್ಞೆಯು, ಶ್ರದ್ಧದೇವನೆಂಬ ಹೆಸರಿನ ಮನುವಿಗೆ ಜನ್ಮ ನೀಡಿದಳಲ್ಲದೆ ಯಮರಾಜ ಮತ್ತು ಯಮುನೇ ಎಂಬ ನದಿಗೂ ಜನ್ಮ ನೀಡಿದಳು. ನಂತರ ಜಿಂಕೆಯಂತೆ ಭೂಮಿಯಲ್ಲಿ ಅಲೆದಾಡುತ್ತಿದ್ದ ಯಮಿಯು ಅಶ್ವಿನಿಕುಮಾರರನ್ನು ಹುಟ್ಟಿಸಿದಳು.

ದೈತ್ಯರ ಪುತ್ರಿಯಾದ ರಚನಳು ಪ್ರಜಾಪತಿ ತ್ಯಸ್ತನ ಪತ್ನಿಯಾದಳು. ಅವನು ತನ್ನ ವೀರ್ಯದಿಂದ ಅವಳಲ್ಲಿ ಶನಿವೇಶ ಮತ್ತು ವಿಶ್ವರೂಪರೆಂಬ ಇಬ್ಬರು ಶಕ್ತಿಶಾಲಿ ಪುತ್ರರನ್ನು ಪಡೆದನು. ವಿಶ್ವರೂಪನು ಅವರ ಘೋರ ಶತ್ರುಗಳಾದ ರಾಕ್ಷಸರ ಪುತ್ರನಾದರೂ ಅವಹೇಳನಗೊಂಡ ಬೃಹಸ್ಪತಿಯು ಉಪದೇವತೆಗಳನ್ನು ತ್ಯಜಸಿದಾಗ, ವಿಶ್ವರೂಪ ಅವರ ಆಧ್ಯಾತ್ಮಿಕ ಗುರುವಾದನು.

## ವಿಶ್ವರೂಪ

ಬೃಹಸ್ಪತಿಯು ಉಪದೇವತೆಗಳನ್ನು ತ್ಯಜಿಸಲು ಒತ್ತಾಯಿಸಿದಂಥ ಕಾರಣಗಳನ್ನು ಪರೀಕ್ಷಿತ ರಾಜನು ಶ್ರೀ ಶುಕಾಚಾರ್ಯರಿಂದ ತಿಳಿದುಕೊಳ್ಳಲು ಬಯಸಿದನು.

ಶ್ರೀ ಶುಕ್ರಾಚಾರ್ಯರೆಂದರು: ಒಮ್ಮೆ ಇಂದ್ರದೇವನು ತುಂಬಾ ಸೊಕ್ಕಿನಿಂದ ತನ್ನ ಆಧ್ಯಾತ್ಮಿಕ ಗುರುಗಳಾದ ಬ್ರಹಸ್ಪತಿಗೆ ಗೌರವವನ್ನು ತೋರಿಸಲಿಲ್ಲ. ಇಂದ್ರ ದೇವನೊಮ್ಮೆ

ಅನುಯಾಯಿಗಳಾದ ಗಂಧರ್ವರು, ಮರುತರು ಹಾಗೂ ಇತರರಿಂದ ಸುತ್ತುವರಿಯಲ್ಪಟ್ಟಿದ್ದಾಗ ಬೃಹಸ್ಪತಿಯು ಸಭಾಂಗಣವನ್ನು ಪ್ರವೇಶಿಸಿದರೂ ಇಂದ್ರನು ಅವನನ್ನು ಅನಾದರಿಸಿ ಗೌರವವನ್ನು ತೋರಿಸದೇ ಹೋದಾಗ ಅವಹೇಳನಗೊಂಡ ಬೃಹಸ್ಪತಿಯು ಅಲ್ಲಿಂದ ಹೊರಟನು.

ಇಂದ್ರದೇವನಿಗೆ ಕಳವಳ ಉಂಟಾಗಿ ತನ್ನ ಕರ್ತವ್ಯ ಚ್ಯುತಿಗಾಗಿ ತಾನೇ ತನ್ನನ್ನು ಶಪಿಸಿಕೊಂಡಾಗ ಇದನ್ನರಿತ ಬೃಹಸ್ಪತಿ ಅಗೋಚರನಾದಾಗ ಇಂದ್ರನಿಗೆ ಅವನನ್ನು ಪತ್ತೆ ಮಾಡಲಾಗಲಿಲ್ಲ.

ಇದನ್ನು ತಿಳಿದ ರಾಕ್ಷಸರು ತಮ್ಮ ಮುಖಂಡ ಶ್ರೀ ಶುಕ್ರಾಚಾರ್ಯರ ಸೂಚನೆಯಂತೆ ಉಪದೇವತೆಗಳ ವಿರುದ್ಧ ಸಮರ ಸಾರಿದರು. ಉಪದೇವತೆಗಳು ಪರಾಜಯಗೊಂಡಾಗ ಬ್ರಹ್ಮದೇವನ ಬಳಿಗೆ ಹೋದರು. ಅವರನ್ನು ಆ ಸ್ಥಿತಿಯಲ್ಲಿ ಕಂಡ ಬ್ರಹ್ಮನು ಉಪದೇವತೆಗಳಿಗೆ ತಮ್ಮ ಅಧ್ಯಾತ್ಮಿಕ ಗುರುವಿಗೆ ಗೌರವವನ್ನು ಸಲ್ಲಿಸದಿದ್ದ ಅವರ ಮೂರ್ಖತನಕ್ಕಾಗಿ ಛೀಮಾರಿ ಹಾಕಿದನು. ತಮ್ಮ ಅಧ್ಯಾತ್ಮಿಕ ಗುರುವಿಗೆ ಅಗೌರವ ತೋರಿಸುವದರಿಂದಾಗಿ ತಾವು ದುರ್ಬಲರಾಗಿದ್ದು, ರಾಕ್ಷಸರು ತಾವು ತಮ್ಮ ಅಧ್ಯಾತ್ಮಿಕ ಗುರುವಿಗೆ ಗೌರವ ತೋರಿಸಿರುವುದರಿಂದಾಗಿ ಬಲಿಷ್ಠರಾಗಿದ್ದಾರೆಂಬುದಾಗಿ ಇಂದ್ರನಿಗೆ ತಿಳಿಸಲಾಯಿತು.

ಆದ್ದರಿಂದ ಬ್ರಹ್ಮನು ಉಪದೇವತೆಗಳಿಗೆ ತಮ್ಮ ಅಧ್ಯಾತ್ಮಿಕ ಗುರುವಾಗುವಂತೆ ವಿಶ್ವರೂಪನನ್ನು ಕೇಳಿಕೊಳ್ಳಬೇಕೆಂದು ಸಲಹೆ ಮಾಡಿದನು. ವಿಶ್ವರೂಪನು ಅದನ್ನು ಅಂಗೀಕರಿಸಿದನು.

ವಿಶ್ವರೂಪನು ಉಪದೇವತೆಗಳನ್ನು ಉದ್ದೇಶಿಸಿ ಹೀಗೆಂದನು : " ಎಲೈ ವಿವಿಧ ಗ್ರಹಗಳನ್ನು ಆಳಲು ಸಮರ್ಥರಾದವರೇ, ಯಾವ ಐಹಿಕ ಸಂಪತ್ತನ್ನೂ ಹೊಂದಿರದ ನಿಜವಾದ ಬ್ರಾಹ್ಮಣನು ಸಿಲೊಂಚನವನ್ನು ಸ್ವೀಕರಿಸುವ ಮೂಲಕ ತನ್ನ ವೃತ್ತಿಯನ್ನು ಮುಂದುವರಿಸುತ್ತಾನೆ. ಇನ್ನೊಂದು ರೀತಿಯಲ್ಲಿ ಹೇಳಬೇಕೆಂದರೆ ಅವನು ಜಮೀನಿನಲ್ಲಿ ಹಾಗೂ ಮಾರುಕಟ್ಟೆ ಸ್ಥಳದ ಜಾಗದಲ್ಲಿ ಬಿದ್ದಿರುವ ಕಾಳುಗಳನ್ನು ಆಯ್ದುಕೊಳ್ಳುತ್ತಾನೆ. ಇದರ ಅರ್ಥವೇನೆಂದರೆ ನೇಮ ಹಾಗೂ ತಪಸ್ಸುಗಳ ತತ್ವಗಳಿಂದ ನಿಜವಾಗಿಯೂ ಬದ್ಧರಾದ ಗೃಹಸ್ಥ ಬ್ರಾಹ್ಮಣರು ತಮ್ಮನ್ನು ಹಾಗೂ ತಮ್ಮ ಕುಟುಂಬಗಳನ್ನು ಸಲುಹಿ ಅಗತ್ಯವಾದ ಎಲ್ಲ ಒಳ್ಳೆಯ ಕಾರ್ಯಗಳನ್ನು ನೇರವೇರಿಸುತ್ತಾರೆ. ಪುರೋಹಿತ ವೃತ್ತಿಯ ಮೂಲಕ ಸಂಪತ್ತನ್ನು ಗಳಿಸುವ ಸಂತೋಷವನ್ನು ಸಾಧಿಸಲು ಬಯಸುವ ಬ್ರಾಹ್ಮಣನೊಬ್ಬ ಖಚಿತವಾಗಿಯೂ ಹೀನ ಗುಣದಿಂದ ಕೂಡಿರಬೇಕು. ನಾನು ಅಂಥ ಪೌರೋಹಿತ್ಯವನ್ನು ಹೇಗೆ ಒಪ್ಪಿಕೊಳ್ಳಲಿ ? ಹೇಗಾದರೂ ವಿಶ್ವರೂಪನು ಅವರ ಆಹ್ವಾನವನ್ನು " ನನ್ನ ಜೀವನ ಹಾಗೂ ಸಂಪತ್ತನ್ನು ಸಮರ್ಪಿಸುವ ಮೂಲಕ ನಾನು ನಿಮ್ಮ ಕೋರಿಕೆಯನ್ನು ಪೂರೈಸುತ್ತೇನೆ" ಎಂದು ಹೇಳಿ ಒಪ್ಪಿಕೊಂಡನು.

## ನಾರಾಯಣ ಕವಚ

ಎಲ್ಲ ಉಪದೇವತೆಗಳಿಂದ ಆವೃತನಾದ ವಿಶ್ವರೂಪನು ತುಂಬಾ ಉತ್ಸಾಹದಿಂದ, ಗಮನ ನೀಡಿ ಅವಶ್ಯವಾದ ಪೌರೋಹಿತ್ಯ ಚಟುವಟಿಕೆಗಳೆಲ್ಲವನ್ನು ನೇರವೇರಿಸಿದನು. ಅವನು "ನಾರಾಯಣ ಕವಚ" ವೆಂಬ ಮಂತ್ರವನ್ನು ರೂಪಿಸಿ ಅದರ ಮೂಲಕ ರಾಕ್ಷಸರ ಸಮೃದ್ಧತೆಯನ್ನು ಅಪಹರಿಸಿ ಅದನ್ನು ಇಂದ್ರನಿಗೆ ನೀಡಿದನು.

ಯಾವುದರ ಮೂಲಕ ಇಂದ್ರದೇವನು ಸಮರದಲ್ಲಿ ಜಯವನ್ನು ಪಡೆದನೊ ಅಂತಹ ನಾರಾಯಣ ಕವಚ ಅಥವಾ ವಿಷ್ಣು ಮಂತ್ರವೆಂದರೇನೆಂದು ಪರೀಕ್ಷಿತ ರಾಜನು ತಿಳಿಯ ಬಯಸಿದನು.

ವಿಶ್ವರೂಪನು ನಾರಾಯಣ ಕವಚವನ್ನು ಹೀಗೆ ವಿವರಿಸಿದನು:

"ಒಬ್ಬರು ತಮ್ಮ ಕೈಕಾಲುಗಳನ್ನು ಶುಭ್ರವಾಗಿ ತೊಳೆದುಕೊಳ್ಳಬೇಕು; ಮಂತ್ರವನ್ನು ಪಠಿಸುವ ಮೂಲಕ ಆಚಮನವನ್ನು ಮಾಡಬೇಕು.

"ಓಂ ಅಪವಿತ್ರಾ ಪವಿತ್ರೋವಾ ಸರ್ವವಸ್ತಾಂ ಗತೋಪಿವಾ ಯಹ ಸ್ಮರೇತ್
ಪುಂಡರೀಕಾಕ್ಷಂ ಸಾ ಬಾಹ್ಯಾಭ್ಯಂತರಹ ಶುಚಿಃ ಶ್ರೀ ವಿಷ್ಣು ಶ್ರೀ ವಿಷ್ಣು"

ನಂತರ ಒಬ್ಬರು ಕುಶ ಗರಿಕೆಯನ್ನು ಸ್ಪರ್ಶಿಸಿ ಉತ್ತರದತ್ತ ಮುಖ ಮಾಡಿ ನಂತರ ನಿಶ್ಯಬ್ಧವಾಗಿ ಕೂರಬೇಕು. ಸಂಪೂರ್ಣವಾಗಿ ಪರಿಶುದ್ಧಗೊಂಡ ನಂತರ ಒಬ್ಬರು ಎಂಟು ಅಕ್ಷರಗಳಿಂದ ರಚಿತಗೊಂಡ ಮಂತ್ರವನ್ನು ತಮ್ಮ ದೇಹದ ಎಂಟು ಭಾಗಗಳಿಗೆ ಮುಟ್ಟಿಸಿಕೊಂಡು ಹನ್ನೆರಡು ಅಕ್ಷರಗಳಿಂದ ರಚಿತಗೊಂಡ ಮಂತ್ರವನ್ನು ತನ್ನ ಕೈಗಳಿಗೆ ಮುಟ್ಟಿಸಿಕೊಳ್ಳಬೇಕು. ಹೀಗೆ ನಾರಾಯಣ ಕವಚದ ಮೂಲಕ ತನ್ನನ್ನು ಕಟ್ಟಿಹಾಕಬೇಕು. ಮೊದಲು ಎಂಟು ಅಕ್ಷರಗಳ ಮಂತ್ರವನ್ನು ಪಠಿಸುತ್ತಿರುವಾಗ (ಪ್ರಣವ ಓಂಕಾರದಿಂದ ಪ್ರಾರಂಭವಾಗುವ "ಓಂ ನಮೋ ನಾರಾಯಣಾಯ") ಒಬ್ಬರು ತಮ್ಮ ಎರಡು ಪಾದಗಳಿಂದ ಪ್ರಾರಂಭಿಸಿ ತನ್ನ ಹಸ್ತವನ್ನು ಶರೀರದ ಎಂಟು ಭಾಗಗಳಿಗೆ ಮುಟ್ಟಿಸಿಕೊಂಡು, ಕ್ರಮೇಣ ವ್ಯವಸ್ಥಿತ ರೀತಿಯಲ್ಲಿ ಅದನ್ನು ಮಂಡಿಗಳು, ತೊಡೆಗಳು, ಹೊಟ್ಟೆ, ಹೃದಯ, ಎದೆ, ಬಾಯಿ ಮತ್ತು ಶಿರದತ್ತ ತೆಗೆದುಕೊಂಡು ಹೋಗಬೇಕು. ನಂತರ 'ಯಾ' ಎಂಬ ಕೊನೆಯಕ್ಷರದಿಂದ ಪ್ರಾರಂಭಿಸಿ ಹಿಂದು ಮುಂದಾದ ರೀತಿಯಲ್ಲಿ ತಮ್ಮ ಶರೀರದ ಅಂಗಾಂಗಗಳನ್ನು ಸ್ಪರ್ಶಿಸಿಕೊಳ್ಳುವ ಮೂಲಕ ಪಠಿಸಬೇಕು. ಈ ಎರಡು ವಿಧಾನಗಳಿಗೆ ಕ್ರಮವಾಗಿ "ಉತ್ಪತ್ತಿನ್ಯಾಸ" ಮತ್ತು "ಸಂಹಾರನ್ಯಾಸವೆಂದು" ಹೆಸರು.

ನಂತರ ಒಬ್ಬರು ಹನ್ನೆರಡು ಅಕ್ಷರಗಳ ಮಂತ್ರಗಳನ್ನು ಪಠಿಸಬೇಕು. (ಓಂ ನಮೋ ಭಗವತೇ ವಾಸುದೇವಾಯ) ಪ್ರತಿ ಅಕ್ಷರಕ್ಕೂ ಮೊದಲು ಓಂಕಾರವನ್ನು ಪಠಿಸಿ ಮಂತ್ರಗಳ ಅಕ್ಷರಗಳನ್ನು ಬಲಗೈನ ತೋರಬೆರಳಿನಿಂದ ತಮ್ಮ ಬೆರಳುಗಳ ಮೇಲೆ ಇರಿಸಲು ಪ್ರಾರಂಭಿಸಿ ಎಡಗೈನ ತೋರಬೆರಳುವಿನಲ್ಲೂ ಅದನ್ನು ಮುಕ್ತಾಯ ಗೊಳಿಸಬೇಕು. ಇನ್ನುಳಿದ ನಾಲ್ಕು ಅಕ್ಷರಗಳನ್ನು ಹೆಬ್ಬೆಟ್ಟಿನ ಮೂಳೆ ಕೀಲುಗಳ ಮೇಲಿಡಬೇಕು.

ನಂತರ ಒಬ್ಬರು ಆರು ಅಕ್ಷರಗಳ ಮಂತ್ರವನ್ನು ಪಠಿಸಬೇಕು. (ಓಂ ವಿಷ್ಣವೇ ನಮಃ), ಒಬ್ಬರು ಓಂ ಎಂಬ ಅಕ್ಷರವನ್ನು ತನ್ನ ಹೃದಯದಲ್ಲಿ 'ವಿ' ಎಂಬುದನ್ನು ಶಿರದ ಮೇಲೆ 'ಷ' ಎಂಬುದನ್ನು ಹುಬ್ಬುಗಳ ಮಧ್ಯೆ 'ನ' ಎಂಬುದನ್ನು ಶಿಖೆಯ ಗಂಟಿನ ಮೇಲೆ ಮತ್ತು 'ವೆ' ಯನ್ನು ತನ್ನ ಕಣ್ಣುಗಳ ಮಧ್ಯೆ ಇರಿಸಿಕೊಳ್ಳಬೇಕು. ಮಂತ್ರವನ್ನು ಪಠಿಸುವವನು ನಂತರ 'ನ' ಅಕ್ಷರವನ್ನು ತನ್ನ ಶರೀರದ ಎಲ್ಲ ಮೂಳೆ ಕೀಲುಗಳ ಮೇಲಿರಿಸಿಕೊಂಡು 'ಮ' ಅಕ್ಷರದ ಮೇಲೆ ಅದು ಒಂದು ಅಸ್ತ್ರವೆನ್ನುವೋಪಾದಿಯಲ್ಲಿ ಧ್ಯಾನಿಸಬೇಕು, ಕೊನೆಯ ಅಕ್ಷರ 'ಮ' ಕ್ಕೆ ವಿಸರ್ಗವನ್ನು ಕೂಡಿಸುವ ಮೂಲಕ ಅವನಾಗ ಮಂತ್ರದ ಸದ್ರಶವಾಗಿ, ಪೂರ್ವ ದಿಕ್ಕಿನಿಂದ ಪ್ರಾರಂಭಿಸಿ ಎಲ್ಲ ದಿಕ್ಕುಗಳಿಗೂ 'ಮಾ ಅಸ್ತ್ರಾಯಫಠ' ಎಂಬ ಮಂತ್ರವನ್ನು ಪಠಿಸಬೇಕು. ಈ ರೀತಿಯಲ್ಲಿ ಎಲ್ಲ ದಿಕ್ಕುಗಳೂ ಮಂತ್ರದ ಸಂರಕ್ಷಣಾ ಕವಚದಿಂದ ಆವೃತವಾಗುತ್ತದೆ.

ಪಠಣವನ್ನು ಮುಕ್ತಾಯಗೊಳಿಸಿದ ನಂತರ ವಿಷ್ಣುವನ್ನು ಕುರಿತು ಅವನೆಲ್ಲ ವೈಭವದೊಂದಿಗೆ ಚಿಂತಿಸಿ ರಕ್ಷಣೆಗಾಗಿ ಬೇಡಬೇಕು. ಅವನೆಲ್ಲ ಅವತಾರಗಳನ್ನೂ ಸ್ಮರಿಸಿಕೊಳ್ಳಬೇಕು.

ನಾರಾಯಣ ಕವಚವೆಂಬ ಈ ಪ್ರಾರ್ಥನೆ ನಾರಾಯಣನೊಂದಿಗೆ ಹೊಂದಿರುವ ಸೂಕ್ಷ್ಮಬುದ್ಧಿಯ ಧ್ಯಾನಮಗ್ನ ಸಂಬಂಧವನ್ನು ಒಳಗೊಂಡಿರುತ್ತದೆ. ಈ ಪ್ರಾರ್ಥನೆಯನ್ನು ಅಳವಡಿಸಿಕೊಳ್ಳುವವನು ಎಂದಿಗೂ ಗೊಂದಲಗೊಳ್ಳುವುದಿಲ್ಲ ಅಥವಾ ಅಪಾಯಕ್ಕೆ ಸಿಲುಕುವುದಿಲ್ಲ.

ತನ್ನ ವ್ಯಾಖ್ಯಾನವನ್ನು ಮುಂದುವರಿಸಿ ಶುಕಾಚಾರ್ಯರು ಹೇಳಿದರು. "ವಿಶ್ವರೂಪನಿಗೆ ಮೂರು ಶಿರಗಳಿದ್ದವು - ಒಂದು ಸೋಮರಸವೆಂಬ ಪಾನೀಯವನ್ನು ಕುಡಿಯಲು; ಮತ್ತೊಂದು ದ್ರಾಕ್ಷಾರಸವನ್ನು ಕುಡಿಯಲು ಹಾಗೂ ಮೂರನೆಯದು ಆಹಾರವನ್ನು ಸೇವಿಸಲು. ವಿಶ್ವರೂಪನು ಉಪದೇವತೆಗಳಿಗೆ ನೇವೇದ್ಯಗಳನ್ನು ಸಮರ್ಪಿಸುತ್ತಿರುವ ಸಂದರ್ಭದಲ್ಲಿ ರಾಕ್ಷಸರಿಗೆ ರಹಸ್ಯವಾಗಿ ಅದನ್ನು ನೀಡಿದನು. ಇದನ್ನರಿತ ದೇವೇಂದ್ರನು ಮತ್ತೊಮ್ಮೆ ತಾನು ರಾಕ್ಷಸರಿಂದ ಪರಾಭವಗೊಳ್ಳುತ್ತೇನೆಯೇ ಎಂಬ ಚಿಂತೆಗೊಳಗಾದನು. ಕೋಪಾವಿಷ್ಟನಾದ ಇಂದ್ರನು ವಿಶ್ವರೂಪನ ಮೂರು ಶಿರಗಳನ್ನೂ ಕತ್ತರಿಸಿ ಹಾಕಿದನು. ಕೂಡಲೆ ಸೋಮರಸಕ್ಕೆ ಮೀಸಲಾದ ಶಿರವು ಕಪಿಂಜಲವಾಗಿ, ದ್ರಾಕ್ಷಾರಸಕ್ಕೆ ಮೀಸಲಾದ್ದು ಪಾರಿವಾಳವಾಗಿ ಮತ್ತು ಮೂರನೆಯದು ಸಾಮಾನ್ಯ ಬೇಟೆ ಹಕ್ಕಿಯಾಗಿ ಪರಿವರ್ತಿತಗೊಂಡವು.

ಇಂದ್ರನು ಒಂದು ವರ್ಷಕಾಲ ಪರಿತಪಿಸಿ ನಂತರ ತನ್ನನ್ನೇ ಪರಿಶುದ್ಧ ಗೊಳಿಸಿಕೊಳ್ಳಲು ಈ ಪಾಪಪೂರಿತ ಹತ್ಯೆಯ ಪರಿಣಾಮಗಳನ್ನು ಭೂಮಿ, ನೀರು, ವೃಕ್ಷಗಳು ಮತ್ತು ಮಹಿಳೆಯರ ಮಧ್ಯೆ ವಿತರಿಸಿದನು. ಅದರ ಫಲವಾಗಿ ಭೂಮಿಯ ಒಂದು ಭಾಗ ಮರುಭೂಮಿಯಾಯಿತು; ನೀರಿನಲ್ಲಿ ಗುಳ್ಳೆಗಳು ಹಾಗೂ ನೊರೆಗಳನ್ನು ಒಬ್ಬರು ನೋಡವಂತಾಯಿತು ಮತ್ತು ಮರಗಳಲ್ಲಿ ಒಬ್ಬರು ಸಸ್ಯರಸ ಹರಿಯುವುದನ್ನು ಕಾಣುವಂತಾಯಿತು. ಹಾಗೂ ಮಹಿಳೆಯರು ಮುಟ್ಟಿನಿಂದ ಬಾಧಿತರಾದರು.

ವಿಶ್ವರೂಪನ ಪಿತನು ಇಂದ್ರನನ್ನು ಕೊಲ್ಲಲು ಹೋಮ ಹವನಾದಿಗಳನ್ನು ನೆರವೇರಿಸಿ ಪವಿತ್ರ ಅಗ್ನಿಗೆ ಆಹುತಿಯನ್ನು ಸಮರ್ಪಿಸುತ್ತಾ "ಎಲೈ ಶತೃವಾದ ಇಂದ್ರನೇ, ನಿನ್ನ ಶತೃವನ್ನು ಹತ್ಯೆಗೈಯ್ಯಲು ವಿಳಂಬವಿಲ್ಲದೆ ತೇಜೋವಂತನಾಗು" ಎಂದನು. ಅನಂತರದಲ್ಲಿ ಪವಿತ್ರಾಗ್ನಿಯ ದಕ್ಷಿಣದ ಕಡೆಯಿಂದ ದೈತ್ಯನೊಬ್ಬ ಕಾಣಿಸಿಕೊಂಡನು. ಈ ದೈತ್ಯನೇ ತ್ವಷ್ಥನ ಪುತ್ರನಾದ ವೃತ್ರನು.

ಉಪದೇವತೆಗಳಿಗೆ ರಾಕ್ಷಸನನ್ನು ಕೊಲ್ಲಲಾಗದೆ ಹೋದದ್ದರಿಂದ ಭಗವಂತನನ್ನು ಸಮೀಪಿಸಿದರು. ಪರಮಾತ್ಮನು ಉಪದೇವತೆಗಳ ಮುಂದೆ ಕಾಣಿಸಿಕೊಂಡು ಇಂದ್ರನಿಗೆ ದಧೀಚಿಯ ಬಳಿಗೆ ಸಾಗಿ ಬುದ್ಧಿಶಕ್ತಿ, ಪ್ರಜ್ಞೆ ಮತ್ತು ಕಠಿಣ ತಪಸ್ಸಿನಿಂದ ಬಲಿಷ್ಠವಾದ ಅವನ ಶರೀರವನ್ನೇ ಕೇಳುವಂತೆ ಉಪದೇಶಿಸಿದನು.

## ದಧೀಚಿ

ಋಷಿ ಸದೃಶನಾದ ದಧೀಚಿಯು-ದಧ್ಯಂಚನೆಂಬುದಾಗಿ ಪ್ರಖ್ಯಾತಗೊಂಡನು. ವೈಯಕ್ತಿಕವಾಗಿ, ಅಧ್ಯಾತ್ಮಿಕವಾಗಿ ಜ್ಞಾನವನ್ನು ಅರಗಿಸಿಕೊಂಡು ನಂತರ ಅದನ್ನು ಅಶ್ವಿನಿ ಕುಮಾರರಿಗೆ ಒದಗಿಸಿದ್ದನು. ದಧೀಚಿಯು ಅವರಿಗೆ ಮಂತ್ರಗಳನ್ನು ಕುದುರೆಯ ತಲೆಯ ಮೂಲಕ ನೀಡಿದ್ದರಿಂದ ಮಂತ್ರಕ್ಕೆ ಅಶ್ವಶಿರವೆಂಬ ಹೆಸರು ಬಂತು. ಅಧ್ಯಾತ್ಮಿಕ ವಿಜ್ಞಾನದ ಮಂತ್ರಗಳನ್ನು ದಧೀಚಿಯಿಂದ ಪಡೆದುಕೊಂಡ ನಂತರ ಅಶ್ವಿನಿ ಕುಮಾರರು ಜೀವನ್ಮುಕ್ತರು, ಅಂದರೆ ಈ ಜನ್ಮದಲ್ಲೇ ವಿಮುಕ್ತಗೊಂಡವರಾದರು. ಮಹಾಮುನಿ ದಧೀಚಿಯು ಫಲಪ್ರದ ಚಟುವಟಿಕೆಗಳನ್ನು ಹೇಗೆ ನಡೆಸಬೇಕೆಂಬ ಬಗ್ಗೆ ಪರಿಪೂರ್ಣ ಜ್ಞಾನವನ್ನು ಪಡೆದುಕೊಂಡವನಾಗಿದ್ದಲ್ಲದೆ ಅಧ್ಯಾತ್ಮ ಜ್ಞಾನವನ್ನೂ ಹೊಂದಿದ್ದನು. ಇವನ್ನು ತಿಳಿದು ಅಶ್ವಿನಿ ಕುಮಾರರು ಅವನ ಬಳಿಗೆ ಬ್ರಹ್ಮವಿದ್ಯೆಯ ಸಲುವಾಗಿ ತೆರಳಿದ್ದರು. ಕಾರ್ಯಮಗ್ನನಾಗಿದ್ದ ದಧೀಚಿಯು ಕುಮಾರರಿಗೆ ಅನಂತರ ಬರುವಂತೆ ತಿಳಿಸಿದನು. ಇದನ್ನು ತಿಳಿದ ಇಂದ್ರನು ದಧೀಚಿಯ ಬಳಿಗೆ ತೆರಳಿ ಅನಂತರ ಅವನೇನಾದರೂ ಕುಮಾರರಿಗೆ ಬ್ರಹ್ಮವಿದ್ಯೆಯನ್ನು ಕಲಿಸಿದರೆ ತಾನು ಅವನ ರುಂಡವನ್ನು ಕತ್ತರಿಸಿ ಹಾಕುವುದಾಗಿ ತಿಳಿಸಿದನು. ಇದನ್ನು ತಿಳಿದ ಕುಮಾರರು ಮತ್ತೆ ದಧೀಚಿಯ ಬಳಿಗೆ ಹೊರಟರು. ಇಂದ್ರನ ಹೆದರಿಕೆಯನ್ನು ದಧೀಚಿಯು ಅವರಿಗೆ ತಿಳಿಸಿದಾಗ ಕುಮಾರರು ತಾವೇ ಅವನ ಶಿರವನ್ನು ಕಡಿದು ಅದರ ಸ್ಥಳದಲ್ಲಿ ಕುದುರೆಯ ತಲೆಯನ್ನು ಇಡುವುದಾಗಿ ತಿಳಿಸಿ ಅದರ ಮೂಲಕ ಬ್ರಹ್ಮವಿದ್ಯೆಯನ್ನು ಕಲಿಸಬೇಕೆಂದರು. ದಧೀಚಿಯ ಶಿರವನ್ನು ಇಂದ್ರನು ಕಡಿದ ನಂತರ ಕುಮಾರರೇ ಹಿಂತಿರುಗಿ ಆ ಸ್ಥಳದಲ್ಲಿ ದಧೀಚಿಯ ಮುಂಚಿನ ತಲೆಯನ್ನು ಇಡುವುದಾಗಿ ಒಪ್ಪಂದವಾಯಿತು. ದಧೀಚಿಯ ಬ್ರಹ್ಮವಿದ್ಯೆಯನ್ನು ಅಶ್ವದ ಮೂಲಕ ವಿಸ್ತರಿಸಿದ್ದರಿಂದ ಅದನ್ನು "ಅಶ್ವಶಿರ"ವೆಂದು ಕರೆಯಲಾಯಿತು.

ದಧೀಚಿಯು ಮೊದಲು ನಾರಾಯಣ ಕವಚವನ್ನು ಹೊಂದಿದ್ದು ಅದನ್ನು ತ್ವಷ್ಟನಿಗೆ ನೀಡಿದಾಗ ಅವನು ಅದನ್ನು ವಿಶ್ವರೂಪನಿಗೆ ನೀಡಿ ಅವನ ಮೂಲಕ ಇಂದ್ರನು ಅದನ್ನು ಪಡೆದುಕೊಂಡನೆಂದು ಪರಮಾತ್ಮನು ತಿಳಿಸಿದನು. ನಾರಾಯಣ ಕವಚ

ಇದ್ದುವರಿಂದಲೇ ದಧೀಚಿಯು ಬಲಿಷ್ಠನಾದ್ದರಿಂದ ಇಂದ್ರನಿಗೆ ಅವನ ಬಳಿಗೆ ಹೋಗುವಂತೆ ತಿಳಿಸಿಲಾಯಿತು. ಅಶ್ವಿನಿ ಕುಮಾರರ ಮೂಲಕ ದಧೀಚಿಯ ಬಳಿಗೆ ಹೋಗುವಂತೆ ಭಗವಂತನು ಇಂದ್ರನಿಗೆ ಸಲಹೆ ಮಾಡಿದನು. ದಧೀಚಿಯು ನಿನಗೆ ಶರೀರವನ್ನು ನೀಡಿದಾಗ ವಿಶ್ವಕರ್ಮನು ತನ್ನ ಮೂಳೆಗಳಿಂದ ಸಿಡಿಲನ್ನು ಸಿದ್ದಪಡಿಸಿ ಆ ಸಿಡಿಲಿಗೆ ಭಗವಂತನ ಶಕ್ತಿಯನ್ನು ನೀಡಲಾಗುತ್ತದೆ. ಒಮ್ಮೆ ವೃತ್ರಸುರನೆಂಬ ದೈತ್ಯನು ಸತ್ತನೆಂದರೆ ಇಂದ್ರನಿಗೆ ಶಕ್ತಿ ಒದಗಿಸಲಾಗುತ್ತದೆ. ವೃತ್ರಸುರನು ಮೂರು ಜಗತ್ತಗಳನ್ನು ನಾಶಪಡಿಸಬಹುದಾದರೂ ಅವನೇ ಭಗವಂತನ ಉನ್ನತ ಭಕ್ತನಾದ್ದರಿಂದ ಅವನು ಹಾಗೆ ಮಾಡಲಾರ.

ದಧೀಚಿಯ ಬಳಿಗೆ ಹೋಗಿ ಅವನ ಶರೀರವನ್ನು ಕೇಳಬೇಕೆಂದು ಇಂದ್ರನಿಗೆ ತಿಳಿಸಿದ ನಂತರ ಪರಮಾತ್ಮನು ಮಾಯವಾದನು.

ದಧೀಚಿಯು ಅಥರ್ವನ ಪುತ್ರ. ಉಪದೇವತೆಗಳು ದಧೀಚಿಯ ಬಳಿಗೆ ಅವನ ಶರೀರವನ್ನು ಯಾಚಿಸಲು ಹೋದರು. ಸಮೀಪಿಸಲ್ಪಟ್ಟಾಗ ದಧೀಚಿಯು ನೋವಿನ ಸಂಗತಿಯಾದರೂ ಉದ್ದೇಶವು ಒಳಿತಾದ್ದರಿಂದ ತನ್ನ ಶರೀರವನ್ನು ನೀಡಲು ಒಪ್ಪಿದನು. ಶರೀರವನ್ನು ನೀಡಲು ನಿರ್ಧರಿಸಿದ ದಧೀಚಿಯು ತಾನೇ ಚೈತನ್ಯ ಹಾಗೂ ಆತ್ಮವನ್ನು ಭಗವಂತನ ಪದ್ಮಪಾದಕ್ಕೆ ಒಪ್ಪಿಸಿ ಈ ರೀತಿ ಪಂಚಭೂತಗಳಿಂದ ನಿರ್ಮಾಣಗೊಂಡಿದ್ದ ಐಹಿಕ ಶರೀರವನ್ನು ಬಿಟ್ಟು ಕೊಟ್ಟನು. ದಧೀಚಿಯು ತನ್ನ ಇಂದ್ರಿಯಗಳನ್ನು, ಶಕ್ತಿಯನ್ನು, ಮನಸ್ಸು ಹಾಗೂ ಬುದ್ಧಿಯನ್ನು ನಿಯಂತ್ರಿಸಿ ಧ್ಯಾನಮಗ್ನನಾದನು. ಹೀಗೆ ಅವನು ತನ್ನ ಐಹಿಕ ಬಂಧನಗಳನ್ನು ಕಳಚಿಕೊಂಡನು. ತನ್ನ ಐಹಿಕ ಶರೀರವು ಹೇಗೆ ತನ್ನಿಂದ ಪ್ರತ್ಯೇಕಗೊಂಡಿತು ಎಂಬುದನ್ನು ಅವನು ತಿಳಿಯಲೇ ಇಲ್ಲ. (ಭಗವದ್ಗೀತೆ ೬.೪೭ ರಲ್ಲಿ ಹೇಳಿದೆ: " ಎಲ್ಲ ಯೋಗಿಗಳಲ್ಲೂ ಸದಾ ಕಾಲವೂ ನನ್ನಲ್ಲಿ ಅಪಾರ ನಂಬಿಕೆಯನ್ನು ಉಳ್ಳವನು ಹಾಗೂ ಧ್ಯಾನ ಮತ್ತು ಪ್ರೀತಿಯ ಸೇವೆಯ ಮೂಲಕ ನನ್ನನ್ನು ಪ್ರಾರ್ಥಿಸುವವನೇ ಯೋಗದಲ್ಲಿ ನನ್ನೊಂದಿಗೆ ಅತ್ಯಂತ ನಿಕಟವಾಗಿ ಸೇರ್ಪಡೆಯಾಗಲಿದ್ದು ಅವನು ಎಲ್ಲರಿಗಿಂತಲೂ ಉನ್ನತನಾದವನು"). ಆನಂತರ ಇಂದ್ರನು ವಿಶ್ವಕರ್ಮನು ದಧೀಚಿಯ ಮೂಳೆಗಳಿಂದ ತಯಾರಿಸಿದ ಸಿಡಿಲನ್ನು ತೆಗೆದುಕೊಂಡು ರಾಕ್ಷಸರೊಡನೆ ಕಾದಾಡಲು ಹೊರಟನು. ಸತ್ಯಯುಗದ ಅಂತ್ಯದಲ್ಲಿ ಹಾಗೂ ತ್ರೇತ್ರಾಯುಗದ ಪ್ರಾರಂಭದಲ್ಲಿ ನರ್ಮದಾ ನದಿಯ ತೀರದಲ್ಲಿ ಉಪದೇವತೆಗಳು ಹಾಗೂ ರಾಕ್ಷಸರ ಮಧ್ಯೆ ಮಹಾ ಸಮರವೊಂದು ನಡೆಯಿತು.

ಸಮರದಲ್ಲಿ ರಾಕ್ಷಸರು ಯುದ್ಧ ಭೂಮಿಯಿಂದ ನಿರ್ಗಮಿಸಲು ತೊಡಗಿದಾಗ ಇದನ್ನು ಕಂಡ ವೃತ್ರಾಸುರನೆಂದನು: "ಈ ಐಹಿಕ ಜಗತ್ತಿನಲ್ಲಿ ಜನಿಸಿದ ಜೀವಿಗಳೆಲ್ಲರೂ ಸಾಯಲೇ ಬೇಕು. ಖಂಡಿತವಾಗಿಯೂ ಸಾವಿನಿಂದ ರಕ್ಷಿಸಿಕೊಳ್ಳುವಂಥ ಯಾವ ವಿಧಾನವನ್ನು ಯಾರೂ ಕಂಡುಕೊಂಡಿಲ್ಲ. ಅದೃಷ್ಟವೂ ಸಹ ಅದರಿಂದ ತಪ್ಪಿಸಿಕೊಳ್ಳುವ ಮಾರ್ಗವನ್ನು ಒದಗಿಸಿಲ್ಲ. ಈ ಪರಿಸ್ಥಿತಿಗಳಲ್ಲಿ ಸಾವೆಂಬುದು ಅನಿವಾರ್ಯವಾಗಿರುವಾಗ

ಒಬ್ಬರು ಉನ್ನತ ಗ್ರಹ ವ್ಯವಸ್ಥೆಯನ್ನು ಪ್ರವೇಶಿಸಲು ಅರ್ಹರಾಗಿ ಸೂಕ್ತ ಸಾವಿನ ಮೂಲಕ ವೈಭವೀಕರಿಸಲ್ಪಡಬಹುದಾದರೆ ಅಂತಹ ಸಾವನ್ನು ಯಾರು ಅಂಗೀಕರಿಸುವುದಿಲ್ಲ?"

ಇಂದ್ರ ಹಾಗೂ ವೃತ್ರಾಸುರರ ಮಧ್ಯೆ ನಡೆದ ಮುಖಾಮುಖಿ ಕದನದಲ್ಲಿ ಇಂದ್ರನು ಹೀನಾಯ ರೀತಿಯಲ್ಲಿ ಅಪಜಯ ಹೊಂದಿದನು. ವೃತ್ರಾಸುರ ತನ್ನ ಶರೀರವನ್ನು ಬಿಟ್ಟು ಕೊಟ್ಟ ಪರಮಾತ್ಮನ ಸೇವೆಗೆ ತೊಡಗಲು ಸಿದ್ಧನಾದನು. ಇಂದ್ರ ವಿಚಲಿತನಾಗಿ ವೃತ್ರಾಸುರನನ್ನು ಪ್ರಶಂಸಿಸಿದ. ಅವನೆಂದ: "ಓ, ಮಹಾರಾಕ್ಷಸನೇ, ಭಕ್ತಿಪೂರ್ವಕ ಸೇವೆಯ ಬಗ್ಗೆ, ನಿನ್ನ ಅಪಾಯಕರ ಪರಿಸ್ಥಿತಿಯಲ್ಲೂ ನೀನು ತೋರಿರುವ ತಾರತಮ್ಯತೆ ಮತ್ತು ಸಾಮರ್ಥ್ಯದಿಂದಾಗಿ ನೀನು ಪರಮಾತ್ಮನ ಪರಿಪೂರ್ಣ ಭಕ್ತನಾಗಿ ನನಗೆ ಕಾದಿದ್ದೀಯೆ. ನೀನು ಭಗವಾನ್ ಮಹಾವಿಷ್ಣುವಿನ ಭ್ರಮ ಶಕ್ತಿಯನ್ನು ಎದುರಿಸಿ ಈ ವಿಮುಕ್ತಿಯಿಂದಾಗಿಯೇ ನೀನು ರಾಕ್ಷಸೀ ಪ್ರವೃತ್ತಿಯನ್ನು ಬಿಟ್ಟು ಕೊಟ್ಟು ಉನ್ನತ ಭಕ್ತಿಯ ಸ್ಥಾನವನ್ನು ಪಡೆದುಕೊಂಡಿದ್ದೀಯೆ."

ವೃತ್ರಾಸುರನು ಸತ್ತನು ಮತ್ತು ಎಲ್ಲ ಗಂಧರ್ವರು ಹಾಗೂ ಸಿದ್ಧರು ಇಂದ್ರನನ್ನು ಅವನ ವಿಜಯಕ್ಕಾಗಿ ಹೊಗಳಿದರು. ವೃತ್ರಾಸುರನು ಕೆಳಗೆ ಬಿದ್ದಾಗ ಇವನ ಶರೀರದಿಂದ ಜೀವಂತ ಕಿಡಿಯೊಂದು ಹೊರಬಂದು ಭಗವಂತನತ್ತ ಹಿಂತಿರುಗಿತು. ದೇವತೆಗಳೆಲ್ಲರೂ ನೋಡುತ್ತಿದ್ದಂತೆಯೇ ವೃತ್ರಾಸುರನು ಅತಿಶಯ ಜಗತ್ತನ್ನು ಪ್ರವೇಶಿಸಿ ಭಗವಾನ್ ಸಂಕರ್ಷಣನ ಅನುಯಾಯಿಯಾದನು.

ವೃತ್ರಾಸುರನ ಮರಣದೊಂದಿಗೆ ಇಂದ್ರನು ತೊಂದರೆಯಿಂದ ಮುಕ್ತನಾಗದಿದ್ದರೂ, ಎಲ್ಲೆಡೆ ಶಾಂತಿ ನೆಲೆಸಿತು. ಎಲ್ಲ ಉಪದೇವತೆಗಳೂ ತಮ್ಮ ತಮ್ಮ ವಾಸಸ್ಥಾನಗಳಿಗೆ ಹಿಂತಿರುಗಿದ್ದರೂ ಬ್ರಾಹ್ಮಣನೊಬ್ಬನನ್ನು ಕೊಂದೆನೆಂದು ಪರಿತಪಿಸುತ್ತಾ ಇಂದ್ರನು ಅಲ್ಲೇ ಉಳಿದನು. ತನ್ನ ಪಾಪಕೃತ್ಯದ ಪರಿಣಾಮಗಳಿಂದ ತಪ್ಪಿಸಿಕೊಳ್ಳಲು ಇಂದ್ರನು ಮಾನಸ ಸರೋವರಕ್ಕೆ ತೆರಳಿದನು. ಅಶ್ವಮೇಧವನ್ನು ಆಚರಿಸಿದ ನಂತರ ಅವನು ತನ್ನ ವಾಸಕ್ಕೆ ಹಿಂತಿರುಗಿದನು.

ಇಂದ್ರನು ಏಕೆ ಅಸಂತೋಷದಿಂದಿದ್ದನು ಎಂಬುದಾಗಿ ಪರೀಕ್ಷಿತ ಮಹಾರಾಜನು ಶ್ರೀ ಶುಕಾಚಾರ್ಯರನ್ನು ವಿಚಾರಿಸಿದನು.

ವೃತ್ರಾಸುರನು ತನ್ನ ತಂದೆಯ ಸಲುವಾಗಿ ಕಾಣಿಸಿಕೊಂಡಾಗ ಎಲ್ಲ ಉಪದೇವತೆಗಳೂ ಇಂದ್ರನನ್ನು ಅವನನ್ನು ಕೊಲ್ಲುವಂತೆ ಕೇಳಿದರು. ಆದರೆ ಇಂದ್ರನು ಒಲ್ಲದ ಮನಸ್ಸಿನವನಾಗಿದ್ದನು. ಅವನಾಗಲೇ ತನ್ನ ಅಧ್ಯಾತ್ಮಿಕ ಪ್ರಮುಖನಾದ ವಿಶ್ವರೂಪನನ್ನು ಕೊಂದಿದ್ದು, ಪಾಪಪೂರಿತನಾಗಿ ಅದರ ಪರಿಣಾಮಗಳನ್ನು ಭೂಮಿ, ಜಲ, ವೃಕ್ಷ ಮತ್ತು ಮಹಿಳೆಯ ಮಧ್ಯೆ ಹಂಚಿದವನಾಗಿದ್ದ. ಅವನು ಮತ್ತೆ ವೃತ್ರಾಸುರನನ್ನು ಕೊಂದರೆ ಪಾಪಕೃತ್ಯಗಳಿಂದ ವಿಮುಕ್ತನಾಗುವುದು ಹೇಗೆ?

ಋಷಿಗಳು ಹಾಗೂ ಇತರರು ಇಂದ್ರನಿಗೆ ಪಾಪವನ್ನು ಪರಿಹರಿಸಿಕೊಳ್ಳಬಹುದಾದ ಅನೇಕ ವಿಧಾನಗಳಿವೆ ಎಂದು ತಿಳಿಸಿದರು. ಇಂದ್ರನು ವೃತ್ರಾಸುರನನ್ನು ಕೊಂದಾಗ

ಪಾಪವು ಅವನ ಬೆಂಬತ್ತಿತು. ಅದರ ಸಲುವಾಗಿ ಇಂದ್ರನು ಮಾನಸ ಸರೋವರವನ್ನು ಪ್ರವೇಶಿಸಿ ನೀರಿನಲ್ಲಿ ಅಡಗಿ ಕೂತು ಪರಿಶುದ್ಧನಾದ ನಂತರ ತನ್ನ ವಾಸಕ್ಕೆ ಹಿಂತಿರುಗಿದನು. ಅಲ್ಲೂ ಅಶ್ವಮೇಧ ಯಜ್ಞವನ್ನು ಹಿರಿಯ ಮುನಿಗಳ ನೆರವಿನಿಂದ ಅಚರಿಸಿ ಆ ಮೂಲಕ ತನ್ನ ಉನ್ನತ ಸ್ಥಾನವನ್ನು ಮರು ಪಡೆದುಕೊಂಡನು.

## ವೃತ್ರಾಸುರ

ರಾಕ್ಷಸನಾದ ವೃತ್ರಾಸುರನು ಹೇಗೆ ಉನ್ನತಸ್ಥಾನ ಮತ್ತು ಭಗವಂತನ ಮೇಲೆ ಪ್ರೇಮವನ್ನು ಪಡೆದುಕೊಂಡನೆಂಬುದಾಗಿ ಪರೀಕ್ಷಿತ ಮಹಾರಾಜನು ಶ್ರೀ ಶುಕಾಚಾರ್ಯರನ್ನು ಕೇಳಿದನು. ಈ ಐಹಿಕ ಜಗತ್ತಿನಲ್ಲಿ ಅಣುರೂಪದಲ್ಲಿರುವ ಅನೇಕ ಜೀವಿಗಳಿವೆ ಎಂಬುದಾಗಿ ದೊರೆಯೆಂದನು. ಈ ಜೀವಿಗಳಲ್ಲಿ ಕೆಲವು ಮಾನವರಾಗಿದ್ದು ಅವರಲ್ಲೂ ಕೆಲವರು ಧಾರ್ಮಿಕ ತತ್ತ್ವಗಳಲ್ಲಿ ಆಸಕ್ತಿ ಹೊಂದಿದವರಾಗಿದ್ದು ಅವರಲ್ಲೂ ಕೆಲವರು ಐಹಿಕ ಜಗತ್ತಿನಿಂದ ಮುಕ್ತಿ ಪಡೆಯಲು ಬಯಸುತ್ತಾರೆ ಎಂಬುದಾಗಿ ಅವನು ಹೇಳಿದನು. ಇಲ್ಲಿಯೂ ಸಹ ಮುಕ್ತಿಯನ್ನು ಪಡೆಯ ಬಯಸುವವರಲ್ಲೂ ಒಬ್ಬನೇ ಒಬ್ಬ ವಾಸ್ತವವಾಗಿ ಅದನ್ನು ಪಡೆದು ವಿಮುಕ್ತಿಯ ನಿಜವಾದ ಅರ್ಥವನ್ನು ತಿಳಿದುಕೊಂಡವನು ತುಂಬಾ ಅಪರೂಪ.

ದೊರೆಯು ಮುಂದುವರಿದು ವಿಮುಕ್ತಿ ಹೊಂದಿ ಬುದ್ಧಿಶಕ್ತಿಯ ಪರಿಪೂರ್ಣತೆಯನ್ನು ಪಡೆದುಕೊಂಡ ಕೋಟ್ಯಂತರ ಜನರಲ್ಲಿ ಒಬ್ಬರು ಭಗವಾನ್ ನಾರಾಯಣ ಅಥವಾ ಶ್ರೀ ಕೃಷ್ಣನ ಭಕ್ತರು. ಸಂಪೂರ್ಣ ಶಾಂತಿಯಿಂದಿರುವ ಅಂತಹ ಭಕ್ತಾದಿಗಳು ತೀರಾ ವಿರಳ. ಪಾಪಿಷ್ಟನಾದ ವೃತ್ರಾಸುರನು ಹೇಗೆ ಭಗವದ್ಭಕ್ತನಾದನೆಂದು ದೊರೆಯು ಕೇಳಿ ಇಂಥ ದ್ವಂದ್ವಗಳು ಇರಬಹುದಾದರೂ ಹೇಗೆ ಎಂಬುದಾಗಿ ದೊರೆಯು ಕೇಳಿದನು.

ಅದಕ್ಕೆ ಶ್ರೀ ಶುಕಾಚಾರ್ಯರು ತಾವು ವ್ಯಾಸದೇವ, ನಾರದ ಮತ್ತು ದೇವಲರಿಂದ ಕಲಿತದ್ದೆಲ್ಲವನ್ನೂ ವಿವರಿಸುವುದಾಗಿ ತಿಳಿಸಿದರು.

ಸುರಸೇನ ಸಂಸ್ಥಾನದಲ್ಲಿ ಚಿತ್ರಕೇತುವೆಂಬ ದೊರೆಯಿದ್ದು ಅವನ ಆಳ್ವಿಕೆಯಲ್ಲಿ ಪ್ರತಿಯೊಂದೂ ಸಮೃದ್ಧವಾಗಿ ಲಭ್ಯವಾಗಿತ್ತು. ಚಿತ್ರಕೇತುವಿಗೆ ಹತ್ತು ದಶಲಕ್ಷ ಹೆಂಡತಿಯರಿದ್ದರೂ ಅವರೆಲ್ಲರೂ ಬಂಜೆಯರಾಗಿದ್ದರು. ದೊರೆಗೆ ರೂಪ, ಶಕ್ತಿ, ಶಿಕ್ಷಣ ಎಲ್ಲವೂ ಇದ್ದರೂ ಪುತ್ರನಿಲ್ಲದೆಯೇ ಅವನು ಅಸಂತುಷ್ಟನಾಗಿದ್ದನು.

ಒಮ್ಮೆ ಅಂಗೀರನೆಂಬ ಮುನಿಯು ಚಿತ್ರಕೇತುವಿನ ರಾಜ್ಯಕ್ಕೆ ಆಗಮಿಸಿದನು. ದೊರೆಯು ಅವನಿಗೆ ಗೌರವಗಳನ್ನು ಸಲ್ಲಿಸಿ ಅವನ ಪಾದದ ಬಳಿ ಕೂತನು. ಮುನಿಯು ಅವನ ಯೋಗಕ್ಷೇಮದ ಬಗ್ಗೆ ವಿಚಾರಿಸಿದನು. ಅದರೆ ದೊರೆಯನ್ನು ಗಮನಿಸಿದಾಗ ಅವನಿಗೆ ಕೆಲವು ಸಮಸ್ಯೆಗಳಿಂದಾಗಿ ದೊರೆಯು ಆತಂಕಗೊಂಡಿದ್ದಾನೆಂದು ಭಾಸ ವಾಯಿತು. ದೊರೆಯು ಆಗ ತನಗೆ ಎಲ್ಲವೂ ಇದ್ದರೂ ಪುತ್ರನಿಲ್ಲದೆ ಆತಂಕಗೊಂಡಿದ್ದು ತುಂಬಾ ಚಿಂತಿತನಾಗಿದ್ದೇನೆಂದನು. ಅದರ ನಿವಾರಣೆಗೆ ಏನಾದರೂ ಮಾಡಬೇಕೆಂದು

ಅವನು ಮುನಿಯನ್ನು ಕೇಳಿಕೊಂಡನು. ಬ್ರಹ್ಮನ ಶಿರದಿಂದ ಜನಿಸಿದ ಅಂಗೀರಸು ಹೋಮವನ್ನು ಮಾಡಿ ತ್ವಸ್ಥನಿಗೆ ಆಹುತಿಯನ್ನು ನೀಡಿದನು. ಅವರ ಪ್ರಸಾದವನ್ನು ಮೊದಲು ದೊರೆಗೆ ಹಾಗೂ ಅವನ ಪಟ್ಟದರಸಿ ಕೃತಾದ್ಯುತಿಗೆ ನೀಡಲಾಯಿತು. ಆನಂತರದಲ್ಲಿ ಹಿರಿಯ ಋಷಿಯು ದೊರೆಗೆ: "ಎಲೈ ಮಹಾನ್ ದೊರೆಯೇ, ನೀನೀಗ ಹರ್ಷ ಹಾಗೂ ಪರಿತಾಪಗಳೆರಡಕ್ಕೂ ಕಾರಣನಾಗುವ ಒಬ್ಬ ಪುತ್ರನನ್ನು ಪಡೆಯುವೆ" ಎಂದು ಹೇಳಿ ಹೊರಟನು.

ಚಿತ್ರಕೇತುವಿನಿಂದ ವೀರ್ಯವನ್ನು ಪಡೆದ ಕೃತಾದ್ಯುತಿಯು ಗರ್ಭವತಿಯಾಗಿ ಪುತ್ರನನ್ನು ಪಡೆದಳು. ಇಡೀ ರಾಜ್ಯವೇ ಹರ್ಷಗೊಂಡಿತು. ದೊರೆಯು ತನ್ನೆಲ್ಲ ಅಕ್ಕರೆಯನ್ನೂ ತನ್ನ ಮಗನಿಗೆ ನೀಡಿದನು. ಆದರೆ ತಮಗೆ ಮಕ್ಕಳಿಲ್ಲವೆಂಬ ಕಾರಣಕ್ಕಾಗಿ ಮಿಕ್ಕ ರಾಣಿಯರೆಲ್ಲ ಮತ್ಸರಗೊಂಡರು. ಶತೃತ್ವ ಹಾಗೂ ಈರ್ಷೆ ತೀವ್ರಗೊಂಡು ಮಗುವಿಗೆ ವಿಷ ಉಣ್ಣಿಸಲಾಯಿತು. ಮಗುವಿನ ಮರಣದ ವಾರ್ತೆ ಕೇಳಿದ ರಾಣಿ ಕೃತಾದ್ಯುತಿಯು ಆಸಂತೋಷಗೊಂಡು ಪ್ರಜ್ಞಾಹೀನಳಾದಳು. ದೊರೆಯೂ ಸಹ ಮೂರ್ಛೆ ಹೋದನು.

ಅಂಗೀರ ಋಷಿಗೆ ಈ ವಾರ್ತೆ ತಿಳಿದಾಗ ಇವನು ನಾರದನೊಂದಿಗೆ ದೊರೆಯನ್ನು ಭೇಟಿಯಾಗಲು ಬಂದನು. ಅವರು ದೊರೆಗೆ ಅವನ ಹಾಗೂ ಮಗನ ಸಂಬಂಧ ಕೇವಲ ತಾತ್ಕಾಲಿಕವಾಗಿದ್ದು ಹಾಗೂ ಅದು ಹಿಂದಾಗಲಿ ಅಥವಾ ಆನಂತರವಾಗಲಿ ಅಸ್ತಿತ್ವದಲ್ಲಿ ಇರುವಂಥದ್ದಲ್ಲ ಎಂದು ತಿಳಿಸಿದರು. ಜೀವಿಗಳು ಶಬ್ದ ಕಣಗಳಂತೆ ಒಟ್ಟಾಗಿ ಸೇರಿ ಕಾಲದ ಶಕ್ತಿಯಿಂದ ಪ್ರತ್ಯೇಕಗೊಳ್ಳುತ್ತಾರೆ. ಎಲ್ಲ ಬೀಜಗಳೂ ಚಿಗುರೊಡೆಯುವುದಿಲ್ಲ ಎಂದು ಮುನಿಗಳು ನುಡಿದರು. ಕೆಲವು ಚಿಗುರುವ ಮೊದಲೇ ಸಾಯುತ್ತವೆ. ಇದರಂತೆಯೇ ಪರಮಾತ್ಮನ ಶಕ್ತಿಯಿಂದಾಗಿ ಕೆಲವರು ಮಕ್ಕಳನ್ನು ಪಡೆಯುತ್ತಾರೆ. ಹಾಗೂ ಇತರರ ವಿಷಯದಲ್ಲಿ ಗರ್ಭಧಾರಣೆಯುಂಟಾಗುವುದೇ ಇಲ್ಲ. ಪ್ರತಿಯೊಂದೂ ಸ್ಥಾವರವಿರಲಿ, ಜಂಗಮವಿರಲಿ, ತಾತ್ಕಾಲಿಕ ಪರಿಸ್ಥಿತಿಗಳು, ಪರಮಾತ್ಮನು ಸೃಷ್ಟಿಸಿ, ಉಳಿಸಿ, ನಿರ್ನಾಮ ಮಾಡುವುದರಿಂದ ಇವು ಮೂರಕ್ಕೂ ಯಾವ ಸ್ವಾತಂತ್ರವೂ ಇಲ್ಲ. ಪ್ರತಿಯೊಂದೂ ಭ್ರಮೆ.

ಋಷಿಗಳು ನೀಡಿದ ಬುದ್ಧಿವಾದದಿಂದಾಗಿ ಚಿತ್ರಕೇತು ದೊರೆಗೆ ಜ್ಞಾನೋದಯವಾಗಿ ಅಂಗೀರರ ಹೆಚ್ಚಿನ ಬುದ್ಧಿವಾದವನ್ನು ಪಡೆಯಲು ಬಯಸಿದನು. ಅಂಗೀರನು ದೊರೆಯ ಪುತ್ರನೊಬ್ಬನನ್ನು ಆಶಿಸಿದಾಗ ಅವನನ್ನು ನೀಡಲಾಯಿತು ಎಂದನು. ಅಂಗೀರನು ನಾರದನನ್ನು ಪರಿಚಯಿಸಿದನು. (ಈ ಇಬ್ಬರು ಮುನಿಗಳೂ ವೇಷಧಾರಿಗಳಾಗಿ ಬಂದಿದ್ದರು). ಮುನಿಗಳು ದೊರೆಗೆ ಅವನು ಪರಮಾತ್ಮನ ಅವಿಚ್ಛಿನ್ನ ಭಕ್ತನಾದ್ದರಿಂದ ಪರಿತಾಪದಲ್ಲಿ ಮುಳುಗುವುದು ಅವನಿಗೆ ತಕ್ಕದ್ದಲ್ಲವಾಗಿದ್ದು ಐಹಿಕ ನಷ್ಟ ಮತ್ತು ಲಾಭದಿಂದ ಜ್ಞಾನೋದಯ ಹೊಂದಿದವನು/ ಪ್ರಭಾವಕ್ಕೆ ಒಳಗಾಗುವುದು ಅರ್ಹವಲ್ಲವೆಂದರು. ಇವರು ರಾಜನಿಗೆ ಮಡದಿ, ಅಶ್ವ, ಶಕ್ತಿ ಹಾಗೂ ನಿಯತ್ತು ಇವೆಲ್ಲವೂ ಕ್ಷಣಿಕವಾಗಿದ್ದು

ಅವು ಭ್ರಮೆಗಳು, ಕನಸುಗಳು ಹಾಗೂ ಮಾನಸಿಕ ಕಲ್ಪನೆಗಳಿಗಿಂತಲೂ ಉತ್ತಮವಾದುವಲ್ಲ ಎಂದರು.

ಅವರು ದೊರೆಗೆ ಆತ್ಮದ ಸ್ಥಾನವನ್ನು ಪರಿಗಣಿಸಿ ಐಹಿಕವಾದದ್ದೆಲ್ಲವನ್ನೂ ತ್ಯಜಿಸಬೇಕೆಂದರು.

ನಾರದ ಮುನಿಯೆಂದನು: "ಎಲೈ ದೊರೆಯೇ, ಜಾಗರೂಕತೆಯಿಂದ ನನ್ನಿಂದ ಅತ್ಯಂತ ಪವಿತ್ರವಾದ ಮಂತ್ರವೊಂದನ್ನು ಪಡೆದುಕೋ. ಅದನ್ನು ನನ್ನಿಂದ ಸ್ವೀಕರಿಸಿದ ನಂತರ ಏಳು ರಾತ್ರಿಗಳಲ್ಲಿ ನೀನು ಭಗವಂತನನ್ನು ಪ್ರತ್ಯಕ್ಷವಾಗಿ ಕಾಣುವ ಸಾಮರ್ಥ್ಯವನ್ನು ಪಡೆಯುತ್ತೀಯೆ. ಈ ಮೊದಲು ಶಿವ ಹಾಗೂ ಇತರ ಉಪದೇವತೆಗಳು ಸಂಕರ್ಷಣನ ಪದ್ಮಪಾದದಲ್ಲಿ ಆಶ್ರಯ ಪಡೆದಿದ್ದು ದ್ವಂದ್ವಗಳ ಭ್ರಮೆಯಿಂದ ಮುಕ್ತರಾಗಿ ವೈಭವವನ್ನು ಸಾಧಿಸಿದರು. ನೀನೂ ಸಹ ಅದನ್ನು ಪಡೆಯುತ್ತೀಯೆ."

ಶ್ರೀ ಶುಕಾಚಾರ್ಯರು ತಮ್ಮ ವ್ಯಾಖ್ಯಾನವನ್ನು ಮುಂದುವರಿಸಿ ನಾರದ ಮುನಿಯು ಮೃತನಾದ ಮಗನನ್ನು ಪರಿತಪಿಸುತ್ತಿರುವ ಬಂಧುಗಳ ಮುಂದೆ ತಂದು ಮಗನಿಗೆ ತನ್ನ ತಂದೆ, ತಾಯಿ, ಹಾಗೂ ಇತರರನ್ನು ನೋಡುವಂತೆ ತಿಳಿಸಿದನು. ಅವನು ಮಗನಿಗೆ ಮೃತದೇಹವನ್ನು ಮರು ಪ್ರವೇಶಿಸಿ ರಾಜ್ಯ ಸಿಂಹಾಸನವನ್ನು ಸ್ವೀಕರಿಸುವಂತೆ ತಿಳಿಸಿದನು. ದೇಹವನ್ನು ಪುನಃ ಪ್ರವೇಶಿಸಿದ ನಂತರ ಪುತ್ರನು ತಿಳಿಸಿದನು: "ನನ್ನ ಫಲಪ್ರದ ಚಟುವಟಿಕೆಗಳ ಪರಿಣಾಮವಾಗಿ ನಾನು ಒಂದು ಶರೀರದಿಂದ ಮತ್ತೊಂದಕ್ಕೆ ವರ್ಗಾಯಿಸಲ್ಪಟ್ಟೆ ಕೆಲವೊಮ್ಮೆ ಉಪದೇವತೆಗಳ ಸಮೂಹಗಳಿಗೆ, ಕೆಲವೊಮ್ಮೆ ತರಕಾರಿಗಳಿಗೆ ಹಾಗೂ ಮತ್ತೊಮ್ಮೆ ಮಾನವ ಕುಲದೊಳಗೆ ಆದ್ದರಿಂದ ಯಾರ ಸಂತತಿಗೆ ತಂದೆ ತಾಯಿಗಳು ಸೇರಿದ್ದಾರೆಂದು ಅವನು ಕೇಳಿದನು. ಅವನೆಂದನು: "ಜೀವಂತ ವ್ಯಕ್ತಿಗಳನ್ನು ನೀರಿನಂತೆ ಕೊಂಡೊಯ್ದು ಮುಂದುವರಿಸುವ ಐಹಿಕ ಜಗತ್ತಿನಲ್ಲಿ ಎಲ್ಲ ಜನರೂ ಕಾಲಕ್ರಮದಲ್ಲಿ ಸ್ನೇಹಿತರು, ಬಂಧುಗಳು ಹಾಗೂ ಶತೃಗಳಾಗುತ್ತಾರೆ. ಅವರು ತಟಸ್ಥರಾಗುತ್ತಾರೆ. ಧ್ಯಾನಮಗ್ನರಾಗುತ್ತಾರೆ, ಪರಸ್ಪರರನ್ನು ದೂಷಿಸುತ್ತಾರೆ. ಇನ್ನೂ ಅನೇಕ ಸಂಬಂಧಗಳಲ್ಲಿ ಅವರು ಕ್ರಿಯೆಗೈಯ್ಯುತ್ತಾರೆ. ಆ ವಿವಿಧ ಸಂಪರ್ಕಗಳಿದ್ದಾಗ್ಯೂ ಯಾರೂ ಶಾಶ್ವತವಾಗಿ ಸಂಬಂಧಗಳನ್ನು ಏರ್ಪಡಿಸಿಕೊಳ್ಳುವುದಿಲ್ಲ. ಜೀವಾತ್ಮನಿಗೆ, ಅಂದರೆ ಭಗವಂತನಿಗೆ ಯಾರೂ ಹತ್ತಿರದವರಲ್ಲ ಅಥವಾ ಯಾರೂ ದೂರದವರಲ್ಲ, ಅವನು ತನ್ನ ಸ್ವಂತ ಹಾಗೂ ಇತರ ಎಂಬ ತಾರತಮ್ಯವನ್ನು ಮಾಡುವುದೇ ಇಲ್ಲ. ಅವನು ಅದ್ವಿತೀಯನಾಗಿದ್ದು ಸ್ನೇಹಿತ ಅಥವಾ ಶತೃವಿನಿಂದ ಹಿತೈಷಿಗಳು ಅಥವಾ ಕಿಡಿಗೇಡಿಗಳಿಂದ ಪ್ರಭಾವಿತನಾಗುವುದೇ ಇಲ್ಲ. ಮನುಷ್ಯನ ವಿವಿಧ ಗುಣಗಳಿಗೆ ಅವನು ಕೇವಲ ವೀಕ್ಷಕ, ಒಬ್ಬ ಸಾಕ್ಷಿ.

ಪರಮಾತ್ಮ ತಟಸ್ಥನಾದವನು. ಭಗವಂತನ ಒಂದು ಅಂಶವಾದ ಜೀವಿಗಳು ಅವನ ಗುಣಗಳನ್ನು ಅತ್ಯಲ್ಪ ಪ್ರಮಾಣದಲ್ಲಿ ಹೊಂದಿರುತ್ತಾರೆ. ಆದ್ದರಿಂದಲೇ ಒಬ್ಬರು ಪರಿತಾಪಗಳಿಂದ ಪ್ರಭಾವಿತರಾಗಬಾರದು.

ಶ್ರೀ ಶುಕಾಚಾರ್ಯರು ಹೇಳುತ್ತಾರೆ: ಪರಿಪಕ್ವವಾದ ಆತ್ಮ ಅಂದರೆ ಮಹಾರಾಜಾ ಚಿತ್ರಕೇತುವಿನ ಮಗನ ರೂಪದಲ್ಲಿದ್ದ ಜೀವವು ಹಾಗೆ ಮಾತನಾಡಿ ಹೊರಟು ಹೋಯಿತು. ಚಿತ್ರಕೇತು ಮತ್ತು ಮೃತನಾದ ಪುತ್ರನ ಇತರ ಬಂಧುಗಳು ಆಶ್ಚರ್ಯಚಕಿತರಾದರು. ಹೀಗೆ ಅವರು ಅವನೊಂದಿಗೆ ಎಲ್ಲ ಸಂಬಂಧದಿಂದ ಅವರಿಗೆ ಕಳವಳವುಂಟು ಮಾಡಿದ್ದಂಥ ತಮ್ಮ ವ್ಯಾಮೋಹದ ಎಲ್ಲ ಶೃಂಖಲೆಗಳನ್ನೂ ಕಳಚಿಕೊಂಡರು.

ದೊರೆಯು ಯಮುನಾ ನದಿಯಲ್ಲಿ ಸ್ನಾನ ಮಾಡಿ ಸೂಚಿತ ಕರ್ತವ್ಯಗಳಿಗೆ ಅನುಗುಣವಾಗಿ ತನ್ನ ಪಿತೃಗಳಿಗೆ ಮತ್ತು ಉಪದೇವತೆಗಳಿಗೆ ನೇವೇದ್ಯವನ್ನು ಅರ್ಪಿಸಿದನು. ಆನಂತರ ಅವನು ಬ್ರಹ್ಮದೇವನಿಗೆ ಪ್ರಣಾಮಗಳನ್ನು ಸಲ್ಲಿಸಿದನು.

ಚಿತ್ರಕೇತುವಿನ ಅಧ್ಯಾತ್ಮ ಗುರುವಾದ ನಾರದ ಮುನಿಯು ಪರಮಾತ್ಮನನ್ನು ಪ್ರಾರ್ಥಿಸುವ ಬಗ್ಗೆ ಅವನಿಗೆ ಭೋಧಿಸಿದರು. ಚಿತ್ರಕೇತುವು ಭಗವಂತನನ್ನು ಕೊಂಡಾಡುವ ಮಂತ್ರವನ್ನು ಅಭ್ಯಸಿಸಿ ತನ್ನ ಆಧ್ಯಾತ್ಮಿಕ ತಿಳಿವಳಿಕೆಯಿಂದ ಜ್ಞಾನೋದಯ ಹೊಂದಿ ಅನಂತದೇವನ ಪದ್ಮಪಾದವನ್ನು ಸೇರಿ ವಿಮುಕ್ತಿ ಹೊಂದಿದವನಾಗಿ ಭಗವಂತನನ್ನು ಕಂಡನು. ಇದು ಎಲ್ಲ ಐಹಿಕ ಕಲ್ಮಶವನ್ನು ಶುಚಿಗೊಳಿಸಿತು. ಅವರು ಹೀಗೆ ಸಂಪೂರ್ಣವಾಗಿ ಪರಿಶುದ್ಧಗೊಂಡರು.

ಚಿತ್ರಕೇತುವು ಪರಮಾತ್ಮನಿಗೆ ಪ್ರಣಾಮಗಳನ್ನು ಸಲ್ಲಿಸಿ ಅಂತರಿಕ್ಷದಲ್ಲಿ ಪ್ರಯಾಣಿಸಲು ಪ್ರಾರಂಭಿಸಿದನು. ಚಿತ್ರಕೇತುವು ಸಿದ್ಧರು ಮತ್ತು ಶರಣರಿಂದ ಆವೃತನಾಗಿ ಋಷಿ ಸದೃಶರ ಸಭೆಯಲ್ಲಿ ತೊಡೆಯ ಮೇಲೆ ಪಾರ್ವತಿಯನ್ನು ಕೂರಿಸಿಕೊಂಡು ಅವಳನ್ನು ತನ್ನ ಬಾಹುವಿನಿಂದ ಬಳಸಿದ್ದ ಈಶ್ವರನನ್ನು ಕಂಡನು. ಚಿತ್ರಕೇತುವು ಗಟ್ಟಿಯಾಗಿ ನಕ್ಕು ಪಾರ್ವತಿಗೆ ಕೇಳಿಸುವಂತೆ ತನ್ನೊಳಗೇ ಮಾತನಾಡಿಕೊಂಡನು.

ಚಿತ್ರಕೇತುವೆಂದನು: "ಸಮಸ್ತ ಜನರ ಅಧ್ಯಾತ್ಮಿಕ ಒಡೆಯನಾದ ಮಹೇಶ್ವರನು ಐಹಿಕ ಶರೀರವನ್ನು ಪೊಂದಿರುವಂಥ ಜೀವಗಳಲ್ಲೆಲ್ಲ ಅತ್ಯುತ್ತಮನು. ಅವನು ಧಾರ್ಮಿಕ ವ್ಯವಸ್ಥೆಯನ್ನು ನಿರೂಪಿಸುತ್ತಾನೆ. ಆದರೆ ಅವನು ತನ್ನ ಮಡದಿ ಪಾರ್ವತಿಯನ್ನು ಉನ್ನತ ಋಷಿಗಳು ಇರುವ ಸಭೆಯ ಮಧ್ಯದಲ್ಲಿ ಆಲಂಗಿಸಿಕೊಂಡಿರುವುದು ಎಷ್ಟು ಆಶ್ಚರ್ಯಕರ!!

ಚಿತ್ರಕೇತುವು ಈಶ್ವರನನ್ನು ಕುರಿತು ಸಲ್ಲದ ಮಾತುಗಳನ್ನಾಡುವಾಗ ಎಲ್ಲರೂ ಮೌನವಾಗಿದ್ದರು. ಆದರೆ ಪಾರ್ವತಿಯೆಂದಳು : "ಅಯ್ಯೋ, ನಮ್ಮಂಥ ಜನರನ್ನು ಶಿಕ್ಷಿಸಲು ಹೊಸಬನೊಬ್ಬ ಈಗ ಸ್ಥಾನವನ್ನು ಪಡೆದುಕೊಂಡನೇ? ಅವನು ದೊರೆಯಾಗಿ, ಶಿಕ್ಷೆಯ ದಂಡವನ್ನು ಕೊಂಡೊಯ್ಯಲು ನೇಮಕಗೊಂಡಿದ್ದಾನೆಯೇ? ಅವನು ಇಂದು ಎಲ್ಲದರ ಏಕೈಕ ಒಡೆಯನೇ?"

ಮಾತೆ ಪಾರ್ವತಿಯು ಚಿತ್ರಕೇತುವನ್ನು ಶಪಿಸಿದಳು: "ಓ. ಅಹಂಕಾರಿಯೇ, ಈಗ ಹೀನಾಯವಾದ ರಾಕ್ಷಸರ ಪಾಪಪೂರಿತ ಕುಟುಂಬದಲ್ಲಿ ಜನ್ಮತಾಳಿ ಮತ್ತೆ ಜಗತ್ತಿನ ಉನ್ನತರಾದ, ಋಷಿ ಸದೃಶರ ವಿಚಾರದಲ್ಲಿ ಇಂಥ ಅಪರಾಧವನ್ನು ಮತ್ತೆ ಮಾಡದಂತೆ ಇರುವವನಾಗು."

ಚಿತ್ರಕೇತುವು ಶಾಪಕ್ಕೆ ಒಳಗಾದಾಗ ಮೇಲಿನ ಸ್ತರದಿಂದ ಕೆಳಗಿಳಿದು ದೀನನಾಗಿ ತಲೆತಗ್ಗಿಸಿ ಪಾರ್ವತಿಯ ಮುಂದೆ ನಿಂತು ಅವಳನ್ನು ಸಂಪ್ರೀತಗೊಳಿಸಿದ ಸಂತೋಷ ಮತ್ತು ದುಃಖವೆರಡನ್ನೂ ಉಪದೇವತೆಗಳು ಒಬ್ಬರ ಹಿಂದಿನ ಕರ್ಮಗಳಿಗೆ ಅನುಸಾರವಾಗಿ ನೀಡಿರುವುದರಿಂದ ಚಿತ್ರಕೇತುವು ಶಾಪವನ್ನು ಸ್ವೀಕರಿಸಿದ. ಚಿತ್ರಕೇತುವು ಆನಂತರ ಶಾಪದ ಬಗೆಗಿನ ಚಿಂತೆಯಿಂದ ಸಂಪೂರ್ಣವಾಗಿ ಮುಕ್ತನಾಗಿ ಹೊರಟ. ಆನಂತರ ಶಿವನು ಪಾರ್ವತಿಗೆ ಚಿತ್ರಕೇತುವು ಚಿಂತೆಗೆ ಒಳಗಾಗಿಲ್ಲವೆಂದು ತಿಳಿಸಿದ. ಪರಮಾತ್ಮನ ಸೇವಕನಾದ ಅವನಿಗೆ ಜೀವನದ ಯಾವ ಪದ್ಧತಿಯ ಬಗ್ಗೆಯೂ ಹೆದರಿಕೆಯಿಲ್ಲ. ಅವರಿಗೆ ದೇವಲೋಕಗಳು, ಮುಕ್ತಿ ಹಾಗೂ ನರಕಗಳೆಲ್ಲವೂ ಏಕ ರೀತಿಯವು. ಅವರಿಗೆ ಶಾಪ ಮತ್ತು ವರಗಳು ಸ್ವಾಭಾವಿಕ.

ಶಿವನು ಮುಂದುವರಿಸಿ ಬ್ರಹ್ಮದೇವನನ್ನೂ ಒಳಗೊಂಡಂತೆ ಉಪದೇವತೆಗಳು ಪರಮಾತ್ಮನ ಅಂಗವಾಗಿದ್ದರೂ ಅವನನ್ನು ಅವರು ಅರ್ಥಮಾಡಿಕೊಂಡಿಲ್ಲವೆಂದೂ, ಪರಮಾತ್ಮನಿಗೆ ಯಾರೂ ಪ್ರಿಯರಲ್ಲ, ಯಾರೂ ಶತೃಗಳಲ್ಲ, ಅವನು ಎಲ್ಲ ಜೀವಿಗಳ ಪವಿತ್ರ ಮಿತ್ರ ಹಾಗೂ ಅವರೆಲ್ಲರಿಗೂ ಹತ್ತಿರ ಹಾಗೂ ಪ್ರಿಯನಾದವನು.

ಹೀಗೆ ಶಪಿಸಲ್ಪಟ್ಟವನಾಗಿ ಚಿತ್ರಕೇತುವು ರಾಕ್ಷಸರ ಮಧ್ಯೆ ಜನ್ಮ ತಳೆದನು.

## ಅಧ್ಯಾಯ-10

# ಇಂದ್ರನನ್ನು ಕೊಲ್ಲಲು ದಿತಿಯ ಪ್ರತಿಜ್ಞೆ

(ಈ ಅಧ್ಯಾಯವು ಆದಿತ್ಯರ ಕುಲದ ವಿವರಣೆಯನ್ನು ಹೊಂದಿದೆ. ದಿತಿಯಿಂದ ಜನಿಸಿದ ರಾಕ್ಷಸರೂ ಈ ಅಧ್ಯಾಯದಲ್ಲಿ ವಿವರಿಸಲ್ಪಟ್ಟಿದ್ದಾರೆ. ಕಶ್ಯಪನ ಹೆಂಡತಿಯಾದ ದಿತಿಯು ಇಂದ್ರನನ್ನು ಕೊಲ್ಲುವಂಥ ಪುತ್ರನೊಬ್ಬನನ್ನು ಪಡೆಯಲು ಅಪೇಕ್ಷಿಸಿ ಕಶ್ಯಪನ ಇಚ್ಛೆಗೆ ವಿರುದ್ಧವಾಗಿ ಪ್ರತಿಜ್ಞೆಯನ್ನು ತೀರಿಸಿಕೊಳ್ಳಬಯಸುತ್ತಾಳೆ. ಇಂದ್ರನು ದಿತಿಯ ಗರ್ಭದಲ್ಲಿದ್ದ ಪುತ್ರನನ್ನು ಛಿದ್ರಛಿದ್ರವಾಗಿ ಕೊಲ್ಲುವ ಮೂಲಕ ದಿತಿಯ ಯೋಜನೆಯನ್ನು ಹಾಳುಗೆಡವಿದಾಗ ಮರುತರು ಹೊರಬರುತ್ತಾರೆ. ಅವರು ದೇವತೆಗಳಾಗುತ್ತಾರೆ).

ಭಾಗವತದ ಉಲ್ಲೇಖವನ್ನು ಮುಂದುವರಿಸಿದ ಶುಕಾಚಾರ್ಯರು ಅದಿತಿಯ ಹನ್ನೆರಡು ಮಕ್ಕಳಲ್ಲಿ ಐದನೆಯವನಾದ ಸವಿತರ ಹೆಂಡತಿ ಪ್ರಶ್ನಿಯು ಮೂವರು ಪುತ್ರಿಯರಿಗೂ ಮತ್ತು ಪುತ್ರರಿಗೂ ಜನ್ಮವಿತ್ತಳು. ಸಾವಿತ್ರಿ, ವ್ಯಹೃರ್ತಿ ಮತ್ತು ತ್ರಯಿ ಎಂಬ ಪುತ್ರಿಯರಿಗೆ ಹಾಗೂ ಅಗ್ನಿಹೋತ್ರ, ವಸು, ಸೋಮ, ಚತುರಮಾಸ್ಯ ಮತ್ತು ಐವರು ಮಹಾಯಾನರಿಗೆ ಜನ್ಮ ನೀಡಿದಳೆಂದು ಹೇಳಿದನು.

ಅದಿತಿಯ ಏಳನೇ ಮಗನಾದ ಧಾತನಿಗೆ ನಾಲ್ವರು ಪತ್ನಿಯರು. ಅವರೆಂದರೆ ಕುಹು, ಸಿನಿವಾಲಿ, ರಕಾ ಮತ್ತು ಅನುಮತಿ. ಅವರಿಗೆ ಕ್ರಮವಾಗಿ ಸಾಯಂ, ದರ್ಶ, ಪ್ರಥಹ ಮತ್ತು ಪೂರ್ಣಾಂಶವೆಂಬ ನಾಲ್ವರು ಪುತ್ರರು. ಅದಿತಿಯ ಎಂಟನೇ ಮಗನಾದ ವಿಧಾತನ ಪತ್ನಿಗೆ ಕ್ರಿಯಾ ಎಂದು ಹೆಸರಿಸಲಾಯಿತು. ಅವರು ಪುರಿಕ್ಯರು ಎಂಬ ಹೆಸರಿನ ಅಗ್ನಿ ದೇವತೆಗಳಿಗೆ ಜನ್ಮವಿತ್ತರು. ಅದಿತಿಯ ಒಂಬತ್ತನೇ ಮಗನಾದ ವರುಣನ ಪತ್ನಿಯ ಹೆಸರು ಕರ್ಸಾಣಿ. ಬ್ರಹ್ಮನ ಮಗನಾದ ಭೃಗುವು ಅವಳ ಗರ್ಭದಲ್ಲಿ ಮತ್ತೆ ಜನಿಸಿದನು.

ವರುಣನ ವೀರ್ಯದಿಂದ ವಾಲ್ಮೀಕಿ ಋಷಿಯು ಹುತ್ತದಲ್ಲಿ ಜನಿಸಿದನು. ಭೃಗು ಮತ್ತು ವಾಲ್ಮೀಕಿ ವರುಣನ ನೇರಪುತ್ರರಾಗಿದ್ದು, ಅಗಸ್ತ್ಯ ಮತ್ತು ವಸಿಷ್ಟರು ವರುಣ ಮತ್ತು ಅದಿತಿಯ ಹತ್ತನೇ ಪುತ್ರನಾದ ಮಿತ್ರರಿಬ್ಬರಿಗೂ ಪುತ್ರರು.

ದೇವಲೋಕದ ಅಪ್ಸರೆಯಾದ ಊರ್ವಶಿಯನ್ನು ಕಂಡು ವರುಣ ಮತ್ತು ಮಿತ್ರ ಇಬ್ಬರೂ ವೀರ್ಯವನ್ನು ಸುರಿಸಿ ಅದನ್ನು ಮಣ್ಣಿನ ಮಡಿಕೆಯಲ್ಲಿ ಸಂಗ್ರಹಿಸಿಟ್ಟರು. ಆ ಮಡಿಕೆಯಿಂದ ಅಗಸ್ತ್ಯ ಮತ್ತು ವಸಿಷ್ಟರಿಬ್ಬರೂ ಕಾಣಿಸಿಕೊಂಡಿದ್ದರಿಂದ ಅವರಿಬ್ಬರೂ ಅವರಿಬ್ಬರಿಗೂ ಪುತ್ರರೆನ್ನಿಸಿದರು. ಆದರೆ ಮಿತ್ರನು ತನ್ನ ಪತ್ನಿ ರೇವತಿಯಿಂದ ಮೂವರು ಮಕ್ಕಳನ್ನು ಪಡೆದನು. ಅವರೆಂದರೆ ಉತ್ಸರ್ಗ, ಅರಿಸ್ತ ಮತ್ತು ಪಿಪ್ಪಲ.

ಅದಿತಿಯ ಹನ್ನೊಂದನೇ ಮಗನಾದ ಇಂದ್ರನಿಗೆ ಪುಲೋಮಿಯೆಂಬ ಮಡದಿಯಿದ್ದು ಅವಳಿಂದ ಅವನು ಪಡೆದ ಮೂವರು ಪುತ್ರರೆಂದರೆ ಜಯಂತ, ರಸಭ ಮತ್ತು ಮಿಥುಷ. ಅದಿತಿಯ ಹನ್ನೆರಡನೆಯ ಪುತ್ರನು (ವಾಮನನೆಂಬ ಹೆಸರುಳ್ಳ) ಉರುಕ್ರಮನೆಂಬ ಕುಬ್ಜ. ಅವನು ಪರಮಾತ್ಮನದ್ದೇ ಸಾಮರ್ಥ್ಯವನ್ನು ಹೊಂದಿದ್ದವನು. ಉರುಕ್ರಮನಿಗೆ ಕೀರ್ತಿ ಎಂಬ ಹೆಸರಿನ ಪತ್ನಿಯೊಬ್ಬಳಿದ್ದು ಆಕೆಯಿಂದ ಅವನು ಬೃಹತಶ್ಲೋಕನೆಂಬ ಪುತ್ರನನ್ನು ಪಡೆದನು.

ಕಶ್ಯಪನ ಮತ್ತೊಬ್ಬ ಪತ್ನಿಯಾದ ದಿತಿಯು ರಾಕ್ಷಸರಿಗೆ ಜನ್ಮವಿತ್ತಳು. ಅವರು ದಿತಿಯಿಂದ ಜನಿಸಿದವರಾದ್ದರಿಂದ ಅವರಿಗೆ ದೈತ್ಯರೆಂದು ಹೆಸರಿಸಲಾಯಿತು.

ಹಿರಣ್ಯಾಕ್ಷ ಮತ್ತು ಹಿರಣ್ಯಕಶಿಪು ದಿತಿಯಿಂದ ಜನ್ಮತಾಳಿದರು. ಹಿರಣ್ಯಕಶಿಪುವಿನ ಮಡದಿಯು ಜಂಭ ಮತ್ತು ಧನುವಿನ ವಂಶಸ್ಥನ ಪುತ್ರಿಯಾದ ಖಯಾಧು. ಆಕೆಗೆ ಜನಿಸಿದ ಪುತ್ರರೆಂದರೆ ಸಂಹ್ಲಾದ, ಅನುಹ್ಲಾದ, ಹ್ಲಾದ ಮತ್ತು ಪ್ರಹ್ಲಾದ. ಇವರೆಲ್ಲರ ಸೋದರಿ ಸಿಂಹಿಕೆಯೆಂಬುವಳು ವಿಪ್ರಚಿತ್ ಎಂಬ ರಾಕ್ಷಸನನ್ನು ವಿವಾಹವಾಗಿ ರಾಹುವೆಂಬ ಮತ್ತೊಬ್ಬ ರಾಕ್ಷಸನಿಗೆ ಜನ್ಮವಿತ್ತಳು. ಸಂಹ್ಲಾದನ ಪತ್ನಿಯಾದ ಕೀರ್ತಿಯ ಪುತ್ರ ಪಾಂಚಜನ. ಹ್ಲಾದನ ಮಡದಿ ಧಮನಿಯು ವಾತಾಪಿ ಮತ್ತು ಇಲ್ವಲರಿಗೆ ಜನ್ಮನೀಡಿ ಅಗಸ್ತ್ಯ ಮುನಿಯು ಇಲ್ವಲನ ಅತಿಥಿಯಾಗಿದ್ದಾಗ ಇಲ್ವಲನು ಅವನಿಗೆ ಟಗರಿನ ಆಕಾರವನ್ನು ತಾಳಿದ ವಾತಾಪಿಯನ್ನು ಬೇಯಿಸಿ ಮಾಡಿದ ಅಡಿಗೆಯನ್ನು ಬಡಿಸಿದ್ದನು. ಅನುಹ್ಲಾದನ ಮಡದಿ ಸೂರ್ಯಳು ಬಾಸ್ಕಲ ಮತ್ತು ಮಜಿಷ ಎಂಬ ಇಬ್ಬರು ಪುತ್ರರಿಗೆ ಜನ್ಮ ನೀಡಿ ಪ್ರಹ್ಲಾದನ ಪುತ್ರ ವಿಮೋಚನನೆಂಬುವನು ಬಲಿಯೆಂಬ ಪುತ್ರನನ್ನು ಪಡೆದನು. ಅವನು ಪಡೆದ ನೂರು ಪುತ್ರರಲ್ಲಿ ಬಾಣನೂ ಒಬ್ಬನು. ದಿತಿಯಿಂದ ನಲವತ್ತೊಂಬತ್ತು ಮರುತರೆಂಬ ದೇವತೆಗಳು ಜನಿಸಿದರೂ ಅವರ್‍ಯಾರಿಗೂ ಪುತ್ರರಿರಲಿಲ್ಲ. ಅವರೆಲ್ಲರೂ ದಿತಿಯಿಂದ ಜನಿಸಿದವರಾದರೂ ಇಂದ್ರದೇವನು ಅವರಿಗೆ ದೇವತೆಗಳ ಸ್ಥಾನವಿತ್ತನು.

## ಮರುತರು

ಈ ಘಟ್ಟದಲ್ಲಿ ಪರೀಕ್ಷಿತ ರಾಜನಿಗೆ ರಾಕ್ಷಸೀ ಪ್ರವೃತ್ತಿಯಿಂದ ಈ ನಲವತ್ತೊಂಬತ್ತು ಮರುತರನ್ನು ಇಂದ್ರನು ದೇವತೆಗಳಾಗಿ ಪರಿವರ್ತಿಸಿದ ಕಾರಣವನ್ನು ತಿಳಿಯಬೇಕೆನ್ನಿಸಿತು.

ಭಗವಾನ್ ವಿಷ್ಣುವು ಈ ಇಬ್ಬರು ರಾಕ್ಷಸರಿಂದ ಭೀತಿಗೊಳಗಾದ ಇಂದ್ರನಿಗೆ ನೆರವಾಗಲು ಹಿರಣ್ಯಾಕ್ಷ ಮತ್ತು ಹಿರಣ್ಯಕಶಿಪುರೆಂಬ ಇಬ್ಬರು ಸೋದರರನ್ನು ಕೊಂದಿದ್ದರಿಂದ ದಿತಿಯು ಇಂದ್ರನ ಮೇಲೆ ಸೇಡು ತೀರಿಸಿಕೊಳ್ಳಲು ಬಯಸಿದಳೆಂದು ಶ್ರೀ ಶುಕಾಚಾರ್ಯರು ತಿಳಿಸಿದರು.

ಇಂದ್ರನನ್ನು ಕೊಲ್ಲಬಲ್ಲ ಪುತ್ರನೊಬ್ಬನನ್ನು ಪಡೆಯುವ ಹಂಬಲದಿಂದ ದಿತಿಯು ತನ್ನ ಪತಿ ಕಶ್ಯಪನನ್ನು ಸತತವಾಗಿ ಎಲ್ಲ ವಿಧವಾಗಿಯೂ ಮುದಗೊಳಿಸತೊಡಗಿದಳು. ಸಂಪ್ರೀತನಾಗಿ ತನ್ನ ಪತ್ನಿಯ ಕೈಸೆರೆಯಾದ ಕಶ್ಯಪ ಮುನಿಯು ಅವಳ ಹಂಬಲವನ್ನು

ಪೂರೈಸುವುದಾಗಿ ವಚನವನ್ನಿತ್ತನು. ಪ್ರಾರಂಭದಲ್ಲಿ ಜಗತ್ತಿನ ಎಲ್ಲ ಜೀವಿಗಳ ಮೂಲ ಪುರುಷನಾದ ಬ್ರಹ್ಮದೇವನು ಎಲ್ಲ ಜೀವಿಗಳೂ ವ್ಯಾಮೋಹವನ್ನು ಹೊಂದಿಲ್ಲವೆಂಬುದನ್ನು ಕಂಡುಕೊಂಡನು. ಜನಸಂಖ್ಯೆಯನ್ನು ಹೆಚ್ಚಿಸುವ ಉದ್ದೇಶದಿಂದ ನಂತರ ಪುರುಷನ ದೇಹದ ಒಂದರ್ಧ ಭಾಗದಿಂದ ಹೆಂಗಸನ್ನು ಸೃಷ್ಟಿಸಿದನೇಕೆಂದರೆ ಹೆಂಗಸಿನ ವರ್ತನೆಯಿಂದ ಪುರುಷನ ಮನಸ್ಸನ್ನು ಗೆಲ್ಲಲು ಪ್ರಾರಂಭಿಸುತ್ತದೆಯೆಂಬ ಕಾರಣಕ್ಕಾಗಿ. ಹೀಗಿರುವಾಗ ಕಶ್ಯಪ ಮುನಿಯು ನಿಯಮಕ್ಕೆ ಅಪವಾದವಾಗಲಾರನು. ಅವನು ತನ್ನ ಪತ್ನಿ ದಿತಿಗೆ ಒಂದು ವರವನ್ನು ಕೇಳುವಂತೆ ತಿಳಿಸಿದನು.

ಅದಕ್ಕೆ ಉತ್ತರವಾಗಿ ದಿತಿಯು ಇಂದ್ರನನ್ನು ಕೊಲ್ಲಬಲ್ಲಂಥ ಪುತ್ರನೊಬ್ಬನನ್ನು ತನಗೆ ನೀಡುವಂತೆ ವರವನ್ನು ಬೇಡಿದಾಗ ದುಃಖಿಗೊಂಡ ಕಶ್ಯಪ ಮುನಿಯು ತಾನು ಐಹಿಕ ಸುಖಕ್ಕೆ ತೀವ್ರವಾಗಿ ಅಂಟಿಕೊಂಡಿರುವುದರಿಂದಲೇ ತನ್ನ ಪತ್ನಿಯು ಅದರ ಲಾಭವನ್ನು ಪಡೆದಳು ಎಂಬುದಾಗಿ ಭಾವಿಸಿ ಕನಿಷ್ಠ ಪಕ್ಷ ಒಂದು ವರ್ಷವಾದರೂ ಅವಳು ತನ್ನ ಸೂಚನೆಗಳನ್ನು ಅನುಸರಿಸಿದಳಾದರೆ ಇಂದ್ರನನ್ನು ಸೋಲಿಸಬಲ್ಲಂಥ ಪುತ್ರನೊಬ್ಬನನ್ನು ಅವಳು ಪಡೆಯುತ್ತಾಳೆಂದನು. ಅದರಿಂದ ಅವಳೇನಾದರೂ ಹೊರ ಸರಿದಳಾದರೆ ಅವಳಿಗೆ ಇಂದ್ರನ ಪರವಾಗಿಯೇ ಇರುವ ಮಗನೊಬ್ಬ ಹುಟ್ಟುತ್ತಾನೆ ಎಂದಾಗ ದಿತಿಯು ಅವನ ಬುದ್ಧಿವಾದವನ್ನು ಒಪ್ಪಿ, ತಾನೇನು ಮಾಡಬೇಕೆಂಬುದಾಗಿ ತಿಳಿದುಕೊಳ್ಳಲು ಬಯಸಿದಳು. ಕಶ್ಯಪ ಮುನಿಯು ಈ ಕೆಳಗಿನವನ್ನು ಹೇಳಿದ : (1) ಕ್ರೂರವಾಗಿರಕೂಡದು (2) ಯಾರಿಗೂ ಹಾನಿಯನ್ನು ಉಂಟುಮಾಡಬಾರದು (3) ಅಸತ್ಯವನ್ನು ನುಡಿಯಬಾರದು (4) ಉಗುರುಗಳನ್ನು ಕತ್ತರಿಸಿಕೊಳ್ಳಬಾರದು (5) ಅಪರಿಶುದ್ಧ ವಸ್ತುಗಳಿಂದ ತಲೆಬುರುಡೆ ಹಾಗೂ ಮೂಳೆಗಳನ್ನು ಮುಟ್ಟಕೂಡದು (6) ಸ್ನಾನ ಮಾಡುತ್ತಿರುವಾಗ ನೀರಿನೊಳಗೆ ಹೋಗಕೂಡದು (7) ಕೋಪಗೊಳ್ಳಬಾರದು (8) ಕೆಟ್ಟ ಜನರ ಸಹವಾಸ ಕೂಡದು (9) ಅಶುಚಿಯಾಗಿರುವ ಬಟ್ಟೆಗಳನ್ನು ತೊಡಬಾರದು (10) ಒಮ್ಮೆ ಹಾಕಿಕೊಳ್ಳಲಾದ ಮಾಲೆಯನ್ನು ಮತ್ತೆ ಧರಿಸಕೂಡದು (11) ಮಿಕ್ಕುಳಿದ ಆಹಾರವನ್ನು ತಿನ್ನಬಾರದು (12) ಕಾಳಿ ದೇವಿಗೆ ನೇವೇದ್ಯ ಮಾಡಿದ ಪ್ರಸಾದವನ್ನು ತಿನ್ನಬಾರದು (13) ಮಾಂಸ ಅಥವಾ ಮೀನಿನಿಂದ ಕಲುಷಿತಗೊಂಡ ಯಾವುದನ್ನೂ ಭುಜಿಸಬಾರದು (14) ಶೂದ್ರ ಅಥವಾ ಮುಟ್ಟಾದ ಹೆಂಗಸಿನ ದೃಷ್ಟಿಗೆ ಸಿಕ್ಕಿದ ಯಾವುದನ್ನೂ ಮುಟ್ಟಕೂಡದು (15) ಹಸ್ತವನ್ನು ಜೋಡಿಸಿ ನೀರನ್ನು ಕುಡಿಯಬಾರದು (16) ಬಾಯಿ ಕೈ ಪಾದಗಳನ್ನು ತೊಳೆಯದೆ ರಸ್ತೆಗೆ ಹೋಗಕೂಡದು (17) ಸಂಜೆಯ ವೇಳೆ ಬಿಚ್ಚಿದ ಮುಡಿಯಲ್ಲಿ ರಸ್ತೆಯಲ್ಲಿ ಹೋಗಬಾರದು (18) ಸರಿಯಾದ ಉಡುಪನ್ನು ಧರಿಸದೆ ಹಾಗೂ ಗಂಭೀರವಾಗಿ ಹೊದ್ದುಕೊಳ್ಳದೆ ಮನೆಯಿಂದ ಹೊರಹೋಗ ಕೂಡದು (19) ಎರಡೂ ಪಾದಗಳನ್ನು ತೊಳೆಯದೆ ಹಾಗೂ ಶುಚಿಗೊಳ್ಳದೆ ಮಲಗಬಾರದು ಅಥವಾ ಒದ್ದೆ ಕಾಲಿನಲ್ಲಿ ಅಥವಾ ಪಶ್ಚಿಮ ಅಥವಾ ಉತ್ತರದ ಕಡೆ ತಲೆಯಿರಿಸಿ ಮಲಗಬಾರದು. ನಗ್ನಳಾಗಿ ಅಥವಾ ಮತ್ತೊಬ್ಬ ಹೆಂಗಸಿನೊಂದಿಗೆ ಎಲ್ಲಿಯೂ ಮಲಗಬಾರದು. ಸೂರ್ಯೋದಯ ಅಥವಾ ಸೂರ್ಯಾಸ್ತಮದ ಸಮಯದಲ್ಲಿ ಮಲಗಬಾರದು.

ಕಶ್ಯಪ ಮುನಿಯು ಮುಂದುವರಿದು ಹೇಳಿದನು: "ಬೆಳಗಿನ ಉಪಹಾರಕ್ಕೆ ಮುನ್ನ ಒಬ್ಬರು ದೇವರನ್ನು ಪೂಜಿಸಬೇಕಾಗಿದ್ದು ಆ ಸಮಯದಲ್ಲಿ ಶುಭ್ರ ವಸ್ತ್ರಗಳನ್ನು ಧರಿಸಿ ಪವಿತ್ರ ವಸ್ತುಗಳಿಂದ ಅಲಂಕರಿಸಿಕೊಂಡಿರಬೇಕು. ಪುತ್ರರನ್ನು ಹೊಂದಿರುವ ಹಾಗೂ ಮುತ್ತೈದೆಯರಾಗಿರುವ ಮಹಿಳೆಯರನ್ನು ಪೂಜಿಸಬೇಕು. ಇದನ್ನು "ಪುಂಸವನ"ವೆಂದು ಕರೆಯಲಾಗಿದ್ದು ನೀನು ಒಂದು ವರ್ಷಕಾಲ ಈ ವ್ರತಕ್ಕೆ ಬದ್ಧಳಾಗಿದ್ದರೆ ನೀನು ಇಂದ್ರನನ್ನು ಕೊಲ್ಲುವಂಥ ಪುತ್ರನನ್ನು ಪಡೆಯಲಿದ್ದು ಇದನ್ನು ತಪ್ಪಿಸಿದೆಯಾದರೆ ಇಂದ್ರನಿಗೆ ಮಿತ್ರನಾಗುವ ಮಗನನ್ನು ಪಡೆಯುತ್ತೀಯೆ.

ದಿತಿಯು ಗರ್ಭವತಿಯಾಗಿ ತನ್ನ ಗಂಡನ ಬುದ್ಧಿವಾದವನ್ನು ಅನುಸರಿಸಿದಳು. ಇಂದ್ರನು ಚಿಂತಾಕ್ರಾಂತನಾಗಿ ದಿತಿಯ ಪ್ರತಿಜ್ಞೆಯನ್ನು ಮುರಿಯ ಬಯಸಿದನು. ಅವನು ಆಕೆಯ ಚಿಕ್ಕಮ್ಮನಾಗಿ ಅವಳ ಸೇವಕ ವೃಂದವನ್ನು ಸೇರಿ ಅವಳ ಪ್ರತಿಜ್ಞೆಯನ್ನು ಭಂಗಪಡಿಸಲು ಅವಕಾಶಕ್ಕಾಗಿ ಕಾಯುತ್ತಿದ್ದನು. ಒಮ್ಮೆ ದಿತಿಗೆ ತನ್ನ ಪ್ರತಿಜ್ಞೆಯನ್ನು ಪರಿಪಾಲಿಸಲಾಗಲಿಲ್ಲ. ಊಟವಾದ ನಂತರ ಅವಳು ತನ್ನ ಬಾಯಿ ಕೈ ಹಾಗೂ ಪಾದವನ್ನು ತೊಳೆಯಲು ಮರೆತು ನಿದ್ರೆ ಹೋದಳು. ಇದನ್ನು ಗಮನಿಸಿದ್ದ ಇಂದ್ರನು ಅವಳ ಗರ್ಭವನ್ನು ಪ್ರವೇಶಿಸಿದನು. ಅವಳ ಹೊಟ್ಟೆಯನ್ನು ಪ್ರವೇಶಿಸಿದ ನಂತರ ಇಂದ್ರನು ಗುಡುಗಿನ ನೆರವಿನಿಂದ ಹೊಳೆಯುತ್ತಿರುವ ಸುವರ್ಣವನ್ನು ಹೋಲುತ್ತಿದ್ದ ಅವಳ ಭ್ರೂಣವನ್ನು ಏಳು ಚೂರುಗಳಾಗಿ ಸೀಳಿದನು. ಏಳು ಸ್ಥಳಗಳಲ್ಲಿ ಏಳು ಜೀವಿಗಳು ಅಳಲು ಪ್ರಾರಂಭಿಸಿದರು. ಇಂದ್ರನು ಅವರಿಗೆ ರೋದಿಸದಿರುವಂತೆ ತಿಳಿಸಿ ಮತ್ತೆ ಆ ಏಳು ಜೀವಿಗಳನ್ನು ಏಳು ಚೂರುಗಳಾಗಿ ಕತ್ತರಿಸಿದನು. ತಾವು ಮರುತರಾದ್ದರಿಂದ ತಮ್ಮನ್ನು ಕೊಲ್ಲಕೂಡದೆಂದು ಅವು ಇಂದ್ರನನ್ನು ಪ್ರಾರ್ಥಿಸಿದವು. ಹೀಗೆ ಎಲ್ಲ ನಲವತ್ತೊಂಬತ್ತು ಚೂರುಗಳು ಭಗವಂತನ ಕರುಣೆಯಿಂದಾಗಿ ಅಶ್ವತ್ಥಾಮನ ಬ್ರಹ್ಮಾಸ್ತ್ರದಿಂದ ಉಳಿದುಕೊಂಡ ಪರೀಕ್ಷಿತನಂತೆಯೇ ಉಳಿಯಲ್ಪಟ್ಟವು.

ದಿತಿಯು ತನ್ನ ನಿದ್ರೆಯಿಂದ ಎಚ್ಚರಗೊಂಡಾಗ ಇಂದ್ರನೊಂದಿಗೆ ನಲವತ್ತು ಒಂಬತ್ತು ಪುತ್ರರನ್ನು ಕಂಡು ಅವರೆಲ್ಲರೂ ಸ್ನೇಹಿತರಂತೆ ಇರುವುದನ್ನು ಗಮನಿಸಿದಳು. ದಿತಿಯು ಇಂದ್ರನಿಗೆ ಅವನನ್ನು ಕೊಲ್ಲಬಲ್ಲಂಥ ಮಗನನ್ನು ಪಡೆಯಲು ತಾನು ಪ್ರತಿಜ್ಞೆಯನ್ನು ಪಾಲಿಸಿದ್ದಾಗಿ ತಿಳಿಸಿದಳು. ಆದರೆ ಈಗ ಅವಳು ನಲವತ್ತೊಂಬತ್ತು ಜನರನ್ನು ಕಾಣುತ್ತಿದ್ದು ಇಂದ್ರನಿಂದ ಸತ್ಯವನ್ನು ಅರಿಯಲು ಬಯಸಿದಳು. ಇಂದ್ರನು ನಡೆದುದೆಲ್ಲವನ್ನೂ ತಿಳಿಸಿದನು. ಸತ್ಯವನ್ನು ಅರಿತಾಗ ದಿತಿ ಸಂತುಷ್ಟಗೊಂಡು ಇಂದ್ರನು ತನ್ನ ನಲವತ್ತೊಂಬತ್ತು ಮರುತರನ್ನು ಸೋದರರಂತೆ ಕೊಂಡೊಯ್ದನು.

## ಪುಂಸವನ ಯಜ್ಞ

ಪರೀಕ್ಷಿತ ಮಹಾರಾಜನು ಪುಂಸವನ ಯಜ್ಞ ವಿಧಿ ಎಂದರೇನು ಎಂಬುದನ್ನು ತಿಳಿದುಕೊಳ್ಳಲು ಬಯಸಿದನು. ಅದಕ್ಕೆ ಶ್ರೀ ಶುಕಾಚಾರ್ಯರು ಆಗ್ರಹಾಯನ (ನವೆಂಬರ್ - ಡಿಸೆಂಬರ್) ತಿಂಗಳಿನ ಪ್ರಕಾಶಮಯ ಪಾಕ್ಷಿಕದಲ್ಲಿ ಸ್ತ್ರೀಯೊಬ್ಬಳು ಕ್ರಮಬದ್ಧ

ಭಕ್ತಿಪೂರ್ವಕ ಸೇವೆಯನ್ನು ಆರಂಭಿಸಿ ಅದಕ್ಕಾಗಿ ತಪಸ್ಸನ್ನು ಕೈಗೊಂಡಾಗ ಒಬ್ಬರ ಅಭಿಲಾಷೆಗಳು ಪೂರೈಸುತ್ತವೆ ಎಂದು ಹೇಳಿದರು. ತಪಸ್ಸನ್ನು ಪ್ರಾರಂಭಿಸುವ ಮುನ್ನ ಒಬ್ಬರು ಶುಚಿರ್ಭೂತರಾಗಿ ಮರುತರ ಜನನದ ಕಥೆಯನ್ನು ಆಲಿಸಬೇಕು. ಹೆಂಗಸು ಬಿಳಿ ವಸ್ತ್ರಗಳು ಹಾಗೂ ಅಭರಣಗಳನ್ನು ತೊಡಬೇಕು. ಅವಳು ಭಗವಾನ್ ವಿಷ್ಣು ಹಾಗೂ ಶ್ರೀ ಲಕ್ಷ್ಮಿಗೆ ಪ್ರಾರ್ಥನೆಗಳನ್ನು ಸಲ್ಲಿಸಬೇಕು ಹಾಗೂ ಅವರಿಬ್ಬರಿಗೂ ನೇವೇದ್ಯವನ್ನು ಸಲ್ಲಿಸಿ ತುಪ್ಪದಿಂದ ಮಾಡಿದ 12 ಖಾದ್ಯಗಳನ್ನು ಯಜ್ಞಹವಿಸ್ಸಿಗೆ ಪ್ರಾರ್ಥನೆಯೊಂದಿಗೆ ಸಲ್ಲಿಸಬೇಕು. ಮಾಡಬೇಕಾದ ಪ್ರಾರ್ಥನೆಯೆಂದರೆ : "ಓಂ ನಮೋ ಭಗವತೇ ಮಹಾ ಪುರುಷಾಯ; ಮಹಾ ವಿಭೂತಿ ಪತಯೇ ಸ್ವಾಹ" ಹೀಗೆ ಒಬ್ಬರು ಭಗವಾನ್ ವಿಷ್ಣು ಹಾಗೂ ಶ್ರೀ ಲಕ್ಷ್ಮಿಯನ್ನು ಪ್ರಾರ್ಥಿಸಬೇಕು.

ವರ್ಷದ ಕೊನೆಯಲ್ಲಿ ಒಬ್ಬರು ಕಾರ್ತಿಕ ಮಾಸದಲ್ಲಿ (ಅಕ್ಟೋಬರ್ - ನವೆಂಬರ್) ಪೂರ್ಣಿಮೆಯ ದಿನದಂದು ಉಪವಾಸ ಕೈಗೊಳ್ಳಬೇಕೆಂದರು. ಮರುದಿನ ಆರಾಧನೆಯನ್ನು ಮುಂದುವರಿಸಿ ಹಬ್ಬವನ್ನಾಚರಿಸಬೇಕು. ಈ ವಿಧಿಯು ಸಂಪತ್ತು, ಸಮೃದ್ಧಿ, ಪುತ್ರರು, ಪ್ರತಿಷ್ಠೆ ಇತ್ಯಾದಿಯನ್ನು ತಂದೀಯುತ್ತವೆ.

ಪರೀಕ್ಷಿತ ಮಹಾರಾಜನು ಶ್ರೀ ಶುಕಾಚಾರ್ಯರನ್ನು ಸರ್ವರ ಹಿತೈಷಿಯಾದ ಭಗವಾನ್ ವಿಷ್ಣುವು ಇಂದ್ರನ ವಿಷಯದಲ್ಲಿ ಪಕ್ಷಪಾತ ತೋರಿಸಿ ದೇವತೆಗಳ ಪರ ವಹಿಸಿದ್ದು ಹೇಗೆಂದು ಕೇಳಿದನು. ರಾಜನು ನಾರಾಯಣನು ಪಕ್ಷಪಾತಿಯೇ ಎಂಬ ಸಂದೇಹವನ್ನು ವ್ಯಕ್ತಪಡಿಸಿದನು. ಆದ್ದರಿಂದ ದೊರೆಯು ಸಂದೇಹ ನಿವಾರಣೆಯಾಗ ಬೇಕೆಂದು ಬಯಸಿದನು.

## ಪರಮಾತ್ಮನ ನಿಷ್ಪಕ್ಷಪಾತ

ಭಗವಾನ್ ವಿಷ್ಣುವು ಯಾವಾಗಲೂ ಐಹಿಕ ಗುಣಗಳ ಬಗ್ಗೆ ನಿರಾಸಕ್ತನಾಗಿದ್ದರಿಂದ ಅವನನ್ನು ನಿರ್ಗುಣ ಅಥವಾ ಗುಣರಹಿತನೆಂದು ಕರೆಯಲಾಗಿದೆಯೆಂದು ಶ್ರೀ ಶುಕಾಚಾರ್ಯರು ವಿವರಿಸಿದರು. ವಿಷ್ಣುವು ಎಂದೂ ಜನಿಸದೇ ಇರುವುದರಿಂದ ದ್ವೇಷ ಅಥವಾ ವ್ಯಾಮೋಹಕ್ಕೆ ಒಳಗಾಗುವಂಥ ಐಹಿಕ ಶರೀರವನ್ನು ಅವನು ಹೊಂದಿಯೇ ಇಲ್ಲ. ದೈವಿಕ ಸತ್ವವಿದ್ದಾಗ್ಯೂ ಅವನು ಕರ್ತವ್ಯಗಳು ಹಾಗೂ ದಾಕ್ಷಿಣ್ಯಗಳನ್ನೂ ಪಳಗಿದ ಆತ್ಮದಂತೆ ಸ್ವೀಕರಿಸಿ ಸಾಮಾನ್ಯ ಮಾನವನಂತೆ ತೋರುತ್ತಾನೆ ಹಾಗೂ ವರ್ತಿಸುತ್ತಾನೆ. ತ್ರಿಗುಣಗಳು ಎಂದೂ ಭಗವಂತನನ್ನು ತಾಕಲಾರವು. ಆದ್ದರಿಂದ ಈ ಗುಣಗಳು ಏಕ ಕಾಲದಲ್ಲಿ ಕುಗ್ಗಿಸುವುದು ಅಥವಾ ಹಿಗ್ಗಿಸುವುದರಿಂದ ಕ್ರಿಯಾಶೀಲವಾಗಲಾರವು.

ಒಳಿತಿನ ಗುಣವು ಪ್ರಮುಖವಾಗಿದ್ದಾಗ ಮುನಿಗಳು ಹಾಗೂ ದೇವತೆಗಳು, ಆ ಗುಣಗಳ ನೆರವಿನಿಂದ ಅಭಿವೃದ್ಧಿ ಹೊಂದುತ್ತಾರೆ. ಅದರಂತೆಯೇ ಕಾಮದ ವಿಧಾನವು ಪ್ರಮುಖವಾದಾಗ ದಾನವರು ಅಭಿವೃದ್ಧಿ ಹೊಂದುತ್ತಾರೆ. ಹಾಗೂ ಮೌಢ್ಯವು ಪ್ರಮುಖವಾದಾಗ ಯಕ್ಷರು ಹಾಗೂ ರಾಕ್ಷಸರು ಅಭಿವೃದ್ಧಿ ಹೊಂದುತ್ತಾರೆ.

ಭಗವಂತನೆನ್ನುತ್ತಾನೆ : "ಬುದ್ಧಿಶಕ್ತಿಯಿಂದ ದೇಹದ್ವಾರಗಳು ಪ್ರಕಾಶಮಾನವಾಗಿದ್ದಾಗ ಒಳಿತಿನ ವಿಧಾನಗಳ ಅವತಾರಗಳು ಅನುಭವಕ್ಕೆ ಸಿಗುತ್ತವೆ. ಎಲೈ ಭರತರ ಪ್ರಮುಖನೇ, ಕಾಮದ ಹೆಚ್ಚಳವುಂಟಾದಾಗ ಅತಿಯಾದ ವ್ಯಾಮೋಹದ ಚಿಹ್ನೆಗಳು, ಅನಿಯಂತ್ರಿತ ಬಯಕೆಗಳು, ಹಂಬಲಿಸುವಿಕೆ ಮತ್ತು ತೀವ್ರ ಪ್ರಯತ್ನ ಬೆಳೆಯುತ್ತವೆ. ಎಲೈ ಕುರುಪುತ್ರನೇ, ಮೌಢ್ಯದ ವಿಧಾನದ ಹೆಚ್ಚಳವಾದಾಗ, ಬುದ್ಧಿಭ್ರಮಣೆ, ಭ್ರಮೆ, ಆಲಸ್ಯ ಹಾಗೂ ಕತ್ತಲು ರೂಪು ತಾಳುತ್ತವೆ.

ಭಗವಂತನು ಪ್ರತಿಯೊಬ್ಬರಿಗೂ ಅವರ ಗುಣ ಮತ್ತು ಫಲಪ್ರದ ಕರ್ಮಗಳ ಅನುಗುಣವಾಗಿ ವಿವಿಧ ಬಗೆಯ ಶರೀರಗಳನ್ನು ನೀಡುವಾಗ ಒಂದು ನಿರ್ದಿಷ್ಟ ದೇಹವನ್ನು ನೀಡಿ ಅವನ ಐಹಿಕ ಸ್ವಭಾವದ ಎಲ್ಲ ಗುಣಗಳನ್ನೂ ಪುನಃಶ್ಚೇತನಗೊಳಿಸುತ್ತಾನೆ. ಅವನು ಪ್ರತಿಯೊಂದು ಶರೀರವನ್ನೂ ಪ್ರವೇಶಿಸಿ ಸೃಷ್ಟಿ, ಉಳಿಯುವಿಕೆ ಹಾಗೂ ನಿರ್ನಾಮವನ್ನು ಪ್ರಭಾವಿತಗೊಳಿಸುತ್ತಾನೆ.

ಇಡೀ ಬ್ರಹ್ಮಾಂಡದ ಸೃಷ್ಟಿಕರ್ತನಾದ ಭಗವಂತನು ಕಾಲದ ಮಿತಿಯೊಳಗೆ ಐಹಿಕ ಶಕ್ತಿ ಮತ್ತು ಜೀವಿಗಳಿಗೆ ಅವಕಾಶ ನೀಡುವ ಸಲುವಾಗಿ ಕಾಲವನ್ನು ಸೃಷ್ಟಿಸಿದನು. ಭಗವಂತನೇ ಸ್ವತಃ ಕಾಲ. ಕಾಲವು ಸತ್ತ್ವಗುಣವನ್ನು ಹೆಚ್ಚಿಸಿದ್ದರಿಂದ ಸತ್ವಗುಣದಲ್ಲಿ ವಾಸವಾಗಿರುವ ದೇವತೆಗಳಿಗೆ ಅನುಕೂಲಕರವಾದವು. ತಮೋಗುಣದಿಂದ ಪ್ರಭಾವಿತರಾಗಿರುವ ರಾಕ್ಷಸರನ್ನು ಬಿಡುಗಡೆಗೊಳಿಸಲಾಯಿತು. ವಿವಿಧ ರೀತಿಗಳಲ್ಲಿ ಕ್ರಿಯೆಗೈಯ್ಯುವ ಸಲುವಾಗಿ ಅವನು ಕಾಲವನ್ನು ಪ್ರಚೋದಿಸಿದನೇ ಹೊರತು ಅವನೆಂದೂ ಪಕ್ಷಪಾತಿಯಾಗಿರಲಿಲ್ಲ. ಅದಕ್ಕೆ ಬದಲಾಗಿ ಅವನ ಚಟುವಟಿಕೆಗಳು ವೈಭವಯುತವಾಗಿದ್ದು ಅದರಿಂದಲೇ ಉರುಸ್ರಾವ (ವಿಸ್ತಾರವಾಗಿ ಹರಡಿದಂಥ ವೈಭವಗಳನ್ನು ಹೊಂದಿದವನು) ಎಂದು ಕರೆಯಲಾಯಿತು.

ರಾಕ್ಷಸರನ್ನು ಕೊಲ್ಲುವಾಗಲೂ ಭಗವಂತನು ನಿಷ್ಪಕ್ಷಪಾತದಿಂದ ಕೂಡಿದ್ದನೆಂಬುದನ್ನು ತೋರಿಸುವಂಥ ಐತಿಹಾಸಿಕ ಅಂಶಗಳನ್ನು ನಾರದ ಮುನಿಯು ತಿಳಿಸಿದ್ದಾನೆಂಬುದಾಗಿ ಶ್ರೀ ಶುಕಾಚಾರ್ಯರು ತಿಳಿಸಿದರು. ನಾರದ ಮುನಿಯು ಯುಧಿಷ್ಠಿರನು ರಾಜಸೂಯ ಯಾಗ ಮಾಡುತ್ತಿದ್ದಾಗ ಈ ಕಥೆಯನ್ನು ಹೇಳಿದನು.

ಶಿಶುಪಾಲನು ಭಗವಂತನಿಂದ ರಾಜಸೂಯ ಯಾಗದ ಸಂದರ್ಭದಲ್ಲಿ ಕೊಲ್ಲಲ್ಪಟ್ಟಾಗ ಶಿಶುಪಾಲನು ಭಗವಂತನ ಶರೀರದಲ್ಲಿ ಐಕ್ಯಹೊಂದಿದ್ದನ್ನು ಕಂಡು ಅಲ್ಲಿ ನೆರೆದಿದ್ದವರೆಲ್ಲರೂ ಮೂಕವಿಸ್ಮಿತರಾದರು.

ಶಿಶುಪಾಲನು ತೀರಾ ಶತೃತ್ವದಿಂದ ಕೂಡಿದ್ದರೂ ಅವನ ದೇಹವು ಭಗವಂತನಲ್ಲಿ ಲೀನವಾಗುವುದನ್ನು ಕಾಣುವದೊಂದು ಅದ್ಭುತವೆಂದು ಯುಧಿಷ್ಠಿರ ಮಹಾರಾಜನು ನಾರದ ಮುನಿಗೆ ತಿಳಿಸಿದನು. ಅದು ಹೇಗೆ ಸಾಧ್ಯವೆಂಬುದನ್ನು ದೊರೆಯು ತಿಳಿದುಕೊಳ್ಳಲು ಬಯಸಿದ. ಒಂದು ಶರೀರವು ಭಗವಂತನ ದೇಹದಲ್ಲಿ ಸೇರ್ಪಡೆಯಾಗುವುದಕ್ಕೆ "ಸಾಯುಜ್ಯ" ಮುಕ್ತಿಯೆಂದು ಹೆಸರು. (ಎರಡು ವರ್ಗಗಳಿಗೆ ಸೇರಿದ ಅತಿಶಯರಿದ್ದಾರೆ

- ಜ್ಞಾನಿಗಳು ಮತ್ತು ಭಕ್ತರು. ಭಕ್ತರು ಸಾಯುಜ್ಯ ಮುಕ್ತಿಗೆ ಆಶಿಸದಿದ್ದರೂ ಜ್ಞಾನಿಗಳು ಅದನ್ನು ಅಪೇಕ್ಷಿಸುತ್ತಾರೆ). ಆದರೆ ಶಿಶುಪಾಲನು ಇವೆರಡು ವರ್ಗಗಳಿಗೂ ಸೇರಿದವನಾಗಿರಲಿಲ್ಲ. ಕೇವಲ ಭಗವಂತನ ಬಗ್ಗೆ ಶತೃತ್ವವನ್ನು ಬೆಳೆಸಿಕೊಳ್ಳುವ ಮೂಲಕ ಅವನು ಭಗವಂತನ ದೇಹದೊಂದಿಗೆ ಲೀನನಾಗಿ ಉನ್ನತ ಸ್ಥಾನವನ್ನು ಪಡೆದುಕೊಂಡನು. ಇದು ಹೇಗೆ ಸಾಧ್ಯವಾಯಿತೆಂಬುದನ್ನು ದೊರೆಯು ತಿಳಿದುಕೊಳ್ಳಲು ಬಯಸಿದನು.

ಬಾಲ್ಯದ ಪ್ರಾರಂಭದಿಂದಲೂ ಧಮಘೋಷನ ಪಾಪಿಷ್ಠ ಮಗನಾದ ಶಿಶುಪಾಲನು ಭಗವಂತನನ್ನು ಛೀಮಾರಿ ಮಾಡುತ್ತಾ ಸಾಯುವವರೆಗೂ ಅದನ್ನು ಮುಂದುವರಿಸಿದನು. ನಾರದ ಮುನಿಯ ಹೇಳಿದನು : "ಎಲೈ ದೊರೆಯೇ, ಛೀಮಾರಿ ಹಾಕುವುದು ಹಾಗೂ ಪ್ರಶಂಸಿಸುವುದು, ಶಿಕ್ಷಿಸುವುದು ಹಾಗೂ ಗೌರವಿಸುವುದು ಇವೆಲ್ಲವೂ ಮೌಢ್ಯದಿಂದಾಗಿ ಅನುಭವಿಸಬೇಕಾದಂಥದ್ದು. ಪರಿಪೂರ್ಣವಾದ ಆತ್ಮವನ್ನು ಹೊಂದಿರುವ ಶರೀರವು ಬಾಹ್ಯ ಶಕ್ತಿಯ ಮಧ್ಯಸ್ಥಿಕೆಯ ಮೂಲಕ ಐಹಿಕ ಜಗತ್ತಿನಲ್ಲಿ ಕಷ್ಟವಿರುವ ರೀತಿಯಲ್ಲಿ ಭಗವಂತನು ಅದನ್ನು ರೂಪಿಸಿರುತ್ತಾನೆ".

ಆದ್ದರಿಂದ ಶತೃತ್ವ ಅಥವಾ ಭಕ್ತಿಪೂರ್ವಕ ಸೇವೆ, ಭಯ, ಪ್ರೀತಿ ಅಥವಾ ಕಾಮುಕ ಹಂಬಲ ಇವುಗಳೆಲ್ಲವುಗಳಿಂದ ಅಥವಾ ಇವುಗಳಲ್ಲಿ ಯಾವುದೇ ಒಂದರ ಮೂಲಕ ನಿಯಂತ್ರಿತ ಆತ್ಮವು ಒಂದು ರೀತಿಯಲ್ಲಿ ಪರಮಾತ್ಮನ ಮೇಲೆ ಕೇಂದ್ರಿಕೃತವಾಗಿದ್ದರೆ ಭಗವಂತನು ಎಂದೂ ಶತೃತ್ವ ಅಥವಾ ಸ್ನೇಹದ ಪ್ರಭಾವಕ್ಕೆ ಒಳಗಾಗುವುದಿಲ್ಲ.

ನಾರದ ಮುನಿಯ ಅಭಿಪ್ರಾಯದಲ್ಲಿ ಭಕ್ತಿರೂಪಕ ಸೇವೆಯು ಭಗವಂತನೊಂದಿಗೆ ಶತೃತ್ವವನ್ನು ಬೆಳೆಸಿಕೊಳ್ಳುವ ರೀತಿಯಲ್ಲಿನಂತೆ ಆಲೋಚನೆಯಲ್ಲಿ ಅಂಥ ತೀವ್ರ ಮುನ್ನಡೆಯನ್ನು ಸಾಧಿಸಲಾಗದು. ಗೋಪಿಯರು ತಮ್ಮ ಕಾಮರೂಪ ಹಂಬಲಗಳಿಂದ, ಕಂಸನು ಭಯದಿಂದ ಹಾಗೂ ಶಿಶುಪಾಲ ಮತ್ತು ಇನ್ನಿತರ ದೊರೆಗಳು ಶತೃತ್ವದಿಂದ, ಪಾಂಡವರು ಶ್ರೀ ಕೃಷ್ಣ ಪರಮಾತ್ಮನ ಬಗೆಗಿನ ಅತಿ ಹೆಚ್ಚಿನ ವಿಶ್ವಾಸದಿಂದ ಹಾಗೂ ಇತರ ಭಕ್ತಾದಿಗಳು ಭಕ್ತಿಪೂರ್ವಕ ಸೇವೆಯ ಮೂಲಕ ಶ್ರೀ ಕೃಷ್ಣ ಪರಮಾತ್ಮನ ಕರುಣೆಯನ್ನು ಪಡೆದುಕೊಳ್ಳುತ್ತಾರೆ. ಹೇಗಾದರೂ, ಯಾರಾದರೊಬ್ಬರು ತುಂಬಾ ಗಂಭೀರವಾಗಿ ಶ್ರೀ ಕೃಷ್ಣ ಪರಮಾತ್ಮನ ಆಕೃತಿಯನ್ನು ಪರಿಗಣಿಸಬೇಕು. ಆಗ ಮೇಲೆ ಹೇಳಿದ ಐದು ವಿವಿಧ ಬಗೆಯ ಪ್ರಕ್ರಿಯೆಗಳ ಮೂಲಕ ಮುಕ್ತಿಯನ್ನು ಪಡೆಯಬಹುದು. ಯಾರಾದರೊಬ್ಬರು ಸ್ನೇಹಪೂರ್ವಕ ಅಥವಾ ಶತೃತ್ವ ರೀತಿಯಲ್ಲಿ ಶ್ರೀ ಕೃಷ್ಣ ಪರಮಾತ್ಮನನ್ನು ಕುರಿತು ಯೋಚಿಸಲೇಬೇಕು.

ನಾರದ ಮುನಿಯು ಮುಂದುವರಿದು ಶಿಶುಪಾಲ ಮತ್ತು ದಂತವಕ್ರರು ಶ್ರೀ ಕೃಷ್ಣ ಪರಮಾತ್ಮನ ಸಮೀಪವರ್ತಿಗಳಾಗಿದ್ದು ಬ್ರಾಹ್ಮಣರ ಶಾಪದಿಂದ ಐಹಿಕ ಜಗತ್ತಿಗೆ ವೈಕುಂಠದಿಂದ ಬಂದರೆಂದು ಹೇಳಿದನು. ಯುಧಿಷ್ಠಿರನು ಶಾಪ ಯಾವ ರೀತಿಯದ್ದೆಂಬುದನ್ನು ತಿಳಿದುಕೊಳ್ಳಬಯಸಿದನು.

## ಅಸುರರ ಜನನ

ನಾರದ ಮುನಿಯು ಹೇಳಿದನು : "ಒಮ್ಮೆ ಅಲ್ಲಲ್ಲಿ ಸುತ್ತಾಡುತ್ತಿದ್ದ ಬ್ರಹ್ಮದೇವನ ಪುತ್ರರಾದ ಸನಕ, ಸನಂದನ, ಸನಾತನ ಮತ್ತು ಸನತ್ಕುಮಾರರು ವೈಕುಂಠಕ್ಕೆ ಆಗಮಿಸಿ ಭಗವಂತನನ್ನು ಕಾಣಲು ಅಪೇಕ್ಷಿಸಿದರು. ಅವರು ಸಾಮಾನ್ಯ ಮಾನವರೆಂದು ಬಗೆದ ದ್ವಾರಪಾಲಕರಾದ ಜಯ ವಿಜಯರು ಅವರಿಗೆ ಪ್ರವೇಶವನ್ನು ನಿರಾಕರಿಸಿದರು. ಕುಮಾರರು ದ್ವಾರಪಾಲಕರನ್ನು " ಭೂಮಿಗೆ ಹೋಗಿ ಅತ್ಯಂತ ಪಾಪಪೂರಿತ ಅಸುರರ ಕುಟುಂಬದಲ್ಲಿ ಜನ್ಮವೆತ್ತುವಂತೆ" ಶಾಪವನ್ನಿತ್ತರು. ಕುಮಾರರು ಮುಂದುವರಿದು ಶಾಪದ ಅವಧಿಯ ಕೊನೆಯಲ್ಲಿ ಅಂದರೆ ಮೂರು ಜನ್ಮಗಳ ನಂತರ ಇವರಿಬ್ಬರೂ ವೈಕುಂಠದಲ್ಲಿನ ತಮ್ಮ ಮೊದಲ ಸ್ಥಾನಕ್ಕೆ ಹಿಂತಿರುಗುತ್ತಾರೆಂದರು. ಈ ಇಬ್ಬರು ಹೀಗೆ ದಿತಿಯ ಗರ್ಭದಲ್ಲಿ ಹಿರಣ್ಯಾಕ್ಷ ಮತ್ತು ಹಿರಣ್ಯಕಶಿಪುಗಳಾಗಿ ಜನಿಸಿದರು. ಅನಂತರ ಅವರು ರಾವಣ ಮತ್ತು ಕುಂಭಕರ್ಣರಾಗಿ, ಶಿಶುಪಾಲ ಹಾಗೂ ದಂತವಕ್ರರಾಗಿ ಜನ್ಮ ತಳೆದರು.

ಹಿರಣ್ಯಾಕ್ಷನು "ವರಾಹ" ಅವತಾರದಲ್ಲಿ ಭಗವಂತನಿಂದ ಕೊಲ್ಲಲ್ಪಟ್ಟನು. ಹಿರಣ್ಯಕಶಿಪು ಭಗವಂತನ ಮೇಲೆ ಕೋಪಗೊಂಡು ಭಗವಂತ ನಿಷ್ಪಕ್ಷಪಾತವಾಗಿರಬೇಕೆಂದೂ ಅರಸನು ಅಸುರರನ್ನು ಕಡೆಗಣಿಸಿ ದೇವತೆಗಳಿಗೆ ಅನುಕೂಲಕರನಾಗಿದ್ದಾನೆಂದೂ ಅವನ ಅನುಯಾಯಿಗಳಿಗೆ ತಿಳಿಸಿದನು. ಈ ಪಕ್ಷಪಾತದ ಸಲುವಾಗಿ ಭಗವಾನ್ ವಿಷ್ಣುವನ್ನು ಕೊಲ್ಲುತ್ತೇನೆಂದು ಹಿರಣ್ಯಕಶಿಪು ಪ್ರಮಾಣವನ್ನು ಕೈಗೊಂಡನು. ಅವನು ತನ್ನ ಅನುಯಾಯಿಗಳಿಗೆ ಬ್ರಾಹ್ಮಣ ಸಂಸ್ಕೃತಿ ಹಾಗೂ ಕ್ಷತ್ರಿಯ ಆಡಳಿತದಿಂದಾಗಿ ಅಭಿವೃದ್ಧಿಗೊಳ್ಳುತ್ತಿರುವ ಭೂಮಿಗೆ ಹೋಗಬೇಕೆಂದು ಸಲಹೆ ಮಾಡಿದನು. ಇಲ್ಲಿನ ಜನರು ಸರಳತೆ, ಯಜ್ಞ ವೇದಾಧ್ಯಯನ, ಕ್ರಮಬದ್ಧ ವಚನ ಮತ್ತು ದಾನಧರ್ಮದಲ್ಲಿ ತೊಡಗಿದವರು. ಅವರನ್ನು ಸಂಹರಿಸಬೇಕೆಂದು ಅವನಿಗೆ ತಿಳಿಸಿದನು. ರಾಕ್ಷಸರು ಈ ಸೂಚನೆಗಳನ್ನು ಪಾಲಿಸಿ ಯಜ್ಞಯಾಗಾದಿಗಳನ್ನು ನಾಶಪಡಿಸಲು ತೊಡಗಿದರು.

ಹಿರಣ್ಯಕಶಿಪುವು ತನ್ನ ಅತ್ತಿಗೆ "ರುಷಭಾನು" ಹಾಗೂ ತನ್ನ ತಾಯಿಯನ್ನು ಸಮಾಧಾನಪಡಿಸಿ ಪ್ರತೀಕಾರ ತೀರಿಸುತ್ತೇನೆಂಬ ವಚನವನ್ನಿತ್ತನು.

ಅಜೇಯವಾಗಿ, ವೃದ್ಧಾಪ್ಯದಿಂದ ಮುಕ್ತನಾಗಿ ಉಳಿಯಬೇಕೆಂದು ಬಯಸಿದ ಹಿರಣ್ಯಕಶಿಪುವಿನ ವೃತ್ತಾಂತವನ್ನು ನಾರದ ಮುನಿಯು ತಿಳಿಸಿದನು. ಅನಿಮ ಮತ್ತು ಲಘಿಮದಂಥ ಯೋಗ ಪರಿಪೂರ್ಣತೆಯನ್ನು ಜಯಿಸಲು, ಸಾವಿಲ್ಲದೆ ಉಳಿಯಲು ಹಾಗೂ ಬ್ರಹ್ಮಲೋಕವನ್ನು ಒಳಗೊಂಡಂತೆ ಇಡೀ ಬ್ರಹ್ಮಾಂಡವನ್ನಾಳುವ ಏಕೈಕ ದೊರೆಯಾಗಲು ಅವನು ಬಯಸಿದನು.ಈ ಉದ್ದೇಶವನ್ನು ಮನಸ್ಸಿನಲ್ಲಿ ಇಟ್ಟುಕೊಂಡು ಮಂದಾರ ಪರ್ವತದ ಕಣಿವೆಗಳಲ್ಲಿ ಅವನು ಭಯಂಕರ ತಪಸ್ಸನ್ನು ಕೈಗೊಂಡ. ಅವನು ಕೈಗೊಂಡ ತಪಸ್ಸು ಎಷ್ಟು ಘೋರವಾಗಿತ್ತೆಂದರೆ ಹಿರಣ್ಯಕಶಿಪುವಿನ ಶಿರದಿಂದ ನಿರ್ನಾಮದ ಸಮಯದಲ್ಲಿ ಸೂರ್ಯನಿಂದ ಹೊರಡುವ ಕಿರಣಗಳಷ್ಟೇ ಪ್ರಖರ ಹಾಗೂ ಅಸದಳವಾದ ಪ್ರಕಾಶ ಹೊರಹೊಮ್ಮಿತು. ಇದನ್ನು ಕಂಡ ದೇವತೆಗಳು ಚಿಂತೆಗೊಳಗಾದರು. ಬ್ರಹ್ಮ

ದೇವನು ಭೃಗು, ದಕ್ಷ ಮತ್ತು ಇತರ ಹಿರಿಯ ಮುನಿಗಳಿಂದೊಡಗೂಡಿ ರಾಕ್ಷಸರಾಜನು ತಪಸ್ಸನ್ನು ಆಚರಿಸುತ್ತಿದ್ದ ಸ್ಥಳವನ್ನು ತಲುಪಿದನು.

ಬ್ರಹ್ಮದೇವನು ಹಿರಣ್ಯಕಶಿಪುವಿಗೆ ತನ್ನ ತಪಸ್ಸನ್ನು ಅಂತ್ಯಗೊಳಿಸಿ ದೀಕ್ಷೆಯನ್ನು ಕೇಳುವಂತೆ ತಿಳಿಸಿದನು. ಬ್ರಹ್ಮದೇವನು ಇರುವೆಗಳು ಹಾಗೂ ಕೀಟಗಳಿಂದ ಭುಜಿಸಲ್ಪಟ್ಟ ಹಿರಣ್ಯಕಶಿಪುವಿನ ಶರೀರಕ್ಕೆ ತನ್ನ ಕಮಂಡಲದಿಂದ ನೀರನ್ನು ಪ್ರೋಕ್ಷಿಸಿ ಅದನ್ನು ಜೀವಂತವಾಗಿಸಿದನು. ಬ್ರಹ್ಮನನ್ನು ಕಂಡು ಸಂತಸಗೊಂಡ ಹಿರಣ್ಯಕಶಿಪು ಅವನಿಗೆ ತನ್ನ ಪ್ರಣಾಮಗಳನ್ನು ತಿಳಿಸಿದನು. ಅವನು ಮೋಕ್ಷಕ್ಕಾಗಿ ಪ್ರಾರ್ಥಿಸಿದನು. "ಜೀವಂತವಾಗಿರುವ ಅಥವಾ ಜೀವವಿಲ್ಲದ ಯಾವುದೇ ಜೀವ ಅಥವಾ ವಸ್ತುವಿನಿಂದ ನನಗೆ ಮರಣ ಬಾರದಂತೆ ವರ ನೀಡು. ಯಾವುದೇ ದೇವತೆ ಅಥವಾ ರಾಕ್ಷಸ ಇಲ್ಲವೇ ಕೆಳಗಿನ ಗ್ರಹಗಳ ಯಾವುದೇ ಸರ್ಪದಿಂದ ನಾನು ಸಾಯದಿರುವಂತೆ ವರವನ್ನು ಕರುಣಿಸು. ನನಗೆ ಪ್ರತಿಸ್ಪರ್ಧಿಯಿಲ್ಲದಂತೆ ವರ ನೀಡು. ಎಲ್ಲ ಜೀವಿಗಳಿಗೂ ಹಾಗೂ ಉತ್ಸವ ದೇವತೆಗಳಿಗೂ ನಾನು ಏಕೈಕ ಒಡೆಯನಾಗುವಂತೆ ಕರುಣಿಸು. ಮತ್ತು ಆ ಸ್ಥಾನದಿಂದ ಗಳಿಸಬಹುದಾದ ಎಲ್ಲ ವೈಭವಗಳನ್ನೂ ನೀಡು. ಅಲ್ಲದೆ ದೀರ್ಘ ತಪಸ್ಸಿನಿಂದ ಹಾಗೂ ಯೋಗಾಭ್ಯಾಸದಿಂದ ಗಳಿಸಬಹುದಾದ ಎಲ್ಲ ನಿಗೂಢ ಶಕ್ತಿಗಳನ್ನೂ ನೀಡು. ಏಕೆಂದರೆ ಇವು ಕಾಲಕ್ಕೆ ಸಿಕ್ಕಿ ನಶಿಸುವುದಿಲ್ಲ. ಬ್ರಹ್ಮದೇವನು ಈ ವರಗಳನ್ನು ನೀಡಿದನು. ಅನಂತರ ಹಿರಣ್ಯಕಶಿಪುವು ಇಡೀ ಬ್ರಹ್ಮಾಂಡ ಹಾಗೂ ದೇವತೆಗಳನ್ನು ಬೆದರಿಸಿ ಅವರೆಲ್ಲರೂ ತನಗೆ ಪ್ರಣಾಮಗಳನ್ನು ಸಲ್ಲಿಸುವಂತೆ ಮಾಡಿದನು. ಅವನಿಂದ ತುಂಬಾ ಪೀಡಿತರಾಗಿ ಹಾಗೂ ಘಾಸಿಗೊಂಡ ದೇವತೆಗಳು ತಮ್ಮನ್ನು ರಕ್ಷಿಸಬೇಕೆಂದು ಕೇಳಲು ವಿಷ್ಣುವಿನ ಬಳಿಗೆ ತೆರಳಿದರು.

ವಿಷ್ಣುದೇವನು ಹಿರಣ್ಯಕಶಿಪುವಿನ ಭೀಕರ ಆಡಳಿತವನ್ನು ಅಂತ್ಯಗೊಳಿಸುವೆನೆಂದು ವಚನವಿತ್ತನು. ಈ ಭರವಸೆಯಿಂದಾಗಿ ಅವರೆಲ್ಲರೂ ತಮ್ಮ ತಮ್ಮ ವಾಸಸ್ಥಾನಗಳಿಗೆ ಹಿಂತಿರುಗಿದರು.

ಹಿರಣ್ಯಕಶಿಪುವಿಗೆ ನಾಲ್ವರು ಪುತ್ರರಿದ್ದು ಅವರಲ್ಲಿ ಪ್ರಹ್ಲಾದನು ವಿಷ್ಣುವಿನ ಪರಮ ಭಕ್ತನಾದ್ದರಿಂದ ಎಲ್ಲ ಅತಿಶಯ ಗುಣಗಳ ಆಗರವಾಗಿದ್ದನು. ಪ್ರಹ್ಲಾದನು ತನ್ನ ಮಗನೇ ಆಗಿದ್ದರೂ ಹಿರಣ್ಯಕಶಿಪು ಅವನನ್ನು ಹಿಂಸಿಸುತ್ತಿದ್ದನು.

ಯುಧಿಷ್ಠಿರ ಮಹಾರಾಜನು ನಾರದ ಮುನಿಯಿಂದ ತಂದೆಯೊಬ್ಬನು ತನ್ನ ಸ್ವಂತ ಮಗನನ್ನು ಹಿಂಸಿಸುವುದು ಹೇಗೆ ಸಾಧ್ಯ ಎಂಬುದಾಗಿ ತಿಳಿದುಕೊಳ್ಳಲು ಬಯಸಿದನು.

## ಪ್ರಹ್ಲಾದ

ದಾನವರ ಆಧ್ಯಾತ್ಮಿಕ ಗುರುವಾದ ಉನ್ನತ ಶುಕ್ರಾಚಾರ್ಯನಿಗೆ ದೊರೆಯ ಅರಮನೆಯಲ್ಲಿ ವಾಸವಾಗಿದ್ದ ಸಂದ ಮತ್ತು ಅಮರ್ಕರೆಂಬ ಇಬ್ಬರು ಪುತ್ರರಿದ್ದರು ಎಂಬುದಾಗಿ ನಾರದ ಮುನಿಯು ತಿಳಿಸಿದನು.

ಒಮ್ಮೆ ರಾಜನು ತನ್ನ ಮಗನಿಂದ ಶಾಲೆಯಲ್ಲಿ ಅವನು ಕಲಿತಿರುವುದರ ಬಗ್ಗೆ ತಿಳಿಯಲು ಬಯಸಿದನು. ಪ್ರಹ್ಲಾದನು ಅವನ ತಂದೆಯ ತೊಡೆಯ ಮೇಲೆ ಕುಳಿತಿದ್ದನು. ಅವನು ಶರೀರ ಹಾಗೂ ಗೃಹಜೀವನ ತಾತ್ಕಾಲಿಕವೆಂದು ತಿಳಿಸಿದನು. ಒಬ್ಬರು ಅಂಥ ಸ್ಥಾನವನ್ನು ತ್ಯಜಿಸಿ ಅರಣ್ಯಕ್ಕೆ ಅದರಲ್ಲೂ ಶ್ರೀ ಕೃಷ್ಣ ಪರಮಾತ್ಮನ ಭಕ್ತರು ವಾಸವಾಗಿರುವಂಥ ಬೃಂದಾವನಕ್ಕೆ ತೆರಳಿ ಅಲ್ಲಿ ಆಶ್ರಯ ಪಡೆಯಬೇಕೆಂದರು.

ದೊರೆಯು ಹತಾಶೆಗೊಂಡು ಭಟರಿಗೆ ತನ್ನ ಮಗನನ್ನು ವೈಷ್ಣವರ ಪ್ರಭಾವದಿಂದ ತಪ್ಪಿಸಬೇಕೆಂದು ತಿಳಿಸಿದನು. ಪ್ರಹ್ಲಾದನ ಶಿಕ್ಷಕರೂ ಸಹ ಅವನು ಈ ಪಾಪವನ್ನು ಯಾರಿಂದ ಕಲಿತನೆಂಬುದನ್ನು ತಿಳಿದುಕೊಳ್ಳಲು ಬಯಸಿದರು. ಪ್ರಹ್ಲಾದನು ಉತ್ತರವಾಗಿ ಬಾಹ್ಯಶಕ್ತಿಯು ಮಾನವರ ಬುದ್ಧಿಶಕ್ತಿಯನ್ನು ಭ್ರಾಂತಿಗೊಳಿಸುವುದರಿಂದ "ನನ್ನ ಗೆಳೆಯ" ಹಾಗೂ "ನನ್ನ ಶತೃ" ಇವರ ಮಧ್ಯೆ ಭೇಧವನ್ನು ಸೃಷ್ಟಿಸಿದೆಯೆಂದನು. ಅವನು "ನಮ್ಮಲ್ಲಿ ಪ್ರತಿಯೊಬ್ಬರೂ ಭಗವಂತನ ಶಾಶ್ವತ ಸೇವಕರಾಗಿರುವುದರಿಂದಾಗಿ ಒಬ್ಬರು ಮತ್ತೊಬ್ಬರಿಂದ ಬೇರೆಯಲ್ಲ" ಎಂದು ತಿಳಿಸಿದನು. ದೊರೆಯು ಪ್ರಹ್ಲಾದನನ್ನು ಮತ್ತೆ ಗುರುಕುಲಕ್ಕೆ ಕಳಿಸಿದಾಗ ಅವನ ಶಿಕ್ಷಕರು ಅವನನ್ನು ಸಮಾಧಾನಗೊಳಿಸಿ ಅವನು ತನ್ನ ತಂದೆಗೆ, ಅಂದರೆ ದೊರೆಗೆ ತಿಳಿಸಿದ್ದನ್ನು ಅವನಿಗೆ ಯಾರು ಹೇಳಿಕೊಟ್ಟರೆಂದು ವಿಚಾರಿಸಿದರು.

ಪ್ರಹ್ಲಾದನು ತನ್ನ ಶಿಕ್ಷಕರಿಗೆ ಹೇಳಿದನು : "ನನ್ನ ಪ್ರೀತಿಯ ಗುರುಗಳೇ, ಭಗವಾನ್ ವಿಷ್ಣುವು ನಿಮ್ಮ ಶತೃವೆಂಬುದಾಗಿ ನೀವು ತಪ್ಪಾಗಿ ತಿಳಿದಿದ್ದೀರಿ. ಆದರೆ ಅವನು ನನಗೆ ಅನುಕೂಲಕರನಾಗಿರುವುದರಿಂದ ಅವನು ಪ್ರತಿಯೊಬ್ಬರಿಗೂ ಮಿತ್ರನೆಂಬುದನ್ನು ನಾನು ಅರ್ಥಮಾಡಿಕೊಂಡಿದ್ದೇನೆ. ನಾನು ನಿಮ್ಮ ಶತೃವಿನ ಪರ ವಹಿಸಿದ್ದೇನೆಂಬುದಾಗಿ ನೀವು ಭಾವಿಸುತ್ತೀರಿ. ಆದರೆ ವಾಸ್ತವವಾಗಿ ಅವನು ನನಗೆ ದೊಡ್ಡ ಕೃಪೆಯನ್ನು ದಯಪಾಲಿಸಿದ್ದಾನೆ".

ಸಂದ ಮತ್ತು ಅಮರ್ಕರು ಪ್ರಹ್ಲಾದನನ್ನು ವಿವಿಧ ರೀತಿಗಳಲ್ಲಿ ಹೀಯಾಳಿಸಿ ಹಾಗೂ ಬೆದರಿಸಿ, ಧರ್ಮ, ಆರ್ಥಿಕ ಅಭಿವೃದ್ಧಿ ಮತ್ತು ಕೃತಾರ್ಥ ಭಾವದ ಮಾರ್ಗಗಳ ಬಗ್ಗೆ ಬೋಧಿಸಲು ಪ್ರಾರಂಭಿಸಿದರು. ಸ್ವಲ್ಪ ಕಾಲದ ನಂತರ ಪ್ರಹ್ಲಾದನನ್ನು ಅವನ ತಂದೆಯ ಬಳಿಗೆ ಕರೆದೊಯ್ಯಲಾಯಿತು.

ದೊರೆ ಹಿರಣ್ಯಕಶಿಪು ಪ್ರಹ್ಲಾದನಿಗೆ ಅವನ ಶಿಕ್ಷಕರು ಅವನಿಗೆ ಬೋಧಿಸಿರುವ ಜ್ಞಾನದಲ್ಲಿ ಅತ್ಯುತ್ತಮವೆನಿಸಿರುವುದನ್ನು ಪುನರುಚ್ಚರಿಸಬೇಕೆಂದು ತಿಳಿಸಿದನು. ಪ್ರಹ್ಲಾದನು ಒಬ್ಬಾತ ಭಗವಾನ್ ವಿಷ್ಣುವಿನ ನಾಮಸ್ಮರಣೆ ಮಾಡಿ ಆತನನ್ನು ಸ್ಮರಿಸಿ ಅವನಿಗೆ ಸೇವೆ ಸಲ್ಲಿಸಬೇಕೆಂದೂ ಇದೇ ಪರಿಪೂರ್ಣ ತಿಳಿವಳಿಕೆಯಾದ್ದರಿಂದ ಹೀಗೆ ಮಾಡಿದವನೇ ಅತ್ಯಂತ ಮೇಧಾವಿ ವ್ಯಕ್ತಿಯೆಂದೂ ತಿಳಿಸಿದನು.

ಕೋಪಾವಿಷ್ಟನಾದ ದೊರೆಯು ಶಿಕ್ಷಕರನ್ನು ಹೀಯಾಳಿಸಿದನು. ಶಿಕ್ಷಕರೆಂದರು: "ನಿನ್ನ ಮಗನು ಹೇಳಿದ್ದು ನಮ್ಮಿಂದ ಬೋಧಿಸಲ್ಪಟ್ಟದ್ದಲ್ಲ. ಅವನಲ್ಲಿ ತನ್ನಾತಾನಾಗಿಯೇ ಭಕ್ತಿಪೂರ್ವಕ ಸೇವೆಯ ಹಂಬಲ ಸಹಜವಾಗಿಯೇ ಉದ್ಭವಿಸಿದೆ."

ಪ್ರಹ್ಲಾದನು ಒಬ್ಬರು ತಮ್ಮ ಇಂದ್ರಿಯಗಳನ್ನು ನಿಯಂತ್ರಿಸಿಕೊಳ್ಳದೆ, ಐಹಿಕ ಜೀವನವನ್ನು ತ್ಯಜಿಸದಿದ್ದರೆ ಅವರಿಗೆ ಪ್ರಗತಿಯಿಲ್ಲ ಎಂದು ಹೇಳಿದನು. ಜೀವನದ ಗುರಿ ಭಗವಂತನತ್ತ ಹಿಂತಿರುಗುವುದಾಗಿರಬೇಕು. ಅದನ್ನು ಕೇಳಿದ ದೊರೆಯು ಕೋಪಗೊಂಡ ತನ್ನ ಮಗನನ್ನು ತೊಡೆಯಿಂದ ದೂಡಿ ಪ್ರಹ್ಲಾದನನ್ನು ಕೊಲ್ಲುವಂತೆ ಸೇವಕರಿಗೆ ಆಜ್ಞಾಪಿಸಿದನು. ಸೇವಕರು ಬಾಲಕನನ್ನು ಕರೆದೊಯ್ದು ತಮ್ಮ ದೊಣ್ಣೆಗಳಿಂದ ಬಡಿದರೂ ಪ್ರಹ್ಲಾದನು ಭಗವನ್ನಾಮ ಸ್ಮರಣೆಯಲ್ಲಿ ಮಗ್ನನಾಗಿ ಕುಳಿತೇ ಇದ್ದನು. ಅವನಿಗೆ ಯಾವ ಹಾನಿಯೂ ಉಂಟಾಗಲಿಲ್ಲ. ಅವನನ್ನು ಕೊಲ್ಲಲು ದೊರೆಯು ಇನ್ನಿತರ ಅನೇಕ ವಿಧಾನಗಳನ್ನು ಬಳಸಿದರೂ ಅವೆಲ್ಲ ವ್ಯರ್ಥವಾಯಿತು.

ಸಂದ ಹಾಗೂ ಅಮರ್ಕರ ಸಲಹೆಯಂತೆ ದೊರೆಯು ಪ್ರಹ್ಲಾದನಿಗೆ ದಿನನಿತ್ಯದ ಧರ್ಮ, ಆರ್ಥಿಕತೆ ಹಾಗೂ ಸಾರ್ಥಕತೆಯನ್ನು ಬೋಧಿಸಲು ಒಪ್ಪಿದರೂ ಪ್ರಹ್ಲಾದನು ಇನ್ನಿತರ ವಿದ್ಯಾರ್ಥಿಗಳಿಗೆ ಐಹಿಕ ಜೀವನದ ನಿರುಪಯುಕ್ತತೆಯನ್ನು ಕುರಿತು ತಿಳಿಸಲು ಆರಂಭಿಸಿದ. ಜೀವನದ ಪ್ರಾರಂಭದಿಂದಲೇ ಒಬ್ಬರು ಮಾನವ ಶರೀರವನ್ನು ಭಕ್ತಿಪೂರ್ವಕ ಸೇವೆಯ ಅಭ್ಯಾಸಕ್ಕಾಗಿ ಬಳಸಿ ಮಿಕ್ಕೆಲ್ಲ ಹವ್ಯಾಸಗಳನ್ನು ಬಿಟ್ಟುಕೊಡಬೇಕು ಎಂದು ಅವನು ಬೋಧಿಸಿದ. ನಿಸ್ಪೃಹ ಸೇವೆಯು ಎಳ್ಳಷ್ಟಿದ್ದರೂ ಅದು ಸಂಪೂರ್ಣ ತೃಪ್ತಿಯನ್ನು ತಂದೀಯುತ್ತದೆ. ಪ್ರಹ್ಲಾದ ಮಹಾರಾಜನು ಇತರ ಸ್ನೇಹಿತರಿಗೆ ಇಂದ್ರಿಯ ವಿಷಯಗಳಿಂದ ಒದಗಿದಂಥ ಸಂತೋಷವನ್ನು ಅವರವರ ಪೂರ್ವ ಕರ್ಮವನ್ನು ಅನುಸರಿಸಿ ಪಡೆದುಕೊಳ್ಳಬಹುದೆಂದು ತಿಳಿಸಿದ. ಆದರೆ ಇವನ್ನು ಯಾವ ಶ್ರಮವಿಲ್ಲದೆಯೇ ಪಡೆದುಕೊಳ್ಳಬಹುದು. ಆದರೆ ಈ ಚಟುವಟಿಕೆ ವ್ಯರ್ಥ ಕಾಲಕ್ಷೇಪ. ಇದು ವಿಷ್ಣುವಿನ ಭಕ್ತಿಯ ರೂಪದಲ್ಲಿದ್ದರೆ ಅದು ಸಾರ್ಥಕ. ಅವನು ಬೋಧಿಸಿದ: "ಆದ್ದರಿಂದ ಐಹಿಕ ಅಸ್ತಿತ್ವದಲ್ಲಿದ್ದಾಗ ಸರಿತಪ್ಪುಗಳನ್ನು ಗುರುತಿಸಬಲ್ಲ ಸಂಪೂರ್ಣ ಶಕ್ತಿಯಿರುವಾತ ದೇಹಧಾರ್ಢ್ಯವಿರುವವರೆಗೂ ಹಾಗೂ ತತ್ತರಿಸದಿರುವ ಸ್ಥಿತಿಯನ್ನು ತಲಪದೆ ಇರುವವರೆಗೂ ಜೀವನದ ಅತ್ಯುನ್ನತ ಆದರ್ಶವನ್ನು ಸಾಧಿಸ ಬಯಸಬೇಕು.

ವ್ಯಾಮೋಹವನ್ನು ಬೆಳೆಸಿಕೊಳ್ಳುವ ಗೃಹಸ್ಥನು ತನ್ನ ನೇಯ್ಗೆಯಲ್ಲೇ ಸಿಕ್ಕಿಬೀಳುವ ರೇಷ್ಮೆ ಹುಳದಂತಿದ್ದು ಅದರಿಂದ ಹೊರಬರಲಾರ.

ಪ್ರಹ್ಲಾದ ಮುನಿಯು ಸದಾ ಭಕ್ತಿಪೂರ್ವಕ ಸೇವೆಯಲ್ಲೇ ತೊಡಗಿರುವ ನಾರದ ಮುನಿಯಿಂದ ತಾನು ಜ್ಞಾನವನ್ನು ಸಂಪಾದಿಸಿರುವುದಾಗಿ ತಿಳಿಸಿದ. ಭಾಗವತ ಧರ್ಮವೆಂದು ಕರೆಯಲಾಗುವ ಈ ಜ್ಞಾನವು ಸಂಪೂರ್ಣ ವೈಜ್ಞಾನಿಕವಾದದ್ದು. ಅದು ತರ್ಕಶಾಸ್ತ್ರ ಹಾಗೂ ಅಧ್ಯಾತ್ಮಿಕತೆಯನ್ನು ಆಧರಿಸಿದ್ದು ಎಲ್ಲ ಬಗೆಯ ಐಹಿಕ ಕಲ್ಮಷದಿಂದಲೂ ಮುಕ್ತವಾದದ್ದು. ಪ್ರಹ್ಲಾದ ಮಹಾರಾಜನಿಂದ ಇದನ್ನು ಕೇಳಿದ ಅವನ ಇತರ

ಅನುಯಾಯಿಗಳು ನಾರದ ಮುನಿಯಿಂದ ಅವನು ಹೇಗೆ ಅಂಥ ಸೂಚನೆಗಳನ್ನು ಪಡೆದುಕೊಂಡನೆಂಬುದನ್ನು ತಿಳಿದುಕೊಳ್ಳಲು ಬಯಸಿದರು.

ಮಂದಾರ ಪರ್ವತದಲ್ಲಿ ತನ್ನ ತಂದೆಯಾದ ಹಿರಣ್ಯಕಶಿಪುವು ತಪಸ್ಸನ್ನು ಮಾಡುತ್ತಿದ್ದಾಗ, ಅವನ ಗೈರು ಹಾಜರಿಯಲ್ಲಿ ಇಂದ್ರ ದೇವನು ಯುದ್ಧದಲ್ಲಿ ರಾಕ್ಷಸರೆಲ್ಲರನ್ನೂ ನಾಶಪಡಿಸಲು ಪ್ರಯತ್ನಿಸಿದನು. ಆಗ ಸಂಭವಿಸಿದ ಕಾಳಗದಲ್ಲಿ ರಾಕ್ಷಸರೆಲ್ಲರೂ ಪರಾಭವಗೊಂಡು ದೇವತೆಗಳು ಅರಮನೆಗಳಿಗೆ ನುಗ್ಗಿದರು; ಗರ್ಭಿಣಿಯಾಗಿದ್ದ ಪ್ರಹ್ಲಾದನ ತಾಯಿಯನ್ನು ಸೆರೆ ಹಿಡಿದರು. ಅವಳ ಗರ್ಭದಲ್ಲಿದ್ದ ಶಿಶುವು ರಾಕ್ಷಸನ ಬೀಜದಿಂದ ಉಂಟಾದ್ದರಿಂದ ಅವಳು ಮಗುವನ್ನು ಹೆರುವವರೆಗೆ ಅವಳನ್ನು ತನ್ನ ಬಳಿ ಇಟ್ಟುಕೊಳ್ಳಲು ಇಂದ್ರನು ಬಯಸಿದನು. ಆದರೆ ನಾರದ ಮುನಿಯು ಇಂದ್ರನನ್ನು ಕುರಿತು ಇಂತೆಂದನು: "ರಾಣಿಯ ಗರ್ಭದಲ್ಲಿರುವ ಮಗುವಿನಲ್ಲಿ ದೋಷವಿರದೆ ಅದು ಪಾಪರಹಿತವಾದ್ದು. ಅವನು ಭಗವಂತನ ಮಹಾನ್ ಭಕ್ತ. ಪ್ರಭಾವಶಾಲಿ ಸೇವಕ, ಆದ್ದರಿಂದ ನೀನು ಅವನನ್ನು ಕೊಲ್ಲಲು ಸಾಧ್ಯವಿಲ್ಲ". ನಾರದ ಮುನಿಯಿಂದ ಇದನ್ನು ತಿಳಿದ ಇಂದ್ರನು, ಪ್ರಹ್ಲಾದನ ತಾಯಿಯನ್ನು ಬಿಡುಗಡೆ ಮಾಡಿದ. ನಾರದ ಮುನಿಯು ಪ್ರಹ್ಲಾದನ ತಾಯಿಯನ್ನು ತನ್ನ ಆಶ್ರಮಕ್ಕೆ ಕರೆತಂದು ಅವಳಿಗೆ ಎಲ್ಲ ರಕ್ಷಣೆಯ ಭರವಸೆಯನ್ನಿತ್ತನು. ತನ್ನ ಪತಿಯು ಹಿಂತಿರುಗಿದ ನಂತರ ಮಗುವಿಗೆ ಜನ್ಮನೀಡಲು ರಾಣಿಯು ಬಯಸಿದಳು. ಆದ್ದರಿಂದ ಅವಳು ನಾರದ ಮುನಿಯೊಂದಿಗೇ ಉಳಿದುಕೊಂಡಳು. ನಾರದ ಮುನಿಯು ಧರ್ಮ ಹಾಗೂ ಧ್ಯಾನವನ್ನು ಕುರಿತ ತಿಳಿವಳಿಕೆಯನ್ನು ರಾಣಿ ಹಾಗೂ ಅವಳೊಳಗಿದ್ದ ಮಗುವಿಗೆ ತಿಳಿಸಿಕೊಟ್ಟನು. ಆ ಜ್ಞಾನವು ಪ್ರಹ್ಲಾದನಲ್ಲಿ ಶಾಶ್ವತವಾಗಿ ಉಳಿಯಿತು.

ಪ್ರಹ್ಲಾದ ಮಹಾರಾಜನು ತನ್ನ ಸ್ನೇಹಿತರಿಗೆ ಶರೀರದೊಳಗೆ ಆತ್ಮದ ಸ್ಥಾನದ ಬಗ್ಗೆ ಬೋಧಿಸಿ "ನಾನೇ ಐಹಿಕ ಶರೀರ ಮತ್ತು ಶರೀರದೊಂದಿಗೆ ಸಂಬಂಧ ಹೊಂದಿರುವಂಥಹವರೆಲ್ಲರೂ ನನ್ನವರು" ಎಂದು ಒಬ್ಬಾತ ತಿಳಿಯುವಂಥ ಜೀವನದ ಬಗೆಗಿನ ಭ್ರಮೆಯನ್ನು ಬಿಟ್ಟುಕೊಡಬೇಕೆಂದು ಸಲಹೆ ಮಾಡಿದನು. ನಿಯಂತ್ರಿತ ಆತ್ಮವು, ಐಹಿಕ ಅಂಶದಿಂದ ಮಾರ್ಗದರ್ಶನ ಪಡೆಯುತ್ತದೆ.

ಪ್ರಹ್ಲಾದ ಮಹಾರಾಜನು ಜೀವನದ ಉದ್ದೇಶವನ್ನು ವಿವರಿಸಿದನು : "ಈ ಐಹಿಕ ಜಗತ್ತಿನಲ್ಲಿ, ಗೋವಿಂದನ ಪದ್ಮ ಪಾದಗಳಿಗೆ, ಎಲ್ಲ ಕಾರಣಗಳಿಗೂ ಕಾರಣೀಭೂತನಾದವನಿಗೆ ಸೇವೆ ಸಲ್ಲಿಸುವುದು ಹಾಗೂ ಪ್ರತಿಯೆಡೆಯಲ್ಲೂ ಅವನನ್ನು ಕಾಣುವುದೇ ಜೀವನದ ಧ್ಯೇಯ. ಎಲ್ಲ ಪ್ರಕಟಿತ ಧಾರ್ಮಿಕ ಗ್ರಂಥಗಳೂ ವಿವರಿಸಿರುವಂತೆ ಇದೇ ಮಾನವ ಜೀವನದ ಏಕೈಕ ಅಂತಿಮ ಗುರಿಯಾಗಬೇಕು".

ಈ ಹಿತವಚನವು ಪ್ರಹ್ಲಾದ ಮಹಾರಾಜನ ಸ್ನೇಹಿತರೆಲ್ಲರ ಮನಸ್ಸಿನ ಮೇಲೆ ಗಾಢವಾಗಿ ಉಳಿಯುತ್ತದೆ. ದೊರೆಗೆ ಇದು ತಿಳಿದಾಗ ಅವನು ತನ್ನ ಮಗನನ್ನು ಕೊಲ್ಲಲು ನಿರ್ಧರಿಸಿ ಅವನನ್ನು ಅವಿವೇಕಿ ಹಾಗೂ ಭಯರಾಹಿತ್ಯನನ್ನಾಗಿಸುವ ಶಕ್ತಿ ಯಾವುದೆಂದು ತಿಳಿದುಕೊಳ್ಳಲು ಬಯಸಿದನು. ಆದರೆ ಪ್ರಹ್ಲಾದನು ತನ್ನೊಳಗಿರುವ ಶಕ್ತಿಯ ಮೂಲವು

ತನ್ನಲ್ಲಿ ಹಾಗೂ ಪ್ರತಿಯೊಬ್ಬರಲ್ಲೂ ಇದ್ದು ಅವನಿಲ್ಲದೆ ಯಾರೂ ಶಕ್ತಿಯನ್ನು ಹೊಂದಿರುವುದೇ ಇಲ್ಲವೆಂದೂ, ತನ್ನ ರಾಕ್ಷಸಬುದ್ಧಿಯನ್ನು ಬಿಟ್ಟುಕೊಡಬೇಕೆಂದು ತನ್ನ ತಂದೆಗೆ ತಿಳಿಸಿದನು. ದೊರೆಯು ಮತ್ತಷ್ಟು ಕೋಪಾವಿಷ್ಟನಾಗಿ ಆ ನಿಯಂತ್ರಕನು ಎಲ್ಲಿರುವನೆಂದು ತಿಳಿದುಕೊಳ್ಳಲು ಬಯಸಿದನು. ಅದಕ್ಕೆ ಪ್ರಹ್ಲಾದನ ಉತ್ತರ: "ಅವನು ಎಲ್ಲೆಡೆ ಇರುವನೆಂಬುದು". ತುಂಬಾ ಕ್ರೋಧಗೊಂಡ ದೊರೆ ಆಯುಧವನ್ನು ಕೈಗೆತ್ತಿಕೊಂಡು ಸ್ಥಂಭವೊಂದನ್ನು ಸೀಳಿದನು. ಆಗ ಆ ಸ್ಥಳದಿಂದ ಭಯಾನಕ ಧ್ವನಿಯೊಂದು ಮೊಳಗಿ ಜಗತ್ತನ್ನೇ ಸೀಳುವಂತೆ ತೋರಿತು. ಅದೆಷ್ಟು ಶಕ್ತಿಶಾಲಿಯಾಗಿತ್ತೆಂದರೆ ದೇವತೆಗಳ ವಾಸಸ್ಥಾನವನ್ನೇ ಅದು ತಲಪುತ್ತಿದೆ ಎನ್ನಿಸಿತು. ಪ್ರಹ್ಲಾದ ಮಹಾರಾಜನ ಹೇಳಿಕೆಯನ್ನು ಹಾಗೂ ತಾನು ಎಲ್ಲೆಡೆ ಇರುವೆನೆಂದು ಸಮರ್ಥಿಸಲು ಭಗವಂತನು ಹಿಂದೆಂದೂ ಕಂಡಿರದಂಥ ಅದ್ಭುತ ರೂಪವನ್ನು ಪ್ರದರ್ಶಿಸಿದನು. ಆ ಆಕೃತಿ ಮಾನವನೂ ಆಗಿರಲಿಲ್ಲ. ಕೇಸರಿಯೂ (ಸಿಂಹ) ಆಗಿರಲಿಲ್ಲ. ಹೀಗೆ ಭಗವಂತನು ನರಸಿಂಹ ಅವತಾರದಲ್ಲಿ ಗೋಚರಿಸಿದನು. ದೊರೆಯು ಅತ್ಯಂತ ಭಯಾನಕವಾಗಿದ್ದ ಈ ಆಕೃತಿಯನ್ನು ದಿಟ್ಟಿಸಿದನು. ಆ ಆಕೃತಿಗೆ ಕೋಪಾವಿಷ್ಟವಾದ ಕಣ್ಣುಗಳು, ಹೊಳೆಯುತ್ತಿರುವ ನಡು, ಭಯಂಕರ ಹಲ್ಲುಗಳು, ಹರಿತವಾದ ನಾಲಗೆ ಮುಂತಾದವಿದ್ದವು.

ರಾಜ ಹಾಗೂ ಭಗವಂತನ ಮಧ್ಯೆ ಕಾಳಗವೇರ್ಪಟ್ಟಿತು. ಭಗವಂತನು ದೊರೆಯನ್ನು ಹಿಡಿದು, ಅವನನ್ನು ತನ್ನ ತೊಡೆಯ ಮೇಲೆ ಇಟ್ಟುಕೊಂಡು ಸಭಾಂಗಣದ ದ್ವಾರದ ಮೆಟ್ಟಿಲುಗಳ ಮೇಲೆ ತನ್ನ ಕೈಗಳ ಉಗುರುಗಳಿಂದ ಅವನ ದೇಹವನ್ನು ಚಿಂದಿಯಾಗಿಸಿದನು. ಅವನು ದೊರೆಯ ಸೈನಿಕರನ್ನು ಕೊಂದು ಹಾಕಿದನು. ದೇವತೆಗಳು ಸಂಪ್ರೀತರಾಗಿ ಅವರೆಲ್ಲರೂ ಭಗವಂತನೆಡೆಗೆ ಆಗಮಿಸಿ ಅವನನ್ನು ಕೊಂಡಾಡಿದರು. ಆದರೆ ಭಗವಂತನು ಎಷ್ಟು ಕೋಪಾವಿಷ್ಟನಾಗಿದ್ದನೆಂದರೆ ಯಾರಿಗೂ ಅವನ ಬಳಿಗೆ ಹೋಗುವ ಧೈರ್ಯ ಉಂಟಾಗಲಿಲ್ಲ. ಭಗವಂತನ ಸಹಚರಳಾದ ಲಕ್ಷ್ಮಿಗೂ ಸಹ ಅವನ ಬಳಿಗೆ ಹೋಗುವ ಎದೆಗಾರಿಕೆಯಿರಲಿಲ್ಲ. ಅನಂತರ ಪ್ರಹ್ಲಾದನಿಗೆ ಭಗವಂತನನ್ನು ಶಾಂತಗೊಳಿಸುವಂತೆ ವಿನಂತಿಸಿಕೊಳ್ಳಲಾಯಿತು. ಪ್ರಹ್ಲಾದನು ಭಗವಂತನಿಗೆ ಸಾಷ್ಟಾಂಗ ನಮಸ್ಕಾರ ಮಾಡಿದ. ಅವನ ಪುಟ್ಟ ದೇಹವನ್ನು ಕಂಡು ತುಂಬಾ ಸಂಪ್ರೀತಗೊಂಡ ಭಗವಂತನು ವರವನ್ನು ಕೋರುವಂತೆ ಅವನಿಗೆ ತಿಳಿಸಿದ. ಪ್ರಹ್ಲಾದ ಮಹಾರಾಜನು ತನ್ನನ್ನು ಈ ಐಹಿಕ ಜೀವನದಿಂದ ಮುಕ್ತಗೊಳಿಸುವಂತೆ ಅವನನ್ನು ಬೇಡಿ, ತನ್ನ ಹೃದಯದಲ್ಲಿ ಯಾವ ಐಹಿಕ ಆಸೆಗಳೂ ಇರದಂತೆ ನೋಡಿಕೊಳ್ಳಬೇಕೆಂದು ಕೋರಿದ. ಆದರೆ ಭಗವಂತನು ಅವನಿಗೆ ಮನುವು ಆಕ್ರಮಿಸಿಕೊಂಡಿರುವ ಅವಧಿಯ ಅಂತ್ಯದವರೆಗೂ ರಾಕ್ಷಸರ ದೊರೆಯಾಗಿದ್ದುಕೊಂಡು ಅವರಿಗೆ ಮೀಸಲಾಗಿರುವ ಸೌಲಭ್ಯಗಳನ್ನು ಅನುಭವಿಸಬೇಕೆಂದು ಆಜ್ಞೆ ಮಾಡಿದನು.

ತನ್ನ ತಂದೆಯ ಪಾಪಕೃತ್ಯಗಳನ್ನು ಕ್ಷಮಿಸುವಂತೆ ಪ್ರಹ್ಲಾದ ಮಹಾರಾಜನು ವರವನ್ನು ಬೇಡಿದನು. ತನ್ನ ತಂದೆಯು ರಾಕ್ಷಸೀ ಕುಲದಲ್ಲಿ ಜನಿಸಿರುವುದರಿಂದ ಅವನನ್ನು ಪರಿಶುದ್ಧವಾಗಿಸಬೇಕೆಂದೂ ಅವನು ಭಗವಂತನನ್ನು ಬೇಡಿದನು.

ಪ್ರಹ್ಲಾದ ಮಹಾರಾಜನು ತನ್ನ ತಂದೆಯು ಮರಣದ ನಂತರ ಎಲ್ಲ ವಿಧಿಗಳನ್ನೂ ನೆರವೇರಿಸಿದನು. ಅನಂತರ ಅವನಿಗೆ ಸಿಂಹಾಸನಾರೋಹಣವಾಯಿತು.

ಹಿರಣ್ಯಾಕ್ಷ ಮತ್ತು ಹಿರಣ್ಯಕಶಿಪು ಇವರನ್ನು ಭಗವಾನ್ ವಿಷ್ಣುವು ಕೊಂದನು. ಶ್ರೀ ರಾಮಚಂದ್ರನು ರಾವಣ ಮತ್ತು ಕುಂಭಕರ್ಣರನ್ನು ಕೊಂದಾಗ ಅವರು ಸಾಯುತ್ತಿದ್ದ ಸಂದರ್ಭದಲ್ಲಿ ಭಗವಂತನ ಆಲೋಚನೆಯಲ್ಲಿ ಮುಳುಗಿದ್ದರು. ಅವರು ಮತ್ತೆ ಶಿಶುಪಾಲ ಹಾಗೂ ದಂತವಕ್ರರಾಗಿ ಜನಿಸಿ ಭಗವಂತನ ಬಗ್ಗೆ ಶತೃತ್ವವನ್ನು ಬೆಳೆಸಿಕೊಂಡರು. ಭಗವಂತನು ಅವರನ್ನೂ ಕೊಂದನು ಹಾಗೂ ಶಿಶುಪಾಲನು ಭಗವಂತನಲ್ಲಿ ಲೀನವಾಗುತ್ತಿರುವುದನ್ನು ಯುಧಿಷ್ಠಿರನೇ ಕಂಡನೆಂದು ನಾರದ ಮುನಿಯು ತಿಳಿಸಿದನು. ಭಕ್ತಿಪೂರ್ವಕ ಸೇವೆಯಿಂದ ಭಗವಂತನನ್ನು ಸದಾ ಸ್ಮರಿಸುವ ನಿಷ್ಠಾವಂತ ಭಕ್ತರು ಅವನಂಥಹುದೇ ಶರೀರಗಳನ್ನು ಪಡೆದುಕೊಳ್ಳುತ್ತಾರೆ. ಇದಕ್ಕೆ ಸಾರೂಪ್ಯ ಮುಕ್ತಿಯೆಂದು ಹೆಸರು. ವೈಕುಂಠಕ್ಕೆ ಭಕ್ತನು ಒಮ್ಮೆ ಹೋದನಾದರೆ ಅವನೆಂದೂ ಅಲ್ಲಿಂದ ಹಿಂತಿರುಗಲಾರ. ಭಕ್ತನೊಬ್ಬ ಐಹಿಕ ಶರೀರವನ್ನು ಪಡೆದುಕೊಳ್ಳದಿದ್ದರೂ ದೇವರ ಬಳಿಗೆ ಹಿಂತಿರುಗಿ ಭಗವಂತನ ಶಾಶ್ವತ ಅನುಯಾಯಿಗಳ ಶರೀರವನ್ನು ಹೋಲುವಂಥ ಅಧ್ಯಾತ್ಮಿಕ ಶರೀರವನ್ನು ಪಡೆದುಕೊಂಡು ಅವರ ಚಟುವಟಿಕೆಗಳನ್ನೇ ಅನುಸರಿಸುತ್ತಾನೆ. ಒಬ್ಬಾತ ಯಾವ ಧಾರ್ಮಿಕ ತತ್ವಗಳ ಮೂಲಕ ಭಗವಂತನನ್ನು ನಿಜವಾಗಿಯೂ ಅರ್ಥ ಮಾಡಿಕೊಳ್ಳುತ್ತಾನೋ ಅದನ್ನು ಭಾಗವತ ಧರ್ಮವೆಂದು ಕರೆಯಲಾಗುತ್ತದೆ. ಶ್ರೀ ಕೃಷ್ಣ ಪರಮಾತ್ಮನು ಸದಾ ಕಾಲವೂ ಪಾಂಡವರೊಂದಿಗೆ ಮಾನವನಂತೆ ಉಳಿದದ್ದರಿಂದ ನಾರದ ಮುನಿಯು ಯುಧಿಷ್ಠಿರನಿಗೆ ಅಭಿನಂದಿಸಿದನು.

## ಅಸುರರು ಹಾಗೂ ಶಿವ

ತನ್ನಲ್ಲಿರುವ ತಾಂತ್ರಿಕ ಜ್ಞಾನದಿಂದ ಶಿವನ ಪ್ರತಿಷ್ಠೆಯನ್ನು ಕುಗ್ಗಿಸಿದ ಮಾಯಾ ದಾನವನೆಂಬ ರಾಕ್ಷಸನ ಕಥೆಯನ್ನು ನಾರದ ಮುನಿಯು ತಿಳಿಸಿದನು. ಶಿವನನ್ನು ಉಳಿಸಿದವನು ಭಗವಂತ. ಮಹಾರಾಜ ಯುಧಿಷ್ಠಿರನು ಹೆಚ್ಚಿನ ವಿವರಗಳನ್ನು ತಿಳಿಯಬಯಸಿದನು.

ದೇವತೆಗಳು ಹಾಗೂ ಅಸುರರ ಮಧ್ಯೆ ಕಾಳಗವೇರ್ಪಟ್ಟಾಗ ಅಸುರರು ಸೋತು ಭೀಕರ ರಾಕ್ಷಸನಾದ ಮಾಯಾದಾನವನಲ್ಲಿ ಆಶ್ರಯವನ್ನು ಕೋರಿದರು. ಮಾಯಾ ದಾನವನು ಮೂರು ಅದೃಶ್ಯ ಗೃಹಗಳನ್ನು ಸಿದ್ಧಪಡಿಸಿ ದಾನವರಿಗೆ ಅವನ್ನಿತ್ತನು. ಅವು ಚಿನ್ನ, ಬೆಳ್ಳಿ ಮತ್ತು ಕಬ್ಬಿಣದಿಂದ ನಿರ್ಮಿತಗೊಂಡಿದ್ದವು. ಅದೃಶ್ಯ ರೂಪದಲ್ಲಿದ್ದ ರಾಕ್ಷಸರು ಪುಟ್ಟ ದೇವತೆಗಳನ್ನು ಪೀಡಿಸುತ್ತ ಮೂರು ಜಗತ್ತುಗಳನ್ನು ನಾಶ ಮಾಡಲು ಪ್ರಾರಂಭಿಸಿದರು. ಚಿಕ್ಕ ದೇವತೆಗಳು ಈಶ್ವರನನ್ನು ಸಮೀಪಿಸಿದಾಗ ಅವನು ಅವರಿಗೆ ಅಭಯ ನೀಡಿ ರಾಕ್ಷಸರ ಗೃಹಗಳತ್ತ ಮೂರು ಬಾಣಗಳನ್ನು ಕಳಿಸಿದನು. ಬಾಣಗಳು ಅಸುರರ ಮನೆಗಳನ್ನು ನಾಶಗೊಳಿಸಿದರೂ ಅವರು ಮಾಯಾ ದಾನವನು ವಿಶೇಷವಾಗಿ ತಯಾರಿಸಿದ್ದ ಅಮೃತ ಕೊಳದೊಳಗೆ ಬಿದ್ದರು. ಅವರ ಮೃತ ಶರೀರಗಳು ಅಮೃತದ

ಸಂಪರ್ಕ ಪಡೆದೊಡನೆಯೇ ಅವರಿಗೆ ಮತ್ತೆ ಜೀವ ಬಂತು. ಆದರೆ ಈಶ್ವರನಿಗೆ ತುಂಬಾ ನಿರಾಸೆಯುಂಟಾಯಿತು. ಶ್ರೀ ಕೃಷ್ಣ ಪರಮಾತ್ಮನಿಗೆ ಉಪಾಯವೊಂದು ಹೊಳೆಯಿತು. ಬ್ರಹ್ಮದೇವನು ಕರುವಾಗಿ ಶ್ರೀ ಕೃಷ್ಣ ಪರಮಾತ್ಮನೇ ಹಸುವಾಗಿ ಅಮೃತ ಕೊಳದ ಬಳಿಗೆ ಬಂದು ಅಮೃತವನ್ನೆಲ್ಲ ಕುಡಿದರು. ಅಮೃತವನ್ನೇ ಹಸುಕರುಗಳು ಕುಡಿಯುತಿದ್ದುದನ್ನು ಕಂಡರೂ ರಾಕ್ಷಸರು ಹಾಗೂ ಮಾಯಾ ದಾನವರು ಏನನ್ನೂ ಮಾಡಲಾರದೆ ಹೋದರು. ಆಗ ಪರಮಾತ್ಮನು ರಾಕ್ಷಸರಿಗೆ ಹೇಳಿದರು : "ಪರಮಾತ್ಮನು ಯಾರಿಗೆ ಯಾವ ಕರ್ಮವನ್ನು ದಯಪಾಲಿಸಿದ್ದಾನೋ ಅದರಿಂದ ಎಲ್ಲೂ ಅಥವಾ ಯಾರಿಂದಲೂ ಅವನು ಚಿಕ್ಕ ದೇವತೆಯಾಗಿರಬಹುದು ಅಥವಾ ರಾಕ್ಷಸನಾಗಿರಬಹುದು ಇಲ್ಲವೇ ಮಾನವನಾಗಿರಬಹುದು ಅಥವಾ ಇನ್ನ್ಯಾರೇ ಆಗಿರಬಹುದು. ಅದರಿಂದ ಅವನು ತಪ್ಪಿಸಿಕೊಳ್ಳುವಂತಿಲ್ಲ".

ನಾರದ ಮುನಿಯು ಮುಂದುವರಿದು ನುಡಿದನು: "ಅನಂತರದಲ್ಲಿ ಶ್ರೀ ಕೃಷ್ಣ ಪರಮಾತ್ಮನು ತನ್ನ ಸ್ವಂತ ಶಕ್ತಿಯಿಂದ - ಧರ್ಮ, ಬುದ್ಧಿಶಕ್ತಿ, ತ್ಯಾಗ, ಸಮೃದ್ಧಿ, ಸರಳತೆ, ಶಿಕ್ಷಣ ಇವುಗಳನ್ನೊಳಗೊಂಡ ಶಕ್ತಿಯಿಂದ ಈಶ್ವರನನ್ನು ರಥ, ಸಾರಥಿ, ಧ್ವಜ ಮೊದಲಾದ ಅಗತ್ಯ ಪರಿಕರಗಳೊಂದಿಗೆ ಸನ್ನದ್ಧಗೊಳಿಸಿದನು. ಈಶ್ವರನು ಅಸುರರೊಂದಿಗೆ ಕಾದಾಟಕ್ಕೆ ಹೊರಟು ಚಿಕ್ಕ ದೇವತೆಗಳನ್ನು ಅವರ ಆತಂಕಗಳಿಂದ ಬಿಡುಗಡೆ ಮಾಡಿದನು.

## ಅಧ್ಯಾಯ 11

# ಧರ್ಮದ ತತ್ವಗಳು

(ಈ ಅಧ್ಯಾಯವು ವರ್ಣಾಶ್ರಮ ಧರ್ಮದ ವಿಶೇಷ ಗುಣಗಳನ್ನು ವಿವರಿಸುವಂಥದ್ದಾಗಿದೆ. ಪ್ರಹ್ಲಾದ ಮಹಾರಾಜನ ಗುಣಗಳನ್ನು ಕುರಿತು ಆಲಿಸಿ ಆನಂದಗೊಂಡ ಯುದಿಷ್ಠಿರನು ಕೇಳಿದ ಪ್ರಶ್ನೆಯೊಂದಕ್ಕೆ ಉತ್ತರವಾಗಿ ನಾರದ ಮುನಿಯು ಪರಿಶುದ್ಧ ಸಮಾಜದ ನಾಲ್ಕು ಸಾಮಾಜಿಕ ವರ್ಗಗಳನ್ನು ಕುರಿತು ಉತ್ತರಿಸುತ್ತಾನೆ).

ಒಬ್ಬರು ಜೀವನದ ಅಂತಿಮ ಗುರಿಯನ್ನು - ಭಕ್ತಿಪೂರ್ವಕ ಸೇವೆಯನ್ನು ಸಾಧಿಸಲು ಅಗತ್ಯವಾದಂಥ ಧಾರ್ಮಿಕ ತತ್ವಗಳನ್ನು ಕುರಿತು ಯುಧಿಷ್ಠಿರನು ನಾರದ ಮುನಿಯನ್ನು ವಿಚಾರಿಸಿದನು. ಮಾನವ ಸಮಾಜದ ಸಾಮಾನ್ಯ ವೃತ್ತಿ ಹಾಗೂ ಕರ್ತವ್ಯಗಳು ಹಾಗೂ ವರ್ಣಾಶ್ರಮ ಧರ್ಮವೆಂದು ಹೆಸರಾದ ಸಾಮಾಜಿಕ ಮತ್ತು ಅಧ್ಯಾತ್ಮಿಕ ಮುನ್ನಡೆಯ ವ್ಯವಸ್ಥೆಯನ್ನು ಕುರಿತು ದೊರೆಯು ತಿಳಿಯ ಬಯಸಿದನು.

ನಾರಾಯಣ ದೇವನು ಮೂರ್ತಿಯೆಂಬ ಹೆಸರನ್ನೂ ಹೊಂದಿದ್ದ ದಕ್ಷ ಮಹಾರಾಜನ ಮಗಳ ಮೂಲಕ ತನ್ನ ಭಾಗಶಃ ಅವತಾರವಾದ ನರನ ರೂಪದಲ್ಲಿ ಈ ಜಗತ್ತಿನಲ್ಲಿ ಕಾಣಿಸಿಕೊಂಡನು. ಬದರೀಕಾಶ್ರಮವೆಂದು ಪ್ರಸಿದ್ಧವಾದ ಸ್ಥಳದಲ್ಲಿ ಅವನು ಈಗಲೂ ತನ್ನ ಉನ್ನತ ಕೆಲಸಗಳಲ್ಲಿ ತೊಡಗಿದ್ದಾನೆ.

ಉನ್ನತಾತ್ಮ ಭಗವಂತನು ವೈದಿಕ ಜ್ಞಾನ, ಎಲ್ಲ ಧರ್ಮಗಳ ತತ್ವಗಳ ಮೂಲ ಮತ್ತು ಹಿರಿಯ ತಜ್ಞರ ಸ್ಮರಣೆಯ ಸಾರ ಸರ್ವಸ್ವ. ಧರ್ಮದ ಈ ತತ್ವವನ್ನು ಸಾಕ್ಷಿಯೆಂಬುದಾಗಿ ಅರ್ಥ ಮಾಡಿಕೊಳ್ಳಬೇಕು. ಈ ಧಾರ್ಮಿಕ ತತ್ವದ ಆಧಾರದ ಮೇಲೆ ಒಬ್ಬರ ಬುದ್ಧಿ, ಆತ್ಮ ಹಾಗೂ ಒಬ್ಬರ ದೇಹವನ್ನೂ ಒಳಗೊಂಡಂತೆ, ಪ್ರತಿಯೊಂದೂ ತೃಪ್ತಿಯನ್ನು ಪಡೆಯುತ್ತವೆ. ಎಲ್ಲ ಮಾನವರೂ ಅನುಸರಿಸಬೇಕಾದ ಸಾಮಾನ್ಯ ತತ್ವಗಳೆಂದರೆ ಸತ್ಯಸಂಧತೆ, ಕರುಣೆ, ಕಠಿಣ ತಪಸ್ಸು, ದಿನದಲ್ಲಿ ಎರಡು ಬಾರಿ ಸ್ನಾನ, ತಾಳ್ಮೆ ಒಳಿತು ಕೆಡಕುಗಳ ಬಗ್ಗೆ ತಾರತಮ್ಯ, ಮನಸ್ಸು ಮತ್ತು ಇಂದ್ರಿಯಗಳ ನಿಯಂತ್ರಣ, ಅಹಿಂಸೆ, ಬ್ರಹ್ಮಚರ್ಯೆ, ದಾನ, ಧಾರ್ಮಿಕ ಗ್ರಂಥಗಳ ವಾಚನ, ಸರಳತೆ, ಸಂತೃಪ್ತಿ, ಋಷಿಸದೃಶರಿಗೆ ಸೇವೆ, ಕಾಲಕ್ರಮದಲ್ಲಿ ಅನಾವಶ್ಯಕ ಚಟುವಟಿಕೆಗಳ ನಿಷ್ಫಲತೆಯನ್ನು ಗಮನಿಸುವುದು, ಮೌನವಾಗಿ ಹಾಗೂ ಗಂಭೀರವಾಗಿರುವುದು ಮತ್ತು ಅನಾವಶ್ಯಕ ಮಾತುಕತೆಯಿಂದ ದೂರವುಳಿಯುವುದು, ಒಂದು ಆತ್ಮವೇ ಅಥವಾ ಶರೀರವೇ ಎಂಬುದನ್ನು ಪರಿಶೀಲಿಸುವುದು, ಪ್ರತಿಯೊಬ್ಬ ಆತ್ಮನನ್ನು ಭಗವಂತನ ಭಾಗವೆಂದು ಕಂಡು ಆಹಾರವನ್ನು ಸರಿಸಮವಾಗಿ ವಿತರಿಸುವುದು. ಪಠನ,ಪೂಜೆ, ಭಗವಂತನಿಗೆ ಗೌರವ ಸಲ್ಲಿಕೆ ಹಾಗೂ ಇಡೀ ಜೀವನವನ್ನು ಶರಣಾಗಿಸುವ ಮೂಲಕ ಭಗವಂತನ ಚಟುವಟಿಕೆಗಳನ್ನು ಕುರಿತು ಆಲಿಸುವುದು".

ಗರ್ಭದಾನ ವಿಧಿ ಮತ್ತು ಇನ್ನಿತರ ಸೂಚಿತ ಸುಧಾರಣಾ ವಿಧಾನಗಳಿಂದ ಸುಧಾರಿಸಿಕೊಂಡವರು, ವೈದಿಕ ಮಂತ್ರಗಳನ್ನು ಅಡೆತಡೆಯಿಲ್ಲದೆ ನೆರವೇರಿಸಿದವರು ಹಾಗೂ ಬಹ್ಮದೇವನಿಂದ ಅಂಗೀಕೃತಗೊಂಡವರು ದ್ವಿಜರು. ಅಂಥ ಬ್ರಾಹ್ಮಣರು, ಕ್ಷತ್ರಿಯರು ಹಾಗೂ ವೈಶ್ಯರು, ತಮ್ಮ ಕುಟುಂಬ ಪರಂಪರೆ ಹಾಗೂ ತಮ್ಮ ವರ್ತನೆಯ ಮೂಲಕ ಪರಿಶುದ್ಧಗೊಂಡವರು ಭಗವಂತನನ್ನು ಆರಾಧಿಸಬೇಕು, ವೇದಗಳನ್ನು ಅಧ್ಯಯನ ಮಾಡಬೇಕು ಹಾಗೂ ದಾನ ಸಲ್ಲಿಸಬೇಕು. ಈ ವ್ಯವಸ್ಥೆಯಲ್ಲಿ ಅವರು ನಾಲ್ಕು ಆಶ್ರಮಗಳ ತತ್ತ್ವವನ್ನು ಅನುಸರಿಸಬೇಕು.

ಕ್ಷತ್ರಿಯನು ದಾನವನ್ನು ಸ್ವೀಕರಿಸಬಾರದು. ದೊರೆಯು ಬ್ರಾಹ್ಮಣರ ಮೇಲೆ ತೆರಿಗೆಗಳನ್ನು ವಿಧಿಸಕೂಡದಾದರೂ, ಇನ್ನಿತರ ಪ್ರಜೆಗಳ ಮೇಲೆ ಕನಿಷ್ಠ ತೆರಿಗೆ, ಕರಗಳು ಹಾಗೂ ದಂಡವನ್ನು ವಿಧಿಸುವ ಮೂಲಕ ತನ್ನ ಜೀವನೋಪಾಯವನ್ನು ಕಲ್ಪಿಸಿಕೊಳ್ಳಬೇಕು. ವೈಶ್ಯರು ವ್ಯವಸಾಯ, ವ್ಯಾಪಾರ ಹಾಗೂ ಗೋಸಂರಕ್ಷಣೆ ಇಂಥ ವೃತ್ತಿಗಳಲ್ಲಿ ತೊಡಗಬೇಕು. ಶೂದ್ರರು ಇನ್ನಿತರ ಸೇವೆಯಲ್ಲಿ ನಿರತರಾಗಿರಬೇಕು.

ಬ್ರಾಹ್ಮಣರ ಚಿಹ್ನೆಗಳೆಂದರೆ : "ಮನಸ್ಸು ಮತ್ತು ಬುದ್ಧಿಯ ನಿಯಂತ್ರಣ, ಕಠಿಣ ತಪಸ್ಸು, ಶುಚಿ, ಸಂತೃಪ್ತಿ ಮತ್ತು ಕ್ಷಮಾಗುಣ, ಸರಳತೆ, ಜ್ಞಾನ, ಕರುಣೆ, ಸತ್ಯಸಂಧತೆ ಮತ್ತ ಭಗವಂತನಿಗೆ ಸಂಪೂರ್ಣ ಶರಣಾಗತಿ".

ಕ್ಷತ್ರಿಯರು : ಯುದ್ಧದಲ್ಲಿ ನಿಪುಣರು, ಅಜೇಯರು, ತಾಳ್ಮೆಯುಳ್ಳವರು, ಸವಾಲನ್ನು ಎದುರಿಸಬಲ್ಲವರು, ದಾನಿಗಳು, ಶಾರೀರಿಕ ಅಗತ್ಯಗಳನ್ನು ನಿಯಂತ್ರಿಸಿಕೊಳ್ಳುವವರು, ಕ್ಷಮಾಗುಣವುಳ್ಳವರು, ಬ್ರಾಹ್ಮಣರ ಸ್ವಭಾವಕ್ಕೆ ಹೊಂದಿಕೊಳ್ಳುವವರು, ಸದಾ ಸಂತೋಷ ಚಿತ್ತರು ಹಾಗ ಸತ್ಯಸಂಧರು.

ವೈಶ್ಯರು : ದೈವಭಕ್ತರು, ಧಾರ್ಮಿಕ ತತ್ತ್ವಗಳು, ಆರ್ಥಿಕ ಅಭಿವೃದ್ಧಿ ಮತ್ತು ಇಂದ್ರಿಯ ತೃಪ್ತಿ ಇವುಗಳಿಗೆ ಸಂಬಂಧಿಸಿದಂತೆ ಮುಂದುವರಿಯಲು ಶ್ರಮಿಸುವವರು, ಧರ್ಮಗ್ರಂಥಗಳಲ್ಲಿ ನಂಬಿಕೆ ಉಳ್ಳವರು ಮತ್ತು ಹಣ ಗಳಿಕೆಯಲ್ಲಿ ನಿಷ್ಣಾತರು.

ಶೂದ್ರರು ದೈವಭಕ್ತರು, ಶುಚಿರ್ಭೂತರು, ವಂಚನೆಯಿಲ್ಲದೆ ದುಡಿಯುವವರು, ಕಳವು ಮಾಡದವರು ಹಾಗೂ ಸತ್ಯವಂತರು.

ಮಡದಿಯೊಬ್ಬಳ ಕರ್ತವ್ಯಗಳನ್ನು ವಿವರಿಸಿದ ನಾರದ ಮುನಿಯು ಅವಳು ಪತಿಯ ಹಿತವನ್ನು ಕಾಪಾಡುತ್ತಾ ಅವನಿಗೆ ಸೇವೆ ಸಲ್ಲಿಸಬೇಕೆಂದು, ಪತಿಯ ಬಂಧು ಬಾಂಧವರ ಬಗ್ಗೆ ವಿಶ್ವಾಸದಿಂದ ಇರಬೇಕೆಂದನು. ಅವಳು ಯಾವಾಗಲೂ ಶುಚಿರ್ಭೂತಳಾಗಿದ್ದು, ಉತ್ತಮ ಉಡುಪುಗಳನ್ನು ಧರಿಸಿ ಪ್ರೇಮಮಯಿಯಾಗಿರಬೇಕು. ಆಸೆಬುರುಕಳಾಗಿರಬಾರದು. ಆದರೆ ಮನೆಗೆಲಸದಲ್ಲಿ ನಿಪುಣಳಾಗಿರಬೇಕು.

ವಿಧ್ಯಾರ್ಥಿಯೊಬ್ಬನು ನೆರವೇರಿಸಬೇಕಾದ ಕೆಲಸಗಳನ್ನು ಕುರಿತು ವಿವರಿಸುತ್ತಾ ನಾರದ ಮುನಿಯು ಅವನು ತನ್ನ ಇಂದ್ರಿಯಗಳನ್ನು ನಿಂಯತ್ರಿಸಿಕೊಳ್ಳಲು ಅಭ್ಯಸಿಸಬೇಕು

ಎಂದನು. ಅವನು ವಿಧೇಯನಾಗಿದ್ದು ಅಧ್ಯಾತ್ಮಿಕ ಗುರುವಿನೊಂದಿಗೆ ಅಚಲ ಸ್ನೇಹದಿಂದಿರಬೇಕು. ಮುಂಜಾನೆ ಹಾಗೂ ಸಂಜೆ ಸಮಯಗಳಲ್ಲಿ ಗಾಯತ್ರಿ ಮಂತ್ರವನ್ನು ಪಠಿಸಬೇಕು. ಮುಸ್ಸಂಜೆಯಲ್ಲಿ ಇದನ್ನು ಹೇಳಿಕೊಳ್ಳಬೇಕು. ಗುರುವಿನ ಬಗ್ಗೆ ಗೌರವ ದಿಂದಿರಬೇಕು. ಅವನು ಕೋಮಲನಾಗಿ, ಸದ್ವರ್ತನೆಯುಳ್ಳವನಾಗಿ ಕ್ರಿಯಾಶೀಲ ನಾಗಿರಬೇಕು.

ವಾನಪ್ರಸ್ಥಾಶ್ರಮಿಗಳು ಕಳಿತ ಹಣ್ಣುಗಳನ್ನುಳಿದು ಮತ್ತೇನನ್ನೂ ಸೇವಿಸ ಕೂಡದೆಂಬುದಾಗಿ ನಾರದ ಮುನಿಯು ತಿಳಿಸಿದನು. ಅವರು ಗುಡಿಸಲು ಅಥವಾ ಗುಹೆಯಲ್ಲಿ ವಾಸಮಾಡಬೇಕು. ಚಳಿ, ಬಿಸಿಲು, ಮಳೆ ಇವನ್ನು ಸಹಿಸಿಕೊಳ್ಳಬೇಕು. ಆಲೋಚನಾಮಗ್ನನಾಗಿರಬೇಕು. ಆಲೋಚನಾಮಗ್ನನಾದ ವಾನಪ್ರಸ್ಥಿಯೊಬ್ಬ ಅರಣ್ಯದಲ್ಲಿ ಹನ್ನೆರಡು, ಎಂಟು, ನಾಲ್ಕು ಮತ್ತು ಎರಡು ವರ್ಷಗಳು ಅಥವಾ ಕನಿಷ್ಠ ಪಕ್ಷ ಒಂದು ವರ್ಷವಾದರೂ ಉಳಿಯಬೇಕು. ಅವನಿಗೆ ತೊಂದರೆಯುಂಟಾಗಬಾರದು. ಅವನು ವೃದ್ಧನಾಗಿ ಅಧ್ಯಾತ್ಮಿಕ ಮುನ್ನಡೆಗೆ ಅಗತ್ಯವಾದ ಕರ್ತವ್ಯಗಳನ್ನು ಮಾಡಲು ಅಸಮರ್ಥ ನಾದಾಗ ಅವನು ಉಪವಾಸವನ್ನು ಕೈಗೊಳ್ಳಬೇಕು. ಒಬ್ಬಾತ ಕಾಲಕ್ರಮೇಣ ತನ್ನ ಐಹಿಕ ಶರೀರವನ್ನು ಮಣ್ಣು, ನೀರು, ಅಗ್ನಿ, ವಾಯು ಮತ್ತು ಅಂತರಿಕ್ಷ ಈ ಪಂಚಭೂತಗಳಲ್ಲಿ ಲೀನವಾಗಿಸಬೇಕು.

## ಪರಿಪೂರ್ಣ ವ್ಯಕ್ತಿಯ ವರ್ತನೆ

ಅಧ್ಯಾತ್ಮಿಕ ತಿಳಿವಳಿಕೆಯನ್ನು ಅಭ್ಯಾಸ ಮಾಡಿಕೊಳ್ಳಬೇಕಾದ ವ್ಯಕ್ತಿಯೊಬ್ಬನು ಎಲ್ಲ ಐಹಿಕ ಸಂಪರ್ಕಗಳನ್ನು ತ್ಯಜಿಸಬೇಕು ಮತ್ತು ಒಂದು ಸ್ಥಳದಿಂದ ಮತ್ತೊಂದು ಕಡೆಗೆ ಪ್ರಯಾಣ ಬೆಳೆಸಬೇಕು. ಸನ್ಯಾಸಿಯೊಬ್ಬನು ತನ್ನ ಶಾರೀರಿಕ ಅಗತ್ಯಗಳಿಗಾಗಿ ಯಾರನ್ನೂ ಅವಲಂಬಿಸಕೂಡದು. ಅವನು ದಂಡ ಹಾಗೂ ಕಮಂಡಲವನ್ನುಳಿದು ಏನನ್ನೂ ಹೊಂದಿರಕೂಡದು. ಪ್ರತಿಯೊಂದನ್ನು ಆವರಿಸಿರುವ ಪರಮಾತ್ಮನನ್ನು ಕಾಣಲು ಮಾತ್ರ ಅವನು ಸದಾ ಪ್ರಯತ್ನಿಸಬೇಕು.

ಜೀವನದ ನಿಯಂತ್ರಿತ ಹಾಗೂ ವಿಮುಕ್ತ ಘಟ್ಟಗಳು ಕೇವಲ ಭ್ರಮೆ ಎಂಬುದನ್ನು ಸನ್ಯಾಸಿಯೊಬ್ಬ ಅರಿಯಬೇಕು. ಶಿಷ್ಯರನ್ನು ಕೂಡಿಸಿಕೊಳ್ಳಲು ಅವನು ಅವರಿಗೆ ಐಹಿಕ ಲಾಭಗಳ ಆಮಿಷ ತೋರಿಸಕೂಡದಲ್ಲದೆ, ಹೊಟ್ಟೆ ಹೊರೆಯುವುದಕ್ಕಾಗಿ ಅನೇಕ ಪುಸ್ತಕಗಳನ್ನು ಓದಬಾರದು ಅಥವಾ ಪ್ರವಚನಗಳನ್ನು ನೀಡಬಾರದು. ಅವನೆಂದೂ ಐಹಿಕ ಸಮೃದ್ಧಿಯನ್ನು ಅನಾವಶ್ಯಕವಾಗಿ ಬೆಳೆಸಲು ಪ್ರಯತ್ನಿಸಬಾರದು.

ಮೇಧಾವಿ ಮತ್ತು ಪ್ರಜ್ಞಾವಂತನಾದವನೊಬ್ಬ ಐಹಿಕ ಅಸ್ತಿತ್ವ ಕೇವಲ ಒಂದು ಭ್ರಮೆಯೆಂಬುದನ್ನು ಅರಿಯಬೇಕು. ಆತ್ಮಸಾಕ್ಷತ್ಕಾರದಿಂದ ಮಾತ್ರ ಇದು ಸಾಧ್ಯ. ಆತ್ಮಸಾಕ್ಷಾತ್ಕಾರಗೊಂಡ ವ್ಯಕ್ತಿಯು ಸತ್ಯವನ್ನು ಕಂಡವನಾಗಿದ್ದು ಎಲ್ಲ ಐಹಿಕ ಚಟುವಟಿಕೆಗಳಿಂದಲೂ ನಿವೃತ್ತಿಯನ್ನು ಪಡೆಯಬೇಕು.

ಮಹಾರಾಜ ಯುಧಿಷ್ಠಿರನು ನಾರದ ಮುನಿಯನ್ನು ಕೇಳಿದನು : "ಎಲೈ ಒಡೆಯನೇ, ಎಲೈ ಮಹಾಮುನಿಯೇ, ಜೀವನದ ಗುರಿಯೇನು ಎಂಬುದನ್ನು ತಿಳಿಯದೆಯೇ ಗ್ರಹಗಳಲ್ಲಿ ವಾಸವಾಗಿರುವ ನಮ್ಮಂಥವರೂ ವೇದಗಳು ನೀಡಿರುವ ಸೂಚನೆಯನ್ವಯ ಹೇಗೆ ಸುಲಭವಾಗಿ ಆತ್ಮಸಾಕ್ಷಾತ್ಕಾರ ಮಾಡಿಕೊಳ್ಳಬಹುದು ಎಂಬುದನ್ನು ದಯವಿಟ್ಟು ವಿವರಿಸು".

ನಾರದ ಮುನಿಯು ಉತ್ತರಿಸಿದನು : " ನನ್ನ ಪ್ರೀತಿಯ ದೊರೆಯೇ, ಗೃಹಸ್ಥನಾಗಿ ಮನೆಗಳಲ್ಲಿ ವಾಸವಾಗಿರುವವರು ತಾವೇ ತಮ್ಮ ಜೀವನೋಪಾಯವನ್ನು ಮಾಡಿಕೊಳ್ಳಬೇಕು. ತಮ್ಮ ಕೆಲಸಗಳಿಂದ ದೊರೆತ ಫಲಗಳನ್ನು ತಾವೇ ಅನುಭವಿಸಲು ಪ್ರಯತ್ನಿಸುವುದಕ್ಕೆ ಬದಲಾಗಿ ಈ ಫಲಗಳನ್ನು ಶ್ರೀ ಕೃಷ್ಣ ಪರಮಾತ್ಮನಿಗೆ ನೀಡಬೇಕು. ಭಗವಂತನ ಹಿರಿಯ ಭಕ್ತರೊಂದಿಗೆ ಸಂಪರ್ಕವನ್ನು ಬೆಳೆಸಿಕೊಳ್ಳುವ ಮೂಲಕ ಈ ಬದುಕಿನಲ್ಲಿ ವಾಸುದೇವನನ್ನು ಹೇಗೆ ಸಂತೃಪ್ತಗೊಳಿಸಬೇಕು ಎಂಬುದನ್ನು ಸಂಪೂರ್ಣವಾಗಿ ಅರ್ಥಮಾಡಿಕೊಳ್ಳಬಹುದು.

ಗೃಹಸ್ಥನೊಬ್ಬನು ಮತ್ತೆ ಮತ್ತೆ ಋಷಿಸದೃಶ ವ್ಯಕ್ತಿಗಳೊಂದಿಗೆ ಸಂಪರ್ಕವನ್ನು ಹೊಂದಿ, ಭಗವಂತನ ಚಟುವಟಿಕೆಗಳು ಹಾಗೂ ಅವನ ಅವತಾರಗಳನ್ನು ಕುರಿತು ಆಲಿಸಬೇಕು. ಒಬ್ಬನು ಕ್ರಮೇಣ ತನ್ನ ಮಡದಿ ಮಕ್ಕಳ ಮೇಲಿನ ವಿಶ್ವಾಸದಿಂದ ವಿರಕ್ತನಾಗಿ, ಕನಸೊಂದರಿಂದ ಎಚ್ಚೆತ್ತ ಮಾನವನಂತಾಗಬೇಕು. ಅವಶ್ಯಕತೆ ಇದ್ದಷ್ಟನ್ನು ಮಾತ್ರ ಗಳಿಸಬೇಕು. ಶರೀರ ಹಾಗೂ ಆತ್ಮವನ್ನು ಮುನ್ನಡೆಸಲು ಅಗತ್ಯವಾದಷ್ಟಕ್ಕೆ ಮಾತ್ರ ಅವನು ಒಡೆಯನಾಗಿರಬೇಕು. ಪಶುಪಕ್ಷಿಗಳನ್ನು ತನ್ನ ಮಕ್ಕಳಂತೆ ನೋಡಿಕೊಳ್ಳಬೇಕು. ಪ್ರತಿದಿನವೂ ಭಗವಂತನನ್ನು ಪೂಜಿಸಬೇಕು. ಪ್ರಶಸ್ತವಾದ ದಿನಗಳಂದು ಶ್ರಾದ್ಧ ಮತ್ತು ಇನ್ನಿತರ ವಿಧಿಗಳಿಗೆ ಸಂಬಂಧಿಸಿದಂತೆ ತನ್ನೆಲ್ಲ ಕರ್ತವ್ಯಗಳನ್ನು ನೆರವೇರಿಸಬೇಕು.

ಚರಾಚರ ವಸ್ತುಗಳೆಲ್ಲವೂ ಯಾರಲ್ಲಿ ವಿಶ್ರಮಿಸಿವೆಯೋ ಹಾಗೂ ಪ್ರತಿಯೊಂದು ಯಾರಿಂದ ಒದಗಿದೆಯೋ ಅಂಥ ಭಗವಂತನಿಗೆ ಸರ್ವವನ್ನೂ ನೀಡಬೇಕೆಂಬುದಾಗಿ ಪ್ರಾಜ್ಞರೆಲ್ಲರೂ ಹೇಳಿದ್ದಾರೆಂದು ನಾರದ ಮುನಿಯು ನುಡಿದನು.

ತನ್ನ ಮಾತನ್ನು ನಾರದ ಮುನಿಯು ಮುಂದುವರಿಸಿ ಬ್ರಾಹ್ಮಣರಲ್ಲಿ ಕೆಲವರು ಫಲಪ್ರದ ಚಟುವಟಿಕೆಗಳಲ್ಲಿ ತೊಡಗಿದ್ದು, ಕೆಲವರು ವಿಧಿ ತಪಸ್ಸುಗಳನ್ನು ಪೂರೈಸುತ್ತಿದ್ದು, ಮಿಕ್ಕವರು ವೈದಿಕ ಅಧ್ಯಯನದಲ್ಲಿ ತೊಡಗಿದ್ದಾರೆಂದನು. ಕೆಲವರು, ಹೇಗಾದರೂ ವಿವಿಧ ಯಾಗಗಳ ಬಗ್ಗೆ ತಿಳಿವಳಿಕೆಯನ್ನು ಹೊಂದಿ ಅವನ್ನು ಅದರಲ್ಲೂ ಭಕ್ತಿಚರ್ಯೆಯನ್ನು ಅಭ್ಯಸಿಸುತ್ತಿದ್ದಾರೆ ಎಂದನು.

ನಿರ್ವಿಕಾರ ಏಕತತ್ತ್ವವಾದಕ್ಕೆ ಬದ್ಧರಾದ ಬ್ರಾಹ್ಮಣರಿಗೆ ತನ್ನ ಹಾಗೂ ತನ್ನ ಪಿತೃಗಳ ವಿಮುಕ್ತಿಯನ್ನು ಬಯಸುವ ಒಬ್ಬಾತನು ದಾನ ಧರ್ಮಗಳನ್ನು ನೀಡಬೇಕು. ಪವಿತ್ರ ಕಾಲ ಮತ್ತು ಸ್ಥಳದಲ್ಲಿ ದೊರೆಯುವ ಪ್ರತಿ ಅವಕಾಶದಲ್ಲೂ ಪ್ರೀತಿಪೂರ್ವಕವಾಗಿ ತುಪ್ಪದಿಂದ ತಯಾರಿಸಿದ ಆಹಾರವನ್ನು ಭಗವಂತನಿಗೆ ನೀಡಬೇಕು. ಧಾರ್ಮಿಕ ತತ್ತ್ವಗಳನ್ನು ಅರಿತವರ್‍ಯಾರೂ ಎಂದೂ ಶ್ರಾದ್ಧದ ದಿನದಂದು ಮಾಂಸ, ಮೊಟ್ಟೆ ಅಥವಾ

ಮೀನನ್ನು ನೀಡಬಾರದು. ಉನ್ನತ ಧರ್ಮದಲ್ಲಿ ಮುನ್ನಡೆಯಲು ಬಯಸುವಂಥ ವ್ಯಕ್ತಿಗಳು ಇನ್ನಿತರ ಜೀವಿಗಳ ಬಗ್ಗೆ ಶತೃತ್ವವನ್ನು ತ್ಯಜಿಸಬೇಕೆಂದು ಬೋಧಿಸಲಾಗಿದೆ. ಇದಕ್ಕಿಂತಲೂ ಹಿರಿದಾದ ಧರ್ಮವು ಮತ್ಯಾವುದೂ ಇಲ್ಲ.

ಅಧರ್ಮಕ್ಕೆ ಸಂಬಂಧಿಸಿದಂತೆ ಐದು ಶಾಖೆಗಳಿವೆ. ಅವೆಂದರೆ, ವಿಧರ್ಮ, ಪರಧರ್ಮ, ಅಭಾಸ, ಉಪಧರ್ಮ, ಛಲಧರ್ಮ, ಅಧಾರ್ಮಿಕತೆ, ಅನರ್ಹತೆ, ಸೋಗು, ಸಾದೃಶ್ಯ ಹಾಗೂ ಮೋಸ ಇವನ್ನೊಳಗೊಂಡವು. ಈ ಅಧರ್ಮಗಳನ್ನು ನಿಜವಾದ ಧಾರ್ಮಿಕ ಜೀವನವನ್ನು ಬಲ್ಲವನು ತ್ಯಜಿಸಬೇಕು.

ತನ್ನದೇ ಧರ್ಮವನ್ನು ಅನುಸರಿಸಲು ಒಬ್ಬಾತನಿಗೆ ಅಡ್ಡಿಯನ್ನು ಉಂಟು ಮಾಡುವಂಥ ಧಾರ್ಮಿಕ ತತ್ವಗಳು ವಿಧರ್ಮ. ಇನ್ನಿತರರು ಪರಿಚಯಿಸಿದ ಧಾರ್ಮಿಕ ತತ್ವಗಳು ಪರ ಧರ್ಮ. ಸುಳ್ಳು ಜಂಭವನ್ನು ಹೊಂದಿದ್ದು ವೈದಿಕ ತತ್ವಗಳನ್ನು ವಿರೋಧಿಸುವವನು ಸೃಷ್ಟಿಸಿರುವ ಹೊಸ ಬಗೆಯ ಧರ್ಮವು ಉಪಧರ್ಮ. ಮಾತುಗಾರಿಕೆಯ ಮೂಲಕ ವ್ಯಾಖ್ಯಾನಿಸಲ್ಪಟ್ಟಿರುವುದು ಛಲಧರ್ಮ. ತನ್ನ ಜೀವನದ ಸೂಚಿತ ಕರ್ತವ್ಯಗಳನ್ನು ಪ್ರಜ್ಞಾಪೂರ್ವಕವಾಗಿಯೇ ನಿರ್ಲಕ್ಷಿಸುವವನಿಂದ ಪ್ರಾರಂಭಿಸುವ ಧಾರ್ಮಿಕ ಪದ್ಧತಿಯೇ ಅಭಾಸ.

ಹಸಿವು ಬಾಯಾರಿಕೆಗಳಿಂದಾಗಿ ಉಂಟಾದ ಶಾರೀರಿಕ ಹಂಬಲ ಮತ್ತು ಅಗತ್ಯಗಳಿಗೆ ಸಂಬಂಧಿಸಿದ ಬಾಧೆಗಳು ಆಹಾರ ಸೇವನೆಯಿಂದ ಸಂತೃಪ್ತಗೊಳ್ಳುತ್ತವೆ. ಅಂತೆಯೇ ಒಬ್ಬನು ತುಂಬಾ ಕೋಪಗೊಂಡರೆ, ಶಿಕ್ಷೆ ಮತ್ತು ಇನ್ನಿತರ ಪ್ರತಿಕ್ರಿಯೆಗಳ ಮೂಲಕ ಅದು ಶಮನವಾಗುತ್ತವೆ. ಆದರೆ ದುರಾಸೆಯುಳ್ಳವನು ಜಗತ್ತಿನ ಎಲ್ಲ ದಿಕ್ಕುಗಳನ್ನು ಜಯಿಸಿ ಜಗತ್ತಿನ ಪ್ರತಿಯೊಂದನ್ನು ಅನುಭವಿಸಿದ್ದರೂ ಅವನ ದುರಾಸೆಯು ಮಾತ್ರ ತೃಪ್ತಿ ಹೊಂದುವುದಿಲ್ಲ.

ನಾರದ ಮುನಿಯು ಹೇಳಿದನು: "ಎಲೈ ಯುಧಿಷ್ಠಿರನೇ, ವೈವಿಧ್ಯಮಯ ಅನುಭವವಿರುವವರು, ಅನೇಕ ಕಾನೂನು ಪಂಡಿತರು, ಅನೇಕ ಪ್ರಾಜ್ಞರು ಹಾಗೂ ವಿಚಾರವಂತ ಸಭೆಗಳಿಗೆ ಅರ್ಹತೆಯನ್ನು ಪಡೆಯುವವರು ತಮ್ಮ ಸ್ಥಾನಗಳಿಂದ ಸಂತೃಪ್ತಿಯನ್ನು ಅನುಭವಿಸದೆ ನರಕಸದೃಶ ಜೀವನಕ್ಕೆ ಕುಸಿದು ಬೀಳುತ್ತಾರೆ. ನಿಶ್ಚಲ ಮನೋಭಾವದಿಂದ ಯೋಜನೆಗಳನ್ನು ರೂಪಿಸಿರುವ ಮೂಲಕ ಒಬ್ಬರು ಇಂದ್ರಿಯ ಸಾರ್ಥಕತೆಗಾಗಿ ಕಾಮುಕ ಆಸೆಗಳನ್ನು ತ್ಯಜಿಸಬೇಕು. ಅದರಂತೆಯೇ ಶತೃತ್ವವನ್ನು ಬಿಡುವ ಮೂಲಕ ಕೋಪವನ್ನು ಜಯಿಸಿ, ಐಶ್ವರ್ಯವನ್ನು ಸಂಗ್ರಹಿಸಿಕೊಳ್ಳುವುದ ರಿಂದಾಗಿ ಉಂಟಾಗುವ ತೊಂದರೆಗಳನ್ನು ಚರ್ಚಿಸುವ ಮೂಲಕ ದುರಾಸೆಯನ್ನು ಬಿಟ್ಟು, ಸತ್ಯವನ್ನು ಕುರಿತು ಸಮಾಲೋಚಿಸುವ ಮೂಲಕ ಭಯವನ್ನು ಬಿಡಬೇಕು.

ಧಾರ್ಮಿಕ ಆಡಂಬರಗಳು, ಕ್ರಮಬದ್ಧ ತತ್ವಗಳು, ವಿಧಿವಿಧಾನಗಳು ಮತ್ತು ಯೋಗಭ್ಯಾಸ ಇವೆಲ್ಲವೂ ಮನಸ್ಸನ್ನು ನಿಯಂತ್ರಣದಲ್ಲಿ ಇಡುವಂಥವು. ಭಗವಂತನನ್ನು

ಒಬ್ಬರು ಧ್ಯಾನಿಸುವ ಮಟ್ಟವನ್ನು ತಲುಪದ ಹೊರತು ಅಂಥ ಎಲ್ಲ ಚಟುವಟಿಕೆಗಳೂ ವ್ಯರ್ಥ ಶ್ರಮವಾಗುತ್ತವೆ.

ವೇದಗಳ ಅನ್ವಯ ಎರಡು ವಿಧವಾದ ಚಟುವಟಿಕೆಗಳಿವೆ - ಅವೆಂದರೆ ಪ್ರವೃತ್ತಿ ಮತ್ತು ನಿವೃತ್ತಿ. ಪ್ರವೃತ್ತಿಯು ಒಬ್ಬನನ್ನು ಐಹಿಕ ಜೀವನದ ಕೆಳಸ್ತರದಿಂದ ಮೇಲಿನ ಸ್ತರಕ್ಕೆ ಎತ್ತುತ್ತದೆ. ನಿವೃತ್ತಿಯೆಂದರೆ ಐಹಿಕ ಬಯಕೆಗಳನ್ನು ಕಡಿದುಕೊಳ್ಳುವುದು. ಪ್ರವೃತ್ತಿ ಚಟುವಟಿಕೆಗಳಿಂದ ಒಬ್ಬನು ಐಹಿಕ ಬಂಧನಕ್ಕೆ ಸಿಲುಕಿ ಕೊಳ್ಳುತ್ತಾನೆ. ಆದರೆ ನಿವೃತ್ತ ಚಟುವಟಿಕೆಗಳಿಂದ ಪರಿಶುದ್ಧರಾಗಿ ಶಾಶ್ವತವಾದ, ಆಹ್ಲಾದಕರ ಜೀವನವನ್ನು ಅನುಭವಿಸಲು ತಕ್ಕವರಾಗುತ್ತಾರೆ.

ನಾರದ ಮುನಿಯ ಉಪದೇಶವನ್ನು ಕೇಳಿದ ಯುಧಿಷ್ಠಿರ ಮಹಾರಾಜನು ತನ್ನ ಹೃದಯದೊಳಗೆ ಮುದಗೊಂಡವನಾಗಿ, ಉತ್ತುಂಗತ, ಪ್ರೇಮ ವಿಶ್ವಾಸಗಳಿಂದ ಕೂಡಿದವನಾಗಿ ಭಗವಂತನನ್ನು ಆರಾಧಿಸಿದನು. ನಾರದ ಮುನಿಯು ಅನಂತರ ತನ್ನ ವಾಸಸ್ಥಾನಕ್ಕೆ ಹೊರಟನು.

ಸ್ವಯಂಭು ಮನುವಿನ ಸಂತತಿಯನ್ನು ಕುರಿತು ಆಲಿಸಿದ ಪರೀಕ್ಷಿತ ರಾಜನು ಇನ್ನಿತರ ಮನುಗಳ ಸಂತತಿಗಳನ್ನು ಕುರಿತು ತಿಳಿಯ ಬಯಸಿದನು. ಆದ್ದರಿಂದ ಅವನು ಶ್ರೀ ಶುಕಾಚಾರ್ಯರಿಗೆ ಅವನ್ನು ವಿವರಿಸುವಂತೆ ಕೇಳಿಕೊಂಡನು. ಇನ್ನಿತರ ಮನ್ವಂತರಗಳಲ್ಲಿ ಭಗವಂತನ ಚಟುವಟಿಕೆಗಳನ್ನು ಕುರಿತು ಉಲ್ಲೇಖಿಸುವಂತೆಯೂ ಅವನು ಕೋರಿದನು.

ಶ್ರೀ ಶುಕಾಚಾರ್ಯರು ಹೇಳಿದರು : "ಪ್ರಸ್ತುತ ಕಲ್ಪದಲ್ಲಿ ಆರು ಮನುಗಳಿದ್ದಾರೆ. ನಾನು ನಿನಗೆ ಸ್ವಯಂಭು ಮನು ಹಾಗೂ ಅನೇಕ ಉಪದೇವತೆಗಳನ್ನು ಕುರಿತು ವಿವರಿಸಿದ್ದೇನೆ. ಈ ಬ್ರಹ್ಮದೇವನ ಕಲ್ಪದಲ್ಲಿ ಸ್ವಯಂಭು ಮನುವೇ ಪ್ರಥಮ ಮನುವು.

## ಅಧ್ಯಾಯ 12

# ಇನ್ನಿತರ ಮನುಗಳು

(ಈ ಅಧ್ಯಾಯವು ಕಾಲಕಾಲಕ್ಕೆ ಕಾಣಿಸಿಕೊಂಡಂಥ ಮನುಗಳ ಸಂತತಿಗಳನ್ನು ಕುರಿತು ವಿವರಿಸುತ್ತದೆ. ಗಜೇಂದ್ರ ಮೋಕ್ಷ ಮತ್ತು ಕೂರ್ಮಾವತಾರದಿಂದ ದಾಶರಥಿ ರಾಮನವರೆಗೆ ಭಗವಂತನ ವಿವಿಧ ಅವತಾರಗಳನ್ನು ಇಲ್ಲಿ ವಿವರಿಸಲಾಗಿದೆ).

ಶ್ರೀ ಶುಕಾಚಾರ್ಯರು ಮುಂದುವರಿಸಿ ಸ್ವಯಂಭು ಮನುವಿಗೆ ಅಕುತಿ ಮತ್ತು ದೇವಾಹುತಿ ಎಂಬ ಇಬ್ಬರು ಪುತ್ರಿಯರಿದ್ದರು ಎಂದು ಹೇಳಿದರು. ಅಕುತಿಯು ಯಜ್ಞಮೂರ್ತಿಗೆ ಜನ್ಮವಿತ್ತು, ದೇವಾಹುತಿಯ ಗರ್ಭದಲ್ಲಿ ಕಪಿಲನು ಜನಿಸಿದನು. ಇವರಿಗೆ ಧರ್ಮ ಮತ್ತು ಜ್ಞಾನವನ್ನು ಬೋಧಿಸುವಂತೆ ಆದೇಶಿಸಲಾಯಿತು.

ಸ್ವಯಂಭು ಮನುವು, ಪ್ರಾಕೃತಿಕವಾಗಿಯೇ, ಇಂದ್ರಿಯಗಳೊಂದಿಗೆ ಸಂಬಂಧವನ್ನು ಹೊಂದಿರಲಿಲ್ಲ. ಅವನು ತನ್ನ ರಾಜ್ಯವನ್ನು ತ್ಯಜಿಸಿ, ತಪಸ್ಸನ್ನು ಆಚರಿಸಲು ತನ್ನ ಪತ್ನಿ ಶತರೂಪಳೊಂದಿಗೆ ಅರಣ್ಯವನ್ನು ಪ್ರವೇಶಿಸಿದನು. ಅಲ್ಲಿ ಸುನಂದಾ ನದಿಯ ತೀರದಲ್ಲಿ ಅವನು ಒಂದು ನೂರು ವರ್ಷಗಳ ಕಾಲ ಕಠಿಣ ತಪಸ್ಸುಗಳನ್ನು ಕೈಗೊಂಡನು. ಈ ತಪಸ್ಸುಗಳನ್ನು ಆಚರಿಸುತ್ತಿದ್ದ ಸಂದರ್ಭದಲ್ಲಿ ಭಗವಂತನು ವಿಶ್ವವನ್ನು ನಿರ್ಮಿಸಿದನೇ ಹೊರತು, ವಿಶ್ವವು ಅವನನ್ನು ಸೃಷ್ಟಿಸಲಿಲ್ಲ. ಜೀವಿಗೆ ಅವನ ಬಗ್ಗೆ ತಿಳಿದಿರದಿದ್ದರೂ, ಭಗವಂತನಿಗೆ ಪ್ರತಿಯೊಂದರ ಬಗ್ಗೆಯೂ ತಿಳಿದಿತ್ತು. ಭಗವಂತನು ಚರಾಚರ ವಸ್ತುಗಳೆಲ್ಲವುಗಳಲ್ಲೂ ವಾಸವಾಗಿದ್ದನು. ಮನುವು ಯಾರೊಬ್ಬರಾದರೂ ತಮಗೆ ಯಾವುದನ್ನು ನೀಡಲಾಗಿದೆಯೋ ಅದನ್ನು ಮಾತ್ರ ಸ್ವೀಕರಿಸಬೇಕೆಂದು ಉಪದೇಶಿಸಿದನು. ಇನ್ನಿತರರ ಸ್ವತ್ತನ್ನು ಅಪಹರಿಸಲು ಯಾರೂ ಬಯಸಬಾರದು. ಭಗವಂತನನ್ನು ತಾನೇ ನೋಡಲಾಗದಿದ್ದರೂ, ಜಗತ್ತಿನ ಚಟುವಟಿಕೆಗಳನ್ನು ತಾನು ಕಂಡೆನೆಂದು ಸ್ವಯಂಭು ಮನುವು ತಿಳಿಸಿದನು. ಆದ್ದರಿಂದ ಎಲ್ಲರೂ ಭಗವಂತನನ್ನು ಆರಾಧಿಸಬೇಕೆಂದು ಅವನು ತಿಳಿಸಿದನು. ಭಗವಂತನಿಗೆ ಆದಿ, ಮಧ್ಯೆ, ಅಂತ್ಯಗಳಿಲ್ಲ. ಅವನು ಪರಮ ಸತ್ಯ ಮತ್ತು ಔನ್ನತ್ಯದಲ್ಲಿ ಪರಿಪೂರ್ಣನು (ಬ್ರಹ್ಮಸಂಹಿತೆ 5.1. ಗೋವಿಂದನೆಂಬುದಾಗಿ ಕರೆಯಲ್ಪಟ್ಟ ಶ್ರೀ ಕೃಷ್ಣನು ಉನ್ನತ ನಿಯಂತ್ರಕನು. ಅವನಿಗೆ ಶಾಶ್ವತವಾದ, ಆಹ್ಲಾದಕರವಾದ, ದೈವಿಕ ಶರೀರವಿದೆ. ಅವನು ಎಲ್ಲವುಗಳಿಗೂ ಮೂಲ. ಎಲ್ಲಕ್ಕೂ ಕಾರಣೀಭೂತನಾದವನು. ಆದ್ದರಿಂದಲೇ ಅವನಿಗೆ ಮತ್ಯಾವ ಹುಟ್ಟೂ ಇಲ್ಲ) "ಆದ್ದರಿಂದ ಫಲಪ್ರದ ಚಟುವಟಿಕೆಗಳಿಂದ ಸೋಂಕಿಸಲ್ಪಡದೆ ಇರುವಂಥ ಚಟುವಟಿಕೆಗಳನ್ನು ತಲಪಲು, ಉನ್ನತ ಮುನಿಗಳು ಮೊದಲು ಜನರನ್ನು ಫಲಪ್ರದ ಚಟುವಟಿಕೆಗಳಲ್ಲಿ ತೊಡಗಿಸುತ್ತಾರೆ. ಏಕೆಂದರೆ ಒಬ್ಬನು ಶಾಸ್ತ್ರಗಳಲ್ಲಿ ಶಿಫಾರಸು ಮಾಡಲಾದಂಥ ಚಟುವಟಿಕೆಗಳನ್ನು ನೆರವೇರಿಸಲು ಪ್ರಾರಂಭಿಸಿದ ಹೊರತು ಅವರು ಯಾವ ಪ್ರತಿಕ್ರಿಯೆಯನ್ನು ಉಂಟು

ಮಾಡಲಾರದಂಥ ಮೋಕ್ಷ ಅಥವಾ ಚಟುವಟಿಕೆಯ ಹಂತವನ್ನು ತಲಪಲಾಗದೆಂದು" ಸ್ವಯಂಭು ಮನುವು ಹೇಳಿದನು.

ಸ್ವಯಂಭು ಮನುವು ಧ್ಯಾನಮಗ್ನನಾಗಿ ಕಠಿಣ ತಪಸ್ಸನ್ನು ಆಚರಿಸುತ್ತಿದ್ದ ಸಂದರ್ಭದಲ್ಲಿ ಉಪನಿಷತ್ತುಗಳೆಂದು ಕರೆಯಲಾದ ವೈದಿಕ ಸೂಚನೆಗೆಳಿಗೆ ಸಂಬಂಧಿಸಿದ ಮಂತ್ರಗಳನ್ನು ಪಠಿಸುತ್ತಿದ್ದನು. ಇದನ್ನು ಕಂಡ ದಾನವರು ಮನುವನ್ನು ನಾಶಗೊಳಿಸಲು ಬಯಸಿದಾಗ ವಿಷ್ಣು ಪರಮಾತ್ಮನು ಅವರನ್ನು ಸಂಹರಿಸಿ, ಇಂದ್ರನ ಸ್ಥಾನವನ್ನು ಪಡೆದುಕೊಂಡು, ಸ್ವರ್ಗದ ರಾಜಧಾನಿಯ ಆಳ್ವಿಕೆಯನ್ನು ಪ್ರಾರಂಭಿಸಿದನು.

ಅಗ್ನಿದೇವನ ಪುತ್ರನಾದ ಸ್ವರೋಚಿತನೆಂಬುವನು ಎರಡನೇ ಮನುವಾದನು. ಅವನ ಅನೇಕ ಪುತ್ರರು ದ್ಯುಮತ್, ಸುಶೇಷ ಮತ್ತು ರೋಚಿಸ್ಮತನೆಂಬುವರ ನೇತೃತ್ವದಲ್ಲಿದ್ದರು. ಸ್ವರೋಚಿತನ ಆಳ್ವಿಕೆಯ ಕಾಲದಲ್ಲಿ ಯಜ್ಞನ ಪುತ್ರನಾದ ರೋಚನನು, ಇಂದ್ರನ ಸ್ಥಾನವನ್ನು ಪಡೆದುಕೊಂಡನು. ತುಸಿತಾ ಹಾಗೂ ಇತರರು ಮುಖ್ಯ ಉಪದೇವತೆಗಳಾದರು ಹಾಗೂ ಉರ್ಜ, ಸ್ಥಂಭ ಎಂಬವರು ಸಪ್ತರ್ಷಿಗಳಾದರು.

ವೇದಸರನೆಂಬುವನು ಪ್ರಖ್ಯಾತನಾದ ಮುನಿ. ಅವನ ಪತ್ನಿಯೇ ತುಸಿತ. ಅವಳ ಗರ್ಭದಲ್ಲಿ ಜನಿಸಿದವನು ವಿಭು. ಆದರೆ ವಿಭು ಬ್ರಹ್ಮಚಾರಿಯಾಗಿಯೇ ಉಳಿದು ಅವನಿಂದ ಸ್ವಯಂ ನಿಯಂತ್ರಣದ ಬಗ್ಗೆ ಇನ್ನೂ ಎಂಬತ್ತೆಂಟು ಸಾವಿರ ಮುನಿಗಳು ಉಪದೇಶವನ್ನು ಪಡೆದುಕೊಂಡರು.

ಮೂರನೆಯ ಮನುವು ಪ್ರಿಯವ್ರತ ರಾಜನ ಮಗನಾದ ಉತ್ತಮ ಎಂಬುದಾಗಿ ಶ್ರೀ ಶುಕಾಚಾರ್ಯರು ತಿಳಿಸಿದರು. ಅವನ ಪುತ್ರರೆಂದರೆ ಪಾವನ, ಶೃಂಜಯ ಮತ್ತು ಯಜ್ಞಹೋತ್ರ.

ಮೂರನೆಯ ಮನುವಿನ ಆಳ್ವಿಕೆಯಲ್ಲಿ, ಪ್ರಮೋದ ಹಾಗೂ ವಸಿಷ್ಠನ ಇತರ ಪುತ್ರರು ಸಪ್ತರ್ಷಿಗಳಾದರು. ಸತ್ಯರು, ವೇದಶೃತ ಮತ್ತು ಭದ್ರರು ಉಪದೇವತೆಗಳಾಗಿ ಸತ್ಯಜಿತನು ಇಂದ್ರನಾದನು. ಈ ಮನ್ವಂತರದಲ್ಲಿ ಭಗವಂತನು ಧರ್ಮದ ನೇತೃತ್ವ ವಹಿಸಿದ್ದು ಉಪದೇವತೆಯಾದ ಧರ್ಮನ ಪತ್ನಿಯಾದ ಸುನೃತಳ ಗರ್ಭದಲ್ಲಿ ಜನಿಸಿದನು. ಭಗವಂತನು ಸತ್ಯಸೇನನೆಂಬುದಾಗಿ ಕೊಂಡಾಡಲ್ಪಟ್ಟು ಅವನು ಸತ್ಯವ್ರತರೆಂಬ ಇತರ ಉಪದೇವತೆಗಳೊಂದಿಗೆ ಕಾಣಿಸಿಕೊಂಡನು. ಸತ್ಯಸೇನನು ಕೊಬ್ಬಿದ ಹಾಗೂ ದುರ್ವರ್ತನೆಯ ಯಕ್ಷರು, ದಾನವರು ಹಾಗೂ ಮಹಾ ಭಯಂಕರ ಜೀವಿಗಳನ್ನು ಸಂಹರಿಸಿದನು.

ಮೂರನೆಯ ಮನುವಿನ ಸೋದರನಾದ ತಾಮಸ ಎಂಬ ಹೆಸರನ್ನೂ ಹೊಂದಿದ್ದ ಉತ್ತಮನು ನಾಲ್ಕನೇ ಮನುವಾದನು. ತಾಮಸ ಮನ್ವಂತರದಲ್ಲಿ ವಿಧೃತಿಯ ಪುತ್ರರು, ವೈಧೃತಿಗಳೆಂದೂ ಹೆಸರಾದವರು ಉಪದೇವತೆಗಳಾದರು. ಕಾಲಕ್ರಮದಲ್ಲಿ ವೈದಿಕ ಅಧಿಕಾರವು ಕಣ್ಮರೆಯಾಯಿತು. ಈ ಉಪದೇವತೆಗಳು ತಮ್ಮ ಶಕ್ತಿಯಿಂದಲೇ ವೈದಿಕ ಅಧಿಕಾರವನ್ನು ಸಂರಕ್ಷಿಸಿದರು.

ಈ ಮನ್ವಂತರದಲ್ಲಿ ಭಗವಾನ್ ಮಹಾವಿಷ್ಣುವು ಹರಿಮೇಧಸ ಪತ್ನಿಯಾದ ಹರಿಣಿಯ ಗರ್ಭದಲ್ಲಿ ಜನಿಸಿ, ಹರಿಯೆಂದು ಪ್ರಸಿದ್ಧನಾದನು. ಅವನು ಮೊಸಳೆಯ ಬಾಯಿಗೆ ಸಿಕ್ಕಿದ ತನ್ನ ಭಕ್ತನಾದ ಆನೆಗಳ ರಾಜನಾದ ಗಜೇಂದ್ರನನ್ನು ಬದುಕಿಸಿದನು.

## ಗಜೇಂದ್ರ ಮೋಕ್ಷ

ಗಜೇಂದ್ರ ಮೋಕ್ಷದ ಕಥೆಯನ್ನು ಪರೀಕ್ಷಿತ ರಾಜನು ತಿಳಿಯಲು ಬಯಸಿದನು. ಮುತ್ತಿನ ಕಣಗಳನ್ನು ಹೋಲುತ್ತಿದ್ದ ಚಿಕ್ಕ ಚಿಕ್ಕ ಹರಳುಗಳಿಂದ ಆವೃತವಾದ ದಂಡೆಗಳು ಹಾಗೂ ಸ್ವಚ್ಛ ನೀರಿನಿಂದ ಕೂಡಿದ್ದ ಅನೇಕ ಸರೋವರಗಳು ಹಾಗೂ ನದಿಗಳನ್ನು ಹೊಂದಿದ್ದ ತ್ರಿಕೂಟ ಪರ್ವತವನ್ನು ಶ್ರೀ ಶುಕಾಚಾರ್ಯರು ವಿವರಿಸಿದರು. ತ್ರಿಕೂಟ ಪರ್ವತದ ಕೊನೆಯಲ್ಲಿ ಋತುಮತವೆಂಬ ಉದ್ಯಾನವಿದ್ದು ಅದು ಮಹಾನ್ ಭಕ್ತ ವರುಣನಿಗೆ ಸೇರಿತ್ತಲ್ಲದೆ ಉಪದೇವತೆಗಳ ಅಪ್ಸರೆಯರ ವಿಹಾರ ಸ್ಥಳವಾಗಿತ್ತು. ಉದ್ಯಾನದಲ್ಲಿ ಹೊಳೆಯುತ್ತಿದ್ದ ತಾವರೆಗಳು ಹಾಗೂ ಇನ್ನಿತರ ಪುಷ್ಪಗಳಿಂದ ಕೂಡಿದ ಅತಿ ದೊಡ್ಡದಾದ ಸರೋವರವಿತ್ತು.

ತ್ರಿಕೂಟ ಪರ್ವತದ ಅರಣ್ಯದಲ್ಲಿ ವಾಸವಾಗಿದ್ದ ಗಜರಾಜನು ಒಮ್ಮೆ ತನ್ನ ಹೆಣ್ಣಾನೆಗಳ ಜತೆಯಲ್ಲಿ ಸರೋವರದ ಬಳಿ ಸುತ್ತಾಡುತ್ತಿದ್ದಿತು. ಅದು ಗಿಡಬಳ್ಳಿಗಳನ್ನು ನಾಶಪಡಿಸಿತು. ಆನೆಯ ವಾಸನೆಯನ್ನು ಪತ್ತೆ ಹಚ್ಚಿದ, ಹುಲಿಗಳನ್ನೂ ಒಳಗೊಂಡಂತೆ ಇನ್ನಿತರ ದುಷ್ಟ ಮೃಗಗಳು, ಓಡಿ ಹೋದವು. ಆನೆಗಳ ರಾಜ ಸರೋವರಕ್ಕೆ ಆಗಮಿಸಿ ಮಜ್ಜನವನ್ನು ತೀರಿಸಿಕೊಂಡು ಸಾಕಷ್ಟು ನೀರನ್ನು ಕುಡಿದು ತೃಪ್ತಿ ಹೊಂದಿತು.

ದೈವನಿಯಮದಂತೆ ನೀರಿನೊಳಗಿದ್ದ ಬಲಿಷ್ಠ ಮೊಸಳೆಯು ಆನೆಯ ಕಾಲನ್ನು ಹಿಡಿದೆಳೆಯಿತು. ಶಕ್ತಿಯಿದ್ದರೂ ಆನೆಗೆ ಅದರಿಂದ ಬಿಡಿಸಿಕೊಳ್ಳಲಾಗಲಿಲ್ಲ. ಹೆದರಿದ ಇನ್ನಿತರ ಆನೆಗಳು ರೋದಿಸಲು ತೊಡಗಿದವು. ಆನೆಯು ವ್ಯರ್ಥವಾಗಿ ಸೆಣೆಸಾಡಿ ದಣಿಯಿತು. ತಾನು ಉಳಿಯುವುದಿಲ್ಲವೆಂದು ಭಾವಿಸಿದ ಆನೆಯು ಹೆಣ್ಣಾನೆಗಳಿಂದಲೂ ನೆರವು ದೊರಕಲು ಸಾಧ್ಯವಾಗದಿದ್ದಾಗ ಭಗವಂತನ ನೆರವನ್ನು ಕೋರಿ ಅವನಿಗೆ ಶರಣಾಯಿತು.

ಇಂದ್ರದ್ಯುಮ್ನನೆಂಬುದಾಗಿ ಪೂರ್ವಜನ್ಮದಲ್ಲಿ ಹೆಸರನ್ನು ಹೊಂದಿದ್ದ ಈ ಆನೆಯು ತಾನು ಆಗ ಕಲಿತಿದ್ದ ಮಂತ್ರವೊಂದನ್ನು ಸ್ಮರಿಸಿ ಸಂರಕ್ಷಿಸುವಂತೆ ಭಗವಂತನನ್ನು ಪ್ರಾರ್ಥಿಸಿತು.

ಆನೆಯು ಭಗವಂತನನ್ನು ಯಾವ ನಿರ್ದಿಷ್ಟ ಹೆಸರೂ ಇಲ್ಲದೆ ಕೊಂಡಾಡುತ್ತಿದ್ದುದರಿಂದ ಅದರ ಪ್ರಾರ್ಥನೆ ಯಾವ ಉಪದೇವತೆಯನ್ನೂ ತಲುಪಲಿಲ್ಲ. ಹೀಗಾಗಿ ಅವರು ಯಾರೂ ಅದರ ನೆರವಿಗೆ ಬರಲಿಲ್ಲ. ಕೊನೆಗೆ ಗಜೇಂದ್ರನ ಮುಂದೆ ಮಹಾನ್ ಪುರುಷೋತ್ತಮನೇ ಪ್ರತ್ಯಕ್ಷನಾದನು. ನಾರಾಯಣನು ಆಗಮಿಸುತ್ತಿರುವುದನ್ನು ಕಂಡ ಗಜೇಂದ್ರನು ತಾವರೆಯೊಂದನ್ನು ಕಿತ್ತು ಭಗವಂತನಿಗೆ ಸಮರ್ಪಿಸಿ ಅವನನ್ನು

ಕೊಂಡಾಡಿತು. ನಾರಾಯಣನು ಮೊಸಳೆಯ ಶಿರವನ್ನು ಕತ್ತರಿಸಿ ಆನೆಯನ್ನು ಮುಕ್ತಗೊಳಿಸಿದನು. ಎಂಬುದಾಗಿ ಶ್ರೀ ಶುಕಾಚಾರ್ಯರು ತಿಳಿಸಿದರು.

ಗಂಧರ್ವರಲ್ಲೆಲ್ಲ ಅತ್ಯುತ್ತಮನಾದ ಹುಹು ದೊರೆಯು ದೇವಲಮುನಿಯ ಶಾಪಕ್ಕೆ ಒಳಗಾಗಿ ಮೊಸಳೆಯಾಗಿ ಜನಿಸಿದ್ದ. ಈಗ ಭಗವಂತನಿಂದ ಮೋಕ್ಷ ದೊರೆತು ಅವನು ಸುಂದರವಾದ ಗಂಧರ್ವನ ರೂಪವನ್ನು ತಾಳಿದನು. ಅವನು ನಾರಾಯಣನಿಗೆ ಪ್ರಾರ್ಥನೆ ಸಲ್ಲಿಸಿ ಗಂಧರ್ವ ಲೋಕಕ್ಕೆ ಹಿಂತಿರುಗಿದನು. ಅವನಿಗೆ ಹೀಗೆ ಎಲ್ಲ ಪಾಪಗಳಿಂದಲೂ ಮುಕ್ತಿ ದೊರೆಯಿತು. ಭಗವಂತನಿಂದ ಸ್ಪರ್ಶಿಸಲ್ಪಟ್ಟ ಗಜೇಂದ್ರನಿಗೆ ಆ ಕ್ಷಣದಲ್ಲೇ ಐಹಿಕ ಮೌಢ್ಯತೆ ಹಾಗೂ ಬಂಧನಗಳಿಂದ ಮುಕ್ತಿ ದೊರೆಯಿತು. ಅದಕ್ಕೆ ಹೀಗೇ ಸಾರೂಪ್ಯ ಮುಕ್ತಿ ಪ್ರಧಾನವಾಗಿ ಭಗವಂತನಂತೆಯೇ ರೂಪವನ್ನು ಪಡೆದು ಹಳದಿ ಬಣ್ಣದ ವಸ್ತ್ರಗಳಿಂದ ಅಲಂಕೃತವಾಗಿ ನಾಲ್ಕು ಕೈಗಳನ್ನು ಹೊಂದಿತು.

ಗಜೇಂದ್ರನು ಪಾಂಡ್ಯರ ದೊರೆಯೆಂದು (ದಕ್ಷಿಣ ಭಾರತ) ಶ್ರೀ ಶುಕಾಚಾರ್ಯರು ತಿಳಿಸಿದರು. ಅವನು ಹಿಂದಿನ ಜನ್ಮದಲ್ಲಿ ಇಂದ್ರದ್ಯುಮ್ನ ಮಹಾರಾಜನೆಂದು ಹೆಸರಾಗಿದ್ದು ಭಗವಂತನನ್ನು ಆರಾಧಿಸುವ ಸಲುವಾಗಿ ಗೃಹಸ್ಥ ಜೀವನದಿಂದ ನಿವೃತ್ತಿ ಪಡೆದು ಆರಣ್ಯದಲ್ಲಿ ವಾಸವಾಗಿದ್ದನು. ಇಂದ್ರದ್ಯುಮ್ನನು ಧ್ಯಾನಮಗ್ನನಾಗಿದ್ದಾಗ ಅಲ್ಲಿಗೆ ಆಗಮಿಸಿದ್ದ ಅಗಸ್ತ್ಯ ಮುನಿಗೆ ಇಂದ್ರದ್ಯುಮ್ನನು ಗೌರವ ಸಲ್ಲಿಸದಿದ್ದಾಗ ಕೋಪಗೊಂಡ ಮುನಿಯು ಆನೆಯಾಗಿ ಜನಿಸುವಂತೆ ಅವನಿಗೆ ಶಾಪವನ್ನಿತ್ತಿದ್ದ. ಶಾಪವನ್ನು ಸ್ವೀಕರಿಸಿದ ದೊರೆಯು ಮರುಜನ್ಮದಲ್ಲಿ ಆನೆಯ ಶರೀರವನ್ನು ಪಡೆದರೂ ಹಿಂದಿನ ಜನ್ಮದ ಭಕ್ತಿಪೂರ್ವಕ ಸೇವೆಯಿಂದಾಗಿ ಭಗವಂತನಿಗೆ ಪೂಜೆ ಪ್ರಾರ್ಥನೆಗಳನ್ನು ಸಲ್ಲಿಸುವುದು ಹೇಗೆಂಬ ಬಗ್ಗೆ ಅವನಿಗೆ ಸ್ಮರಣೆಯುಂಟಾಯಿತು.

ಗಜರಾಜನಿಗೆ ಐಹಿಕ ಅಸ್ತಿತ್ವವನ್ನು ಹೋಲುತ್ತಿದ್ದ ಮೊಸಳೆಯಿಂದ ಮೋಕ್ಷ ದೊರಕಿಸಿಕೊಟ್ಟ ನಂತರ ಭಗವಂತನು ಅವನಿಗೆ ಸ್ವಾರೂಪ್ಯ ಮುಕ್ತಿ ದೊರಕಿಸಿಕೊಟ್ಟನು.

ಭಗವಂತನು ಗಜರಾಜನಿಗೆ ಹೇಳಿದನು : "ನನ್ನ ಪ್ರಿಯನಾದ ಭಕ್ತನೇ, ರಾತ್ರಿ ಮಲಗಿ ಬೆಳಗಾಗಿ ಹಾಸಿಗೆಯಿಂದ ಏಳುತ್ತಿದ್ದಂತೆಯೇ ನನ್ನನ್ನು ಪ್ರಾರ್ಥಿಸುವವರಿಗೆ ಅವರ ಜೀವನದ ಕೊನೆಯಲ್ಲಿ ನಾನು ಅವರಿಗೆ ದೇವಲೋಕದಲ್ಲಿ ಶಾಶ್ವತವಾದ ಆವಾಸ ಸ್ಥಾನವನ್ನು ನೀಡುತ್ತೇನೆ". ಅನಂತರ ಭಗವಂತನು ಮಾಯವಾದನು.

ಶ್ರೀ ಶುಕಾಚಾರ್ಯರು ಪರೀಕ್ಷಿತ ರಾಜನಿಗೆ ರೈವತ ಮನುವಿನ ಬಗ್ಗೆ ವಿವರಿಸುವುದಾಗಿ ತಿಳಿಸಿದರು. ತಾಮಸ ಮನುವಿನ ಸಹೋದರ ರೈವತ. ಅವನ ಪುತ್ರರು ಅರ್ಜುನ, ಬಲಿ ಮತ್ತು ವಿಂಧ್ಯ. ರೈವತ ಮನುವಿನ ಯುಗದಲ್ಲಿ ಸ್ವರ್ಗದ ಅಧಿಪತಿ ವಿಭುವಾಗಿದ್ದನು. ಉಪದೇವತೆಗಳಲ್ಲಿ ಭೂತರಾಯರು ಇದ್ದರು. ಹಿರಣ್ಯರೋಮ, ವೇದಶಿರ ಮತ್ತು ಊರ್ಧ್ವಬಾಹು ಇವರನ್ನೊಳಗೊಂಡಂತೆ ಏಳು ಗ್ರಹಗಳನ್ನು ಆಕ್ರಮಿಸಿಕೊಂಡಿದ್ದ ಏಳು ಬ್ರಾಹ್ಮಣರಿದ್ದರು.

ಲಕ್ಷ್ಮಿಯನ್ನು ಸಂಪ್ರೀತಗೊಳಿಸಲು, ಸರ್ವರಿಂದ ಪೂಜಿತಳಾದ ಅವಳಿಗಾಗಿಯೇ ಭಗವಂತನು ಮತ್ತೊಂದು ವೈಕುಂಠವನ್ನೇ ಸೃಷ್ಟಿಸಿದನು.

ಚಕ್ಷೂಷ ಮನುವಿನ ಆಳ್ವಿಕೆಯಲ್ಲಿ ಸ್ವರ್ಗಾಧಿಪತಿಯಾಗಿದ್ದವನು ಮಂತ್ರದ್ರುಮ. ಉಪದೇವತೆಗಳಲ್ಲಿ ಅಪ್ಯರಿದ್ದರು ಹಾಗೂ ಹಿರಿಯ ಮುನಿಗಳಲ್ಲಿ ಹವಿಸ್ಮನರು ಮತ್ತು ವಿರಾಕರಿದ್ದರು.

ಆರನೇ ಮನ್ವಂತರ ಯುಗದಲ್ಲಿ ಜಗತ್ತಿನ ಒಡೆಯ ಮಹಾವಿಷ್ಣುವು ತನ್ನ ಭಾಗಶಃ ವಿಸ್ತರಣೆಯಲ್ಲಿ ಗೋಚರಿಸಿದನು. ಅವನು ವೈರಾಜನಿಂದ ಅವನ ಪತ್ನಿ ದೇವಸಂಭೂತಿಯ ಗರ್ಭದಲ್ಲಿ ಜನಿಸಿ ಅಜಿತನೆಂಬ ಹೆಸರನ್ನು ಪಡೆದನು. ಕ್ಷೀರಸಾಗರವನ್ನು ಕಡೆಯುವ ಮೂಲಕ ಅಜಿತನು ಉಪದೇವತೆಗಳಾಗಿ ಅಮೃತವನ್ನು ಉತ್ಪಾದಿಸಿದನು. ಕೂರ್ಮಾವತಾರದಲ್ಲಿ ಅವನು ತನ್ನ ಬೆನ್ನಿನ ಮೇಲೆ ಮಂದಾರ ಪರ್ವತವನ್ನು ಹೊತ್ತು ಅತ್ತಿತ್ತ ಓಡಾಡುತ್ತಿದ್ದನು.

ಮಹಾವಿಷ್ಣುವು ಸಾಗರವನ್ನು ಕಡೆಯುವ ಉದ್ದೇಶವೇನು ಮತ್ತು ಬೆನ್ನಿನ ಮೇಲೆ ಮಂದಾರ ಪರ್ವತವನ್ನು ಹೊತ್ತು ಅವನು ಆಮೆಯಾಗಿ ನೀರಿನಲ್ಲಿ ಉಳಿದದ್ದು ಮತ್ತು ಉಪದೇವತೆಗಳು ಅಮೃತವನ್ನು ಪಡೆದದ್ದು ಹೇಗೆ ಎಂಬುದನ್ನು ಪರೀಕ್ಷಿತ ರಾಜನು ತಿಳಿಯಬಯಸಿದನು.

## ಕೂರ್ಮಾವತಾರ

ದೂರ್ವಾಸ ಮುನಿಯ ಶಾಪದಿಂದಾಗಿ ದಾನವರು ಹಾಗೂ ಉಪದೇವತೆಗಳ ನಡುವೆ ಸಂಭವಿಸಿದ ಕಾದಾಟದಲ್ಲಿ ಅನೇಕ ಉಪದೇವತೆಗಳು ಸಾವಿಗೀಡಾದರು. ಎಂಬುದಾಗಿ ಶ್ರೀ ಶುಕಾಚಾರ್ಯರು ತಿಳಿಸಿದರು. ಇಂದ್ರ, ವರುಣ ಹಾಗೂ ಇನ್ನಿತರ ಉಪದೇವತೆಗಳಿಗೆ ಏನು ಮಾಡುವುದೆಂದು ತೋಚಲಿಲ್ಲ. ಅವರು ಸಲಹೆಗಾಗಿ ಬ್ರಹ್ಮನನ್ನು ಸಮೀಪಿಸಿದರು. ಬ್ರಹ್ಮನು ಮಹಾವಿಷ್ಣುವಿನೊಂದಿಗೆ ಸಮಾಲೋಚಿಸಿ ಅವನ ಪದ್ಮಪಾದದಲ್ಲಿ ಆಶ್ರಯ ಪಡೆಯುವಂತೆ ಉಪದೇವತೆಗಳಿಗೆ ತಿಳಿಸಿದನು. ಭಗವಂತನ ಬಳಿಗೆ ತೆರಳಿದ ಅವರು ತಮಗೆ ಆಶ್ರಯ ಕೊಡುವಂತೆ ಅವನನ್ನು ವಿನಂತಿಸಿಕೊಂಡರು. ಅಸುರರೊಂದಿಗೆ ಸಂಧಾನ ಮಾಡಿಕೊಳ್ಳುವಂತೆ ಭಗವಂತನು ಅವರಿಗೆ ತಿಳಿಸಿದನು. ಅವನೆಂದನು : "ಎಲೈ ಉಪದೇವತೆಗಳೇ, ಒಬ್ಬರ ಹಿತಾಸಕ್ತಿಗಳನ್ನು ಕಾಯ್ದುಕೊಳ್ಳುವುದು ಕೆಲವೊಮ್ಮೆ ಎಷ್ಟು ಮುಖ್ಯವಾಗುತ್ತದೆಂದರೆ ಒಬ್ಬನು ತಮ್ಮ ಶತ್ರುಗಳೊಂದಿಗೂ ಸಂಧಾನ ಮಾಡಿಕೊಳ್ಳಬೇಕಾಗುತ್ತದೆ. ಒಬ್ಬರು ಇಂಥ ಸಂದರ್ಭದಲ್ಲಿ ಹಾವು ಹಾಗೂ ಇಲಿಯ ತರ್ಕವನ್ನು ಅನುಸರಿಸಬೇಕು".

ಇನ್ನೇನು ಮೃತ್ಯುಗೀಡಾಗುವ ಮನುಷ್ಯನು ಯಾವುದನ್ನು ಕುಡಿಯುವ ಮೂಲಕ ಚಿರಂಜೀವಿಯಾಗುತ್ತಾನೋ ಅಂಥ ಅಮೃತವನ್ನು ತಯಾರಿಸಲು ಶ್ರಮಿಸಬೇಕೆಂದು ಭಗವಂತನು ಉಪದೇವತೆಗಳಿಗೆ ತಿಳಿಸಿದನು. ಅವನು ಉಪದೇವತೆಗಳಿಗೆ ಎಲ್ಲ ವಿಧದ

ತರಕಾರಿ, ಹುಲ್ಲು, ಬಳ್ಳಿಗಳು ಹಾಗೂ ಔಷಧಿಗಳನ್ನು ಸಮುದ್ರಕ್ಕೆ ಎಸೆಯುವಂತೆ ತಿಳಿಸಿದನು. ಅನಂತರ "ನನ್ನ ನೆರವಿನಿಂದ, ಮಂದಾರ ಪರ್ವತವನ್ನೇ ಕಡಗೋಲಾಗಿಸಿ ಕೊಂಡು, ವಾಸುಕಿಯನ್ನು ಹಗ್ಗವಾಗಿಸಿಕೊಂಡು, ಕ್ಷೀರಸಾಗರವನ್ನು ಏಕಾಗ್ರತೆಯಿಂದ ಕಡೆಯಿರಿ. ದಾನವರು ವಾಸ್ತವವಾಗಿ ಕೆಲಸದಲ್ಲಿ ತೊಡಗುತ್ತಾರಾದರೂ ನಿಜವಾದ ಪ್ರಯೋಜನವನ್ನು, ಅಮೃತವನ್ನು ಹೊಂದುವವರು ನೀವು, ಉಪದೇವತೆಗಳು" ಎಂದನು. ತಾಳ್ಮೆಯಿಂದಿದ್ದು, ದಾನವರು ಕೇಳಿದ್ದನ್ನೆಲ್ಲ ಅವರಿಗೆ ನೀಡುವಂತೆ ತಿಳಿಸಿದನು.

ಭಗವಂತನು ಕ್ಷೀರಸಾಗರದಿಂದ ಕಾಲಕೂಟವೆಂಬ ವಿಷವು ಕಾಣಿಸಿ ಕೊಳ್ಳುತ್ತಾದರೂ ಯಾವುದೇ ಭಯಕ್ಕೆ ಕಾರಣವಿಲ್ಲವೆಂದನು. ವಿವಿಧ ಪದಾರ್ಥಗಳನ್ನು ಕರೆಯುವಾಗ ದುರಾಸೆಯಿಂದಿರಕೂಡದೆಂದು ಅವನು ಅವರಿಗೆ ಬುದ್ಧಿವಾದ ಹೇಳಿದನು. ಉಪದೇವತೆಗಳು ತಮ್ಮ ತಮ್ಮ ಸ್ಥಳಗಳಿಗೆ ಹಿಂತಿರುಗಿದರು. ಅವರು ಶಾಂತಿ ಕೋರಿ ಮಹಾರಾಜ ಬಲಿಯನ್ನು ಸಮೀಪಿಸಿದರು. ಭಗವಂತನು ನೀಡಿದ ಸಲಹೆಯನ್ನು ಇಂದ್ರನು ಬಲಿಯ ಮುಂದಿಟ್ಟಾಗ ಬಲಿಯು ಅದಕ್ಕೊಪ್ಪಿದನು.

ದಾನವರು ಹಾಗೂ ಉಪದೇವತೆಗಳು ಮಂದಾರ ಪರ್ವತವನ್ನು ಕೀಳಲು ಪ್ರಾರಂಭಿಸಿ, ಪರ್ವತ ಬಿದ್ದಾಗ ಅನೇಕರು ಸತ್ತರು. ಆ ಸಮಯದಲ್ಲಿ ಮಹಾವಿಷ್ಣುವು ಪ್ರತ್ಯಕ್ಷನಾಗಿ ಪರ್ವತವನ್ನು ಗರುಡನ ಬೆನ್ನಿನ ಮೇಲಿಟ್ಟುಕೊಂಡು ಕ್ಷೀರಸಾಗರಕ್ಕೆ ಕೊಂಡೊಯ್ದನು. ವಾಸುಕಿಯನ್ನು ಕರೆಸಿ ಅದನ್ನು ಪರ್ವತಕ್ಕೆ ಕಡೆಯುವ ಹಗ್ಗವಾಗಿ ಕಟ್ಟಲಾಯಿತು. ಭಗವಂತನ ಸ್ವರೂಪನಾದ ಅಜಿತನು ಹಾವಿನ ಮುಂಭಾಗವನ್ನು ಹಿಡಿದಾಗ ಉಪದೇವತೆಗಳು ಅವನನ್ನು ಅನುಸರಿಸಿದರು. ದಾನವರು ಹಾವಿನ ಬಾಯಿಯ ಭಾಗವನ್ನು ಹಿಡಿಯುವ ಆಸೆಯಿಂದಿದ್ದರು. ಭಗವಂತನು ಈ ಸಲಹೆಗೆ ಒಪ್ಪಿದನು. ಭಗವಂತನು ಆಮೆಯ ರೂಪವನ್ನು ಧರಿಸಿದಾಗ ಅದರ ಮೇಲೆ ಪರ್ವತವನ್ನು ಇಡಲಾಯಿತು. ಕಡೆಯುವುದು ಪ್ರಾರಂಭವಾಯಿತು. ಭಗವಂತನು ಆಸೆಗನುಗುಣವಾಗಿ ದಾನವರನ್ನು ಪ್ರವೇಶಿಸಿ, ಉಪದೇವತೆಗಳನ್ನು ಒಳಿತಿನ ಗುಣವಾಗಿ ಹಾಗೂ ವಾಸುಕಿಯನ್ನು ಅಮಾಯಕತೆಯಾಗಿ ಪ್ರವೇಶಿಸಿದನು. ಇದರ ಉದ್ದೇಶ ಅವರನ್ನು ತಮ್ಮ ಶಕ್ತಿಸಾಮರ್ಥ್ಯಗಳನ್ನು ಹೆಚ್ಚಿಸಿಕೊಳ್ಳುವಂತೆ ಹುರಿದುಂಬಿಸುವುದು.

ಕಡೆಯುವುದು ಮುಂದುವರಿದಾಗ ವಾಸುಕಿಯು ಹೊಗೆ ಉರಿಯನ್ನು ಉಗುಳು ತೊಡಗಿದಾಗ ತಲೋಮ, ಕಾಲೇಯ, ಬಲಿ ಮತ್ತು ಇಲ್ವಲರ ನೇತೃತ್ವದಲ್ಲಿನ ದಾನವರಿಗೆ ಅದರ ಬಿಸಿ ತಟ್ಟತೊಡಗಿತು. ವಿಷವು ದಾನವರು ಹಾಗೂ ಉಪದೇವತೆಗಳಿಬ್ಬರನ್ನೂ ಕಾಡತೊಡಗತು. ಇಷ್ಟೆಲ್ಲ ಪ್ರಯತ್ನಗಳಿದ್ದಾಗಲೂ ಅಮೃತ ಉಕ್ಕದಿದ್ದಾಗ ಭಗವಂತನೇ ಸಾಗರವನ್ನು ಕಡೆಯತೊಡಗಿದ. ಸಾಗರವು ಮೊದಲು ವಿಷವನ್ನು ಉಕ್ಕಿಸಿತು. ಉಪದೇವತೆಗಳು ಮತ್ತು ಭಗವಂತನು ಮಹೇಶ್ವರನ ಬಳಿಗೆ ಹೋದರು.

ಎಲ್ಲ ಜೀವಿಗಳ ಬಗ್ಗೆಯೂ ಉದಾರನಾಗಿರುವ ಮಹೇಶ್ವರನು ವಿಷವನ್ನು ಕುಡಿದನು ಎಂಬುದಾಗಿ ಶ್ರೀ ಶುಕಾಚಾರ್ಯರು ತಿಳಿಸಿದರು. ಇದರಿಂದಾಗಿ ಮಹಾದೇವನ ಕೊರಳು ನೀಲಿ ಬಣ್ಣದ ಗೆರೆಯನ್ನು ಹೊಂದಿದೆ. ವಿಷವು ಕುಡಿಯಲ್ಪಟ್ಟಿದ್ದರಿಂದ ಉಪದೇವತೆಗಳು ಮತ್ತು ಅಸುರರು ಹೆಚ್ಚು ಬಿರುಸಿನಿಂದ ಸಾಗರವನ್ನು ಕಡೆಯ ತೊಡಗಿದಾಗ ಅದರ ಪರಿಣಾಮವಾಗಿ ಸುರಭಿಯು ಕಾಣಿಸಿಕೊಂಡು ಉನ್ನತ ಋಷಿಗಳು ಅದನ್ನು ತೆಗೆದುಕೊಂಡರು. ಉಚ್ಚೈಶ್ರವಸ್ ಎಂಬ ಅಶ್ವವೂ ಕಾಣಿಸಿಕೊಂಡಾಗ ಬಲಿ ಮಹಾರಾಜನು ಅದನ್ನು ತೆಗೆದುಕೊಂಡನು. ಅನಂತರ ಬಂದದ್ದು ಐರಾವತ. ಶ್ವೇತವರ್ಣದ ಈ ಆನೆ ತನ್ನ ನಾಲ್ಕು ಸೊಂಡಿಲುಗಳ ಮೂಲಕ ಪರಮೇಶ್ವರನ ವೈಭವಯುತ ಆವಾಸಸ್ಥಾನವಾದ ಕೈಲಾಸಪರ್ವತವನ್ನೇ ಅಲುಗಾಡಿಸಿತು. ಅನಂತರ ಯಾವ ದಿಕ್ಕಿಗಾದರೂ ಹೋಗಬಹುದಾದ ಎಂಟು ದೊಡ್ಡ ಆನೆಗಳು ಕಾಣಿಸಿಕೊಂಡು, ಐರಾವತವು ಅವರ ಮುಖಂಡವಾಯಿತು. ಅಭ್ರೂಮವಿನ ಮುಂದಾಳತ್ವದಲ್ಲಿ ಎಂಟು ಹೆಣ್ಣಾನೆಗಳೂ ಕಾಣಿಸಿಕೊಂಡವು.

ಅನಂತರ ಅಪ್ಸರೆಯರು ಕಾಣಿಸಿಕೊಂಡರು. ಸಿರಿದೇವತೆ ಕಾಣಿಸಿಕೊಂಡಾಗ ಅವಳನ್ನು ಎಲ್ಲ ಗೌರವಗಳಿಂದಲೂ ಬರಮಾಡಿಕೊಳ್ಳಲಾಯಿತು. ಅವಳು ಮುಕುಂದನನ್ನು ತನ್ನ ಪತಿಯನ್ನಾಗಿಸಿಕೊಂಡಳು. ಅನಂತರ ಬಂದವನು ಧನ್ವಂತರಿ.

ಅಮೃತವನ್ನು ಕೈಲಿ ಹಿಡಿದು ಆಗಮಿಸಿದ ಧನ್ವಂತರಿಯನ್ನು ಕಂಡ ಕೂಡಲೇ, ಆ ಅಮೃತಕುಂಡಕ್ಕೆ ಆಸೆಪಟ್ಟ ದಾನವರು ತಕ್ಷಣವೇ ಅವನಿಂದ ಅದನ್ನು ಬಲಾತ್ಕಾರದಿಂದ ಕಸಿದುಕೊಂಡರು. ಇದನ್ನು ಕಂಡು ಖೇದಗೊಂಡ ಉಪದೇವತೆಗಳು ಮಹಾವಿಷ್ಣುವಿನ ಬಳಿಗೆ ಹೋದರು. ಅವರಿಗೆ ಅವನೆಂದನು : “ದುಃಖಿಸದಿರಿ. ನನ್ನ ಶಕ್ತಿಯಿಂದಲೇ ನಾನು ದಾನವರ ಮಧ್ಯೆಯೇ ಕಲಹವನ್ನು ಉಂಟು ಮಾಡುತ್ತೇನೆ. ಈ ರೀತಿಯಾಗಿ ನಾನು ಅಮೃತವನ್ನು ಹೊಂದುವ ನಿಮ್ಮ ಬಯಕೆಯನ್ನು ಪೂರೈಸುತ್ತೇನೆ!. ಅನಂತರ ದಾನವರು ತಮ್ಮ ತಮ್ಮಲ್ಲೇ ಜಗಳವಾಡತೊಡಗಿದರು.

ಮಹಾವಿಷ್ಣುವು ಸುಂದರ ಸ್ತ್ರೀ ಮೋಹಿನಿಯ ರೂಪವನ್ನು ತಳೆದಾಗ ದಾನವರೆಲ್ಲರೂ ಅವಳನ್ನು ಹೊಂದಲು ಆಶಿಸಿದರು. ದಾನವರು ಒಬ್ಬರ ಬಗ್ಗೆ ಒಬ್ಬರು ವೈರ ತಳೆದು ಅಮೃತ ಕುಂಡಕ್ಕಾಗಿ ಸೆಣೆಸಾಡುತ್ತಿದ್ದಾಗ ಸುಂದರ ಸ್ತ್ರೀಯು ತಮ್ಮತ್ತ ಬರುತ್ತಿರುವುದನ್ನು ಕಂಡರು. ಅವರು ಅವಳ ಸೌಂದರ್ಯವನ್ನು ಕೊಂಡಾಡುತ್ತ ಅವಳನ್ನು ಸಮೀಪಿಸಿದರು. ತಮ್ಮ ಮಧ್ಯದಲ್ಲಿನ ಜಗಳವನ್ನು ಬಗೆಹರಿಸುವಂತೆ ಅವರು ಮೋಹಿನಿಯನ್ನು ಕೇಳಿಕೊಂಡರು. ತಾನು ಸಾಮಾನ್ಯ ಹೆಂಗಸಾದರೂ ತನ್ನ ಮೇಲೆ ಅವರು ಅಷ್ಟು ನಂಬಿಕೆಯನ್ನು ಇಟ್ಟಿರುವುದು ಹೇಗೆ ಎಂಬುದಾಗಿ ಅವಳು ದಾನವರನ್ನು ಪ್ರಶ್ನಿಸಿದಳು. ದಾನವರು ನಕ್ಕು ಅಮೃತ ಕುಂಡವನ್ನು ಅವಳ ಕೈಗೊಪ್ಪಿಸಿದರು.

ಮೋಹಿನಿ ರೂಪವನ್ನು ತಳೆದಿದ್ದ ಭಗವಂತನು ಅವರೆಲ್ಲರೂ ತನ್ನ ಆಜ್ಞೆಯನ್ನು ಪರಿಪಾಲಿಸುವುದಾದರೆ ತನ್ನ ಸ್ವಾಧೀನದಲ್ಲಿರುವ ಅಮೃತವನ್ನು ಅವರಿಗೆಲ್ಲ ಹಂಚುವ

ಜವಾಬ್ದಾರಿಯನ್ನು ತೆಗೆದುಕೊಳ್ಳುವುದಾಗಿ ದಾನವರಿಗೆ ತಿಳಿಸಿದಳು. ದಾನವರು ಒಪ್ಪಿದರು. ದಾನವರು ಹಾಗೂ ಉಪದೇವತೆಗಳು ಮಿಂದು ವಿಧಿಗಳನ್ನು ನೆರವೇರಿಸಿ ಉಪವಾಸವಿದ್ದು ಪೂರ್ವಾಭಿಮುಖವಾಗಿ ಚಾಪೆಗಳ ಮೇಲೆ ಕುಳಿತರು. ಮೋಹಿನಿಯು ಅವರನ್ನು ಬೇರೆ ಬೇರೆ ಸಾಲಿನಲ್ಲಿ ಕೂರಲು ಹೇಳಿ ಉಪದೇವತೆಗಳು ಹಾಗೂ ದಾನವರನ್ನು ಅವರವರ ಸ್ಥಾನಮಾನಗಳಿಗೆ ತಕ್ಕಂತೆ ಕೂರಿಸಿದಳು. ಅಮೃತಕುಂಡವನ್ನು ತನ್ನ ಕೈಲಿ ಹಿಡಿದ ಅವಳು ಮೊದಲು ದಾನವರತ್ತ ಸಾಗಿ ಅವರನ್ನು ಮೃದು ಮಾತುಗಳಿಂದ ಮಾತನಾಡಿಸಿ ಅವರನ್ನು ಅಮೃತದ ಪಾಲಿನಿಂದ ವಂಚಿಸಿದಳು. ಅನಂತರ ಅವಳು ದೂರದಲ್ಲಿ ಕುಳಿತಿದ್ದ ಉಪದೇವತೆಗಳಿಗೆ ಅವರನ್ನು ವಿಕಲತೆ, ವೃದ್ಧಾಪ್ಯ ಮತ್ತು ಮೃತ್ಯುವಿನಿಂದ ಪಾರುಮಾಡುವಂಥ ಅಮೃತವನ್ನು ನೀಡಿದಳು. ಅವಳು ಹೇಳಿದ್ದಕ್ಕೆಲ್ಲ ತಮ್ಮ ಸಮ್ಮತಿ ಇದೆಯೆಂದು ದಾನವರು ವಚನ ನೀಡಿದ್ದರಿಂದ ಅವರ್ಯಾರೂ ಜಗಳ ತೆಗೆಯಲಿಲ್ಲ. ಹೇಗಾದರೂ ರಾಹುವು ಉಪದೇವತೆಗಳ ಸಾಲಿನಲ್ಲಿ ಕೂತು ಅಮೃತವನ್ನು ಕುಡಿದುಬಿಟ್ಟನು. ರಾಹುವಿನ ರುಂಡವನ್ನು ಮುಂಡದಿಂದ ಕತ್ತರಿಸಿ ಹಾಕಿದಾಗ. ಅವನ ಶರೀರಕ್ಕೆ ಅಮೃತವು ಸೋಕಿಲ್ಲದೇ ಇದ್ದುದರಿಂದ ಅವನು ಉಳಿಯಲಾಗಿಲಿಲ್ಲ. ಆದರೆ ಅವನ ಶಿರವು ಅಮರತ್ವ ಪಡೆದು ಬ್ರಹ್ಮನು ರಾಹುವಿನ ಶಿರವನ್ನು ಗ್ರಹಗಳಲ್ಲಿ ಒಂದನ್ನಾಗಿ ಸ್ವೀಕರಿಸಿದನು. ಉಪದೇವತೆಗಳು ಅಮೃತವನ್ನು ಕುಡಿಯುವುದನ್ನು ಮುಗಿಸಿದಾಗ, ಅವಳು ತನ್ನ ನಿಜವಾದ ಗುರುತನ್ನು ತಿಳಿಸಿದಳು. ಉಪದೇವತೆಗಳು ಭಗವಂತನಲ್ಲಿ ಆಶ್ರಯವನ್ನು ಅಪೇಕ್ಷಿಸಿದ್ದರಿಂದ ಅವರು ಅದನ್ನು ಪಡೆದರು. ಆದರೆ ದಾನವರು ಅದನ್ನು ಕೇಳಿಕೊಂಡಿರಲಿಲ್ಲ.

ಉಪದೇವತೆಗಳ ವಿಜಯದ ನಂತರ ದಾನವರು ಹೆಚ್ಚು ಕ್ರೂರವಾಗಿ ಅವರ ವಿರುದ್ಧ ಸಮರವನ್ನು ಸಾರಿದರು ಎಂದು ಶ್ರೀ ಶುಕಾಚಾರ್ಯರು ತಿಳಿಸಿದರು. ಕಾದಾಟ ಬಿರುಸಾಯಿತು. ಬಲಿಮಹಾರಾಜನು ದಾನವರ ನೇತೃತ್ವವನ್ನು ವಹಿಸಿದ್ದು, ಇಂದ್ರನು ಉಪದೇವತೆಗಳ ಮುಖಂಡನಾಗಿದ್ದನು. ಉಪದೇವತೆಗಳು ಹತಾಶರಾಗಿ ಭಗವಂತನನ್ನು ರಕ್ಷಣೆಗಾಗಿ ಕೋರಿದರು. ಪರಮಾತ್ಮನು ತನ್ನ ಮೇಲೆ ಬಿದ್ದ ಕೆಲವು ದಾನವರನ್ನು ಸಂಹರಿಸಿದನು. ಅವರ ಅನೇಕ ಸೈನಿಕರೂ ಹೋರಾಟದಲ್ಲಿ ಸತ್ತರು. ಯುದ್ಧವನ್ನು ನಿಲ್ಲಿಸುವಂತೆ ನಾರದ ಮುನಿಯು ಉಪದೇವತೆಗಳಿಗೆ ಉಪದೇಶಿಸಿದನು. ಅವನೆಂದನು: "ಉಪದೇವತೆಗಳಾದ ನೀವು ನಾರಾಯಣನ ಬಾಹುಗಳಲ್ಲಿ ಸುರಕ್ಷಿತವಾಗಿದ್ದು ಅವನ ಕೃಪೆಯಿಂದ ಅಮೃತವನ್ನು ಪಡೆದಿದ್ದೀರಿ. ಅದೃಷ್ಟವಶಾತ್ ನೀವು ಎಲ್ಲ ರೀತಿಯಲ್ಲೂ ವೈಭವದಿಂದ ಇದ್ದೀರಿ. ಅದ್ದರಿಂದ ದಯವಿಟ್ಟು ಯುದ್ಧವನ್ನು ನಿಲ್ಲಿಸಿ".

ಬಲಿ ಮಹಾರಾಜನು ಯುದ್ಧದಲ್ಲಿ ಗಾಯಗೊಂಡನು. ಅವನು ಅಷ್ಟಗಿರಿಗೆ ತೆರಳಿದಾಗ ಅಲ್ಲಿ ಅವನಿಗೆ ಅವನ ಆಧ್ಯಾತ್ಮಿಕ ಗುರುಗಳಾದ ಶುಕ್ರಾಚಾರ್ಯರು ಶುಶ್ರೂಷೆ ನೀಡಿದರು. ಅನಂತರ ಅವರು ಗಾಯಗೊಂಡಿದ್ದ ಮಿಕ್ಕೆಲ್ಲ ದಾನವರಿಗೂ ಆರೋಗ್ಯವನ್ನು ಮರುಗಳಿಸಿಕೊಟ್ಟರು.

ಮೋಹಿನಿಯ ಅವತಾರದಲ್ಲಿ ಪರಮಾತ್ಮನು ವಿಹರಿಸಿದ ವಾರ್ತೆಯನ್ನು ಕೇಳಿದ ಮಹೇಶ್ವರನು ಅವನನ್ನು ಭೇಟಿಯಾಗಲು ಆಗಮಿಸಿದನು. ಅವನೊಂದಿಗೆ ಉಮೆಯೂ ಇದ್ದಳು. ಮಹೇಶ್ವರನನ್ನು ಭಗವಂತನು ಸ್ವಾಗತಿಸಿದಾಗ ಅವನು ಶ್ರೀ ಹರಿಗೆ ಗೌರವವನ್ನು ಸಲ್ಲಿಸಿದನು. ಕ್ಷೀರ ಸಾಗರವನ್ನು ಕಡೆಯುವುದರಿಂದ ಒದಗಿದ್ದ ಅಮೃತವನ್ನು ವಿತರಿಸಲು ಶ್ರೀ ಹರಿಯು ತಾಳಿದ್ದ ಮೋಹಿನಿ ಅವತಾರವನ್ನು ಮತ್ತೆ ತಳೆದು ತನಗೆ ಅದನ್ನು ತೋರಿಸಬೇಕೆಂದು ಶಿವನು ಭಗವಂತನನ್ನು ಕೋರಿದನು. ಶ್ರೀ ಹರಿಯು ನಕ್ಕು ಉತ್ತರಿಸಿದನು : "ದಾನವರು ಅಮೃತ ಕುಂಡವನ್ನು ಕಸಿದುಕೊಂಡಾಗ ಅವರನ್ನು ನೇರವಾಗಿ ವಂಚಿಸಿ ವಿಚಲಿತರನ್ನಾಗಿ ಮಾಡಿ ನಾನು ಉಪದೇವತೆಗಳ ಹಿತದೃಷ್ಟಿಯಿಂದ ಮೋಹಿನಿಯ ಅವತಾರವನ್ನು ತಳೆದಿದ್ದೆ". ಅನಂತರ ಅವನು ಶಿವನ ಕೋರಿಕೆಗೆ ಒಪ್ಪಿ, ಅಂತರ್ಧಾನನಾಗಿ ಚೆಂಡೊಂದರ ಜತೆ ಕ್ರೀಡೆಯಾಡುತ್ತಿದ್ದ ಸುಂದರ ಸ್ತ್ರೀಯ ರೂಪವನ್ನು ಅವನಿಗೆ ತೋರಿಸಿದನು. ಶಿವನು ಆ ಸ್ತ್ರೀಯನ್ನು ಕಂಡಾಗ ಅವನಲ್ಲಿನ ಸದ್ಬುದ್ಧಿಯೆಲ್ಲ ಮಾಯವಾಗಿ ಅವಳ ಬಗ್ಗೆ ಹುಚ್ಚಾಗಿ ಭವಾನಿಯ ಎದುರಿನಲ್ಲಿಯೇ ಅವಳನ್ನು ಹಿಡಿಯಲು ಹೋಗಲು ಹಿಂಜರಿಯಲಿಲ್ಲ. ಪರಮೇಶ್ವರನು ಹೀಗೆ ಮೋಹಿನಿಯ ಹಿಂದೆ ಸುತ್ತಾಡುತ್ತ ಉದ್ರೇಕಗೊಂಡಾಗ ತನ್ನ ವೀರ್ಯವನ್ನು ಚೆಲ್ಲಿದ.

ಶ್ರೀ ಶುಕಾಚಾರ್ಯರು ಹೇಳಿದರು : "ಎಲೈ ಪರೀಕ್ಷಿತ ಮಹಾರಾಜನೇ, ದೊರೆಗಳಲ್ಲೆಲ್ಲ ಅತ್ಯುತ್ತಮನಾದವನೇ, ವೀರ್ಯವನ್ನು ಪೂರ್ಣವಾಗಿ ಸುರಿಸಿದ ನಂತರ, ಶಿವನಿಗೆ ಭಗವಂತನು ಸೃಷ್ಟಿಸಿದ ಮಾಯೆಗೆ ತಾನೇ ಹೇಗೆ ಬಲಿಯಾದನೆಂಬುದು ತಿಳಿಯಿತು. ಆದ್ದರಿಂದ ಅವನು ಬೇರ್‍ಯಾವ ಮಾಯೆಯಿಂದಲೂ ತನ್ನನ್ನು ನಿಯಂತ್ರಿಸಿಕೊಳ್ಳಬೇಕು ಎಂದುಕೊಂಡನು". ಶ್ರೀ ಹರಿಯು ಮಹೇಶ್ವರನಿಗೆ ಹೇಳಿದನು: "ಉಪದೇವತೆಗಳಲ್ಲೆಲ್ಲ ಅತ್ಯುತ್ತಮನಾದವನೇ, ಸ್ತ್ರೀಯಾಗಿ ರೂಪ ತಳೆದಿದ್ದರಿಂದ ನೀನು ಸಾಕಷ್ಟು ತೊಂದರೆಗೀಡಾಗಿದ್ದರೂ ನೀನು ನಿನ್ನ ಸ್ಥಾನದಲ್ಲಿ ಭದ್ರವಾಗಿದ್ದೀಯೆ. ಆದ್ದರಿಂದ ನಿನಗೆ ಎಲ್ಲ ಅದೃಷ್ಟವೂ ಲಭಿಸಲಿ".

ಪರಮೇಶ್ವರನು ಭವಾನಿಗೆ ಭಗವಂತನ ವೈಭವಗಳನ್ನೆಲ್ಲ ವಿವರಿಸಿದನು. ಅವಳಿಗೆ ಅವನು ಹೇಳಿದನು : "ನಾನು ಒಂದು ಸಾವಿರ ವರ್ಷಗಳ ಕಾಲ ಅತೀಂದ್ರಿಯ ಯೋಗವನ್ನು ಮಾಡಿ ಮುಗಿಸಿದಾಗ, ನಾನು ಯಾರನ್ನು ಧ್ಯಾನಿಸುತ್ತಿದ್ದೆ ಎಂಬುದಾಗಿ ನೀನು ಕೇಳಿದ್ದೆ. ಈಗ ಇಲ್ಲಿ ಕಾಲದಿಂದ ಅಭೇದ್ಯವಾದ ಹಾಗೂ ವೇದಗಳೂ ಅರ್ಥಮಾಡಿಕೊಳ್ಳಲಾಗದ ಆ ಮಹಾಮಹಿಮನಿದ್ದಾನೆ".

ಮೋಹಿನಿ ಮೂರ್ತಿಯ ವಿವರಣೆಯನ್ನು ಪೂರೈಸಿದ ನಂತರ ಶ್ರೀ ಶುಕಾಚಾರ್ಯರು ಇನ್ನುಳಿದ ಮನುಗಳನ್ನು ಕುರಿತು ತಮ್ಮ ಪ್ರವಚನವನ್ನು ಮುಂದುವರಿಸಿದರು. ಅವರೆಂದರು: "ಶ್ರದ್ಧದೇವನೆಂಬ ಹೆಸರಿನ ಪ್ರಸ್ತುತ ಮನವು ಸೂರ್ಯ ಗ್ರಹದ ಅಧಿಪತಿಯಾದ ವೈವಸ್ವನ ಪುತ್ರನು. ಶ್ರದ್ಧದೇವನು ಏಳನೆಯ ಮನು".

ಏಳನೇ ಮನುವಿಗೆ ಹತ್ತು ಪುತ್ರರಿದ್ದರು. ಅವರಲ್ಲಿ ಇಕ್ಷ್ವಾಕು, ನಭಗ, ಧೃಷ್ಟ, ಸಾರ್ಯತಿ, ನಾರಿಸ್ಯಂತ ಮತ್ತ ನಟಾಂಗ ಎಂಬುವರಿದ್ದರು. ಏಳನೇ ಪುತ್ರನು ದಿಸ್ತ. ಅನಂತರದವರು ತರೂಸ ಮತ್ತು ಪ್ರಸಾಧ್ರ ಹಾಗೂ ಹತ್ತನೆಯವನು ವಸೂಮಾನ. ಈ ಮನ್ವಂತರದಲ್ಲಿ, ಮರುತರು, ಇಬ್ಬರು ಅಶ್ವಿನಿ ಕುಮಾರರು ಮತ್ತು ರಾಹುಗಳು ಉಪದೇವತೆಗಳು. ಅವರ ಮುಖ್ಯಸ್ಥನಾದ ಇಂದ್ರನು ಪುರಂದರ ಕಶ್ಯಪ. ಅತ್ರಿ, ವಸಿಷ್ಠ, ವಿಶ್ವಾಮಿತ್ರ, ಗೌತಮ, ಜಮದಗ್ನಿ ಮತ್ತು ಭಾರದ್ವಾಜರು ಸಪ್ತರ್ಷಿಗಳು. ಈ ಮನ್ವಂತರದಲ್ಲಿ ಪರಮಾತ್ಮನು ವಾಮನನಾಗಿ ಕಾಣಿಸಿಕೊಂಡನು. ಅವನ ತಂದೆಯು ಕಶ್ಯಪ ಹಾಗೂ ತಾಯಿ ಅದಿತಿ.

ವೈವಸ್ವನನಿಗೆ ಇಬ್ಬರು ಮಡದಿಯರಿದ್ದರು. ಅವರೆಂದರೆ ವಿಶ್ವಕರ್ಮನ ಪುತ್ರಿಯರಾದ ಸಂಜ್ಞ ಮತ್ತು ಛಾಯ. ಸೂರ್ಯದೇವನಿಗೆ ವದವಳೆಂಬ ಮೂರನೆಯ ಮಡದಿಯಿದ್ದಳು. ಸಂಜ್ಞನಿಗೆ ಮೂವರು ಮಕ್ಕಳಿದ್ದು ಅವರೆಂದರೆ ಯಮ, ಯಮಿ ಮತ್ತು ಶ್ರದ್ಧದೇವ. ಛಾಯಳಿಗೆ ಸಾವನಿ ಎಂಬ ಪುತ್ರ ಹಾಗೂ ಸಂವರ್ತನೆಯ ದೊರೆಯನ್ನು ವಿವಾಹವಾದ ತಪತಿಯೆಂಬ ಪುತ್ರಿಯಿದ್ದಳು. ಛಾಯಳ ಮೂರನೆಯ ಮಗು ಶನೀಶ್ವರ. ವದವಳು ಇಬ್ಬರು ಪುತ್ರರಿಗೆ - ಅಶ್ವಿನಿ ಸಹೋದರರಿಗೆ ಜನ್ಮವಿತ್ತಳು.

ಎಂಟನೆಯ ಮನುವಿನ ಕಾಲದಲ್ಲಿ ಸವರ್ಣಿಯು ಮನುವಾದನೆಂದು ಶ್ರೀ ಶುಕಾಚಾರ್ಯರು ಹೇಳಿದರು. ನಿರ್ಮಕ ಮತ್ತು ವಿರಾಜಸ್ಕರು ಅವನ ಪುತ್ರರಾಗಿರುತ್ತಾರೆ. ಎಂಟನೆಯ ಮನುವಿನ ಕಾಲದಲ್ಲಿ ಉಪದೇವತೆಗಳಲ್ಲಿ ಸುತಪರು, ವಿರಾಜರು ಮತ್ತು ಅಮೃತಪ್ರಭರು ಇರುತ್ತಾರೆ. ಉಪದೇವತೆಗಳ ದೊರೆಯಾದ ಇಂದ್ರನಾಗಿ ವಿರೋಚನನ ಪುತ್ರ ಬಲಿ ಮಹಾರಾಜನಿರುತ್ತಾನೆ.

ಬಲಿ ಮಹಾರಾಜನು ಮಹಾವಿಷ್ಣುವಿಗೆ ಮೂರು ಹೆಜ್ಜೆಗಳನ್ನು ಕೊಡುಗೆಯಾಗಿ ನೀಡಿದಾಗ ಅವನು ಮೂರು ಜಗತ್ತುಗಳನ್ನೂ ಕಳೆದುಕೊಂಡನು. ಬಲಿಯು ಪರಿಪೂರ್ಣತೆಯನ್ನು ಸಾಧಿಸಿದನು. ಈ ದಾನದಿಂದಾಗಿ ಬಲಿ ಮಹಾರಾಜನನ್ನು ಸುತಳದ ದೊರೆಯನ್ನಾಗಿ ಪ್ರತಿಷ್ಠಾಪಿಸಲಾಯಿತು.

ಎಂಟನೆಯ ಮನ್ವಂತರದಲ್ಲಿ ಗಲನ, ದೀಪ್ತಿಮಾನ, ಪರಶುರಾಮ, ಅಶ್ವತ್ಥಾಮ, ಕೃಪಾಚಾರ್ಯ, ಋಷ್ಯಶೃಂಗ ಹಾಗೂ ಮಹಾವಿಷ್ಣುವಿನ ಅವತಾರವಾದ ವ್ಯಾಸದೇವನು ಸಪ್ತರ್ಷಿಗಳಾಗಿರುತ್ತಾರೆ ಎಂಬುದಾಗಿ ಶ್ರೀ ಶುಕಾಚಾರ್ಯರು ಹೇಳಿದರು. ಅದೇ ಮನ್ವಂತರದಲ್ಲಿ ದೇವಗುಹ್ಯ ಮತ್ತು ಸರಸ್ವತಿಯನ್ನು ತಂದೆ ತಾಯಿಗಳನ್ನಾಗಿ ಹೊಂದಿ ಭಗವಂತನ ವ್ಯಕ್ತಿತ್ವವಾದ ಸಾರ್ವಭೌಮನು ಜನಿಸುತ್ತಾನೆ. ಅವನು ಬಲಿ ಮಹಾರಾಜನಿಗೆ ಸ್ವರ್ಗದ ರಾಜ್ಯವನ್ನು ಪುನಃ ಗಳಿಸಿಕೊಡುತ್ತಾನೆ.

ಒಂಬತ್ತನೇ ಮನುವೆಂದರೆ ವರುಣನಿಗೆ ಜನಿಸಿದ ದಕ್ಷ ಸವರ್ಣಿ, ಭೂತಕೇತು ಮತ್ತು ದೀಪ್ತಿಕೇತು ಅವನ ಪುತ್ರರು. ಪರಸ್ ಮತ್ತ ಮಾರಿಚಿಗರ್ಭ ಉಪದೇವತೆಗಳು. ಸ್ವರ್ಗದ ಅಧಿಪತಿ ಅದ್ಭುತ. ಸಪ್ತರ್ಷಿಗಳಲ್ಲಿ ದ್ಯುತಿಮಾನ ಇರುತ್ತಾನೆ.

ಭಗವಂತನ ಭಾಗಶಃ ಅವತಾರವಾದ ಋಷಭದೇವನು ತನ್ನ ತಂದೆ ತಾಯಿಯರಾದ ಆಯುಸ್ಮಾನ ಹಾಗೂ ಅಂಬುಧಾರದಿಂದ ಜನಿಸುತ್ತಾನೆ. ಅವನು ಅದ್ಭುತನೆಂಬ ಹೆಸರಿನ ಇಂದ್ರನು ಮೂರು ಜಗತ್ತಿನ ಸಮೃದ್ಧಿಯನ್ನು ಅನುಭವಿಸುವುದನ್ನು ಸಾಧ್ಯವಾಗಿಸುತ್ತಾನೆ.

ಉಪಶ್ಲೋಕನ ಮಗನಾದ ಬ್ರಹ್ಮಸವರ್ಣಿಯು ಹತ್ತನೆಯ ಮನುವಾಗಿರುತ್ತಾನೆ. ಅವನ ಪುತ್ರರಲ್ಲಿ ಭೂರಿಸೇನನೂ ಇರುತ್ತಾನೆ. ಹವಿಸ್ಮಾನ್, ಸುಕೃತ, ಸತ್ಯ, ಜಯ, ಮೂರ್ತಿ ಮತ್ತು ಇತರರು ಸಪ್ತರ್ಷಿಗಳಾಗಿರುತ್ತಾರೆ. ಸುವಾಸನ ಮತ್ತು ವಿರುದ್ಧಸ ಉಪದೇವತೆಗಳಾಗಿರುತ್ತಾರೆ ಹಾಗೂ ಶಂಭುವು ಅವರ ದೊರೆ ಇಂದ್ರನಾಗಿರುತ್ತಾನೆ.

ಹನ್ನೊಂದನೆಯ ಮನ್ವಂತರದಲ್ಲಿ ಅಧ್ಯಾತ್ಮಿಕ ಜ್ಞಾನದಲ್ಲಿ ಪರಮ ಪಾರಂಗತನಾದ ಧರ್ಮಸವರ್ಣಿಯು ಮನುವಾಗಿರುತ್ತಾನೆ. ಅವನಿಂದ ಸತ್ಯಧರ್ಮನ ಮುಖಂಡತ್ವದಲ್ಲಿ ಹತ್ತು ಪುತ್ರರಿರುತ್ತಾರೆ. ವಿಭಂಗಮರು, ಕಮಂಗಮರು, ನಿರ್ವರುಚಿ ಹಾಗೂ ಇತರರು ಉಪದೇವತೆಗಳಾಗಿರುತ್ತಾರೆ. ವಿಭೃತನು ಇಂದ್ರನಾಗಿದ್ದು ಸಪ್ತರ್ಷಿಗಳು ಅರುಣನ ನೇತೃತ್ವದಲ್ಲಿರುತ್ತಾರೆ.

ರುದ್ರಸವರ್ಣಿಯು ಹನ್ನೆರಡನೆಯ ಮನುವಾಗಿದ್ದು ದೇವರಣ, ಉಪದೇವ ಮತ್ತು ದೇವಶ್ರೇಷ್ಟರು ಅವನ ಪುತ್ರರಾಗಿರುತ್ತಾರೆ. ಋತಧರ್ಮನು ಇಂದ್ರನು, ಹರಿತರು ಉಪದೇವತೆಗಳು, ಮುನಿಗಳಲ್ಲಿ ತಪೋಮೂರ್ತಿ, ತಪಸ್ವಿ ಮತ್ತು ಅಗ್ನಿಧ್ರಕರಿರುತ್ತಾರೆ.

ಹದಿಮೂರನೇ ಮನುವು ದೇವಸವರ್ಣಿಯಾಗಿದ್ದು ಅವನು ಅಪಾರ ಅಧ್ಯಾತ್ಮಿಕ ಜ್ಞಾನವನ್ನು ಹೊಂದಿರುತ್ತಾನೆ. ಅವನ ಮಕ್ಕಳಲ್ಲಿ ಚಿತ್ರಸೇನ ಮತ್ತು ವಿಚಿತ್ರರಿರುತ್ತಾರೆ. ಇದೇ ಮನ್ವಂತರದಲ್ಲಿ ಸುಕರ್ಮರು ಹಾಗೂ ಸುತ್ರಮರು ಉಪದೇವತೆಗಳಾಗಿದ್ದು ಶುಚಿಯು ಇಂದ್ರನಾಗಿರುತ್ತಾನೆ. ಅಗ್ನಿ, ಬಾಹು, ಶುಚಿ, ಶುದ್ಧ, ಮಗಧ ಮತ್ತು ಇತರ ಕಠಿಣ ತಪಸ್ವಿಗಳು ಸಪ್ತರ್ಷಿಗಳಾಗಿರುತ್ತಾರೆ.

ಹದಿನಾಲ್ಕನೆಯ ಮನ್ವಂತರದಲ್ಲಿ ಭಗವಂತನೇ ವಿತಾನಳ ಗರ್ಭದಲ್ಲಿ ಕಾಣಿಸಿಕೊಂಡು ಅವನ ಪಿತನು ಸತ್ರಾಯಣನಾಗಿರುತ್ತಾನೆ. ಈ ಅವತಾರವನ್ನು ಬೃಹದ್ಭಾನು ಎಂಬುದಾಗಿ ಕೊಂಡಾಡಿ ಅವನು ಅಧ್ಯಾತ್ಮಿಕ ಚಟುವಟಿಕೆಗಳನ್ನು ನಡೆಸುತ್ತಾನೆ ಎಂದು ಶ್ರೀ ಶುಕಾಚಾರ್ಯರು ಹೇಳಿದರು.

ಈ ಮನುಗಳ ಆಳ್ವಿಕೆಗೆ ಒಳಪಟ್ಟಿದ್ದ ಕಾಲಾವಧಿಯು ಒಂದು ಸಾವಿರ ಯೋಗಚಕ್ರಗಳಾಗಿದ್ದು ಅದನ್ನು ಕಲ್ಪ ಅಥವಾ ಬ್ರಹ್ಮದೇವನ ಒಂದು ದಿನವೆಂದು ಕರೆಯಲಾಗುತ್ತದೆ.

ಮನು ಮತ್ತು ಇತರರು ಪ್ರತಿಯೊಂದು ಮನ್ವಂತರದಲ್ಲಿ ತಮ್ಮ ತಮ್ಮ ಕರ್ತವ್ಯಗಳಲ್ಲಿ ಹೇಗೆ ನಿರತರಾಗಿರುತ್ತಾರೆ ಮತ್ತು ಅವರಿಗೆ ಯಾರು ಆಜ್ಞೆಗಳನ್ನು ನೀಡುತ್ತಾರೆ ಎಂಬುದನ್ನು ಪರೀಕ್ಷಿತ ಮಹಾರಾಜನು ಶ್ರೀ ಶುಕಾಚಾರ್ಯರಿಂದ ತಿಳಿದುಕೊಳ್ಳಲು ಬಯಸಿದನು.

ದೇವಪ್ರಮುಖನು,ಮನುಗಳು, ಮನುವಿನ ಪುತ್ರರು, ಮಹಾನ್ ಮುನಿಗಳು, ಇಂದ್ರರು ಮತ್ತು ಉಪದೇವತೆಗಳನ್ನು ಯಜ್ಞದಂಥ ತನ್ನ ವಿವಿಧ ಅವತಾರಗಳಲ್ಲಿ ನೇಮಿಸುತ್ತಾನೆಂದು ಶ್ರೀ ಶುಕಾಚಾರ್ಯರು ಹೇಳಿದರು.

ಶ್ರೀ ಶುಕಾಚಾರ್ಯರೆಂದರು : "ಎಲೈ ದೊರೆಯೇ, ನಾನು ಈಗಾಗಲೇ ಯಜ್ಞದಂಥ ಭಗವಂತನ ವಿವಿಧ ಅವತಾರಗಳನ್ನು ನಿನಗೆ ವಿವರಿಸಿದ್ದೇನೆ. ಮನು ಹಾಗೂ ಇತರರು ಈ ಅವತಾರಗಳಿಂದ ಆಯ್ಕೆಗೊಂಡಿದ್ದು ಅವುಗಳ ಸೂಚನೆಗೆ ಅನುಗುಣವಾಗಿ ಅವರು ಜಗತ್ತಿನ ವ್ಯವಹಾರಗಳನ್ನು ನಡೆಸುತ್ತಾರೆ. ಪ್ರತಿ ನಾಲ್ಕು ಯುಗಗಳ ಕೊನೆಯಲ್ಲಿ, ಮುನಿಸದೃಶ ವ್ಯಕ್ತಿಗಳು ಮಾನವ ಕುಲದ ಶಾಶ್ವತ ವೃತ್ತಿ ಕರ್ತವ್ಯಗಳು ದುರುಪಯೋಗವಾಗುವುದು ಕಂಡು ಬಂದಾಗ, ಧಾರ್ಮಿಕ ತತ್ತ್ವಗಳನ್ನು ಪುನರ್‌ಸ್ಥಾಪಿಸುತ್ತಾರೆ". ಅನಂತರ ಮನುಗಳು ನೇರವಾಗಿ ವೃತ್ತಿಪರ ಕರ್ತವ್ಯವನ್ನು ಅದರ ನಾಲ್ಕು ವಿಭಾಗಗಳೊಂದಿಗೆ ನೇರವಾಗಿ ಪುನ: ಸ್ಥಾಪಿಸುತ್ತಾರೆ. ಶ್ರೀ ಶುಕಾಚಾರ್ಯರು ಮುಂದುವರಿದು ಹೇಳಿದರು: "ಪ್ರತಿಯೊಂದು ಯುಗದಲ್ಲೂ ಭಗವಂತನು ಅತೀಂದ್ರಿಯ ಜ್ಞಾನವನ್ನು ಬೋಧಿಸುವ ಸಲುವಾಗಿ ಸನಕನಂಥ ಸಿದ್ಧರ ರೂಪವನ್ನು ತಳೆಯುತ್ತಾನೆ. ಕರ್ಮದ ಮಾರ್ಗವನ್ನು ತಿಳಿಸಲು ಅವನು ಯಜ್ಞವಲ್ಕ್ಯನಂಥ ಋಷಿಗಳ ರೂಪನ್ನು ತಳೆಯುತ್ತಾನೆ ಹಾಗೂ ಅತೀಂದ್ರಿಯ ಯೋಗವನ್ನು ಬೋಧಿಸಲು ದತ್ತಾತ್ರೇಯನಂಥ ಯೋಗಿಗಳ ರೂಪವನ್ನು ತಳೆಯುತ್ತಾನೆ". ಭಗವಂತನು ಮರೀಚಿಯ ರೂಪದಲ್ಲಿ ಸಂತತಿಯನ್ನು ಸೃಷ್ಟಿಸಿ, ದುಷ್ಟರನ್ನು ಸಂಹರಿಸಿ ಪ್ರತಿಯೊಂದನ್ನು ನಿರ್ನಾಮಗೊಳಿಸುತ್ತಾನೆ. ಸಾಮಾನ್ಯವಾಗಿ ಜನರು ಭ್ರಮಾಶಕ್ತಿಯಿಂದ ಭೀತಗೊಂಡವರಾಗಿರುವುದರಿಂದ, ವಿವಿಧ ಬಗೆಯ ಸಂಶೋಧನೆಗಳ ಹಾಗೂ ಆಧ್ಯಾತ್ಮಿಕ ಮಾರ್ಗಗಳ ಮೂಲಕ ಪರಮ ಸತ್ಯವಾದ ಭಗವಂತನನ್ನು ಕಾಣಲು ಯತ್ನಿಸುತ್ತಾರೆ. ಆದರೂ ಅವರು ಭಗವಂತನನ್ನು ಕಾಣಲು ಅಸಮರ್ಥರು. ಒಂದು ಕಲ್ಪದಲ್ಲಿ ಅಥವಾ ಬ್ರಹ್ಮನ ಒಂದು ದಿನದಲ್ಲಿ ವಿಕಲ್ಪಗಳೆಂಬ ಅನೇಕ ಬದಲಾವಣೆಗಳು ಸಂಭವಿಸುತ್ತವೆ. ಭೂತ, ಭವಿಷ್ಯತ್ ಹಾಗೂ ವರ್ತಮಾನವನ್ನು ಬಲ್ಲ ಮೇಧಾವಿಗಳು ಬ್ರಹ್ಮನ ಒಂದು ದಿನದಲ್ಲಿ ಹದಿನಾಲ್ಕು ಮನುಗಳಿದ್ದರು ಎಂಬುದಾಗಿ ನಿಶ್ಚಯಿಸಿದ್ದಾರೆ.

## ಬಲಿ ಮಹಾರಾಜ

ಭಗವಂತನೇಕೆ ಬಲಿ ಮಹಾರಾಜನಿಂದ ಮೂರು ಹೆಜ್ಜೆ ಭೂಮಿಯನ್ನು ಬೇಡಿದನು ಹಾಗೂ ಅದು ದೊರೆತಾಗ ಬಲಿ ಮಹಾರಾಜನನ್ನೇಕೆ ಅವನು ಸೆರೆ ಹಿಡಿದನು ಎಂಬುದನ್ನು ಪರೀಕ್ಷಿತ ಮಹಾರಾಜನು ಶ್ರೀ ಶುಕಾಚಾರ್ಯರಿಂದ ತಿಳಿದುಕೊಳ್ಳಲು ಬಯಸಿದನು.

ಉಪದೇವತೆಗಳೊಂದಿಗಿನ ಕದನದಲ್ಲಿ ಬಲಿ ಮಹಾರಾಜನು ಪರಾಜಯಗೊಂಡಾಗ ಇಂದ್ರದೇವನಿಂದ ಬಲಿ ಮಹಾರಾಜನು ಕೊಲ್ಲಲ್ಪಡುವ ಸ್ಥಿತಿಯನ್ನು ತಲಪಿದ್ದನು ಎಂಬುದಾಗಿ ಶ್ರೀ ಶುಕಾಚಾರ್ಯರು ತಿಳಿಸಿದರು. ಅವನ ಸೈನಿಕರು ಅವನನ್ನು

ಶುಕ್ರಾಚಾರ್ಯರ ಬಳಿಗೆ ಕೊಂಡೊಯ್ದಾಗ ಅವನು ತನ್ನ ಆಧ್ಯಾತ್ಮಿಕ ಗುರುವಿನಿಂದ ಗುಣಮುಖನಾದನು. ಶುಕ್ರಾಚಾರ್ಯ ಹಾಗೂ ಅವರ ಅನುಯಾಯಿಗಳು ದೊರೆಯ ಬಗ್ಗೆ ಮುದಗೊಂಡು ಅವನಿಗೆ ಮಜ್ಜನ ಮಾಡಿಸಿ ಅವನನ್ನು ವಿಶ್ವಜೀತ ಯಜ್ಞದಲ್ಲಿ ತೊಡಗಿಸಿದರು. ಯಜ್ಞದ ಪರಿಣಾಮವಾಗಿ ಸುವರ್ಣ ಹಾಗೂ ರೇಷ್ಮೆಯ ಹೊದಿಕೆಯಿದ್ದ ಸ್ವರ್ಗೀಯ ರಥವೊಂದು ಕಾಣಿಸಿಕೊಂಡಿತು. ಅಲ್ಲದೆ ಇಂದ್ರನ ಅಶ್ವಗಳಂಥ ಚಿನ್ನದ ಬಣ್ಣದ ಕುದುರೆಗಳು ಹಾಗೂ ಸಿಂಹದ ಚಿಹ್ನೆಯಿದ್ದ ಧ್ವಜವೂ ಕಂಡವು. ಅದರೊಂದಿಗೇ ಹೊಳೆಯುವ ಬಿಲ್ಲು, ಅಪೂರ್ವಬಾಣಗಳಿಂದ ಕೂಡಿದ ಎರಡು ಬತ್ತಳಿಕೆಗಳು ಹಾಗೂ ದೈವಿಕ ಕವಚವೂ ಕಂಡವು. ಬಲಿ ಮಹಾರಾಜನ ತಾತನಾದ ಪ್ರಹ್ಲಾದ ಮಹಾರಾಜನು ಎಂದೂ ಬಾಡದ ಪುಷ್ಪಹಾರವನ್ನು ನೀಡಿದನಲ್ಲದೆ ಶುಕ್ರಾಚಾರ್ಯರು ಶಂಖವನ್ನು ನೀಡಿದರು. ಅನಂತರ ಬಲಿ ಮಹಾರಾಜನು ಇಂದ್ರನ ಮೇಲೆ ಬಿದ್ದನು.

ಬಲಿ ಮಹಾರಾಜನ ಉದ್ದೇಶವು ಅರಿವಾದಾಗ ಇಂದ್ರನು ಬೃಹಸ್ಪತಿಯ ಬಳಿಗೆ ತೆರಳಿ ಬಲಿ ಮಹಾರಾಜನು ತನ್ನ ಹೊಸ ಉತ್ಸಾಹದೊಂದಿಗೆ ತನ್ನ ರಾಜಧಾನಿಯ ಮೇಲೆ ಬೀಳಲಿದ್ದಾನೆಂದು ತಿಳಿಸಿದನು. ಬಲಿ ಮಹಾರಾಜನ ಸಾಮರ್ಥ್ಯಕ್ಕೆ ಯಾರು ಕಾರಣರೆಂಬುದನ್ನು ಇಂದ್ರನು ಬೃಹಸ್ಪತಿಯಿಂದ ತಿಳಿಯಲು ಬಯಸಿದನು.

ಭೃಗುವಿನ ಆಶೀರ್ವಾದಿಂದ ಬಲಿ ಮಹಾರಾಜನು ಅಸಾಧಾರಣ ಸಾಮರ್ಥ್ಯವನ್ನು ಪಡೆದಿದ್ದಾನೆಂಬುದಾಗಿ ಬೃಹಸ್ಪತಿಯು ತಿಳಿಸಿದನಲ್ಲದೆ ಭಗವಂತನಲ್ಲದೆ ಯಾರೂ ಅವನನ್ನು ತಡೆಯಲು ಸಾಧ್ಯವಿಲ್ಲವೆಂದೂ ಬ್ರಾಹ್ಮಣರಿಗೆ ಬಲಿಯು ಅಗೌರವ ತೋರಿಸಿದಾಗ ಮಾತ್ರ ಅವನು ಕಣ್ಮರೆಯಾಗುವುದು ಸಾಧ್ಯವೆಂದೂ ಹೇಳಿದನು.

ಇಂದ್ರನನ್ನೂ ಒಳಗೊಂಡಂತೆ ಉಪದೇವತೆಗಳು ರಾಜಧಾನಿಯನ್ನು ತ್ಯಜಿಸಿ ಕಣ್ಮರೆಯಾದರು. ಬಲಿಯು ಸಂತೃಪ್ತನಾಗಿ ರಾಜ್ಯವನ್ನು ಆಳಲು ತೊಡಗಿದನು. ಉಪದೇವತೆಗಳ ಮಾತೆಯಾದ ಅದಿತಿಯು ಕಳವಳಗೊಂಡಳು. ತಪಸ್ಸನ್ನಾಚರಿಸಿದ ನಂತರ ಕಶ್ಯಪ ಮುನಿಯು ಆಶ್ರಮಕ್ಕೆ ಬಂದಾಗ ಅದಿತಿಯು ನಿರುತ್ಸಾಹಳಾಗಿ ಹಾಗೂ ಮಂಕಾಗಿ ಇದ್ದುದನ್ನು ಕಂಡು ಅವಳ ಕಳವಳಕ್ಕೆ ಕಾರಣವೇನೆಂದು ಕೇಳಿದಾಗ ಅದಿತಿಯು ಬಲಿ ಮಹಾರಾಜನ ಇಡೀ ವೃತ್ತಾಂತ, ಹಾಗೂ ತನ್ನ ಪುತ್ರರ ಮೇಲೆ ಅವನ ವಿಜಯದಿಂದಾಗಿ ಅವರೆಲ್ಲರನ್ನೂ ಕಳೆದುಕೊಂಡಿರುವುದನ್ನು ತಿಳಿಸಿದಳು. ತಾವು ಕಳೆದುಕೊಂಡಿರುವುದನ್ನು ಅವರು ಮರಳಿ ಪಡೆದುಕೊಳ್ಳಲು ಅನುವಾಗುವಂತೆ ವರವನ್ನು ನೀಡಬೇಕೆಂದೂ ಅವಳು ತನ್ನ ಪತಿಯನ್ನು ಕೇಳಿಕೊಂಡಾಗ ಅವನು "ಅಯ್ಯೋ, ಮಹಾ ವಿಷ್ಣುವಿನ ಭ್ರಮಾಶಕ್ತಿಯು ಎಷ್ಟು ಶಕ್ತಿಯುತವಾಗಿದೆಯೆಂದರೆ, ಇಡೀ ಜಗತ್ತು ತನ್ನ ಮಕ್ಕಳ ಮೇಲಿನ ವಿಶ್ವಾಸದಿಂದ ಕಟ್ಟಿ ಹಾಕಲ್ಪಟ್ಟಿದೆ" ಎಂದನು. ಭಗವಂತನ ಸೇವೆಯಲ್ಲಿ ತೊಡಗುವಂತೆ ಅವನು ತನ್ನ ಪತ್ನಿಗೆ ಸಲಹೆ ಮಾಡಿದಾಗ ಅದಿತಿಯು ಅವನನ್ನು ಭಗವಂತನು ತನ್ನ ಬಗ್ಗೆ ಸಂತುಷ್ಟಗೊಂಡು ತನ್ನ ಆಸೆಗಳನ್ನು ನೆರವೇರಿಸಬೇಕಾದರೆ ಭಗವಂತನನ್ನು ಆರಾಧಿಸಲು ಅಗತ್ಯವಾದ ಕ್ರಮಬದ್ಧ ತತ್ತ್ವಗಳನ್ನು ತಿಳಿಸಿಕೊಡಬೇಕೆಂದಳು.

## ಪಯೋವ್ರತ

ಕಶ್ಯಪ ಮುನಿಯು ಹೇಳಿದನು : "ನಾನು ಸಂತತಿಯನ್ನು ಬಯಸಿದಾಗ ಕಮಲದ ಹೂವಿನಿಂದ ಜನಿಸಿದ ಬ್ರಹ್ಮದೇವನ ಮುಂದೆ ವಿಚಾರಗಳನ್ನು ಸಮರ್ಪಿಸಿದ್ದೆ. ನಾನೀಗ ನಿನಗೆ ಅದನ್ನೇ ವಿವರಿಸುತ್ತೇನೆ. ಬ್ರಹ್ಮದೇವನು ನೀಡಿದ ಸೂಚನೆಗಳನ್ನು ಪಾಲಿಸಿದಾಗ ಭಗವಂತನು ಸಂತುಷ್ಟನಾದನು. ಮುನಿಯು ತನ್ನ ಪತ್ನಿ ಅದಿತಿಗೆ "ಪಯೋವ್ರತ ಆರಾಧನೆಯ"ನ್ನು ಬೋಧಿಸಿ, "ದ್ವಾದಶಿಯಲ್ಲಿ ಅಂತ್ಯವಾಗುವ ಫಾಲ್ಗುಣ ಮಾಸದ (ಫೆಬ್ರವರಿ - ಮಾರ್ಚ್) ಹನ್ನೆರಡು ದಿನಗಳ ಕಾಲ ಒಬ್ಬಳು ಹಾಲನ್ನು ಮಾತ್ರ ಕುಡಿದು ಜೀವಿಸುತ್ತ ಸರ್ವ ವಿಧದ ಭಕ್ತಿಯಿಂದ ಕಮಲನಯನನನ್ನು ಆರಾಧಿಸಬೇಕು" ಎಂದನು.

(ಅರ್ಚನ ವಿಧಾನ : ಒಬ್ಬರು ಮಹಾವಿಷ್ಣು ಅಥವಾ ಶ್ರೀ ಕೃಷ್ಣ ಪರಮಾತ್ಮನ ವಿಗ್ರಹವನ್ನು ಸ್ಥಾಪಿಸಿ, ಆ ಮೂರ್ತಿಯನ್ನು ಹೂಮಾಲೆಗಳಿಂದ ಅಲಂಕರಿಸಿ ಎಲ್ಲ ಬಗೆಯ ಫಲಪುಷ್ಪಗಳು, ತುಪ್ಪ, ಸಕ್ಕರೆ ಹಾಗೂ ಧಾನ್ಯಗಳಿಂದ ತಯಾರಿಸಿದ ಭಕ್ಷ್ಯಗಳನ್ನು ನೇವೇದ್ಯ ಮಾಡಬೇಕು. ದೀಪ, ಧೂಪಗಳನ್ನು ಘಂಟಾನಾದದೊಂದಿಗೆ ಸಮರ್ಪಿಸಬೇಕು).

ಭಗವಂತನನ್ನು ಕೊಂಡಾಡುವಂಥ ಮಂತ್ರಗಳನ್ನು ಪಠಿಸಿ, ಅಕ್ಕಿ, ಹಾಲು, ಸಕ್ಕರೆ ಇತ್ಯಾದಿಯಿಂದ ಮಾಡಲಾದ ಪ್ರಸಾದಗಳನ್ನು ನೀಡಬೇಕು. ತಾವು ಹಾಲನ್ನು ಮಾತ್ರ ಸೇವಿಸಬೇಕಲ್ಲದೆ ಅಗ್ನಿಗೆ ಅರ್ಜ್ಯಗಳನ್ನು ನೀಡಿ ಬ್ರಾಹ್ಮಣರಿಗೆ ಭೋಜನವನ್ನು ನೀಡಬೇಕು. ಈ ರೀತಿಯಾಗಿ ಪ್ರತಿ ದಿನವೂ ದೈನಂದಿನ ಕರ್ತವ್ಯಗಳನ್ನು ನೆರವೇರಿಸುವುದರೊಂದಿಗೇ ಪಯೋವ್ರತವನ್ನು ಆಚರಿಸಬೇಕು. ಪ್ರತಿಪದದಿಂದ ಮುಂದಿನ ಪೂರ್ಣಿಮೆಯವರೆಗೆ (ಶುಕ್ಲ ತ್ರಯೋದಶಿ) ಬ್ರಹ್ಮಚರ್ಯೆಯನ್ನು ಪಾಲಿಸಿ, ನೆಲದ ಮೇಲೆ ಮಲಗಿ, ಮೂರು ಬಾರಿ ಮಡಿಯುಟ್ಟು ವ್ರತವನ್ನು ಪಾಲಿಸಬೇಕು. ಈ ಅವಧಿಯಲ್ಲಿ ಐಹಿಕ ಅಥವಾ ಇಂದ್ರಿಯ ವಿಷಯಗಳನ್ನು ಕುರಿತು ಚರ್ಚಿಸಕೂಡದು ಮತ್ತು ವಾಸುದೇವನ ಸರಳ ಹಾಗೂ ಪರಿಶುದ್ಧ ಭಕ್ತನಾಗಿ ಮಾತ್ರ ಉಳಿದು ಚಂದ್ರನ ಹದಿಮೂರನೆಯ ದಿನ ಮೂರ್ತಿಗೆ ಪಂಚಾಮೃತ ಅಭಿಷೇಕ ಮಾಡಬೇಕು.

ಪ್ರತಿಪದದಿಂದ ತ್ರಯೋದಶಿಯವರೆಗೆ ಆರಾಧನೆಯನ್ನು ನೃತ್ಯ, ಭಜನೆ, ಕೀರ್ತನೆ, ಮಂತ್ರವಚನದೊಂದಿಗೆ ನೆರವೇರಿಸಿ ಶ್ರೀಮದ್ಭಾಗವತವನ್ನು ಓದುವ ಮೂಲಕ ಪೂಜೆಯನ್ನು ಸಲ್ಲಿಸಬೇಕು.

ಮುನಿಯು ಹೇಳಿದನು : "ಎಲೈ ಅದೃಷ್ಟಶಾಲಿ ಹೆಂಗಸೇ", "ಪಯೋವ್ರತ"ವನ್ನು ಆಚರಿಸಿ ಒಳ್ಳೆಯ ಮನಸ್ಸಿನಿಂದ ಸರ್ವಶಕ್ತ ಭಗವಂತನನ್ನು ಆರಾಧಿಸು". "ಸರ್ವಯಜ್ಞ" ವೆಂಬುದಾಗಿಯೂ ಕರೆಯಲ್ಪಟ್ಟಿರುವ ಈ ವ್ರತವನ್ನು ನೇಮದಿಂದ ಮಾಡಿದಲ್ಲಿ ಭಗವಂತನು ಅವಳ ಇಷ್ಟಾರ್ಥಗಳನ್ನು ನೆರವೇರಿಸುವನೆಂದು ಮುನಿಯು ಪತ್ನಿಗೆ ಹೇಳಿದನು.

ಅದಿತಿಯು ಇದಕ್ಕೊಪ್ಪಿ ತನ್ನ ಪತಿಯ ಸಲಹೆಯಂತೆ "ಪಯೋವ್ರತ" ವನ್ನು ಆಚರಿಸುತ್ತ ಭಗವಂತನಲ್ಲೇ ತದೇಕಚಿತ್ತಳಾಗಿ, ಇಂದ್ರಿಯಗಳನ್ನು ನಿಯಂತ್ರಿಸಿಕೊಂಡು ವಾಸುದೇವನಲ್ಲಿ ಮನಸ್ಸನ್ನಿಟ್ಟಳು. ಪರಮಾತ್ಮನು ಪ್ರತ್ಯಕ್ಷನಾದಾಗ ಆನಂದತುಂಬಿದವಳಾದ ಅವಳು ಭಕ್ತಿಪೂರ್ವಕ ಪ್ರಣಾಮಗಳನ್ನು ಸಲ್ಲಿಸಿದಳು. ಪರಮಾತ್ಮನೊಂದಿಗೆ ಮುಖಾಮುಖಿಯಾದಾಗ ಅವಳು ಉತ್ತುಂಗ ಸ್ಥಿತಿಗೇರಿ ಅವಳ ದೇಹವು ಕಂಪಿಸಿತು. ಪರಮಾತ್ಮನೆಂದನು : "ಉಪದೇವತೆಗಳ ಮಾತೆಯೇ, ತಮ್ಮ ಶತೃಗಳಿಂದ ಮನೆಯಿಂದ ಓಡಿಸಲ್ಪಟ್ಟು ತಮ್ಮೆಲ್ಲ ಸಮೃದ್ಧಿಯನ್ನು ಕಳೆದುಕೊಂಡಿರುವ ನಿನ್ನ ಪುತ್ರರ ಕಲ್ಯಾಣಕ್ಕಾಗಿ ನಿನ್ನ ದೀರ್ಘಕಾಲದ ಹಂಬಲ ನನಗೆ ಈಗಾಗಲೇ ತಿಳಿದಿದೆ. ನೀನು ನಿನ್ನ ಪುತ್ರರನ್ನು ಪಡೆದುಕೊಂಡು ಕದನದಲ್ಲಿ ಅವರು ಶತೃಗಳನ್ನು ಸೋಲಿಸಿ ನಿನ್ನ ಆವಾಸಸ್ಥಾನ ಹಾಗೂ ಸಮೃದ್ಧಿಯನ್ನು ಮರುಗಳಿಸಿಕೊಂಡ ನಂತರ ಅವರನ್ನೂ ಸೇರಿಸಿಕೊಂಡು ನನ್ನನ್ನು ಆರಾಧಿಸಲು ಬಯಸಿರುವೆ ಎಂಬುದೂ ನನಗೆ ಗೊತ್ತಿದೆ".

ಭಗವಂತನು ಮುಂದೆ ಹೇಳಿದನು : "ನನ್ನ ಅಭಿಪ್ರಾಯದಲ್ಲಿ ಸದಾಕಾಲವೂ ಭಗವಂತನ ಕೃಪಾಪಾತ್ರರಾಗಿರುವ ಬ್ರಾಹ್ಮಣರಿಂದ ಸಂರಕ್ಷಿಸಲ್ಪಟ್ಟಿರುವ ದಾನವರ ಮುಖ್ಯಸ್ಥರು ಸದ್ಯದಲ್ಲಿ ಬಲಶಾಲಿಗಳಾಗಿದ್ದಾರೆ. ಈಗ ಅವರ ಮೇಲೆ ಶಕ್ತಿಯನ್ನು ಉಪಯೋಗಿಸುವುದು ಸಂತಸದಾಯಕವಲ್ಲ. ಆದರೆ ನೀನು ನಿನ್ನ ವ್ರತದಿಂದ ನನ್ನನ್ನು ಸಂತುಷ್ಟಪಡಿಸಿರುವುದರಿಂದ, ಎಲೈ ಅದಿತಿ ಮಾತೆಯೇ ನಿನಗೆ ನಾನು ಯಾವುದಾದರೂ ಅನುಕೂಲವನ್ನು ಕಲ್ಪಿಸಿಕೊಡಲೇ ಬೇಕು. ಏಕೆಂದರೆ ನನಗೆ ಸಲ್ಲಿಸಿದ ಪೂಜೆಯು ಎಂದೂ ವ್ಯರ್ಥವಾಗದಿದ್ದು ಖಂಡಿತವಾಗಿಯೂ ಒಬ್ಬರ ಅರ್ಹತೆಯನ್ನು ಆಧರಿಸಿ ಅದರ ಫಲಗಳು ಅವರಿಗೆ ದೊರೆಯುತ್ತವೆ". ಭಗವಂತನು ನಂತರ ತಾನೇ ಅವಳ ಪತಿಯಲ್ಲಿ ವಾಸವಾಗಿರುವೆನೆಂದು ಭಾವಿಸಿ ಅವಳು ತನ್ನ ಪತಿಯಾದ ಕಶ್ಯಪನನ್ನು ಆರಾಧಿಸಬೇಕೆಂದು ತಿಳಿಸಿ ಮಾಯವಾದನು. ಭಗವಂತನ ಉಪಾಧಿಕ ಅಂಶವು ತನ್ನೊಳಗೆ ಸೇರಿದ ಅನುಭವ ಧ್ಯಾನಮಗ್ನನಾಗಿದ್ದ ಕಶ್ಯಪನಿಗೆ ಉಂಟಾಯಿತು. ಅವನು ತನ್ನ ಸಾಮರ್ಥ್ಯವನ್ನು ಅದಿತಿಗೆ ವರ್ಗಾಯಿಸುವುದನ್ನು ತಿಳಿದ ಬ್ರಹ್ಮನು ಭಗವಂತನಿಗೆ ಮೊರೆಯಿಟ್ಟನು.

## ವಾಮನ

ಶ್ರಾವಣ ದ್ವಾದಶಿಯಂದು (ಭಾದ್ರಮಾಸದ ಪ್ರಕಾಶಮಯ ಪಾಕ್ಷಿಕದ ಹನ್ನೆರಡನೆಯ ದಿನ) ಚಂದ್ರನು ಶ್ರವಣವೆಂಬ ಚಂದ್ರನ ಗ್ರಹಕ್ಕೆ, ಅಭಿಜಿತ್ ಎಂಬ ಪವಿತ್ರತಮ ಕ್ಷಣದಲ್ಲಿ ಆಗಮಿಸಿದಾಗ ಭಗವಂತನು ಜಗತ್ತಿನಲ್ಲಿ ಕಾಣಿಸಿಕೊಂಡನು. ಭಗವಂತನ ಗೋಚರಿಸುವಿಕೆಯು ಪ್ರಶಸ್ತವೆಂದು ಬಗೆಯಲಾದ ಈ ಸಂದರ್ಭದಲ್ಲಿ ಸೂರ್ಯನಿಂದ ಶನಿಯವರೆಗೆ ಎಲ್ಲ ಗ್ರಹಗಳೂ ಅನುಕೂಲಕರವಾಗಿದ್ದವು.

ಚಂದ್ರನ ಹನ್ನೆರಡನೆಯ ದಿನ, ದ್ವಾದಶಿಯಂದು, ಎಲ್ಲ ವಿದ್ವಾಂಸರೂ ಬಲ್ಲಂತೆ ಸೂರ್ಯನು ಖಗೋಳ ಧ್ರುವದಲ್ಲಿದ್ದನು. ಈ ದ್ವಾದಶಿಯನ್ನು ವಿಜಯವೆಂದು ಕರೆಯಲಾಗುತ್ತದೆ.

ಭಗವಂತನು ತನ್ನ ಆಭರಣ ಹಾಗೂ ಕೈಗಳಲ್ಲಿ ಆಯುಧಗಳನ್ನು ಹಿಡಿದು ತನ್ನ ಮೂಲ ರೂಪದಲ್ಲಿ ಕಾಣಿಸಿಕೊಂಡನು. ಶಾಶ್ವತವಾದ ಈ ಸ್ವರೂಪವು ಐಹಿಕ ಜಗತ್ತಿನಲ್ಲಿ ಕಾಣಿಸಿಕೊಳ್ಳದಿದ್ದರೂ ಅವನು ಈ ರೂಪದಲ್ಲಿ ಕಾಣಿಸಿಕೊಂಡಾಗ ತನ್ನ ಮಾತಾ ಪಿತೃಗಳ ಸಮ್ಮುಖದಲ್ಲಿ ಅವನು ಕುಬ್ಜ ಬ್ರಾಹ್ಮಣ ರೂಪದಲ್ಲಿ ವಾಮನಾವತಾರವನ್ನು ತಳೆದನು.

ಉನ್ನತ ಮುನಿಗಳು ಉಪನಯನವನ್ನೂ ಒಳಗೊಂಡಂತೆ ಎಲ್ಲ ಪವಿತ್ರ ವಿಧಿಗಳನ್ನೂ ನೆರವೇರಿಸಿದರು. ಸೂರ್ಯದೇವನೇ ಗಾಯಿತ್ರಿ ಮಂತ್ರವನ್ನು ಬೋಧಿಸಿದನು. ಬೃಹಸ್ಪತಿಯು ಯಜ್ಞೋಪವೀತವನ್ನಿತ್ತು ಕಶ್ಯಪ ಮುನಿಯು ಜೊಂಡಿನ ಡಾಬನ್ನು ಒದಗಿಸಿದನು. ಭೂಮಿ ತಾಯಿಯು ಅವನಿಗೆ ಜಿಂಕೆಯ ಚರ್ಮವನ್ನು ನೀಡಿ ಅರಣ್ಯಗಳ ರಾಜನಾದ ಉಪದೇವತೆ ಚಂದ್ರನು ಅವನಿಗೆ ಬ್ರಹ್ಮದಂಡವನ್ನು ಕೊಟ್ಟನು. ಅವನ ತಾಯಿ ಅದಿತಿಯು ಕೌಪೀನವನ್ನು ನೀಡಿ ಸ್ವರ್ಗದ ಅಧಿಪತಿಯು ಛತ್ರಿಯನ್ನು ನೀಡಿದನು. ಬ್ರಹ್ಮದೇವನು ಅವನಿಗೆ ನೀರಿನ ಕುಂಡವನ್ನೂ, ಸಪ್ತರ್ಷಿಗಳು ಕುಶ ಗರಿಕೆಯನ್ನು ಹಾಗೂ ಮಾತೆ ಸರಸ್ವತಿಯು ರುದ್ರಾಕ್ಷಿ ಮಾಲೆಯನ್ನು ನೀಡಿದರು. ಯಕ್ಷರ ದೊರೆ ಕುಬೇರನು ಭಿಕ್ಷಾಪಾತ್ರೆಯನ್ನು ನೀಡಿ, ಪರಮೇಶ್ವರನ ಪತ್ನಿ ಭಾಗವತಿಯು ಮೊದಲ ಭಿಕ್ಷೆಯನ್ನು ನೀಡಿದಾಗ ವಾಮನದೇವನು ಪವಿತ್ರ ಭೂಮಿಯಲ್ಲಿ ಅಗ್ನಿಕಾರ್ಯವನ್ನು ನೆರವೇರಿಸಿದನು.

ಬಲಿ ಮಹಾರಾಜನು ಭೃಗು ವಂಶಸ್ಥರಿಗೆ ಸೇರಿದ ಬ್ರಾಹ್ಮಣರ ಆಶ್ರಯದಲ್ಲಿ ಅಶ್ವಮೇಧ ಯಾಗವನ್ನು ನಡೆಸುತ್ತಿದ್ದನು. ವಾಮನ ದೇವನು ಬಲಿ ಮಹಾರಾಜನಿಗೆ ತನ್ನ ಕರುಣೆಯನ್ನು ತೋರಲು ಅಲ್ಲಿಗೆ ತೆರಳಿದಾಗ ತನ್ನ ತೂಕದಿಂದ ಪ್ರತಿ ಹೆಜ್ಜೆಯಲ್ಲೂ ಭೂಮಿಯನ್ನು ಕೆಳಕ್ಕೆ ಅದುಮುತ್ತಲಿದ್ದನು.

ನರ್ಮದಾ ನದಿಯ ಉತ್ತರ ದಂಡೆಯ ಮೇಲೆ ಭೃಗುಕಚ್ಛಾ ಎಂಬ ಹೆಸರನ್ನು ಹೊಂದಿದ ಸ್ಥಳದಲ್ಲಿ ಬಲಿಯು ಯಜ್ಞದಲ್ಲಿ ತೊಡಗಿದ್ದಾಗ ಅಲ್ಲಿ ನೆರೆದಿದ್ದ ಬ್ರಾಹ್ಮಣ ಪುರೋಹಿತರು, ಭೃಗುವಿನ ಸಂತತಿಯವರು ಸೂರ್ಯನೋಪಾದಿಯಲ್ಲಿ ಉದಯಿಸಿದ ವಾಮನ ದೇವನನ್ನು ಕಂಡರು. ವಾಮನನು ಯಜ್ಞಮಂಟಪವನ್ನು ಪ್ರವೇಶಿಸಿದಾಗ ಆನಂದಗೊಂಡ ಬಲಿಮಹಾರಾಜನು ಅವನಿಗೆ ಆಸನವನ್ನಿತ್ತನು ಹಾಗೂ ಪೂಜಿಸಿದನು. ಬಲಿ ಮಹಾರಾಜನು ವಾಮನ ದೇವನಿಗೆ ಹೇಳಿದನು : "ಎಲೈ ಬ್ರಾಹ್ಮಣನೇ, ನಾನು ನಿನಗೆ ಹೃತ್ಪೂರ್ವಕ ಸ್ವಾಗತವನ್ನು ಬಯಸಿ ಪ್ರಣಾಮಗಳನ್ನು ಸಲ್ಲಿಸುತ್ತೇನೆ. ನೀನು ನಮಗೆ ಉನ್ನತ ಬ್ರಾಹ್ಮಣ ಋಷಿಗಳ ಅಪರಾವತರವಾಗಿ ಕಾಣುತ್ತಿರುವುದರಿಂದ ನಾನು ನಿನಗೆ ಏನನ್ನು ನೀಡಬೇಕೆಂಬುದನ್ನು ತಿಳಿಸುವಂಥವನಾಗು". ಅದಕ್ಕೆ ಭಗವಂತನು ಬಲಿಗೆ, ಮಹಾರಾಜನಾದ ಅವನು, ತನ್ನ ಅಧ್ಯಾತ್ಮಿಕ ಗುರಗಳ ಕೃಪೆಯಿಂದಾಗಿ ಅತ್ಯುನ್ನತ ಸ್ಥಾನದಲ್ಲಿದ್ದು ಅವನಾಡಿದ ಮಾತು ಅವನ ವಂಶಜರಿಗೆ ತಕ್ಕಂಥಾವಾಗಿವೆ ಎಂದು ನುಡಿದು: "ಎಲೈ ದೊರೆಯೆ ನಿನ್ನ ವಂಶದಲ್ಲಿ ಎಂದೂ ಕೀಳು ಮನಸ್ಸಿನ ದೊರೆಯು ಜನಿಸಿಲ್ಲವಾಗಿ ಅವರ್ಯಾರೂ ಪವಿತ್ರ ಸ್ಥಳದಲ್ಲಿ ಬ್ರಾಹ್ಮಣರು ಅಪೇಕ್ಷಿಸಿದ ದಾನಧರ್ಮಗಳನ್ನು ನಿರಾಕರಿಸಿಲ್ಲ. ಗಗನದಲ್ಲಿನ ಸುಂದರ ಚಂದ್ರನಂತೆ ಶೋಭಿಸುವ ಪ್ರಹ್ಲಾದ ಮಹಾರಾಜನ

ಇರುವಿಕೆಯಿಂದಾಗಿ ನಿಮ್ಮ ವಂಶವು ಇನ್ನೂ ವೈಭವಯುತವಾಗಿದೆ." ವಾಮನ ದೇವನು ಬಲಿ ಮಹಾರಾಜ ಮತ್ತು ಉನ್ನತ ನಾಯಕರು ಹಾಗೂ ತಮ್ಮ ಉನ್ನತ ಚಟುವಟಿಕೆಯಿಂದ ಪ್ರಖ್ಯಾತರಾಗಿದ್ದ ಅವನ ವಂಶಜರನ್ನು ಕೊಂಡಾಡಿದನು. ವಾಮನ ದೇವನು ತನ್ನ ಹೆಜ್ಜೆಯ ಅಳತೆಗೆ ಅನುಗುಣವಾಗಿ ಮೂರು ಪಾದಗಳಷ್ಟು ಭೂಮಿಯನ್ನು ಕೇಳಿದನು. "ಪ್ರಾಜ್ಞರಾದ ಬ್ರಾಹ್ಮಣರು ತಮ್ಮ ಅವಶ್ಯಕತೆಗಳಿಗೆ ಅನುಗುಣವಾಗಿ ದಾನವನ್ನು ಬೇಡಿದರೆ ಅವರ ಪಾಪಪೂರಿತ ಚಟುವಟಿಕೆಗಳ ತೊಡಕಿಗೆ ಸಿಲುಕಿಕೊಳ್ಳುವುದಿಲ್ಲ".

ದೊರೆಗೆ ಇರುವ ಅಧಿಕಾರಕ್ಕೆ ಹೋಲಿಸಿದಂತೆ ಈ ಬೇಡಿಕೆಯು ತುಂಬಾ ಅಲ್ಪವಾದ್ದಾದ್ದರಿಂದ ಬಲಿ ಮಹಾರಾಜನಿಗೆ ವಾಮನ ದೇವನ ಪ್ರಾರ್ಥನೆಯನ್ನು ಕೇಳಿ ಅಚ್ಚರಿಯುಂಟಾಯಿತು.

ವಾಮನ ದೇವನು ಹೇಳಿದನು : "ಎಲೈ ನನ್ನ ಪ್ರಿಯ ದೊರೆಯೇ, ಇಂದ್ರಿಯಗಳನ್ನು ನಿಯಂತ್ರಿಸಿಕೊಳ್ಳದೆ ಇರುವವನಿಗೆ ಮೂರು ಜಗತ್ತುಗಳಲ್ಲಿ ಇರುವ ಸಮಸ್ತವನ್ನೂ ನೀಡಿದರೂ ಅವನನ್ನು ತೃಪ್ತಿಪಡಿಸಲು ಸಾಧ್ಯವಾಗದು". ಒಬ್ಬನ ಕಾಮುಕ ಬಯಕೆಗಳು ಹಾಗೂ ಹಣದ ಪಿಪಾಸೆಯನ್ನು ಪೂರೈಸುವಲ್ಲಿ ಐಹಿಕ ಅಸ್ತಿತ್ವವು ಅತೃಪ್ತಿಯನ್ನು ಎಬ್ಬಿಸುತ್ತವೆ. ಇದಕ್ಕೆ ಕಾರಣ ಜನನ ಮರಣಗಳ ಪುನರಾವೃತ್ತಿಯಿಂದ ತುಂಬಿದ ಐಹಿಕ ಬದುಕನ್ನು ಮುಂದುವರಿಸುವುದು. " ಆದರೆ ಕರ್ಮದ ಅನ್ವಯ ಪಡೆಯಲಾದಂಥವುಗಳ ಬಗ್ಗೆ ತೃಪ್ತಿಯನ್ನು ಹೊಂದಿರುವವನು ಐಹಿಕ ಅಸ್ತಿತ್ವದಿಂದ ಮೋಕ್ಷ ಪಡೆಯಲು ಅರ್ಹನಾಗಿರುತ್ತಾನೆ. ನಾನು ಕೇವಲ ಮೂರು ಪಾದ ಭೂಮಿಯನ್ನು ಅಪೇಕ್ಷಿಸುತ್ತೇನೆ. ಇಂಥ ಕೊಡುಗೆಯಿಂದಾಗಿ ನನಗೆ ತುಂಬಾ ಆನಂದವುಂಟಾಗುತ್ತದೆ. ಏಕೆಂದರೆ ಅವಶ್ಯಕತೆ ಇರುವಷ್ಟನ್ನು ಮಾತ್ರ ಪಡೆದುಕೊಂಡು ಸಂತೃಪ್ತಿ ಪಡೆಯುವುದೇ ಸಂತಸಕ್ಕೆ ಮಾರ್ಗ".

ತನ್ನ ವಚನವನ್ನು ಪೂರೈಸಲು ಒಪ್ಪಿದ ಬಲಿ ಮಹಾರಾಜನು ನೀರಿನ ಕುಂಡವನ್ನು ಕೈಗೆತ್ತಿಕೊಂಡನು. ವಿಷ್ಣು ಪರಮಾತ್ಮನ ಉದ್ದೇಶವನ್ನು ಅರ್ಥಮಾಡಿಕೊಂಡ ಶುಕ್ರಾಚಾರ್ಯರು ತಕ್ಷಣವೇ ತನ್ನ ಶಿಷ್ಯನಿಗೆ (ಬಲಿ ಮಹಾರಾಜನಿಗೆ) ಹೇಳಿದರು: "ಎಲೈ ವಿರೋಚನ ಪುತ್ರನೇ, ಬ್ರಹ್ಮಚಾರಿಯ ರೂಪದಲ್ಲಿ ಆಗಮಿಸಿರುವ ಈ ಕುಬ್ಜನು ಸ್ವತಃ ವಿಷ್ಣುವೇ ಆಗಿದ್ದಾನೆ. ಕಶ್ಯಪ ಮುನಿ ಹಾಗೂ ಅದಿತಿಯರನ್ನು ತನ್ನ ತಂದೆ ತಾಯಿಯರನ್ನಾಗಿಸಿಕೊಂಡ ಈತ ಉಪದೇವತೆಗಳ ಹಿತರಕ್ಷಣೆಯನ್ನು ಮಾಡುವ ಸಲುವಾಗಿ ಕಾಣಿಸಿಕೊಂಡಿದ್ದಾನೆ."

"ಈ ಮೂರು ಪಾದ ಭೂಮಿಯನ್ನು ನೀನು ನೀಡಿದಾಗ ಅವನು ಇಡೀ ಮೂರು ಜಗತ್ತುಗಳನ್ನು ಆಕ್ರಮಿಸಿಕೊಳ್ಳುತ್ತಾನೆ" ಎಂದು ಶುಕ್ರಾಚಾರ್ಯರು ಹೇಳಿದರು. ಅವನಿಗೆ ಮೂರು ಪಾದ ಭೂಮಿಯನ್ನು ನೀಡದಿರುವಂತೆ ಅವರು ಬಲಿ ಮಹಾರಾಜನಿಗೆ ಎಚ್ಚರಿಕೆಯನ್ನು ನೀಡಿದರು. ಒಮ್ಮೆ ನೀಡಿದ ವಚನವನ್ನು ಪೂರೈಸದಿರುವ ಬಗ್ಗೆ ಇರುವ ಕಲ್ಪನೆಗಳನ್ನು ಕುರಿತು ಪ್ರಸ್ತಾಪಿಸಿದ ಶುಕ್ರಾಚಾರ್ಯರು ಬಹವೃತ ಶೃತಿಯನ್ನು ಉಲ್ಲೇಖಿಸಿ ಅದರಂತೆ ಯಾವುದೇ ವಚನಕ್ಕೆ ಮುಂದೆ ಓಂ ಎಂಬ ಪದವನ್ನು ಉಚ್ಚರಿಸಿದಾಗ ಮಾತ್ರ

ಅದು ಸತ್ಯವಾಗುತ್ತಿದ್ದು ಇಲ್ಲದಿದ್ದಲ್ಲಿ ಅದು ಅಸತ್ಯವೆನ್ನಿಸುತ್ತದೆ ಎಂದರು. ಆದ್ದರಿಂದ ದೊರೆಗೆ ವಚನವನ್ನು ನಿರಾಕರಿಸುವಂತೆ ಅವರು ತಿಳಿಸಿದರು.

ಬಲಿಮಹಾರಾಜನು ಶುಕ್ರಾಚಾರ್ಯರ ಮಾತನ್ನು ಆಲಿಸಿ ಉತ್ತರಿಸಿದನು : "ನೀವು ಈಗಾಗಲೇ ತಿಳಿಸಿರುವಂತೆ, ಒಬ್ಬನ ಆರ್ಥಿಕ ಅಭಿವೃದ್ಧಿ, ಇಂದ್ರಿಯ ಸಾರ್ಥಕತೆ, ಖ್ಯಾತಿ ಮತ್ತು ಜೀವನೋಪಾಯ ಇವಕ್ಕೆ ಅಡ್ಡಿಯಾಗುವಂಥ ಧಾರ್ಮಿಕ ತತ್ತ್ವವೇ ಗೃಹಸ್ಥನೊಬ್ಬನ ನಿಜವಾದ ವೃತ್ತಿಪರ ಕರ್ತವ್ಯವಾಗಿದೆ. ಈ ಧಾರ್ಮಿಕ ತತ್ತ್ವವೇ ಸರಿಯಾದದ್ದೆಂಬುದಾಗಿ ನನಗೆನ್ನಿಸಿದೆ".

ಬಲಿ ಮಹಾರಾಜನು ಕೊಟ್ಟ ವಚನವನ್ನು ಹಿಂತೆಗೆದುಕೊಂಡು ಅಸತ್ಯವಂತ ನೆನಿಸಿಕೊಳ್ಳಲು ಇಷ್ಟಪಡಲಿಲ್ಲ. ಅವನೆಂದನು: "ಎಲೈ ಮಹಾಮುನಿಯೇ, ಧಾರ್ಮಿಕ ವಿಧಿಗಳು ಹಾಗೂ ಯಜ್ಞಗಳನ್ನು ಆಚರಿಸುವ ಸಲುವಾಗಿ ವೈದಿಕ ತತ್ತ್ವಗಳ ಬಗ್ಗೆ ಸಂಪೂರ್ಣ ತಿಳುವಳಿಕೆಯಿರುವಂಥ ನಿಮ್ಮಂಥ ಮುನಿಗಳು ಎಲ್ಲ ಪರಿಸ್ಥಿತಿಗಳಲ್ಲೂ ಮಹಾವಿಷ್ಣುವನ್ನು ಆರಾಧಿಸುತ್ತೀರಿ. ಆದ್ದರಿಂದ ಅದೇ ಮಹಾವಿಷ್ಣುವು ಇಲ್ಲಿಗೆ ನನಗೆ ವರಕೊಡಲು ಅಥವಾ ಶಿಕ್ಷಿಸಲು ಬಂದಿರಲಿ ನಾನು ಹಿಂಜರಿಕೆ ಇಲ್ಲದೆಯೇ ಅವನಿಗೆ ಕೇಳಿದ ಭೂಮಿಯನ್ನು ದಾನವನ್ನಾಗಿ ನೀಡುತ್ತೇನೆ". ತನ್ನ ಬುದ್ಧಿವಾದವನ್ನು ಕೇಳದ ಬಲಿಮಹಾರಾಜನನ್ನು ಶುಕ್ರಾಚಾರ್ಯರು ಶಪಿಸಿದರು. ಅವರೆಂದರು: "ನನಗೆ ಅವಿಧೇಯತೆಯನ್ನು ತೋರಿಸಿದ ಕಾರಣಕ್ಕಾಗಿ ನೀನು ಸದ್ಯದಲ್ಲೇ ನಿನ್ನ ಸಮೃದ್ಧಿಯೆಲ್ಲವನ್ನೂ ಕಳೆದುಕೊಳ್ಳುತ್ತೀಯೆ". ಬಲಿಮಹಾರಾಜನು ತನ್ನ ಅಧ್ಯಾತ್ಮಿಕ ಗುರುವಿನ ಉಪದೇಶವನ್ನು ಒಪ್ಪದೆ ವಾಮನ ದೇವನಿಗೆ ನೀರನ್ನು ಸಮರ್ಪಿಸುವ ಮೂಲಕ ಭೂಮಿಯನ್ನು ಕೊಡುಗೆಯನ್ನಾಗಿ ನೀಡುತ್ತಾ, ಅವನ ಪಾದವನ್ನು ತೊಳೆದು ಪೂಜಿಸಿದಾಗ ಉಪದೇವತೆಗಳು ಹಾಗೂ ಇನ್ನಿತರರೆಲ್ಲರೂ ಬಲಿ ಮಹಾರಾಜನ ಕಾರ್ಯವನ್ನು ಕೊಂಡಾಡಿದರು.

ವಾಮನ ರೂಪಿಯಾದ ಭಗವಂತನು ಐಹಿಕ ಸಾಮರ್ಥ್ಯವೆಲ್ಲವನ್ನೂ ಬಳಸಿಕೊಳ್ಳುತ್ತಾ, ಭೂಮಿ, ಗ್ರಹ ಮಂಡಲಗಳು, ಅಂತರಿಕ್ಷ, ದಿಕ್ಕುಗಳು, ಜಗತ್ತಿನ ವಿವಿಧ ರಂಧ್ರಗಳು, ಸಮುದ್ರಗಳು, ಸಾಗರಗಳು, ಪಶುಪಕ್ಷಿಗಳು, ಮಾನವಜೀವಿಗಳು, ಉಪದೇವತೆಗಳು ಹಾಗೂ ಉನ್ನತ ಮುನಿಸದೃಶರನ್ನು ತನ್ನ ಶರೀರದೊಳಗೆ ಸೇರಿಸಕೊಳ್ಳುತ್ತ ತನ್ನ ಆಕೃತಿಯನ್ನು ಬೃಹತ್ತನ್ನಾಗಿಸಿಕೊಂಡನು. ಬಲಿ ಮಹಾರಾಜನಿಗೆ ಭಗವಂತನ ವಿರಾಟ ರೂಪದ ದರ್ಶನವಾಯಿತು. ಮಹಾರಾಜನು ಪರಮಾತ್ಮನ ಬೃಹತ್ ಶರೀರದಲ್ಲಿ ಸಕಲವನ್ನೂ ಕಂಡನು.

ವಾಮನ ದೇವನು ತನ್ನ ವಿಶ್ವ ರೂಪದಲ್ಲಿ, ಆಕಾಶವನ್ನೇ ತನ್ನ ಶರೀರವನ್ನಾಗಿಸಿಕೊಂಡು, ದಿಕ್ಕುಗಳೆಲ್ಲವನ್ನೂ ತನ್ನ ಬಾಹುವಾಗಿಸಿಕೊಂಡು ಭೂಮಿಯ ಇಡೀ ನೆಲವನ್ನು ತನ್ನ ಒಂದು ಹೆಜ್ಜೆಯಲ್ಲಿ ಆಕ್ರಮಿಸಿಕೊಂಡನು. ಎರಡನೇ ಹೆಜ್ಜೆಯಲ್ಲಿ ಅವನು ಗ್ರಹ ಮಂಡಲವನ್ನು ಆಕ್ರಮಿಸಿಕೊಂಡನು. ಭಗವಂತನ ಹೆಜ್ಜೆಯು ದೊಡ್ಡದಾಗುತ್ತಲೇ ಹೋಗಿ ಮಹಲೋಕ, ಜನಲೋಕ, ತಪಲೋಕ ಮತ್ತ ಸತ್ಯಲೋಕಕ್ಕೂ

ವಿಸ್ತರಗೊಂಡು ಮೂರನೇ ಹೆಜ್ಜೆಯನ್ನಿಡಲು ಸ್ಥಳವೇ ಇಲ್ಲದಾಯಿತು. (ಭಗವಂತನ ಹೆಜ್ಜೆಗಳು ಎಲ್ಲ ಲೋಕಗಳ ಎತ್ತರವನ್ನೂ ಮೀರಿದಾಗ ಅವನ ಉಗುರುಗಳು ಜಗತ್ತಿನ ಹೊದಿಕೆಯನ್ನು ಭೇಧಿಸಿದವು. ಈ ಸಂದರ್ಭದಲ್ಲಿ ಉಂಟಾದ ರಂಧ್ರದಿಂದ ಗಂಗೆಯು ಕುಸಿದು ಎಲ್ಲ ಆತ್ಮಗಳಿಗೂ ಮೋಕ್ಷ ನೀಡುವ ಸಲುವಾಗಿ ಐಹಿಕ ಜಗತ್ತಿಗೆ ಬರುವುದು ಸಾಧ್ಯವಾಯಿತು).

ಬ್ರಹ್ಮ ಮತ್ತು ಇತರರು ಭಗವಂತನನ್ನು ಪೂಜಿಸಲು ಆಗಮಿಸಿದರು. ಬ್ರಹ್ಮನು ಉರುಕ್ರಮನೆಂದೂ ಹೆಸರಾದ ವಾಮನದೇವನ ಪದ್ಮಪಾದವನ್ನು ತೊಳೆದಾಗ ನೀರು ಎಷ್ಟು ಪರಿಶುದ್ಧವಾಯಿತೆಂದರೆ ಅದು ಗಂಗೆಯ ನೀರಾಗಿ ಪರಿವರ್ತಿತಗೊಂಡಿತು. ಎಲ್ಲ ಉಪದೇವತೆಗಳೂ ಅವನನ್ನು ಪೂಜಿಸಿದಾಗ, ದಾನವರು ಬಲಿಮಹಾರಾಜನ ಇಚ್ಛೆಗೆ ವಿರುದ್ಧರಾಗಿ ವಾಮನದೇವನನ್ನು ಸಂಹರಿಸಲು ಆಯುಧಗಳನ್ನು ಕೈಗೆತ್ತಿಕೊಂಡರು. ದಾನವರು ಹಾಗೂ ಉಪದೇವತೆಗಳ ಅನುಯಾಯಿಗಳ ಮಧ್ಯೆ ಕಾಳಗವೇರ್ಪಟ್ಟಿತು.

ಬಲಿಮಹಾರಾಜನ ಆಜ್ಞೆಯಂತೆ ದಾನವ ಮುಖ್ಯಸ್ಥರು ಜಗತ್ತಿನ ಕೆಳ ಸ್ತರಗಳಲ್ಲಿನ ವಲಯಗಳನ್ನು ಪ್ರವೇಶಿಸಿದಾಗ ಅವರು ವಿಷ್ಣುವಿನ ಭಯದಿಂದ ಓಡಿಸಲ್ಪಟ್ಟರು. ಅನಂತರ ಬಲಿ ಮಹಾರಾಜನು ಹಿಡಿಯಲ್ಪಟ್ಟಾಗ ಎಲ್ಲೆಡೆ ಕೋಲಾಹಲವುಂಟಾಯಿತು.

ವಾಮನ ದೇವನು ಬಲಿ ಮಹಾರಾಜನಿಗೆ ಅವನು ಮೂರು ಹೆಜ್ಜೆಗಳಷ್ಟು ಜಾಗವನ್ನು ನೀಡುತ್ತೇನೆಂದು ಭರವಸೆಯನ್ನು ನೀಡಿದ್ದರೂ, ಅವನ ಎರಡು ಹೆಜ್ಜೆಗಳೇ ಇಡೀ ಜಗತ್ತನ್ನು ಆಕ್ರಮಿಸಿಕೊಂಡಿವೆ ಎಂಬುದಾಗಿ ಹೇಳಿದನು. ತಾನು ತನ್ನ ಮೂರನೇ ಹೆಜ್ಜೆಯನ್ನು ಎಲ್ಲಿಡಬೇಕು ಎಂಬುದನ್ನು ಭಗವಂತನು ತಿಳಿದುಕೊಳ್ಳಲು ಬಯಸಿದನು. ಪರಮಾತ್ಮನು ನುಡಿದನು : "ನೀನು ನಿನ್ನ ವಚನಕ್ಕೆ ಅನುಗುಣವಾಗಿ ದಾನವನ್ನು ನೀಡಲು ಅಸಮರ್ಥನಾಗಿರುವುದರಿಂದ ನಿಯಮದಂತೆ ನೀನು ನರಕ ಲೋಕಕ್ಕೆ ತೆರಳಬೇಕು. ಅದ್ದರಿಂದ ನಿನ್ನ ಅಧ್ಯಾತ್ಮಿಕ ಗುರು ಶುಕ್ರಾಚಾರ್ಯರ ಆಜ್ಞೆಗೆ ಅನುಗುಣವಾಗಿ ನೀನು ಅಲ್ಲಿಗೆ ತೆರಳಿ ವಾಸಿಸುವಂಥವನಾಗು".

ಬಲಿ ಮಹಾರಾಜನು ತನ್ನ ವಚನವನ್ನು ಪೂರೈಸುವ ಸಲುವಾಗಿ ಪರಿಸ್ಥಿತಿಯನ್ನು ಸರಿಪಡಿಸುವುದಾಗಿ ತಿಳಿಸಿದನು. ಅವನು ಭಗವಂತನನ್ನು ಅವನ ಪದ್ಮಪಾದವನ್ನು ತನ್ನ ತಲೆಯ ಮೇಲಿರಿಸುವಂತೆ ಕೋರಿ ಭಕ್ತಿಭಾವದಿಂದ ನಿಂತಾಗ ಅಲ್ಲಿ ಕಾಣಿಸಿಕೊಂಡ ಪ್ರಹ್ಲಾದ ಮಹಾರಾಜನು ಭಗವಂತನಿಗೆ ನಮಸ್ಕರಿಸಿ ಬಲಿ ಮಹಾರಾಜನಿಗೆ ಸಮೃದ್ಧಿಯನ್ನು ದಯಪಾಲಿಸಿದವನೇ ಅವನಾಗಿದ್ದು, ಅದನ್ನು ಕೊಂಡೊಯ್ಯುವವನೂ ಅವನೇ ಅಗಿದ್ದಾನೆಂದು ಹೇಳಿ ತನ್ನ ಸಂಪತ್ತನ್ನು ಕಸಿದುಕೊಳ್ಳುವ ಮೂಲಕ ಭಗವಂತನು ಕರುಣೆಯನ್ನೇ ತೋರಿಸಿದ್ದಾನೆಂದನು.

ಬಲಿ ಮಹಾರಾಜನ ಪತ್ನಿಯಾದ ವಿಂಧ್ಯಾವಳಿಯು ಜಗತ್ತು ಭಗವಂತನು ತನ್ನ ವಿಹಾರಕ್ಕಾಗಿ ಸೃಷ್ಟಿಸಿಕೊಂಡಿರುವ ಸ್ಥಳವಾಗಿದ್ದು ಮೂರ್ಖರು ಅದಕ್ಕೆ ತಾನೇ ಒಡೆಯರು ಎಂಬುದಾಗಿ ಭಾವಿಸಿಕೊಳ್ಳುತ್ತಾರೆಂದಳು. ಬ್ರಹ್ಮನು ಭಗವಂತನನ್ನು ಪ್ರಾರ್ಥಿಸಿ ಬಲಿ

ಮಹಾರಾಜನು ಸಾಕಷ್ಟು ಶಿಕ್ಷೆಯನ್ನು ಅನುಭವಿಸಿದ್ದು ಅವನನ್ನು ಮತ್ತಷ್ಟು ದಂಡಿಸುವುದು ತರವಲ್ಲವೆಂದನು. ಐಹಿಕ ಸಮೃದ್ಧಿಯಿಂದಾಗಿ ಯಾವ ವ್ಯಕ್ತಿಯೇ ಹುಚ್ಚನಾದಾಗ ತಾನು ಅಂಥವನ ಸಂಪತ್ತೆಲ್ಲವನ್ನೂ ಕಸಿದುಕೊಳ್ಳುತ್ತೇನೆ ಎಂಬುದಾಗಿ ಭಗವಂತನು ನುಡಿದನು. ಮಾನವ ಜೀವಿಗೆ ವಿಶೇಷ ಅನುಕೂಲವನ್ನು ಕಲ್ಪಿಸಿಕೊಟ್ಟಾಗ ಅವನು ತನ್ನ ಶ್ರೀಮಂತಿಕೆಯಿಂದ ಜಂಭವನ್ನು ತಾಳಕೂಡದೆಂದೂ, ಐಶ್ವರ್ಯವಂತ ಕುಟುಂಬದಲ್ಲಿ ಜನನ, ಸೌಂದರ್ಯ, ಉನ್ನತ ಶಿಕ್ಷಣ ಇವು ಭಕ್ತಿಪೂರ್ವಕ ಸೇವೆಗೆ ಅಡ್ಡಿಗಳಾಗಕೂಡದೆಂದೂ ಅವನು ತಿಳಿಸಿ ನಿಜವಾದ ಭಕ್ತನು ಎಂದೂ ಗೊಂದಲಗೊಳ್ಳಲಾರ ಎಂದನು. ಭಗವಂತನೆಂದನು : "ಬಲಿ ಮಹಾರಾಜನು, ದಾನವರಲ್ಲಿ ಹಾಗೂ ಭಕ್ತರಲ್ಲದವರಲ್ಲಿ ಅತ್ಯಂತ ಹೆಸರಾದವನಾಗಿದ್ದರೂ, ತನ್ನ ಸಮೃದ್ಧಿಯೆಲ್ಲವನ್ನೂ ಕಳೆದುಕೊಂಡಾಗ್ಯೂ ಭಕ್ತಿಪೂರ್ವಕ ಸೇವೆಯಲ್ಲಿ ತನ್ನ ಚಿತ್ತವನ್ನು ಇರಿಸಿದ್ದ". ಬಲಿ ಮಹಾರಾಜನು ಯುದ್ಧದಲ್ಲಿ ಪರಾಭವ, ತನ್ನ ಆಧ್ಯಾತ್ಮಿಕ ಗುರುವಿನಿಂದಲೇ ಶಾಪಗ್ರಸ್ಥನಾಗುವುದು ಇಂಥ ಅವಹೇಳನಕರ ಪರಿಸ್ಥಿತಿಯಲ್ಲೂ ತನ್ನ ಸತ್ಯಸಂಧತೆಯನ್ನು ಬಿಡಲಿಲ್ಲ.

ಭಗವಂತನು ಮುಂದುವರಿಸಿದನು : " ಅವನ ಉನ್ನತ ತಾಳ್ಮೆಯಿಂದಾಗಿ ನಾನು ಅವನಿಗೆ ಉಪದೇವತೆಗಳಿಗೂ ಲಭ್ಯವಿರುವಂಥ ಸ್ಥಳವನ್ನು ನೀಡಿದ್ದೇನೆ. ಸವರ್ಣಿ ಎಂಬ ಮನುವಿನ ಕಾಲಾವಧಿಯಲ್ಲಿ ಅವನು ಗ್ರಹ ಮಂಡಲದ ದೊರೆಯಾಗುತ್ತಾನೆ. ಸ್ವರ್ಗಾಧಿಪತಿಯಾಗುವವರೆಗೂ ಬಲಿ ಮಹಾರಾಜನು ನನ್ನ ಆಜ್ಞೆಗೆ ಅನುಗುಣವಾಗಿ ವಿಶ್ವಕರ್ಮನಿಂದ ನಿರ್ಮಿತಗೊಂಡಿರುವ ಸುತಳ ಗ್ರಹದಲ್ಲಿ ವಾಸವಾಗಿರುತ್ತಾನೆ. ಅದನ್ನು ನಾನು ವಿಶೇಷವಾಗಿ ಸಂರಕ್ಷಿಸುವುದರಿಂದ, ಅದು ಮಾನಸಿಕ ಹಾಗೂ ದೈಹಿಕ ಬಾಧೆಗಳು, ಹಸಿವು, ಸೋಲು ಮುಂತಾದ ಗೊಂದಲಗಳಿಂದ ವಿಮುಕ್ತವಾಗಿದ್ದು, ಬಲಿ ಮಹಾರಾಜನೇ, ನೀನೀಗ ಅಲ್ಲಿಗೆ ತೆರಳಿ ಶಾಂತಿಯಿಂದ ವಾಸಿಸುವಂಥವನಾಗು".

ಭಾವಪರವಶನಾದ ಬಲಿ ಮಹಾರಾಜನು ಭಗವಂತ ಹಾಗೂ ಬ್ರಹ್ಮ ಮತ್ತು ಪರಮೇಶ್ವರರಿಗೆ ಕೃತಜ್ಞತೆಗಳನ್ನು ಸಲ್ಲಿಸಿ ತನ್ನನ್ನು ಬಿಗಿದಿದ್ದ ಹಗ್ಗಗಳಿಂದ ವಿಮುಕ್ತ ಗೊಂಡವನಾದಾಗ ಸುತಳವೆಂಬ ನೂತನ ಸ್ಥಳವನ್ನು ಪ್ರವೇಶಿಸಿದನು. ಹೀಗೆ ಇಂದ್ರನೊಬ್ಬನಿಗೆ ಗ್ರಹದ ಒಡೆತನ ನೀಡುವ ಮೂಲಕ ಉಪದೇವತೆಗಳ ಮಾತೆಯಾದ ಅದಿತಿಗೆ ನೀಡಿದ್ದ ವಚನವನ್ನು ಪೂರೈಸಿದ ಭಗವಂತನು ಜಗತ್ತನ್ನು ಆಳಿದನು.

ಇದನ್ನು ಆಲಿಸಿದ ಪ್ರಹ್ಲಾದ ಮಹಾರಾಜನೆಂದನು : " ಎಲೈ ಮಹಾಮಹಿಮನೇ, ನೀನು ವಿಶ್ವದಾದ್ಯಂತ ಪೂಜಿಸಲ್ಪಡುತ್ತೀಯಲ್ಲದೆ ಬ್ರಹ್ಮಹಾಗೂ ಶಿವನು ನಿನ್ನ ಪದ್ಮಪಾದವನ್ನು ಆರಾಧಿಸುತ್ತಾರೆ. ನೀನು ಇಂಥ ಉನ್ನತ ವ್ಯಕ್ತಿತ್ವನಾದರೂ, ನೀನು ನಮ್ಮನ್ನು, ದಾನವರನ್ನು ಸಂರಕ್ಷಿಸುವ ಕೃಪೆಯನ್ನು ತೋರಿಸಿದ್ದೀಯೆ. ಇಂಥ ಕರುಣೆಗೆ ಬ್ರಹ್ಮ ಮಹೇಶ್ವರರೇ ಏಕೆ ಸಂಪತ್ತಿನ ಅಧಿದೇವತೆಯಾದ ಲಕ್ಷ್ಮಿಯೂ ಸಹ ಪಾತ್ರಳಾಗಿಲ್ಲವೆಂದ ಮೇಲೆ ಇತರ ಉಪದೇವತೆಗಳು ಅಥವಾ ಸಾಮಾನ್ಯ ಜನರ ಮಾತಿನ್ನೇನು".

ಭಗವಂತನು ಪ್ರಹ್ಲಾದ ಮಹಾರಾಜನಿಗೆ ತನ್ನ ಮೊಮ್ಮಗನಿರುವ ಸುತಳಕ್ಕೆ ತೆರಳಿ ಸಂತೋಷವನ್ನು ಅನುಭವಿಸಬೇಕೆಂದು ಹೇಳಿ ಅಲ್ಲಿಯೂ ಅವನು ತನ್ನ ಸಾಮಾನ್ಯ ಆಕೃತಿಯಲ್ಲೇ ತನ್ನನ್ನು ಕಾಣಬಹುದೆಂದು ಭರವಸೆಯನ್ನು ನೀಡಿದನು.

ಭಗವಂತನು ಇನ್ನಿತರರೊಂದಿಗೆ ಕುಳಿತಿದ್ದ ಶುಕ್ರಾಚಾರ್ಯರನ್ನು ಸಂಭೋದಿಸಿ ಯಜ್ಞದ ಆಚರಣೆಯಲ್ಲಿ ತೊಡಗಿದ್ದ ಬಲಿ ಮಹಾರಾಜನು ಮಾಡಿದ ದೋಷವೇನೆಂಬುದನ್ನು ಕುರಿತು ಅವನನ್ನು ಪ್ರಶ್ನಿಸಿ, ಶುಕ್ರಾಚಾರ್ಯರು ಬಲಿಯನ್ನು ಶಪಿಸಿದ ಕಾರಣವನ್ನು ತಿಳಿದು ಅವನನ್ನು ಮನ್ನಿಸಿದನು. ಅದಕ್ಕೆ ಶುಕ್ರಾಚಾರ್ಯರು ಭಗವಂತನೇ ಯಜ್ಞಪುರುಷನಾಗಿದ್ದು ಎಲ್ಲವೂ ಅವನಿಗೇ ಸಮರ್ಪಿತವಾಗುವುದರಿಂದ ಅವನು ಸಂಪೂರ್ಣವಾಗಿ ಸಂತೃಪ್ತನಾದರೆ ಯಜ್ಞದಲ್ಲಿ ದೋಷವುಂಟಾಗುವ ಸಾಧ್ಯತೆಯೇ ಇಲ್ಲ, ಎಲ್ಲವೂ ದೋಷರಹಿತವಾಗುತ್ತದೆ: ಭಗವಂತನ ನಾಮಸ್ಮರಣೆ ಮಾತ್ರದಿಂದಲೇ ಅವೆಲ್ಲ ಮರೆಯಾಗುತ್ತದೆ ಎಂದನು.

ಬಲಿ ಮಹಾರಾಜನಿಂದ ತೆಗೆದು ಕೊಂಡಿದ್ದ ಪ್ರದೇಶವೆಲ್ಲವನ್ನೂ ಭಗವಂತನು ಇಂದ್ರನಿಗೆ ನೀಡಿದಾಗ ಉಪದೇವತೆಗಳು ಹಾಗೂ ಋಷಿಗಳು ಸರ್ವರ ರಕ್ಷಕನಾದ ವಾಮನದೇವನನ್ನು ಕೊಂಡಾಡಿ, ಸ್ವರ್ಗೀಯ ನೌಕೆಯಲ್ಲಿ ಅವನನ್ನು ಕೊಂಡೊಯ್ದರು. ಇಂದ್ರನು ಮೂರು ಜಗತ್ತುಗಳ ಒಡೆಯನಾಗಿ ಸ್ಥಾಪಿಸಲ್ಪಟ್ಟನು.

ಪರೀಕ್ಷಿತ ಮಹಾರಾಜನು ನಂತರ ಮತ್ಸ್ಯಾವತಾರ ಹಾಗೂ ಅದು ಸಂಭವಿಸಿದ್ದಕ್ಕೆ ಕಾರಣವನ್ನು ತಿಳಿಯಲು ಒಯಸಿದನು.

## ಮತ್ಸ್ಯ

ನ್ಯಾಯವನ್ನು ಸಂರಕ್ಷಿಸುವ ಸಲುವಾಗಿ ಭಗವಂತನು ವಿವಿಧ ಅವತಾರಗಳನ್ನು ತಳೆದು, ಅವನು ಬೇರೆ ಬೇರೆ ಆಕಾರಗಳಲ್ಲಿ ಕಂಡರೂ ಸದಾ ಅತಿಶಯನಾಗಿಯೇ ಇದ್ದಾನೆಂಬುದಾಗಿ ಶ್ರೀ ಶುಕಾಚಾರ್ಯರು ತಿಳಿಸಿದರು.

ನಿರ್ನಾಮದ ನಂತರ ಮೂರು ಜಗತ್ತುಗಳೂ ನೀರಿನಿಂದ ಆವೃತವಾಯಿತು. ಬ್ರಹ್ಮದೇವನು ನಿದ್ರಾಪರವಶನಾದಾಗ ಅದು ಅವನ ದಿನದ ಅಂತ್ಯವಾಗಿತ್ತು. ಬ್ರಹ್ಮದೇವನು ನಿದ್ರಿಸಬಯಸಿದಾಗ ಅವನ ಬಾಯಿಂದ ವೇದಗಳು ಹೊಮ್ಮಿ ಹಯಗ್ರೀವನು ವೈದಿಕ ಜ್ಞಾನವನ್ನು .ಕಸಿದುಕೊಂಡಾಗ ಅವನ ಕುಟೀಲತೆಯನ್ನು ತಿಳಿದ ಭಗವಂತನು ಮತ್ಸ್ಯಾವತಾರವನ್ನು ತಾಳಿ ವೇದಗಳನ್ನು ಸಂರಕ್ಷಿಸಿ ದಾನವರನ್ನು ಸಂಹರಿಸಿದನು.

ಚಕ್ಷುಶ ಮನ್ವಂತರದಲ್ಲಿ ಭಗವಂತನ ಮಹಾನ್ ಭಕ್ತನಾದ ಸತ್ಯವ್ರತನೆಂಬ ಪ್ರಖ್ಯಾತ ರಾಜನಿದ್ದನೆಂದು ಶ್ರೀ ಶುಕಾಚಾರ್ಯರು ತಿಳಿಸಿ ಕೇವಲ ನೀರಿನ ಸೇವನೆಯಿಂದಲೇ ಅವನು ಕಠಿಣ ತಪ್ಪಸ್ಸನ್ನು ಆಚರಿಸಿ ವೈವಸ್ವನನ ಪುತ್ರನಾಗಿ, ಶ್ರದ್ಧದೇವನೆಂಬ ಹೆಸರಿನಿಂದ ಜನಿಸಿದನೆಂದೂ, ದೈವಕೃಪೆಯಿಂದಾಗಿ ಮನುವಿನ ಶಾಶ್ವತತೆಯನ್ನು ಪಡೆದನೆಂದೂ ಶ್ರೀ ಶುಕಾಚಾರ್ಯರು ತಿಳಿಸಿದರು.

ಕೃತಕುಲ ಎಂಬ ನದಿಯ ತೀರದಲ್ಲಿ ಸತ್ಯವ್ರತನೆಂಬ ದೊರೆಯು ಅರ್ಘ್ಯವನ್ನು ಸಮರ್ಪಿಸುವ ಮೂಲಕ ಕಠಿಣ ತಪಸ್ಸನ್ನು ಆಚರಿಸುತ್ತಿದ್ದಾಗ ಅವನ ಅಂಗೈಯಲ್ಲಿದ್ದ ನೀರಿನಲ್ಲಿ ಒಂದು ಪುಟ್ಟ ಮೀನು ಕಾಣಿಸಿಕೊಂಡಿತು. ಅವನು ಆ ಮೀನನ್ನು ನೀರಿನೊಂದಿಗೆ ಮತ್ತೆ ನದಿಗೆ ಚೆಲ್ಲಿದ. ಈ ಸಂದರ್ಭದಲ್ಲಿ ಆ ಮೀನು ಹೇಳಿತು. : "ನನ್ನ ಪ್ರಿಯ ದೊರೆಯೇ, ನನ್ನನ್ನು ಕೊಲ್ಲುವಂಥ ಇನ್ನೂ ಅನೇಕ ಜಲಚರಗಳು ಇರುವುದರಿಂದ ನೀನೇಕೆ ನನ್ನನ್ನು ನದಿಯ ನೀರಿಗೆ ಬೀಸಾಡುತ್ತೀ? ನಾನು ಅವುಗಳಿಂದ ತುಂಬಾ ಹೆದರಿದ್ದೇನೆ".

ಇದನ್ನು ಕೇಳಿದ ಸತ್ಯವ್ರತನು ಮೀನು ಭಗವಂತನ ರೂಪವೆಂಬುದನ್ನು ತಿಳಿಯದೆ ಸಂತೋಷದಿಂದ ಮೀನಿಗೆ ಸಂಪೂರ್ಣ ರಕ್ಷಣೆಯನ್ನು ಕೊಡಲು ನಿಶ್ಚಯಿಸಿದನು. ಆದ್ದರಿಂದ ಅವನು ಮೀನನ್ನು ತನ್ನ ಅರಮನೆಗೆ ಕರೆತಂದು ನೀರಿನ ಪಾತ್ರೆಯಲ್ಲಿ ಅದನ್ನಿಟ್ಟನು. ಆದರೆ ಒಂದೇ ರಾತ್ರಿಯಲ್ಲಿ ಆ ಮೀನು ಎಷ್ಟು ದೊಡ್ಡದಾಗಿ ಬೆಳೆಯಿತೆಂದರೆ ಆ ಪಾತ್ರೆ ಅದಕ್ಕೆ ಸುಲಭವಾಗಿ ಸಾಲದಾಯಿತು. ಆಗ ಅದು ತನ್ನನ್ನು ಆ ಪಾತ್ರೆಯಿಂದ ಹೊರತೆಗೆದು ಇನ್ನೂ ದೊಡ್ಡ ಹೊಂಡದಲ್ಲಿ ಬಿಡುವಂತೆ ದೊರೆಯನ್ನು ಕೇಳಿಕೊಂಡಿತು. ದೊರೆಯು ಅದನ್ನು ದೊಡ್ಡ ದೊಡ್ಡ ಸರೋವರಗಳಿಗೆ ಬದಲಾಯಿಸಿದಂತೆಲ್ಲ ಅದು ಬೆಳೆಯುತ್ತಲೇ ಹೋಯಿತು. ಕೊನೆಗೆ ದೊರೆಯು ಅದನ್ನು ಸಾಗರದಲ್ಲಿ ಬಿಟ್ಟಾಗ ಅದು ತನ್ನನ್ನು ತಿನ್ನುವಂಥ ಅನೇಕ ತಿಮಿಂಗಿಲಗಳು ಅಲ್ಲಿರುವುದರಿಂದ ತಾನು ಭೀತಿಗೊಂಡಿರುವುದಾಗಿ ತಿಳಿಸಿತು.

ಆಶ್ಚರ್ಯದಿಂದ ಸ್ಥಂಭೀಭೂತನಾದ ದೊರೆಯು ಆ ಮೀನು ವಾಸ್ತವವಾಗಿ ಯಾರೆಂಬುದನ್ನು ತಿಳಿಯ ಬಯಸಿದನು. ದೊರೆಯು ಆ ಮೀನನ್ನು ಪರಮಾತ್ಮನ ಪ್ರತಿರೂಪವೆಂಬುದಾಗಿ ಭಾವಿಸಿ ಅದಕ್ಕೆ ಪ್ರಣಾಮಗಳನ್ನು ಸಲ್ಲಿಸಿದನು. ಭಗವಂತನು ಒಂದು ಮೀನಿನ ರೂಪವನ್ನು ತಳೆದುದರ ಉದ್ದೇಶವೇನು ಎಂಬುದಾಗಿ ದೊರೆಯು ತಿಳಿದುಕೊಳ್ಳಲು ಬಯಸಿದನು.

ಮೀನು ಅದಕ್ಕೆ ಉತ್ತರವಾಗಿ ಹೀಗೆಂದಿತು : "ಇಂದಿನಿಂದ ಏಳನೆಯ ದಿವಸದಂದು ಭೂ, ಭುಹ್ವಾ ಮತ್ತು ಸ್ವಾಹಾ ಎಂಬ ಮೂರು ಜಗತ್ತುಗಳೂ ಪ್ರಳಯದ ಜಲದಲ್ಲಿ ಮುಳುಗಿ ಹೋಗಲಿವೆ".

ಮೀನು ಮಾತನ್ನು ಮುಂದುವರಿಸಿ ಮೂರು ಜಗತ್ತುಗಳೂ ನೀರಿನಲ್ಲಿ ಮುಳುಗಡೆಯಾದಾಗ ಸತ್ಯವ್ರತನ ಬಳಿಗೆ ದೊಡ್ಡದೊಂದು ದೋಣಿಯು ಬರುತ್ತದೆ ಎಂದನು. ದೊರೆಯು ಎಲ್ಲ ಬಗೆಯ ಗಿಡಮೂಲಿಕೆಗಳು ಹಾಗೂ ಬೀಜಗಳನ್ನು ದೋಣಿಗೆ ತುಂಬಿಸುವ ಸಲುವಾಗಿ ಸಂಗ್ರಹಿಸಬೇಕೆಂದಿತು. ಎಲ್ಲ ಬಗೆಯ ಜೀವಿಗಳಿಂದ ಆವೃತವಾದ ಸಪ್ತರ್ಷಿಗಳೊಂದಿಗೆ ದೊರೆಯು ಪ್ರಳಯ ಸಾಗರದಲ್ಲಿ ಪಯಣಿಸಬೇಕೆಂದಿತು. ಬಲಶಾಲಿ ಗಾಳಿಯಿಂದಾಗಿ ದೋಣಿಯು ಅತ್ತಿತ್ತ ಎಗರಿದಾಗ ದೊರೆಯು ತನ್ನ ಕೊಂಬುಗಳಿಗೆ ಮಹಾನ್ ಸರ್ಪವಾಸುಕಿಯ ನೆರವಿನಿಂದ ದೋಣಿಯನ್ನು ಕಟ್ಟಿದರೆ

ತಾನು ದೊರೆಯೊಂದಿಗೇ ಉಳಿಯುವೆನೆಂದು ತಿಳಿಸಿತು. ಬ್ರಹ್ಮದೇವನ ನಿದ್ರಾವಸ್ಥೆ ಮುಗಿಯುವ ರಾತ್ರಿಯವರೆಗೆ ತಾನು ದೋಣಿಯನ್ನು ವಿನಾಶದ ಜಲದಲ್ಲಿ ನಡೆಸುವುದಾಗಿ ಮೀನು ದೊರೆಗೆ ತಿಳಿಸಿತು".

ತಾನು ದೊರೆಗೆ ಅನುಕೂಲಕರವಾಗಿರುತ್ತೇನೆಂದು ತಿಳಿಸಿದ ಮೀನು ಅವನ ಹೃದಯದಲ್ಲಿ ತನ್ನೆಲ್ಲ ವೈಭವಗಳೂ ಸಾಕಾರಗೊಳ್ಳುವುದರಿಂದ ದೊರೆಗೆ ಭಗವಂತನ ಬಗ್ಗೆ ಸಕಲವೂ ತಿಳಿದಿರುತ್ತದೆ ಎಂದಿತು. ಭಗವಂತನು ಮಾಯವಾದಾಗ ಸತ್ಯವ್ರತ ದೊರೆಯು ನಿಗದಿತ ದಿನಕ್ಕಾಗಿ ಕಾಯುತ್ತಿದ್ದನು.

ದೊರೆಯು ಕುಶವನ್ನು ಪೂರ್ವದಿಕ್ಕಿಗೆ ಮುಖ ಮಾಡುವಂತೆ ಹರಡಿ ಮೀನಿನ ರೂಪದಲ್ಲಿರುವ ಮಹಾವಿಷ್ಣುವನ್ನು ಕುರಿತು ಧ್ಯಾನಿಸಲು ಹುಲ್ಲಿನ ಮೇಲೆ ಕುಳಿತನು.

ಅನಂತರ ಭಾರೀ ಮಳೆ ಸುರಿಯಲು ಪ್ರಾರಂಭಗೊಂಡು ಸಾಗರವು ಉಬ್ಬತೊಡಗಿ ಅದರ ನೀರು ಹೊರಚೆಲ್ಲಲು ತೊಡಗಿತು. ಭಗವಂತನ ಸೂಚನೆಗಳನ್ನು ಸ್ಮರಿಸಿಕೊಂಡ ದೊರೆಯು ವಾಸುಕಿಯನ್ನು ಹಗ್ಗವಾಗಿಸಿಕೊಂಡು ದೋಣಿಯನ್ನು ಮೀನಿನ ಕೊಂಬಿಗೆ ಕಟ್ಟಿ ಭಗವಂತನಿಗೆ ಪ್ರಾರ್ಥನೆಯನ್ನು ಸಲ್ಲಿಸಿ ನಂತರ ಮುನಿಸದೃಶರೊಂದಿಗೆ ಕೂತು ಭಗವಂತನು ಆತ್ಮ ಸಾಕ್ಷಾತ್ಕಾರವನ್ನು ಕುರಿತಂತೆ ನೀಡಿರುವ ಸೂಚನೆಗಳನ್ನು ಸ್ಮರಿಸತೊಡಗಿದನು.

ಕಟ್ಟಕಡೆಯ ನಿರ್ನಾಮದ ಕೊನೆಯಲ್ಲಿ (ಸ್ವಯಂಭು ಮನುವಿನ ಅವಧಿಯಲ್ಲಿ) ಭಗವಂತನು ಹಯಗ್ರೀವನೆಂಬ ದಾನವನನ್ನು ಕೊಂದು ಬ್ರಹ್ಮದೇವನು ತನ್ನ ನಿದ್ರೆಯಿಂದ ಎಚ್ಚೆತ್ತಾಗ ವೈದಿಕ ಸಾಹಿತ್ಯವನ್ನೆಲ್ಲ ಅವನಿಗೆ ಮರುಗಳಿಸಿಕೊಟ್ಟನು.

"ಸತ್ಯವ್ರತ ದೊರೆಯು ಪರಮಾತ್ಮನ ಕೃಪೆಯಿಂದ ವೈದಿಕ ಸಾಹಿತ್ಯದ ಬಗ್ಗೆ ತಿಳುವಳಿಕೆಯನ್ನು ಹೊಂದಿದಂಥವನಾಗಿ ಈ ಅವಧಿಯಲ್ಲಿ ಸೂರ್ಯದೇವನ ಪುತ್ರನಾದ ವೈವಸ್ವತ ಮನುವಾಗಿ ಜನ್ಮ ತಾಳಿದನು".

ಪರೀಕ್ಷಿತ ದೊರೆಯು ಶ್ರೀ ಶುಕಾಚಾರ್ಯರಿಗೆ ವೈವಸ್ವಿತ ಮನುವಿನ ಹಿಂದಿನ, ಈಗಿನ ಹಾಗೂ ಮುಂದಿನ ಸಂತತಿಯಲ್ಲಿ ಜನಿಸಿದ ಪ್ರಮುಖ ದೊರೆಗಳ ಬಗ್ಗೆ ತಿಳಿಸಬೇಕೆಂದು ಕೇಳಿಕೊಂಡನು.

ಅದಕ್ಕೆ ಶ್ರೀ ಶುಕಾಚಾರ್ಯರು ಮನುವಿನ ಸಂತತಿಯ ಬಗ್ಗೆ ತಾವು ವಿಸ್ತೃತ ವಿವರಣೆಯನ್ನು ನೀಡುವುದಾಗಿ ತಿಳಿಸಿದರು. ಯುಗದ ಅಂತ್ಯದಲ್ಲಿ ವ್ಯಕ್ತಗೊಂಡ ಈ ವಿಶ್ವ ಅಥವಾ ಭಗವಂತನೇ ಇಲ್ಲದಿದ್ದಾಗ ಮೇಲಿನ ಹಾಗೂ ಕೆಳಗಿನ ಎಲ್ಲ ಸ್ತರಗಳಲ್ಲೂ ಇರುವ ವಿವಿಧ ಸ್ಥಿತಿಗಳಲ್ಲಿನ ಜೀವಿಗಳಲ್ಲಿ ಉನ್ನತಾತ್ಮನು ಉಳಿಯುತ್ತಾನೆಂದು ಹೇಳಿದರು.

ಬ್ರಹ್ಮನ ಮನಸ್ಸಿನಿಂದ ಮರೀಚಿಯು ಜನಿಸಿ, ಮರೀಚಿಯ ವೀರ್ಯದಿಂದ ಕಶ್ಯಪನು ದಕ್ಷನ ಮಗಳ ಗರ್ಭದಲ್ಲಿ ಕಾಣಿಸಿಕೊಂಡನು. ಕಶ್ಯಪನಿಂದ ಅದಿತಿಯ ಗರ್ಭದಲ್ಲಿ ವೈವಸ್ವನನು ಜನಿಸಿದನು.

ವೈವಸ್ವನನ ಪತ್ನಿ ಸಂಜ್ಞಳು ಶ್ರದ್ಧದೇವ ಮನುವಿಗೆ ಜನ್ಮವಿತ್ತಳು. ಅವನಿಗೆ ತನ್ನ ಪತ್ನಿ ಶ್ರದ್ಧಳಿಂದ ಹತ್ತು ಪುತ್ರರು ಹುಟ್ಟಿದರು. ಅವರೆಂದರೆ, ಇಕ್ಷ್ವಾಕು, ನೃಗ, ಸಾರ್ಯತಿ, ದಿಸ್ತಾ, ದೃಷ್ಟಾ, ಕುರುಶರ, ನಾರೀಸ್ಯಂತ, ಪ್ರಸಾಧ್ರ, ನಭಗ ಮತ್ತು ಕವಿ. ಮನುವಿಗೆ ಪ್ರಾರಂಭದಲ್ಲಿ ಪುತ್ರರಿಲ್ಲದಿದ್ದಾಗ ಮನುವು ಪುತ್ರನೊಬ್ಬನನ್ನು ಪಡೆಯಲು ತಪಸ್ಸೊಂದನ್ನು ಆಚರಿಸಿದ. ಆದರೆ ಮನುವಿನ ಪತ್ನಿ ಶ್ರದ್ಧಳು ಯಜ್ಞವನ್ನು ನೆರವೇರಿಸುತ್ತಿದ್ದ ಪುರೋಹಿತನ ಬಳಿಗೆ ಬಂದು ಪುತ್ರಿಗಾಗಿ ಬೇಡಿದಳು. ಹವಿಸ್ಸನ್ನು ಅರ್ಪಿಸುತ್ತಿರುವಾಗ, ಯಜ್ಞವನ್ನು ನಡೆಸುವ ಸಂದರ್ಭದಲ್ಲಿ ಮನುವಿನಮಡದಿಯ ಮಾತನ್ನೇ ಸ್ಮರಿಸಿಕೊಂಡು 'ವಸತ್' ಎಂಬ ಪದವನ್ನು ಉಚ್ಚರಿಸಿದನು. ಹೀಗಾಗಿ 'ಇಳಾ' ಎಂಬ ಪುತ್ರಿಯು ಕಾಣಿಸಿಕೊಂಡಳು. ಮನುವಿಗೆ ಇದರಿಂದ ತೃಪ್ತಿಯುಂಟಾಗದಿದ್ದಾಗ ಅವನು ಗುರು ವಸಿಷ್ಠರೊಂದಿಗೆ ಸಮಾಲೋಚಿಸಿ ತಾನು ಬಯಸಿದ್ದಕ್ಕಿಂತಲೂ ಬೇರೆಯದು ಸಂಭವಿಸಿದ್ದಕ್ಕೆ ಕಾರಣವನ್ನು ಕೇಳಿದನು.

ಪುರೋಹಿತನ ಗೊಂದಲವನ್ನು ತಿಳಿದ ವಸಿಷ್ಠನು ಅದನ್ನು ಮನುವಿಗೆ ವಿವರಿಸಿ ತನ್ನದೇ ಶಕ್ತಿಯಿಂದ ತಾನು ಅವನಿಗೆ ಪುತ್ರನೊಬ್ಬನನ್ನು ದಯಪಾಲಿಸುವುದಾಗಿ ಭರವಸೆ ನೀಡಿ ಭಗವಂತನನ್ನು ಪ್ರಾರ್ಥಿಸಿ ಇಳೆಯನ್ನು ಗಂಡಸಾಗಿ ಪರಿವರ್ತಿಸುವಂತೆ ಬೇಡಿದಾಗ ಸುಂದರನಾದ ಸುದ್ಯುಮ್ನನು ಕಾಣಿಸಿಕೊಂಡನು.

ಒಮ್ಮೆ ಸುದ್ಯುಮ್ನನು ಬೇಟೆಗಾಗಿ ಕಾಡಿಗೆ ಹೋದನೆಂದು ಶ್ರೀ ಶುಕಾಚಾರ್ಯರು ಹೇಳಿದರು. ಪ್ರಾಣಿಗಳನ್ನು ಅಟ್ಟಿಕೊಂಡು ಹೋಗಿ ಅವುಗಳನ್ನು ಕೊಲ್ಲುತ್ತಿದ್ದಾಗ ಅವನು ಅರಣ್ಯದ ಉತ್ತರ ಭಾಗವನ್ನು ತಲುಪಿದಾಗ ಮೇರು ಪರ್ವತದ ತಪ್ಪಲಿನಲ್ಲಿ ಶಿವ ಪಾರ್ವತಿಯರು ವಿಹರಿಸುತ್ತಿದ್ದ ಸುಕುಮಾರವೆಂಬ ಅರಣ್ಯವು ಕಂಡಿತು. ಅದನ್ನವನು ಪ್ರವೇಶಿಸಿದಾಗ ಅವನಿಗೆ ತಾನು ಹೆಣ್ಣಾಗಿ ಪರಿವರ್ತನೆಗೊಂಡು ತನ್ನ ಕುದುರೆಯು ಹೆಣ್ಣು ಕುದುರೆಯಾಗಿ ರೂಪಾಂತರವಾದದ್ದು ಗೋಚರಿಸಿತು. ಅವನ ಸಹಚರರಿಗೂ ತಾವು ಹೆಣ್ಣುಜಾತಿಗೆ ಬದಲಾದದ್ದು ತಿಳಿದಾಗ ಅವರು ಖಿನ್ನರಾಗಿ ಒಬ್ಬರನ್ನೊಬ್ಬರು ದೃಷ್ಟಿಸಿದರು.

ಮಹಾರಾಜ ಪರೀಕ್ಷಿತನು ಆ ಸ್ಥಳವು ಅಷ್ಟೊಂದು ಶಕ್ತಿಶಾಲಿಯಾಗಿ ಏಕಿತ್ತೆಂಬುದಾಗಿ ಶ್ರೀ ಶುಕಾಚಾರ್ಯರನ್ನು ಕೇಳಿದನು.

ಅದಕ್ಕೆ ಉತ್ತರವಾಗಿ ಶ್ರೀ ಶುಕಾಚಾರ್ಯರು ಅಧ್ಯಾತ್ಮಿಕ ನೀತಿ ನಿಯಮಗಳನ್ನು ಅನುಸರಿಸುವವರು ಮಾತ್ರ ಅರಣ್ಯದಲ್ಲಿ ಶಿವನನ್ನು ಕಾಣಲು ಬರುತ್ತಿದ್ದರೆಂದನು. ಅಂಬಿಕೆಯು ಮುನಿಸದೃಶ ವ್ಯಕ್ತಿಗಳು ಬರುತ್ತಿರುವುದನ್ನು ಕಂಡಾಗ ಆ ಸಮಯದಲ್ಲಿ ನಗ್ನಳಾಗಿದ್ದ ಅವಳು ತುಂಬಾ ನಾಚಿಕೆಗೊಂಡು ತನ್ನ ಪತಿಯ ತೊಡೆಯಿಂದ ಮೇಲೆದ್ದು ದೇಹವನ್ನು ಮುಚ್ಚಿಕೊಳ್ಳಲು ಪ್ರಯತ್ನಿಸಿದಳು. ಇದನ್ನು ಕಂಡ ಮುನಿಗಳು ನರನಾರಾಯಣನ ಆಶ್ರಮಕ್ಕೆ ಹೊರಟರು. ಅನಂತರ ಮಹೇಶ್ವರನು ತನ್ನ ಪತ್ನಿಗೆ ಹೇಳಿದನು: "ಈ ಸ್ಥಳವನ್ನು ಪ್ರವೇಶಿಸುವ ಯಾರೇ ಆಗಲಿ ತಕ್ಷಣವೇ ಹೆಣ್ಣಾಗಿ ರೂಪಾಂತರ ಹೊಂದಲಿ". ಅಂದಿನಿಂದ ಯಾವ ಗಂಡಸು ಅದನ್ನು ಪ್ರವೇಶಿಸಿರಲಿಲ್ಲ. ಹೆಂಗಸಾಗಿ ಪರಿವರ್ತನೆ

ಹೊಂದಿದ ಸುದ್ಯುಮ್ನನು ತನ್ನ ಅನುಯಾಯಿಯೊಂದಿಗೆ ಒಂದು ಅರಣ್ಯದಿಂದ ಮತ್ತೊಂದಕ್ಕೆ ಅಲೆದಾಡುತ್ತಿದ್ದಾಗ ಅತ್ಯಂತ ಸುಂದರ ಸ್ತ್ರೀಯಾಗಿ ಕಂಡ ಅವಳನ್ನು ಚಂದ್ರನ ಪುತ್ರ ಬುಧನು ವಿವಾಹವಾಗ ಬಯಸಿದಾಗ ಅವಳೂ ಒಪ್ಪಿ ಅವರಿಂದ ಪುರೂರವನೆಂಬ ಪುತ್ರನು ಜನಿಸಿದನು.

ಸುದ್ಯುಮ್ನ ದೊರೆಯು ಹೆಣ್ತನವನ್ನು ಪಡೆದುಕೊಂಡಿದ್ದರಿಂದ ತನ್ನ ಕುಟುಂಬದ ಅಧ್ಯಾತ್ಮಿಕ ಗುರು ವಸಿಷ್ಠನನ್ನು ಸ್ಮರಿಸಿಕೊಂಡಾಗ ಖೇದಗೊಂಡ ವಸಿಷ್ಠ ಸುದ್ಯುಮ್ನನನ್ನು ಮತ್ತೆ ಪುರುಷನಾಗಿ ರೂಪಾಂತರವಾಗಿಸುವಂತೆ ಮಹೇಶ್ವರನನ್ನು ಬೇಡಿಕೊಂಡಾಗ ಸಂತುಷ್ಟಗೊಂಡ ಶಿವನು: "ನಿನ್ನ ಶಿಷ್ಯ ಸುದ್ಯುಮ್ನನು ಒಂದು ತಿಂಗಳ ಕಾಲ ಗಂಡಸಾಗಿಯೂ ಮತ್ತೊಂದು ತಿಂಗಳ ಕಾಲ ಹೆಣ್ಣಾಗಿಯೂ ಇರಲಿ. ಇದರಿಂದಾಗಿ ಅವನು ತನಗಿಚ್ಛೆ ಬಂದಂತೆ ಜಗತ್ತನ್ನು ಆಳಬಹುದು" ಎಂದನು. ತನ್ನ ಶಿಷ್ಯರಿಗೆ ಇದರಿಂದ ಆನಂದ ಉಂಟಾಗದಿದ್ದರೂ ಸುದ್ಯುಮ್ನನು ಈ ರೀತಿಯಾಗೇ ರಾಜ್ಯಭಾರ ಮಾಡುತ್ತಾ ಉಲ್ಕಲ, ಗುರೂ ಮತ್ತು ವಿಮಲರೆಂಬ ಮೂವರು ಸತ್ಪುತ್ರರನ್ನು ಪಡೆದು ಕೊನೆಯವನು ದಕ್ಷಿಣಾಪಥದ ದೊರೆಯಾಗಿ, ಸುದ್ಯುಮ್ನನು ತನ್ನ ರಾಜ್ಯವನ್ನು ಪುರೂರವನಿಗೆ ಒಪ್ಪಿಸಿ ಅರಣ್ಯಕ್ಕೆ ತೆರಳಿದನು.

ವಾನಪ್ರಸ್ಥಾಶ್ರಮವನ್ನು ಸ್ವೀಕರಿಸಲು ಸುದ್ಯುಮ್ನನು ಅರಣ್ಯಕ್ಕೆ ತೆರಳಿದಾಗ ಇನ್ನೂ ಹೆಚ್ಚು ಪುತ್ರರನ್ನು ಪಡೆಯ ಬಯಸಿದ ವೈವಸ್ವಿತ ಮನುವು (ಶ್ರದ್ಧದೇವ) ಯುಮುನೆಯ ದಂಡೆಯ ಮೇಲೆ ಒಂದು ನೂರು ವರ್ಷಗಳ ಕಾಲ ತಪಸ್ಸನ್ನು ನಡೆಸಿ ಹತ್ತು ಪುತ್ರರನ್ನು ಪಡೆದು ಅವರಲ್ಲಿ ಇಕ್ಷ್ವಾಕುವು ಹಿರಿಯವನು.

ಈ ಪುತ್ರರಲ್ಲಿ ಪ್ರಸಾಧರನು ಗೋಪಾಲಕನಾಗಿ, ಇಡೀ ರಾತ್ರಿ ಆಯುಧವೊಂದನ್ನು ಹಿಡಿದು ನಿಂತು ಗೋವುಗಳನ್ನು ರಕ್ಷಿಸುತ್ತಿದ್ದ. ಒಂದು ರಾತ್ರಿ ಹುಲಿಯೊಂದು ಕೊಟ್ಟಿಗೆಯನ್ನು ಪ್ರವೇಶಿಸಿ ಹಸುವೊಂದನ್ನು ಹಿಡಿದಾಗ ಅದು ಚೀರಾಡ ತೊಡಗಿದ್ದನ್ನು ಕೇಳಿದ ಪ್ರಸಾಧರನು ಒಳಗೆ ನುಗ್ಗಿದಾಗ ಮೋಡಗಳು ಆಕಾಶವನ್ನು ತುಂಬಿಕೊಂಡಿದ್ದ ಆ ರಾತ್ರಿಯಲ್ಲಿ ಒಳಗೆಲ್ಲ ಕತ್ತಲು ತುಂಬಿದ್ದು ಹಸುವನ್ನೇ ಹುಲಿಯೆಂದು ತಪ್ಪು ತಿಳಿದ ಅವನು ಅದನ್ನು ಕೊಂದು ಹಾಕಿದ. ಅವನು ಅಸಂತೋಷಗೊಂಡ. ವಸಿಷ್ಠನು ಪ್ರಸಾಧರನು ಮರು ಜನ್ಮದಲ್ಲಿ ಶೂದ್ರನಾಗಿ ಜನಿಸಲೆಂದು ಅವನಿಗೆ ಶಾಪವಿತ್ತನು. ಪ್ರಸಾಧರನು ಶಾಪವನ್ನು ಸ್ವೀಕರಿಸಿ ಎಲ್ಲ ಚಟುವಟಿಕೆಗಳನ್ನೂ ತ್ಯಜಿಸಿ ಭಗವಂತನನ್ನು ತದೇಕ ಚಿತ್ತನಾಗಿ ಆರಾಧಿಸಿ ಉನ್ನತ ಮುನಿಯಾದ. ಅರಣ್ಯವನ್ನು ಪ್ರವೇಶಿಸಿದಾಗ ಆ ಅವಕಾಶವನ್ನು ಉಪಯೋಗಿಸಿಕೊಂಡು ಅದರೊಳಗೆ ನುಗ್ಗಿ ಅತಿಶಯ ಲೋಕವನ್ನು ಸಾಧಿಸಿಕೊಂಡನು.

ಮನುವಿನ ಕೊನೆಯ ಪುತ್ರ ಕವಿಯೂ ಸಹ ಸದಾ ಭಗವಂತನನ್ನೇ ಸ್ಮರಿಸುತ್ತ ಪರಿಪೂರ್ಣನಾದನು.

ಮನುವಿನ ಮತ್ತೊಬ್ಬ ಪುತ್ರನಾದ ಕರುಶನು ಕ್ಷತ್ರಿಯರ ಕುಟುಂಬವಾದ ಕರುಳ ಸಂತತಿಯನ್ನು ಸ್ಥಾಪಿಸಿದನು. ಅವರು ಉತ್ತರ ಭಾಗದ ದೊರೆಗಳಾಗಿದ್ದರು. ಮತ್ತೊಬ್ಬ ಪುತ್ರನಾದ ಧೃಷ್ಟನಿಂದ ಧೃಷ್ಟವೆಂಬ ಕ್ಷತ್ರಿಯ ಜಾತಿಯು ಹುಟ್ಟಿ ಅವರು ಈ ಜಗತ್ತಿನಲ್ಲಿ ಬ್ರಾಹ್ಮಣರ ಸ್ಥಾನವನ್ನು ಪಡೆದುಕೊಂಡರು. ಅನಂತರ ನೃಗನೆಂಬ ಮನುವಿನ ಮಗನಿಂದ ಸುಮತಿಯ ಜನನವಾಗಿ ಸುಮತಿಯಿಂದ ಭೂತಜ್ಯೋತಿ ಹಾಗೂ ಭೂತಜ್ಯೋತಿಯಿಂದ ವಸು ಹುಟ್ಟಿದರು.

ವಸುವಿನ ಪುತ್ರನು ಪ್ರತೀಕ. ಅವನ ಮಗ ಓಘಾವನ. ಓಘಾವನ ಮಗನ ಹೆಸರೂ ಓಘವಾನನೇ ಆಗಿದ್ದು ಅವನ ಪುತ್ರಿಯೇ ಸುದರ್ಶನನನ್ನು ವಿವಾಹವಾದ ಓಘವತಿ.

ನಾರಿಸ್ಯಂತನಿಂದ ಚಿತ್ರಸೇನನೆಂಬ ಮಗನು ಜನಿಸಿದನು. ಅವನ ಪುತ್ರ ಋಕ್ಷ. ಋಕ್ಷನಿಂದ ಬಂದವನು ಮಿಢ್ವಾನ; ಮಿಢ್ವಾನನಿಂದ ಪೂರ್ಣ, ಪೂರ್ಣನಿಂದ ಇಂದ್ರಸೇನ, ಇಂದ್ರಸೇನನಿಂದ ವಿಥಿಹೋತ್ರ; ವಿಥಿಹೋತ್ರನಿಂದ ಸತ್ಯಪ್ರದ; ಸತ್ಯಪ್ರದನಿಂದ ಉರುಶ್ರವ; ಉರುಶ್ರವನಿಂದ ದೇವದತ್ತ; ದೇವದತ್ತನಿಂದ ಅಗ್ನಿ ದೇವನಾದ ಅಗ್ನವೇಶ್ಯ. ಪ್ರಖ್ಯಾತ ಮುನಿಯಾದ ಈತನಿಗೆ ಕಾನೀನ ಮತ್ತು ಜಾತುಕರ್ಣ್ಯ ಎಂಬ ಹೆಸರುಗಳೂ ಉಂಟು.

ಅಗ್ನಿವೇಶ್ಯನಿಂದ ಅಗ್ನಿವೇಶ್ಯಯನ ಎಂಬ ಬ್ರಾಹ್ಮಣ ಸಂತತಿಯ ಉಂಟಾಯಿತು. ಶ್ರೀ ಶುಕಾಚಾರ್ಯರು ದಿಸ್ತನ ಸಂತತಿಯನ್ನು ಕುರಿತು ವಿವರಿಸತೊಡಗಿದರು. ದಿಸ್ತನಿಗೆ ನಭಗನೆಂಬ ಪುತ್ರನಿದ್ದನು. ಇವನು (ಅನಂತರ ವಿವರಿಸಲಾಗಿರುವ ನಭಗನಿಗಿಂತಲೂ ಇವನು ಬೇರೆ) ವೃತ್ತಿಯಿಂದ ವೈಶ್ಯನಾದನು. ನಭಗನ ಪುತ್ರ ಬಾಲಂದನನಾಗಿದ್ದು ಅವನ ಪುತ್ರ ವತ್ಸಪ್ರತಿ ಹಾಗೂ ಅವನ ಮಗ ಪ್ರಮ್ಶು. ಪ್ರಮ್ಶುವಿನ ಮಗ ಪ್ರಮತಿ; ಅವನ ಮಗ ಖಾನೀತ್ರ; ಖಾನೀತ್ರನ ಮಗ ಚಕ್ಷೂಷ; ಆತನ ಮಗ ವಿವಿಸ್ಮತಿ. ವಿವಿಸ್ಮತಿಯ ಮಗ ರಂಭನಾಗಿದ್ದು ಅವನ ಮಗ ಪ್ರಖ್ಯಾತನೂ ಹಾಗೂ ಧಾರ್ಮಿಕ ದೊರೆಯೂ ಆಗಿದ್ದ ಖಾನೀತ್ರ. ಖಾನೀತ್ರನ ಮಗನೇ ಕರಂದರು. ಕರಂದರುನಿಗೆ ಅವೀಕ್ಷಿತ್ ಎಂಬ ಪುತ್ರನು ಜನಿಸಿ ಅವನಲ್ಲಿ ಚಕ್ರವರ್ತಿಯಾದ ಮರುತ್ತನು ಜನಿಸಿದನು. ಅಂಗೀರಸ ಪುತ್ರನಾದ ಅತೀಂದ್ರಿಯ ಶಕ್ತಿಯ ಸಂವರ್ತನು ಮರುತ್ತನನ್ನು ಯಜ್ಞದಲ್ಲಿ ತೊಡಗಿಸಿದನು. ಅದು ಪವಾಡ ಸದೃಶ ಯಜ್ಞ. ಆ ಯಜ್ಞದಲ್ಲಿ ಇಂದ್ರನು ಸೋಮ ರಸವನ್ನು ಕುಡಿದು ಮತ್ತನಾದನು. ಬ್ರಾಹ್ಮಣರು ಅಪಾರ ಕೊಡುಗೆಗಳನ್ನು ಸ್ವೀಕರಿಸಿದರು. ಉಪದೇವತೆಗಳು ಆಹಾರ ಪದಾರ್ಥಗಳನ್ನು ನೀಡಿ ವಿಶ್ವದೇವ ಸಮೂಹದ ಸದಸ್ಯರಾಗಿದ್ದರು. ಮರುತ್ತನ ಮಗನಾದ ದಾಮನಿಗೆ ರಾಜ್ಯವರ್ಧನನೆಂಬ ಪುತ್ರನಿದ್ದು ಅವನ ಮಗ ಸುಧೃತಿ. ನರನು ಸಧೃತಿಯ ಪುತ್ರ.

ನರನ ಮಗ ಕೇವಲ; ಅವನ ಮಗ ದುಂಧುಮಾನ; ಅವನ ಮಗ ವೇಘವನ. ವೇಘವನನ ಮಗನೇ ಬುಧ. ಅವನ ಮಗ ತೃಣಬಿಂದು, ಭೂಮಿಯನ್ನು ಆಳಿದ ಅರಸನಾದವನು. ಪಾರಂಗತಳಾದ ಅಪ್ಸರೆಯರಲ್ಲೆಲ್ಲ ಅತ್ಯುತ್ತಮಳಾದ ಅಲಂಬುಸಳು ತೃಣಬಿಂದುವನ್ನು ವಿವಾಹವಾಗಿ ಇಲಾಬಿಲಾ ಎಂಬ ಪುತ್ರಿಗೆ ಜನ್ಮ ನೀಡಿದಳು.

ಅತೀಂದ್ರಿಯ ಯೋಗದ ಒಡೆಯನಾದ ಮಹಾಮುನಿ ವಿಶ್ರವನು ತನ್ನ ತಂದೆಯಿಂದ ಪರಿಪೂರ್ಣ ಜ್ಞಾನವನ್ನು ಸಂಪಾದಿಸಿದ ನಂತರ ಇಳವಲ್ಲಳ ಗರ್ಭದಲ್ಲಿ ಐಶ್ವರ್ಯದ ದೊರೆಯಾದ ಕುಬೇರನೆಂಬ ಪುತ್ರನನ್ನು ಪಡೆದನು.

ತೃಣಬಿಂದುವಿಗೆ ಮೂವರು ಪುತ್ರರು. ಅವರೆಂದರೆ ವಿಶಾಲ, ಶೂನ್ಯಬಿಂಧು ಮತ್ತು ಧೂಮಕೇತು. ಈ ಮೂವರಲ್ಲಿ ವಿಶಾಲನು ಸಂತತಿಯೊಂದನ್ನು ನಿರ್ಮಿಸಿ ವೈಶಾಲಿಯೆಂಬ ರಾಜ್ಯವನ್ನು ಕಟ್ಟಿದನು. ವಿಶಾಲನ ಮಗ ಹೇಮಚಂದ್ರ. ಅವನ ಮಗ ಧುಮ್ರಾಕ್ಷ ಹಾಗೂ ಅವನ ಮಗ ಸದ್ಯುಮ. ಈ ಸದ್ಯುಮನ ಮಕ್ಕಳು ದೇವಜ ಮತ್ತು ಕೃಶವ. ಕೃಶವನ ಮಗನು ಅಶ್ವಮೇಧ ಯಾಗವನ್ನು ಮಾಡಿ ಭಗವಂತನನ್ನು ಸಂಪ್ರೀತಗೊಳಿಸಿದಂಥ ಸೋಮದತ್ತ. ಇವನಿಗೆ ಅತೀಂದ್ರಿಯ ಶಕ್ತಿಯುಳ್ಳ ಯೋಗಿಗಳಿಗೆ ದೊರೆಯುವಂಥ ಗ್ರಹಗಳಲ್ಲಿ ಉನ್ನತ ಸ್ಥಾನ ದೊರೆಯಿತು. ಸೋಮದತ್ತನ ಮಗ ಸುಮತಿ. ಅವನ ಮಗ ಜನಮೇಜಯ. ಈ ಎಲ್ಲ ದೊರೆಗಳೂ ವಿಶಾಲ ಸಂತತಿಯಲ್ಲಿ ಜನಿಸಿದವರಾಗಿ ತ್ರಿಣನಿಂದ ದೊರೆಯ ಉನ್ನತ ಸ್ಥಾನವನ್ನು ಕಾಯ್ದುಕೊಂಡನು.

## ಚ್ಯವನ

ಸರ್ಯಾತಿ ಎಬ ಮನುವಿನ ಮತ್ತೊಬ್ಬ ಪುತ್ರನು ವೇದ ಪಾರಂಗತನಾಗಿದ್ದು ಅವನು ತನ್ನ ಮಗಳಾದ ಸುಕನ್ಯೆಯೊಂದಿಗೆ ಚ್ಯವನ ಋಷಿಯ ಆಶ್ರಮವನ್ನು ನೋಡಲು ತೆರಳಿದನೆಂದು ಶ್ರೀ ಶುಕಾಚಾರ್ಯರು ತಿಳಿಸಿದರು. ಸುಕನ್ಯೆಯು ಅರಣ್ಯದಲ್ಲಿ ಹಣ್ಣುಗಳನ್ನು ಸಂಗ್ರಹಿಸುತ್ತಿದ್ದಾಗ ಮಣ್ಣಿನ ಹುಳುಗಳ ಬಿಲದಲ್ಲಿ ಹೊಳಪಿನ ವಸ್ತುಗಳಂಥವನ್ನು ಕಂಡಾಗ ಮುಗ್ಧತೆಯಿಂದ ಅವನ್ನು ಮುಳ್ಳುಗಳಿಂದ ಚುಚ್ಚಿದಳು. ಅವಳು ಹೀಗೆ ಮಾಡಿದ ಕೂಡಲೇ ಅಲ್ಲಿಂದ ರಕ್ತ ಉಕ್ಕಲು ಪ್ರಾರಂಭವಾಗಿ ದೊರೆ ಹಾಗೂ ಅವನ ಸಹಚರಿಗಳಿಗೆ ಮಲಬದ್ಧತೆಯುಂಟಾಗಿ ಮೂತ್ರ ವಿಸರ್ಜಿಸಲು ಅಸಮರ್ಥರಾದರು.

ದೊರೆಗೆ ಭೃಗುವಿನ ಪುತ್ರನಾದ ಚ್ಯವನ ಋಷಿಗೆ ಯಾರೋ ಹಾನಿ ಮಾಡಲು ಪ್ರಯತ್ನಿಸಿರುವುದಾಗಿ ಭಾಸವಾದಾಗ ಸುಕನ್ಯೆಯು ತಾನು ಮಾಡಿದ್ದನ್ನು ಹೇಳಿಕೊಂಡಳು. ಮಣ್ಣಿನ ಹುಳುಗಳ ಬಿಲದಲ್ಲಿ ಕೂತಿದ್ದ ಮುನಿಯನ್ನು ಸಮಾಧಾನ ಪಡಿಸಲು ಯತ್ನಿಸಿದ ದೊರೆಯು ತನ್ನ ಮಗಳನ್ನೇ ಅವನಿಗೆ ವಿವಾಹ ಮಾಡಿಕೊಟ್ಟು ಹಿಂತಿರುಗಿದನು.

ಚ್ಯವನ ಋಷಿಯು ಸ್ವಾಭಾವಿಕವಾಗಿಯೇ ಕೋಪಿಷ್ಟನು. ಅವನೆಲ್ಲ ಬೇಡಿಕೆಗಳನ್ನು ಪೂರೈಸುತ್ತ ಸುಕನ್ಯೆಯು ಅವನೊಂದಿಗಿದ್ದಳು. ಸ್ವರ್ಗದ ವೈದ್ಯರುಗಳಾದ ಅಶ್ವಿನಿಕುಮಾರರು ಚ್ಯವನ ಋಷಿಯ ಬಳಿಗೆ ಬಂದಾಗ ಋಷಿಯು ಅವರಿಗೆ ತನ್ನ ಯೌವ್ವನವನ್ನು ಮರುಗಳಿಸಿ ಕೊಂಡುವಂತೆ ಕೋರಿದನು. ಚ್ಯವನ ಋಷಿಯು ಅವರಿಗೆಂದನು: "ನೀವು ಯಜ್ಞದ ಸಮಯದಲ್ಲಿ ಸೋಮರಸವನ್ನು ಕುಡಿಯಲು ಅನರ್ಹರಾಗಿದ್ದರೂ ನಾನು ನಿಮಗೆ ಅದು ತುಂಬಿದ ಮಡಿಕೆಯನ್ನು ನೀಡುವ ಭರವಸೆ ಕೊಡುತ್ತೇನೆ. ನನಗೆ ಸೌಂದರ್ಯ ಹಾಗೂ ಯೌವ್ವನವನ್ನು ನೀಡಿ. ಏಕೆಂದರೆ ತರುಣಿಯರಿಗೆ ಅವೇ ಆಕರ್ಷಕವಾದವು" ಅಶ್ವಿನಿಕುಮಾರರು

ಅವಕ್ಕೊಪ್ಪಿ "ಯಶಸ್ವೀ ಜೀವನ" ವನ್ನು ನಡೆಸಲು ಅನುವಾಗುವಂಥ ಸರೋವರದಲ್ಲಿ ಮುಳುಗಬೇಕೆಂದು ತಿಳಿಸಿದರು.

ಹೀಗೆ ಹೇಳಿದ ನಂತರ ಅಶ್ವಿನಿ ಕುಮಾರರು ವೃದ್ಧನಾಗಿದ್ದ, ರೋಗಗ್ರಸ್ಥನಾಗಿದ್ದ, ಸುಕ್ಕುಗಟ್ಟಿದ ಶರೀರ, ನರೆತ ಕೂದಲು ಹಾಗೂ ದೇಹದಲ್ಲೆಲ್ಲ ನರಗಳು ತುಂಬಿಕೊಂಡಿದ್ದ ವಿಕಲನಾದ ಮುನಿಯೊಂದಿಗೆ ಸರೋವರಕ್ಕೆ ಬಂದರು. ಅನಂತರ ಮೂವರೂ ಸುಂದರ ಯುವಕರಾಗಿ ಹೊರಬಂದರು. ಅವರನ್ನು ಕಂಡ ಸುಕನ್ಯೆಯು ಇಬ್ಬರು ಅಶ್ವಿನಿ ಕುಮಾರರ ಜತೆಗಿದ್ದ ಗಂಡನನ್ನು ಗುರುತಿಸಲಾಗಿಲಿಲ್ಲವೇಕೆಂದರೆ ಅವರೆಲ್ಲರೂ ಏಕ ರೀತಿಯಲ್ಲಿದ್ದರು. ಅವಳು ತನ್ನ ಗೊಂದಲವನ್ನು ಕುಮಾರರಿಗೆ ತಿಳಿಸಿ ಅವರನ್ನು ಬೇಡಿದಾಗ ಅವಳ ನೀತಿ ಹಾಗೂ ವಿಧೇಯತೆಯನ್ನು ಕಂಡು ಆನಂದಿಸಿದ ಅವರು ಅವಳಿಗೆ ಚ್ಯವನ ಋಷಿಯನ್ನು ತೋರಿಸಿ ಹಿಂತಿರುಗಿದರು.

ಅನಂತರ ಸುರ್ಯತಿಯು ಯಜ್ಞವೊಂದನ್ನು ನೆರವೇರಿಸುವ ಬಯಕೆಯಿಂದ ಚ್ಯವನ ಋಷಿಯ ಬಳಿಗೆ ತೆರಳಿದಾಗ ತನ್ನ ಮಗಳ ಪಕ್ಕದಲ್ಲಿ ಸುಂದರವಾದ ಯುವಕನೊಬ್ಬನು ಕೂತಿದ್ದನ್ನು ಕಂಡನು. ನಡೆದದ್ದನ್ನು ತಿಳಿಯದ ಸುರ್ಯತಿಯು ತನ್ನ ಮಗಳ ಶೀಲವನ್ನು ಶಂಕಿಸಿದಾಗ ಅವಳು ತಂದೆಗೆ ಎಲ್ಲವನ್ನೂ ವಿವರಿಸಿದಳು.

ಚ್ಯವನ ಋಷಿಯು ತನ್ನ ಶಕ್ತಿಯಿಂದ ಸುರ್ಯತಿಗೆ ಸೋಮ ಯಜ್ಞವನ್ನು ಮಾಡಲು ಅನುವಾಗಿ ಅಶ್ವಿನಿಕುಮಾರರಿಗೆ ಅರ್ಹತೆಯಿಲ್ಲದಿದ್ದರೂ ಅವರಿಗೆ ಸೋಮ ರಸವನ್ನು ಅರ್ಪಿಸಿದಾಗ ಮತ್ಸರಗೊಂಡ ಇಂದ್ರನು ಚ್ಯವನ ಋಷಿಯನ್ನು ಸಂಹರಿಸಲು ತನ್ನ ವಜ್ರಾಯುಧವನ್ನು ಕೈಗೆತ್ತಿಕೊಂಡನು. ಆ ಯುದ್ಧ ಚ್ಯವನ ಋಷಿಯ ಶಕ್ತಿಯಿಂದ ತಟಸ್ಥವಾಯಿತು. ಅಶ್ವಿನಿಕುಮಾರರು ಕೇವಲ ವೈದ್ಯರಾಗಿ ಯಜ್ಞದಲ್ಲಿ ಹವಿಸ್ಸಿಗೆ ಹೊರತಾಗಿದ್ದರೂ ಅನಂತರ ಸೋಮರಸ ಸ್ವೀಕಾರಕ್ಕೆ ಅವರನ್ನೂ ಅರ್ಹರನ್ನಾಗಿಸಲು ಉಪದೇವತೆಗಳು ಒಪ್ಪಿದರು.

ಸುರ್ಯತಿ ದೊರೆಗೆ ಉತ್ತಾನಭಾರ್ಹಿ, ಆವರ್ತಿ ಮತ್ತು ಭೂರಿಸೇನರೆಂಬ ಮೂವರು ಪುತ್ರರು ಜನಿಸಿ, ಆವರ್ತಿಗೆ ರೇವತನೆಂಬ ಮಗನು ಹುಟ್ಟಿದನು. ರೇವತನು ಸಾಗರದ ಆಳದೊಳಗೆ ಕುಷಸ್ಥಲಿಯೆಂಬ ರಾಜ್ಯವನ್ನು ನಿರ್ಮಿಸಿ ಆವರ್ತಿ ಎಂಬ ಪ್ರದೇಶವನ್ನಾಳುತ್ತಾ ಒಂದು ನೂರು ಪುತ್ರರನ್ನು ಪಡೆದನು. ಅವರಲ್ಲಿ ಹಿರಿಯವನೇ ಕುಕುದ್ಮಿ. ಅವನು ತನ್ನ ಮಗಳಾದ ರೇವತಿಗೆ ವರನನ್ನು ಹುಡುಕುವ ಸಲುವಾಗಿ, ಅವಳನ್ನು ಬ್ರಹ್ಮನ ಬಳಿಗೆ ಕರೆದುಕೊಂಡು ಹೋಗಿ ತನ್ನ ಆಸೆಯನ್ನು ತಿಳಿಸಿದನು. ಬ್ರಹ್ಮನು ದೊರೆ ಕುಕುದ್ಮಿಗೆ ಇಪ್ಪತ್ತೇಳು ಚತುರ್ಯುಗಗಳು ಸರಿದುಹೋಗಿದ್ದು ದೊರೆಯು ಯಾರ ಬಗ್ಗೆ ನಿಶ್ಚಯಿಸಿದ್ದನೋ ಅವರೆಲ್ಲ ಕಣ್ಮರೆಯಾಗಿದ್ದಾರೆ ಎಂದು ತಿಳಿಸಿದನು. "ನಿನ್ನ ಅಳಿಯನಾಗಬೇಕೆಂದು ಬಯಸಿ ನೀನು ಯಾರ ಬಗ್ಗೆ ಹೃದಯಾಂತರಾಳದಿಂದ ನಿರ್ಧರಿಸಿದ್ದೆಯೋ ಅವರು ಕಾಲಕ್ರಮದಲ್ಲಿ ಕಣ್ಮರೆಯಾಗಿದ್ದಾರೆ". ಆದ್ದರಿಂದ ಅವನು ಬಲದೇವನು ಭಾಗಶಃ ವಿಷ್ಣುವಾದ್ದರಿಂದ ಅವನು ರೇವತಿಯ ಪತಿಯಾಗಬಹುದೆಂದು ಸಲಹೆ ಮಾಡಿದನು.

ಕುಕುದ್ಮಿಯು ತನ್ನ ಅರಮನೆಗೆ ಹಿಂತಿರುಗಿದಾಗ ಅವನಿಗೆ ಯಕ್ಷರಂಥ ಉನ್ನತ ಜೀವಿಗಳಿಗೆ ಹೆದರಿ ತನ್ನ ಸಹೋದರರು ಹಾಗೂ ಬಂಧುಗಳು ಸ್ಥಳವನ್ನು ತ್ಯಜಿಸಿರುವುದು ಕಂಡಿತು. ಅನಂತರ ದೊರೆಯು ರೇವತಿಯನ್ನು ಬಲದೇವನಿಗೆ ನೀಡಿ ನರ - ನಾರಾಯಣನನ್ನು ಸಂಪ್ರೀತಗೊಳಿಸಲು ಬದರೀಕಾಶ್ರಮಕ್ಕೆ ಹೊರಟನು.

ಮನುವಿನ ಪುತ್ರ ನಭಗನಾಗಿದ್ದು ಅವನ ಪುತ್ರನಾದ ನಾಭಾಗಾ ತನ್ನ ಆಧ್ಯಾತ್ಮಿಕ ಗುರುವಿನ ಸ್ಥಳದಲ್ಲಿ ದೀರ್ಘಕಾಲ ವಾಸವಾಗಿದ್ದನೆಂದು ಶ್ರೀ ಶುಕಾಚಾರ್ಯರು ತಿಳಿಸಿದರು. ಅದ್ದರಿಂದ ಅವನ ಸಹೋದರರು ಅವನು ಗೃಹಸ್ಥನಾಗುವುದಿಲ್ಲ ಎಂಬುದಾಗಿ ಭಾವಿಸಿ ಇಡೀ ಆಸ್ತಿಯನ್ನು ತಮ್ಮೊಳಗೇ ಹಂಚಿಕೊಂಡರು. ಕೊನೆಗೆ ನಾಭಾಗನು ಹಿಂತಿರುಗಿದಾಗ ಅವನ ಪಾಲಾಗಿ ಅವನಿಗೆ ತಂದೆಯನ್ನೇ ನೀಡಿದರು. (ಬ್ರಹ್ಮಚಾರಿಗಳಲ್ಲಿ ಎರಡು ವಿಧದವರಿರುತ್ತಾರೆ. ಒಬ್ಬರು ಮನೆಗೆ ಹಿಂತಿರುಗಿ, ವಿವಾಹವಾಗಿ ಗೃಹಸ್ಥರಾಗಬಹುದು ಹಾಗೂ ಬೃಹದ್ ವ್ರತರೆಂಬ ಹೆಸರಿನ ಇನ್ನೊಬ್ಬನು ಬ್ರಹ್ಮಚಾರಿಗಳಾಗಿಯೇ ಉಳಿದರೂ ಆಧ್ಯಾತ್ಮಿಕ ಗುರುಗಳ ಬಳಿಯಿಂದ ಹಿಂತಿರುಗದೆ ಅನಂತರ ಸನ್ಯಾಸವನ್ನು ಸ್ವೀಕರಿಸುತ್ತಾರೆ).

ನಾಭಗನು ತನ್ನ ಸಹೋದರರನ್ನು ತನ್ನ ಪಾಲಿನ ಆಸ್ತಿಯ ಬಗ್ಗೆ ವಿಚಾರಿಸಿದಾಗ ಅವರು ಅವನಿಗೆ ತಮ್ಮ ವೃದ್ಧ ಪಿತನನ್ನು ತೋರಿದರು. ನಾಭಗನು ತಂದೆಯ ಬಳಿಗೆ ಹೋದಾಗ ತಾನು ಅವನ ಆಸ್ತಿಯಲ್ಲವೆಂದು ತಿಳಿಸಿದ ಅವನು ತನ್ನ ಮಗನಿಗೆ ಅಂಗೀರಸ ವಂಶಜರು ನಡೆಸುತ್ತಿರುವ ದೊಡ್ಡ ಯಜ್ಞದಲ್ಲಿ ಪಾಲ್ಗೊಳ್ಳುವಂತೆ ಸಲಹೆ ಮಾಡಿದನು. ಪಾಲ್ಗೊಳ್ಳುವ ಎಲ್ಲರೂ ಬುದ್ಧಿಶಾಲಿಗಳಾಗಿದ್ದರೂ ದಿನನಿತ್ಯ ಕರ್ತವ್ಯಗಳಲ್ಲಿ ತಪ್ಪುಗಳನ್ನು ಮಾಡುತ್ತಾರೆ. (ನಾಭಾಗನು ತುಂಬಾ ಸರಳ ಮನುಷ್ಯ. ಆದ್ದರಿಂದ ಅವನು ತನ್ನ ತಂದೆಯ ಬಳಿಗೆ ತೆರಳಿದಾಗ ತನ್ನ ಮಗನ ಮೇಲೆ ಕರುಣೆಯಿಟ್ಟ ಅವನು ಜೀವನೋಪಾಯಕ್ಕಾಗಿ ಅವನು ಅಂಗೀರಸ ಸಂತತಿಯವರ ಬಗ್ಗೆ ತೆರಳಿ ಯಜ್ಞವನ್ನು ನಡೆಸುವಲ್ಲಿ ಅವರ ತಪ್ಪುಗಳ ಪ್ರಯೋಜನಗಳನ್ನು ಪಡೆದುಕೊಳ್ಳಬೇಕೆಂದನು).

ನಾಭಾಗನ ತಂದೆಯು ಹೇಳಿದನು: "ಈ ಉನ್ನತಾತ್ಮರ ಬಳಿಗೆ ತೆರಳಿ ವೈಶ್ಯದೇವನಿಗೆ ಸಂಬಂಧಿಸಿದ ಎರಡು ವೇದಮಂತ್ರಗಳನ್ನು ವಿವರಿಸು. ಉನ್ನತ ಮುನಿಗಳು ಯಜ್ಞವನ್ನು ಪೂರೈಸಿ ಸ್ವರ್ಗಲೋಕಗಳತ್ತ ತೆರಳುವಾಗ ಯಜ್ಞದಿಂದ ಬಂದ ಹಣದಲ್ಲಿ ಸ್ವಲ್ಪವನ್ನು ನಿನಗೆ ಕೊಡುತ್ತಾರೆ". ಅವನು ನುಡಿದಿದ್ದಂತೆಯೇ ಅಂಗೀರ ವಂಶಜಕ್ಕೆ ಸೇರಿದ ಮುನಿಗಳು ನಾಭಾಗನಿಗೆ ತಮ್ಮೆಲ್ಲ ಸಂಪತ್ತನ್ನೂ ನೀಡಿದರು.

ನಾಭಾಗನು ಐಶ್ವರ್ಯವನ್ನು ಸ್ವೀಕರಿಸುತ್ತಿದ್ದಾಗ ವೇಷಧಾರಿಯಾದ ಈಶ್ವರನು ಅವನನ್ನು ಸಮೀಪಿಸಿ ಅದು ತನ್ನದೆಂದಾಗ ನಾಭಾಗನು ವಾದದಲ್ಲಿ ತೊಡಗಿದನು. ಅವರಿಬ್ಬರೂ ನಾಭಾಗನ ತಂದೆಯ ಬಳಿಗೆ ತೆರಳಿದಾಗ ಅವನು ದಕ್ಷ ಯಜ್ಞದಿಂದ ಬಂದ ಹಣವೆಲ್ಲವೂ ಈಶ್ವರನಿಗೇ ಸೇರಿದ್ದೆಂದು ಹೇಳಿದಾಗ ನಾಭಾಗನು ಅವನನ್ನು ಶಿವನೆಂದು ಗುರುತಿಸಿ ಅವನಿಗೆ ಪ್ರಣಾಮಗಳನ್ನು ಸಲ್ಲಿಸಿ ತಂದೆಯ ಮಾತಿನಂತೆ ನಡೆದನು. ಮಹೇಶ್ವರನು ಸಂಪ್ರೀತನಾಗಿ ಅವನಿಗೆ ಅತಿಶಯ ಜ್ಞಾನವನ್ನು ಬೋಧಿಸಿ, ಎಲ್ಲ ಹಣವನ್ನೂ ಅವನಿಗೆ ನೀಡಿ ಮಾಯವಾದನು.

## ಅಂಬರೀಶ

ಅಂಬರೀಶನು ನಾಭಾಗನಿಂದ ಜನಿಸಿದನು. ಅವನು ಶ್ರೀ ಕೃಷ್ಣ ಪರಮಾತ್ಮನ ಮಹಾನ್ ಭಕ್ತ. ಪರೀಕ್ಷಿತ ರಾಜನು ಅಂಬರೀಶ ಮಹಾರಾಜನ ಬಗ್ಗೆ ತಿಳಿದುಕೊಳ್ಳಲು ಬಯಸಿದನು. ದೂರ್ವಾಸರ ಶಾಪದಿಂದ ಅವನು ಹೇಗೆ ಭಾದಿತನಾಗಲಿಲ್ಲ ಎಂಬುದನ್ನೂ ಪರೀಕ್ಷಿತನು ತಿಳಿದುಕೊಳ್ಳಲು ಇಚ್ಛಿಸಿದನು.

ಅಂಬರೀಶ ದೊರೆಯು ಜಗತ್ತಿನ ರಾಜನಾಗಿ ಅಪಾರ ಸಮೃದ್ಧಿಯನ್ನು ಹೊಂದಿದ್ದನು ಎಂಬುದಾಗಿ ಶ್ರೀ ಶುಕಾಚಾರ್ಯರು ತಿಳಿಸಿದರು. ದೊರೆಯು ಉನ್ನತ ಭಗವದ್ಭಕ್ತನಾಗಿದ್ದುದರಿಂದ ಅವನು ತನ್ನ ಆಳ್ವಿಕೆಗೆ ಒಳಪಟ್ಟಿದ್ದ ಜಗತ್ತಿನ ಬಗ್ಗೆ ವ್ಯಾಮೋಹವನ್ನು ಹೊಂದಿರದೆ ಪರಮಾತ್ಮನ ಸೇವೆಯಲ್ಲೇ ನಿರತನಾಗಿದ್ದು ಅವನು ಏನನ್ನೂ ಅಪೇಕ್ಷಿಸಲಿಲ್ಲ. ಅವನು ತನ್ನ ಕೆಲಸಗಳ ಫಲವನ್ನೆಲ್ಲಾ ಭಗವಂತನಿಗೇ ಸಲ್ಲಿಸಿ, ಆತನನ್ನು ಸಂಪ್ರೀತಗೊಳಿಸಲು ಯಜ್ಞಯಾಗಾದಿಗಳನ್ನು ಮಾಡಿದಾಗ, ಭಗವಂತನು ಅವನಿಗೆ ತನ್ನ ಸುದರ್ಶನವನ್ನೇ ನೀಡಿದನು. ದೊರೆ ಹಾಗೂ ಅವನ ರಾಣಿಯು ಕಾರ್ತಿಕ ಮಾಸದಲ್ಲಿ ಏಕಾದಶಿಯನ್ನು ಆಚರಿಸಿ ದೊರೆಯು ಒಂದು ವರ್ಷಕಾಲ ಉಪವಾಸ ಮಾಡುವ ಮೂಲಕ ಮಧುವನದಲ್ಲಿ ಶ್ರೀಹರಿಗಾಗಿ ವ್ರತವನ್ನು ಆಚರಿಸಿದನು. ಅಲ್ಲಿ ನೆರೆದಿದ್ದವರಿಗೆಲ್ಲ ಅವನು ದಾನಧರ್ಮಗಳನ್ನಿತ್ತನು. ಉಪವಾಸ ಮುಗಿಸಿ ಏಕಾದಶಿ ವ್ರತವನ್ನು ಇನ್ನೇನು ಮುಕ್ತಾಯಗೊಳಿಸಲಿದ್ದಾಗ ಅಲ್ಲಿಗೆ ಆಗಮಿಸಿದ ದೂರ್ವಾಸ ಮುನಿಗೆ ದೊರೆಯು ಗೌರವವನ್ನು ಸಲ್ಲಿಸಿ ಭೋಜನ ಸ್ವೀಕರಿಸುವಂತೆ ವಿನಂತಿಸಿಕೊಂಡನು.

ದೂರ್ವಾಸ ಮುನಿಯು ಅದಕ್ಕೊಪ್ಪಿ ಅಹ್ನಿಕಗಳನ್ನು ಮುಗಿಸಲು ನದಿ ತೀರಕ್ಕೆ ಹೊರಟನು. ಆ ಸಂದರ್ಭದಲ್ಲಿ ದೊರೆಯು ವ್ರತವನ್ನು ಮುಗಿಸಲು ಇದ್ದ ಒಂದೇ ಒಂದು ದ್ವಾದಶಿ ಮುಹೂರ್ತವು ಸನ್ನಿಹಿತವಾದಾಗ ದೊರೆಯು ಪ್ರಾಜ್ಞಬ್ರಾಹ್ಮಣರೊಂದಿಗೆ ಸಮಾಲೋಚಿಸಿ ತಾನು ಉಪವಾಸ ಮುಗಿಸಬೇಕೇ ಅಥವಾ ಅತಿಥಿಗಳಿಗಾಗಿ ಕಾಯಬೇಕೇ ಎಂಬುದನ್ನು ಚರ್ಚಿಸಿ, ಒಂದು ಗುಟುಕು ನೀರನ್ನು ಉಪವಾಸದ ಅಂತ್ಯದ ಸಂಕೇತವಾಗಿ ಕುಡಿದು ಪರಮಾತ್ಮನನ್ನು ಧ್ಯಾನಿಸುತ್ತ ದೂರ್ವಾಸ ಮುನಿಯು ಹಿಂತಿರುಗುವಿಕೆಗಾಗಿ ಕಾದು ಕೂತನು. ವಾಪಸ್ಸಾದ ದೂರ್ವಾಸ ಮುನಿಯು ತನ್ನ ಅತಿಶಯ ಜ್ಞಾನದಿಂದ ಅಂಬರೀಶನು ನೀರನ್ನು ಕುಡಿದಿರುವನೆಂಬುದನ್ನು ಅರಿತು ಕೋಪಗೊಂಡು ತನ್ನ ಶಿಖೆಯಿಂದ ಒಂದು ಹಿಡಿ ಕೂದಲನ್ನು ಕಿತ್ತು ಅದರಿಂದ ಅಂಬರೀಶನನ್ನು ಶಿಕ್ಷಿಸಲು ರಕ್ಕಸನೊಬ್ಬನನ್ನು ಸೃಷ್ಟಿಸಿದನು. ರಕ್ಕಸನು ದೊರೆಯ ಮುಂದೆ ಕಾಣಿಸಿಕೊಂಡಾಗ ಅಂಬರೀಶನು ವಿಚಲಿತನಾಗಲಿಲ್ಲ. ಆದರೆ ಭಗವಂತನ ಸುದರ್ಶನ ಚಕ್ರವು ಆ ದಾನವನನ್ನು ಸಂಹರಿಸಿತು. ಅದು ಮುನಿಯನ್ನು ಅಟ್ಟಿಸಿಕೊಂಡು ಹೊರಟಾಗ ಅವನು ತನ್ನ ಪ್ರಾಣವನ್ನು ಕಾಪಾಡಿಕೊಳ್ಳಲು ಎಲ್ಲ ದಿಕ್ಕುಗಳಿಗೂ ಓಡುತ್ತಾ, ತನ್ನನ್ನು ರಕ್ಷಿಸುವಂತೆ ಬ್ರಹ್ಮನನ್ನು ಕೇಳಿಕೊಂಡರೂ ಅವನು ಅದನ್ನು ನೀಡಲಿಲ್ಲ. ಮುನಿಯು ಮಹೇಶ್ವರನನ್ನು ಪ್ರಾರ್ಥಿಸಿಕೊಂಡರೂ ಅದು ವಿಫಲವಾದಾಗ ಕೊನೆಗೆ ನಾರಾಯಣನ ಬಳಿಗೇ ಅವನು

ತೆರಳಿದನು. ಆದರೆ ಭಗವಂತನು ತಾನು ತನ್ನ ಭಕ್ತರ ಅಧೀನದಲ್ಲಿರುವುದರಿಂದ ಸ್ವತಂತ್ರನಾಗಿರದೆ, ಪರಿಶುದ್ಧ ಭಕ್ತರು ತಮ್ಮೆಲ್ಲರನ್ನೂ ತನಗೇ ಸಮರ್ಪಿಸುವುದರಿಂದ ತಾನು ಅವರನ್ನು ಬಿಟ್ಟುಕೊಡಲಾರನೆಂದೂ, ಮುನಿಯು ಅಂಬರೀಶನ ಕ್ಷಮೆ ಯಾಚಿಸಬೇಕೆಂದು ತಿಳಿಸಿ ಮುನಿಯು ಹಾಗೆಯೇ ಮಾಡಿದಾಗ ದೊರೆಯು ಸುದರ್ಶನ ಚಕ್ರ ಹಾಗೂ ಮಹಾವಿಷ್ಣುವಿಗೆ ಪ್ರಾರ್ಥನೆಯನ್ನು ಸಲ್ಲಿಸಿದನು. ಸುದರ್ಶನ ಚಕ್ರವು ಶಾಂತವಾಯಿತು. ದೂರ್ವಾಸ ಮುನಿಯ ಪ್ರಾಣ ಉಳಿಯಿತು. ಅನಂತರ ದೊರೆಯು ಮುನಿಗೆ ಭೋಜನವನ್ನು ನೀಡಿ ನಂತರ ತಾನೂ ಆಹಾರವನ್ನು ಸೇವಿಸಿದನು. ದೊರೆಯು ಅನಂತರದಲ್ಲಿ ತನ್ನೆಲ್ಲ ಸಂಪತ್ತನ್ನೂ ತನ್ನ ಪುತ್ರರಿಗೆ ಹಂಚಿ ಅರಣ್ಯಕ್ಕೆ ತೆರಳಿದನು.

ಅಂಬರೀಶ ದೊರೆಗೆ ವಿರೂಪ, ಕೇತುಮಾನ ಮತ್ತು ಶಂಭುವೆಂಬ ಮೂವರು ಪುತ್ರರು. ವಿರೂಪನಿಂದ ಪ್ರಸದಸ್ಯನೆಂಬ ಪುತ್ರನು ಜನಿಸಿ, ಅವನಿಂದ ರಥಿತಾರನೆಂಬ ಪುತ್ರನು ಹುಟ್ಟಿದನು. ರಥಿತಾರನಿಗೆ ಪುತ್ರರಿಲ್ಲದ್ದರಿಂದ ಅವನು ಅಂಗೀರನಿಗೆ ತನಗಾಗಿ ಮಕ್ಕಳನ್ನು ಹುಟ್ಟಿಸಬೇಕೆಂದು ಕೇಳಿಕೊಂಡಾಗ ಬ್ರಾಹ್ಮಣ ಶಕ್ತಿಯಿಂದ ರತಿಕಾರನ ಪತ್ನಿಗೆ ಪುತ್ರರಾಗಿ ಅವರು ರಥಿತಾರ ಹಾಗೂ ಅಂಗೀರ ಇಬ್ಬರ ಸಂತತಿಗಳಿಗೂ ಸೇರಿದರು.

ಮನುವಿನ ಹೊಳ್ಳೆಗಳಿಂದ ಜನಿಸಿದ ಇಕ್ಷ್ವಾಕು ಮನುವಿನ ಪುತ್ರನಾಗಿದ್ದು ಅವನಿಗೆ ಹುಟ್ಟಿದ ನೂರು ಪುತ್ರರಲ್ಲಿ ವಿತುಸ್ಕಿ ಮತ್ತು ದಂಡಕ ಪ್ರಮುಖರು. ಅವರೆಲ್ಲರೂ ಜಗತ್ತಿನ ವಿವಿಧ ಪ್ರದೇಶಗಳನ್ನು ಆಳಿದರು.

ಇಕ್ಷ್ವಾಕುವಿನ ಮಗ ವಿಕುಸ್ಕಿಯು ಅರಣ್ಯಕ್ಕೆ ತೆರಳಿ ಯಜ್ಞಕ್ಕೆ ನೀಡಬೇಕಾದ ಆಹುತಿಗೆ ಅರ್ಹವಾದ ಅನೇಕ ಪ್ರಾಣಿಗಳನ್ನು ಕೊಂದನು. ವಿತುಸ್ಕಿಗೆ ಹಸಿವೆಯಾದ್ದರಿಂದ ಅವನು ಮೊಲದ ಮಾಂಸವನ್ನು ತಿಂದು ಉಳಿದಿದ್ದನ್ನು ಶುದ್ಧೀಕರಣಗೊಳಿಸುವ ಸಲುವಾಗಿ ನೀಡಿದನು. ಮಾಂಸವನ್ನು ಅರ್ಧ ತಿನ್ನಲಾಗಿದೆಯೆಂಬುದನ್ನು ತಿಳಿದ ವಸಿಷ್ಠ ಋಷಿಯು ಅದು ಶ್ರಾದ್ಧಕ್ಕೆ ಅನರ್ಹವೆಂದಾಗ ಇಕ್ಷ್ವಾಕುವು ಕೋಪಗೊಂಡು ತನ್ನ ಮಗನನ್ನು ಅವನ ತಪ್ಪಿಗಾಗಿ ದೇಶವನ್ನು ತ್ಯಜಿಸಬೇಕೆಂದು ಆದೇಶಿಸಿದನು. ಪರಮ ಸತ್ಯದ ಬಗ್ಗೆ ವಸಿಷ್ಠನಿಂದ ಸೂಚನೆಗಳನ್ನು ಪಡೆದ ಇಕ್ಷ್ವಾಕು ಸರ್ವಪರಿತ್ಯಾಗನಾಗಿ ದೇಹವನ್ನು ಬಿಟ್ಟಾಗ ತಂದೆಯ ಮರಣದ ನಂತರ ಹಿಂತಿರುಗಿದ ವಿಕುಸ್ಕಿಯ ದೊರೆಯಾಗಿ ಜಗತ್ತನ್ನು ಆಳಿ ಭಗವಂತನ ಸಂಪ್ರೀತಿಗಾಗಿ ಹಲವಾರು ಯಾಗಗಳನ್ನು ಮಾಡಿ ಸಾಸದನೆಂದು ಹೆಸರು ವಾಸಿಯಾದನು. ಅವನ ಮಗ ಇಂದ್ರಸ್ಯಹನೆಂಬುದಾಗಿಯೂ ಕರೆಯಲ್ಪಟ್ಟ ಹಾಗೂ ಕಾಕುತ್ಸ್ಥ ಎಂಬ ಹೆಸರನ್ನೂ ಹೊಂದಿದ್ದ ಪುರಂಜಯನು. ಪುರಂಜಯನೆಂದರೆ "ರಾಕ್ಷಸರ ವಾಸಸ್ಥಾನಗಳನ್ನು ಜಯಿಸಿದವನು" ಎಂದು ಅರ್ಥ. ಅವನಿಗೆ ಹೀಗೆ ಹೆಸರು ಬರಲು ಕಾರಣ ಅವನು ಉಪದೇವತೆಗಳ ಪರವಾಗಿ ದಾನವರನ್ನು ಸೋಲಿಸಿದ್ದು.

ಇಂದ್ರನು ತನ್ನದೆಲ್ಲವನ್ನೂ ಮುಂದುವರೆಸಿಕೊಂಡು ಹೋಗಬೇಕೆಂಬ ಶರತ್ತಿನ ಮೇಲೆ ಪುರಂಜಯನು ದಾನವರನ್ನು ಕೊಲ್ಲಲು ಒಪ್ಪಿದಾಗ ಇಂದ್ರನು ಇದಕ್ಕೆ ಮೊದಲು ಅಂಗೀಕರಿಸದಿದ್ದರೂ ನಂತರ ಭಗವಂತನ ಒತ್ತಾಯಕ್ಕೆ ಮಣಿದಾಗ ಪುರಂಜಯ ಹಾಗೂ

ದಾನವರ ಮಧ್ಯೆ ಭೀಕರ ಕಾಳಗ ನಡೆಯಿತು. ದಾನವರೆಲ್ಲ ಸಂಹಾರಗೊಂಡಾಗ ಪುರಂಜಯನು ಶತೃಗಳ ಸಂಪತ್ತನ್ನೂ ಒಳಗೊಂಡಂತೆ ಸಕಲವನ್ನೂ ಇಂದ್ರನಿಗೆ ಒಪ್ಪಿಸಿದ.

ಪುರಂಜಯನ ಪುತ್ರ ಅನೇನ. ಅವನ ಮಗ ಪೃಥು. ಇವನ ಮಗ ವಿಶ್ವಗಂಧಿ. ಚಂದ್ರನು ವಿಶ್ವಗಂಧಿಯ ಮಗನಾಗಿದ್ದು ಯುವನಸ್ಯನು ಚಂದ್ರನ ಮಗ. ಯುವನಸ್ಯನ ಮಗ ಶ್ರವಸ್ಥಪುರಿ ಎಂಬ ಪಟ್ಟಣವನ್ನು ನಿರ್ಮಿಸಿದ ಶ್ರವಸ್ತ. ಇವನ ಮಗನು ಬೃಹದಶ್ವನಾಗಿದ್ದು ಅವನ ಮಗ ಕುವಲಯಸ್ಯ.

ಕುವಲಯಸ್ಯನು ತನ್ನ ಇಪ್ಪತ್ತೊಂದು ಸಾವಿರ ಪುತ್ರರ ನೆರವಿನಿಂದ ದುಂಧು ಎಂಬ ರಾಕ್ಷಸನನ್ನು ಕೊಂದಾಗ ಕದನದಲ್ಲಿ ಧೃದಸ್ವ, ಕಪಿಲಶ್ವ ಮತ್ತು ಭದ್ರಶ್ವ ಇವರನ್ನುಳಿದು ಮಿಕ್ಕೆಲ್ಲ ಮಕ್ಕಳನ್ನೂ ಕಳೆದುಕೊಂಡನು. ಕುಳಲಯಸ್ಯನ ಮೊಮ್ಮಗನಾದ ಯುವನಶ್ವನಿಗೆ ಮಕ್ಕಳಿಲ್ಲದಿದ್ದು ಅರಣ್ಯಕ್ಕೆ ತೆರಳಿದ ಅವನ ಬಗ್ಗೆ ಕರುಣೆ ತೋರಿದ ಬ್ರಾಹ್ಮಣರು "ಇಂದ್ರ ಯಜ್ಞ" ವನ್ನು ನೆರವೇರಿಸಿದರು. ರಾತ್ರಿಯ ವೇಳೆಯಲ್ಲಿ ಕುವಲಯಸ್ಯನು ಬಾಯಾರಿದವನಾಗಿ ಯಜ್ಞಶಾಲೆಗೆ ತೆರಳಿ ಆತನ ಪತ್ನಿಗೆ ಮೀಸಲಾಗಿದ್ದ ನೀರನ್ನು ಕುಡಿದುಬಿಟ್ಟನು. ಬ್ರಾಹ್ಮಣರಿಗೆ ಅವನು ಭಗವಂತನ ಪ್ರೇರಣೆಯಿಂದಾಗಿಯೇ ಆ ನೀರನ್ನು ಕುಡಿದಿರುವನೆಂಬುದು ತಿಳಿಯಿತು. ಅನಂತರ ಒಬ್ಬ ಮಗನು ದೊರೆಯ ಬಲಬದಿಯ ಕೆಳಭಾಗದಿಂದ ಜನಿಸಿ ಆ ಪುಟ್ಟ ಮಗು ಎದೆ ಹಾಲಿಗಾಗಿ ಅಳತೊಡಗಿತು. ಅಲ್ಲಿಗೆ ಆಗಮಿಸಿದ್ದ ಇಂದ್ರನು ಮಗುವಿನ ಬಾಯಿಗೆ ತನ್ನ ತೋರ ಬೆರಳಿನ್ನಿಟ್ಟು "ನೀನು ನನ್ನನ್ನು ಕುಡಿಯಬಹುದು" ಎಂಬುದಾಗಿ ನುಡಿದನು. ಯುವನಸ್ಯನನ್ನು ಬ್ರಾಹ್ಮಣರು ಆಶೀರ್ವದಿಸಿ ಅವನು ಕಠಿಣ ತಪ್ಪಸ್ಸಿನಿಂದ ಪರಿಶುದ್ಧತೆಯನ್ನು ಸಾಧಿಸಿ, ಅವನ ಮಗ ಮಂಧಾತನು ತುಂಬಾ ಪ್ರಬಲಶಾಲಿಯಾಗಿ ಜಗತ್ತನ್ನೇ ಆಳಿ, ಭಗವಂತನನ್ನೂ ಆರಾಧಿಸಿ, ಮೂವರು ಪುತ್ರರನ್ನೂ ಹಾಗೂ "ಸಭಾರಿ" ಮುನಿಯನ್ನು ತಮ್ಮ ಪತಿಯನ್ನಾಗಿ ಹೊಂದಿದ ಐವತ್ತು ಪುತ್ರಿಯರನ್ನೂ ಪಡೆದನು.

ಕಠಿಣ ತಪಸ್ಸಾನ್ನಚರಿಸುತ್ತ ಯುಮುನೆಯ ನೀರಿನಲ್ಲಿ ಮುಳುಗಿದ್ದ ಸಭಾರಿ ಋಷಿಗೆ ಲೈಂಗಿಕ ಚೆಲ್ಲಾಟದಲ್ಲಿ ನಿರತವಾಗಿದ್ದ ಮೀನಿನ ಜೋಡಿಯೊಂದು ಕಂಡಿತು. ಆಗ ಆಶೆಗೊಂಡವನಾಗಿ ಮುನಿಯು ದೊರೆಯ ಬಳಿಗೆ ಬಂದು ಅವನ ಪುತ್ರಿಯರನ್ನು ನೀಡುವಂತೆ ಬೇಡಿದನು. ಅದಕ್ಕೊಪ್ಪಿದ ದೊರೆಯು "ಎಲೈ ಬ್ರಾಹ್ಮಣನೇ, ನನ್ನ ಪುತ್ರಿಯರಲ್ಲಿ ಯಾರೇ ಆದರೂ ಅವಳ ಸ್ವಂತ ಇಚ್ಛೆಗನುಗುಣವಾಗಿ ಯಾರನ್ನೇ ಪತಿಯಾಗಿ ಸ್ವೀಕರಿಸಬಹುದು" ಎಂದನು. ಆದರೆ ಸಭಾರಿ ಮುನಿಯು ಮುದಿಯಾಗಿದ್ದು ತನ್ನ ಶರೀರವನ್ನು ಸುಧಾರಿಸಿಕೊಳ್ಳಲು ಆಲೋಚಿಸಿ ತನ್ನ ಯೌವ್ವನವನ್ನು ಮರಳಿ ಪಡೆದುಕೊಂಡಾಗ ದೊರೆಯ ಐವತ್ತು ಕುವರಿಯರೂ ಅವನನ್ನು ವಿವಾಹವಾಗಲು ಒಪ್ಪಿದರು. ಆದರೆ ನಂತರ ಅವರಲ್ಲೇ ಕಾದಾಟ ಪ್ರಾರಂಭವಾಯಿತು. ಮುನಿಯು ತನ್ನ ಮಂತ್ರಶಕ್ತಿಯಿಂದ ಸಂತಸಮಯ ಜೀವನಕ್ಕೆ ಅಗತ್ಯವಾದುದೆಲ್ಲವನ್ನೂ ನೀಡಿ, ಸಮೃದ್ಧನಾಗಿ ತನ್ನನ್ನೇ ಕೊಟ್ಟುಕೊಂಡರೂ, ಅವನು ತನ್ನ ಅಸದಳ ಪತ್ನಿಯರಿಂದಾಗಿ ಗೃಹ ವ್ಯವಹಾರಗಳಲ್ಲಿ ತೊಡಗಬೇಕಾಯಿತು.

ದೊರೆ ಮಂಧಾತನು ಮುನಿಯ ಸಮೃದ್ಧಿಯನ್ನು ಕಂಡು ಆಶ್ಚರ್ಯ ಚಕಿತನಾದನು. ಜಗತ್ತಿನ ಒಡೆಯ ತಾನೆಂಬ ಒಣಪ್ರತಿಷ್ಠೆಯನ್ನು ಬಿಟ್ಟುಕೊಟ್ಟನು. ಮುನಿಯು ಎಲ್ಲ ಆನಂದವನ್ನೂ ಅನುಭವಿಸುತ್ತಿದ್ದರೂ ತೃಪ್ತನಾಗಲಿಲ್ಲ. ಒಂದು ದಿನ ಮುನಿಯು ಏಕಾಂತ ಸ್ಥಳದಲ್ಲಿ ಕುಳಿತು ತಾನು ಕುಸಿದಿರುವುದಕ್ಕೆ ಕಾರಣ ತಾನು ಲೈಂಗಿಕ ಚಟುವಟಿಕೆಯಲ್ಲಿ ನಿರತನಾಗಿರುವನು ಎಂಬುದಾಗಿ ಪಶ್ಚಾತ್ತಾಪ ಪಟ್ಟನು. ಐಹಿಕ ಶೃಂಖಲೆಗಳಿಂದ ವಿಮುಕ್ತನಾಗ ಬಯಸುವ ಒಬ್ಬನು ಲೈಂಗಿಕ ಜೀವನದ ಬಗೆಗಿನ ಆಸಕ್ತಿಯನ್ನು ಬಿಟ್ಟುಕೊಡಬೇಕೆಂದು ಅವನು ಯೋಚಿಸಿ ತನ್ನ ತಪ್ಪನ್ನು ಅರಿತು, ಅರಣ್ಯಕ್ಕೆ ತೆರಳಿ ಅಲ್ಲಿ ಕಠಿಣ ತಪಸ್ಸನ್ನು ಆಚರಿಸಿ ಭಗವಂತನ ಸೇವೆಯಲ್ಲಿ ತೊಡಗಿದಾಗ, ಅದನ್ನು ಕಂಡ ಆತನ ಪತ್ನಿಯರೂ ಅಧ್ಯಾತ್ಮಿಕ ಜಗತ್ತನ್ನು ಪ್ರವೇಶಿಸಿದರು.

ಮಂಧಾತನ ಪುತ್ರರಲ್ಲಿ ಅಂಬರೀಶನು ಮುಖ್ಯನಾದನವನೆಂದು ಶ್ರೀ ಶುಕಾಚಾರ್ಯರು ತಿಳಿಸಿದರು. ಅವನ ಮಗ ಯೌವ್ವನಸ್ಯನಾಗಿದ್ದು, ಈತನ ಮಗ ಹರಿತನು. ಮಂಧಾತನ ಮತ್ತೊಬ್ಬ ಪುತ್ರನಾದ ಪುರುಕುತ್ಸನು ಸರ್ಪಗಳ ಸೋದರಿಯಾದ ನರ್ಮದಳನ್ನು ವಿವಾಹವಾಗಿ, ಅವಳು ತನ್ನ ಪತಿಯನ್ನು ಜಗತ್ತಿನ ಕೆಳಸ್ತರಗಳಿಗೆ ಕೊಂಡೊಯ್ದಾಗ ಅವನ ಅಲ್ಲಿ ಗಂಧರ್ವರನ್ನು ಸಂಹರಿಸಿದನು. ಅವರು ಅಂಥ ದಂಡನೆಗೆ ಅರ್ಹರಾಗಿದ್ದರು. ಪುರುಕುತ್ಸನ ಮಗನು ಅನಾರಣ್ಯನ ತಂದೆಯಾದ ತ್ರಸದ್ದಸ್ಯು. ಅನಾರಣ್ಯನ ಮಗ ಪುರರೂಣನ ತಂದೆಯಾದ ಹರ್ಯಸ್ವ. ಪ್ರರೂಣನು ತ್ರಿಬಂಧನ ತಂದೆ. ತ್ರಿಬಂಧನ ಮಗ ತ್ರಿಶಂಕುವೆಂದೂ ಹೆಸರಾದ ಸತ್ಯವ್ರತ. ಅವನು ಬ್ರಾಹ್ಮಣನ ವಿವಾಹವಾಗಲಿದ್ದ ಮಗಳನ್ನು ಅಪಹರಿಸಿದ್ದರಿಂದ ಅವಳ ತಂದೆಯು ಅವನಿಗೆ ಚಾಂಡಾಲನಾಗಬೇಕೆಂದು ಶಾಪವನ್ನಿತ್ತನು. ಅನಂತರ ವಿಶ್ವಾಮಿತ್ರನ ಪ್ರಭಾವದಿಂದ ಅವನು ಉನ್ನತ ಗ್ರಹಗಳಲ್ಲಿನ ಸ್ವರ್ಗಲೋಕಕ್ಕೆ ತನ್ನ ಐಹಿಕ ಶರೀರದೊಂದಿಗೇ ತೆರಳಿ ಅಲ್ಲಿಂದ ಕೆಳಗೆ ಬೀಳಲಿದ್ದಾಗ, ವಿಶ್ವಾಮಿತ್ರನು ಅವನನ್ನು ಬೀಳಲು ಬಿಡದೆ ಅವನು ತಲಕೆಳಗಾಗಿ ಆಕಾಶದಲ್ಲೇ ನೇತಾಡಲು ತೊಡಗಿದ. ತ್ರಿಶಂಕುವಿನ ಮಗನೇ ಹರಿಶ್ಚಂದ್ರನಾಗಿದ್ದು ಇವನಿಂದಾಗಿಯೇ ವಿಶ್ವಾಮಿತ್ರ ಮತ್ತ ವಸಿಷ್ಠರು ಪರಸ್ಪರ ಕಾದಾಡಿದರು.

ಹರಿಶ್ಚಂದ್ರನಿಗೆ ಮಕ್ಕಳಿರದಿದ್ದಾಗ ನಾರದನ ಸಲಹೆಯಂತೆ ಅವನು ಪುತ್ರನಿಗಾಗಿ ವರುಣನನ್ನು ಪ್ರಾರ್ಥಿಸಿದನು : "ಎಲೈ ಭಗವಂತನೇ, ನನಗೆ ಪುತ್ರನ ಜನನವಾದರೆ ಅವನೊಂದಿಗೇ ನಾನು ನಿನ್ನ ಸಂತೃಪ್ತಿಗಾಗಿ ಯಜ್ಞವನ್ನು ಆಚರಿಸುತ್ತೇನೆ". ಇದಕ್ಕೊಪ್ಪಿದ ವರುಣನು ಹರಿಶ್ಚಂದ್ರನಿಗೆ ರೋಹಿತನೆಂಬ ಪುತ್ರನನ್ನು ನೀಡಿ ದೊರೆಗೆ ತನ್ನ ವಚನವನ್ನು ನೆನಪಿಸಿದನು. ಹರಿಶ್ಚಂದ್ರನು ತನ್ನ ಮಗನ ಮೇಲೆ ವ್ಯಾಮೋಹಗೊಂಡವನಾದ್ದರಿಂದ ತನ್ನ ವಚನ ಪಾಲನೆಯನ್ನು ಮುಂದಕ್ಕೆ ಹಾಕುತ್ತಲೇ ಇದ್ದ. ತನ್ನ ತಂದೆಯು ತನ್ನನ್ನು ಬಲಿಪಶುವಾಗಿ ನೀಡಲು ಉದ್ದೇಶಿಸಿದ್ದನು ಎಂಬುದನ್ನು ತಿಳಿದ ರೋಹಿತನು ಅರಣ್ಯಕ್ಕೆ ತೆರಳಿದಾಗ, ವರುಣನು ಹರಿಶ್ಚಂದ್ರನಿಗೆ ಉದರ ರೋಗದಿಂದ ಭಾಧಿತನಾಗಬೇಕೆಂದು ಶಪಿಸಿದ. ಇದನ್ನು ತಿಳಿದ ರೋಹಿತನು ತನ್ನ ತಂದೆಯ ಬಳಿಗೆ ಹಿಂತಿರುಗಿದರೂ ಇಂದ್ರನಿಂದ ತಡೆಯಲ್ಪಟ್ಟವನಾಗಿ, ಮತ್ತೆ ತನ್ನ ಆರನೇ ವರ್ಷದಲ್ಲಿ ಅಲ್ಲಿಗೆ ವಾಪಸ್ಸಾದಾಗ

ಅವನು ಅಜಿಗರ್ತ ಎಂಬುವನಿಂದ ಸುನಶ್ಯೇಪನೆಂಬ ಅವನ ಎರಡನೇ ಮಗನನ್ನು ಕೊಂಡು ಬಲಿಪಶುವಾಗಿ ಅವನನ್ನು ವರುಣನಿಗೆ ನೀಡುವಂತೆ ತಂದೆಗೆ ತಿಳಿಸಿದ.

ಅನಂತರ ಹರಿಶ್ಚಂದ್ರ ದೊರೆಯು ಮಾನವನ ಬಲಿಯನ್ನು ನೀಡಿ ವರುಣನನ್ನು ತೃಪ್ತಿಪಡಿಸಿದನು. ಮಹಾ ಯಜ್ಞದಲ್ಲಿ ವಿಶ್ವಾಮಿತ್ರನು ಹವಿಸ್ಸನ್ನು ಅರ್ಪಿಸುವ ಪ್ರಧಾನ ಪುರೋಹಿತನಾಗಿದ್ದು, ಜಮದಗ್ನಿಯು ಯಜುರ್ವೇದ ಮಂತ್ರವನ್ನು ಪಠಿಸಿ, ವಸಿಷ್ಠನು ಮುಖ್ಯ ಬ್ರಾಹ್ಮಣ ಪುರೋಹಿತನಾಗಿದ್ದನು. ಮಹಾರಾಜಾ ಹರಿಶ್ಚಂದ್ರನು ತನ್ನ ಬುದ್ಧಿಯನ್ನು ಭೂಮಿಯೊಂದಿಗೆ ಬೆರೆಸುವ ಮೂಲಕ ಪರಿಶುದ್ಧನಾಗಿ, ಭೂಮಿಯನ್ನು ಅಗ್ನಿಯೊಂದಿಗೆ, ಅಗ್ನಿಯನ್ನು ವಾಯುವಿನೊಂದಿಗೆ, ವಾಯುವನ್ನು ಅಂತರಿಕ್ಷದೊಂದಿಗೆ ಹಾಗೂ ಅಂತರಿಕ್ಷವನ್ನು ಬಿಟ್ಟು ಐಹಿಕ ಶಕ್ತಿಯೊಂದಿಗೆ ಮತ್ತು ಆ ಶಕ್ತಿಯನ್ನು ಅಧ್ಯಾತ್ಮಿಕ ಶಕ್ತಿಯೊಂದಿಗೆ ಬೆರೆಸಿ, ಅಧ್ಯಾತ್ಮಿಕ ಜ್ಞಾನದಲ್ಲಿ ತನ್ನನ್ನೇ ಸ್ಥಾಪಿಸಿಕೊಂಡು ಐಹಿಕ ಶಕ್ತಿಯಿಂದ ತಾನು ಸಂಪೂರ್ಣವಾಗಿ ವಿಮುಕ್ತಗೊಂಡನು.

ರೋಹಿತನ ಮಗ ಹರಿತನಾಗಿದ್ದು, ಅವನ ಮಗನಾದ ಚಂಪನು ಚಂಪಾಪುರಿಯನ್ನು ನಿರ್ಮಿಸಿದವನೆಂದು ಶ್ರೀ ಶುಕಾಚಾರ್ಯರು ತಿಳಿಸಿದರು. ಚಂಪನ ಮಗ ಸುದೇವ. ಇವನ ಮಗ ವಿಜಯ. ಬಹುಕನು ವಿಜಯನ ಸಂತತಿಯವನಾಗಿದ್ದು ಅವನು ತನ್ನ ರಾಜ್ಯವನ್ನು ಕಳೆದುಕೊಂಡನು. ಬಹುಕ ತನ್ನ ಪತ್ನಿಯೊಂದಿಗೆ ಅರಣ್ಯಕ್ಕೆ ತೆರಳಿದನು. ಬಹುಕನ ನಿಧನದ ನಂತರ ಅವನ ಪತ್ನಿಯರು ಸಹಗಮನ ಮಾಡಲು ಇಚ್ಛಿಸಿದರೂ ಅವರಲ್ಲೊಬ್ಬಳು ಗರ್ಭಿಣಿಯಾಗಿದ್ದರಿಂದ ಓರ್ವ ಮುನಿಯು ಅವಳನ್ನು ತಡೆದಾಗ ಸಹಪತ್ನಿಯರು ಗರ್ಭಿಣಿ ರಾಣಿಗೆ ವಿಷವನ್ನು ಉಣಿಸಿದರೂ ಅದು ಅವಳಿಗೆ ಯಾವ ಹಾನಿಯನ್ನೂ ಉಂಟು ಮಾಡದೆ ಸಗರನೆಂಬ (ವಿಷದಿಂದ ಜನಿಸಿದವನು) ಪುತ್ರನು ಅವಳಿಗೆ ಜನಿಸಿ ಅವನ ಚಕ್ರವರ್ತಿಯಾದನು. ಅವನ ಮಗನು ಭೂಗತನಾಗಿದ್ದ ಗಂಗಾಸಾಗರವೆಂಬ ಸ್ಥಳವನ್ನು ಪತ್ತೆ ಹಚ್ಚಿದನು.

ಸಗರ ದೊರೆಯು ಅಶ್ವಮೇಧ ಯಾಗವನ್ನು ಆಚರಿಸಿದಾಗ ಇಂದ್ರನು ಯಜ್ಞಕ್ಕೆ ಮೀಸಲಾಗಿದ್ದ ಅಶ್ವವನ್ನು ಅಪಹರಿಸಿದನು. ಸಗರ ದೊರೆಗೆ ಸುಮತಿ ಮತ್ತು ಕೇಸಿನಿಯೆಂಬ ಇಬ್ಬರು ಪತ್ನಿಯರಿದ್ದು, ಸುಮತಿಯ ಪುತ್ರರು ತಂದೆಯ ಆದೇಶದಂತೆ ಕಳುವಾದ ಅಶ್ವವನ್ನು ಹುಡುಕಲು ಭೂಮಿಯನ್ನು ವಿಸ್ತೃತವಾಗಿ ಅಗೆದಾಗ ಕಪಿಲ ಮುನಿಯ ಆಶ್ರಮದ ಬಳಿ ಅದನ್ನು ಕಂಡರು. ಅಶ್ವವನ್ನು ಮುನಿಯೇ ಕಳವು ಮಾಡಿರಬಹುದೆಂದು ಸಂಶಯಪಟ್ಟ ಸಗರ ಪುತ್ರರು, ಧ್ಯಾನಮಗ್ನನಾಗಿದ್ದ ಮುನಿಯನ್ನು ಕೊಲ್ಲಲು ಬಯಸಿ ತಮ್ಮ ಆಯುಧಗಳನ್ನು ಎತ್ತಿದಾಗ ಆ ಸಮಯಕ್ಕೆ ಸರಿಯಾಗಿ ತನ್ನ ಕಣ್ಣನ್ನು ಮುನಿಯು ತೆರೆದಾಗ ಸಗರನ ಪುತ್ರರೆಲ್ಲರೂ ಸುಟ್ಟು ಬೂದಿಯಾದರು.

ಸಗರ ದೊರೆಗೆ ತನ್ನ ಎರಡನೇ ಪತ್ನಿಯಾದ ಕೇಸಿನಿಯಿಂದ ಜನಿಸಿದ್ದ ಪುತ್ರನಿದ್ದ. ಅವನ ಹೆಸರು ಅಸಮಂಜಸ. ಅಸಮಂಜಸನ ಮಗನಾದ ಅನುಮಾನನು ಸದಾ ಕಾಲವೂ ತನ್ನ ತಾತನಿಗಾಗಿ ಕಾರ್ಯಮಗ್ನನಾಗಿದ್ದನು. ಅವನು ಅಶ್ವವು ಕಪಿಲ ಮುನಿಯ

ಬಳಿ ನಿಂತಿರುವುದನ್ನು ಗಮನಿಸಿದನು. ಅನುಮಾನನು ಮುನಿಯನ್ನು ಸಮೀಪಿಸಿ ಅವನ ಮುಂದೆ ಕೈಮುಗಿದು ನಿಂತಾಗ ಮುನಿಯು ತನ್ನ ತಾತನ ಯಜ್ಞಕ್ಕೆ ಅಗತ್ಯವಾದ ಅಶ್ವವನ್ನು ಅನುಮಾನನು ಕೊಂಡೊಯ್ಯಬೇಕೆಂದು ತಿಳಿಸಿದನು. ಅವನು ಅಶ್ವವನ್ನು ಪಡೆದು ತಂದಾಗ ಸಗರನಿಗೆ ತನ್ನ ಯಾಗವನ್ನು ಪೂರೈಸುವುದು ಸಾಧ್ಯವಾಯಿತು.

ಅನಂತರ ರಾಜ್ಯವನ್ನು ತನ್ನ ಮೊಮ್ಮಗನಿಗೆ ಒಪ್ಪಿಸಿದ ಸಗರನು ಇನ್ನುಳಿದ ಜೀವಿತ ಕಾಲಕ್ಕಾಗಿ ಅರಣ್ಯಕ್ಕೆ ತೆರಳಿದನು.

ಅನುಮಾನ ದೊರೆಯು ತಪಸ್ಸನ್ನು ಆಚರಿಸಿದರೂ ಗಂಗೆಯನ್ನು ಈ ಜಗತ್ತಿಗೆ ತರಲಾಗಲಿಲ್ಲ ಎಂಬುದಾಗಿ ಶ್ರೀ ಶುಕಾಚಾರ್ಯರು ತಿಳಿಸಿದರು. ಅವನ ಮಗ ದಿಲೀಪನು ಅದಕ್ಕಾಗಿ ವ್ಯರ್ಥವಾಗಿ ಪ್ರಯತ್ನಿಸಿದನು. ದಿಲೀಪನ ಮಗನಾದ ಭಗೀರಥನು ಇದಕ್ಕಾಗಿ ಕಠಿಣ ತಪಸ್ಸನ್ನು ಕೈಗೊಂಡಾಗ ಅವನ ಮುಂದೆ ಕಾಣಿಸಿಕೊಂಡ ಗಂಗೆಯು, ಕಪಿಲ ಮುನಿಗೆ ಅಗೌರವ ಸಲ್ಲಿಸಿದ ಕಾರಣಕ್ಕಾಗಿ ಸುಟ್ಟು ಭಸ್ಮಗೊಂಡ ತನ್ನ ಪಿತೃಗಳನ್ನು ಶುದ್ಧೀಕರಿಸಬೇಕೆಂದು ಆತನ ಪ್ರಾರ್ಥನೆಗೆ ಒಪ್ಪಿದಳು. ತಾನು ಭೂಮಿಗೆ ಆಗಮಿಸಿದಾಗ ಅಲ್ಲಿ ಯಾರಾದರೂ ತನ್ನ ರಭಸವನ್ನು ತಡೆಹಿಡಿಯದಿದ್ದಲ್ಲಿ ತಾನು ಭೂಮಿಯನ್ನು ಸೀಳಿಕೊಂಡು ಪಾತಾಳಕ್ಕೆ ಹೋಗುತ್ತೇನೆಂದು ಗಂಗಾ ಮಾತೆ ತಿಳಿಸಿದಲ್ಲದೆ, ಜನರಿಂದ ತಾನು ಕಲುಷಿತಗೊಳ್ಳುವ ಸಂದರ್ಭವಿರುವುದರಿಂದ ತಾನು ಕೆಳಗೆ ಬರಲು ಇಚ್ಛಿಸುವುದಿಲ್ಲ ಎಂಬುದಾಗಿ ತಿಳಿಸಿದಳು.

ಅದಕ್ಕೆ ಉತ್ತರವಾಗಿ ಭಗೀರಥನು ಸಾಮಾನ್ಯ ಜನರು ನದಿಯಲ್ಲಿ ಕಲ್ಮಶವನ್ನು ಉಂಟು ಮಾಡಿದರೂ ಪವಿತ್ರ ಜನರು ಅದರಲ್ಲಿ ಸ್ನಾನ ಮಾಡಿದಾಗ ಆ ಕಲ್ಮಶವೆಲ್ಲವೂ ನಿವಾರಣೆಯಾಗುವುದೆಂದನು. ಅಲ್ಲದೆ ಭಗವಂತನನ್ನು ಪ್ರತಿನಿಧಿಸುವ ಮಹೇಶ್ವರನು ಅವಳ ರಭಸವನ್ನು ತಡೆಹಿಡಿಯಬಲ್ಲ ಎಂದು ಹೇಳಿ ಈಶ್ವರನನ್ನು ಪ್ರಾರ್ಥಿಸಿದಾಗ, ಅವನ ಮುಂದೆ ಪ್ರತ್ಯಕ್ಷನಾದ ಈಶ್ವರನು ಭಗೀರಥನ ಮೊರೆಗೆ ಒಪ್ಪಿದನು. ಗಂಗಾ ಮಾತೆಯ ಪ್ರವಾಹದ ಮುಂದೆ ಭಗೀರಥನು ತನ್ನ ರಥವನ್ನು ಸಾಗಿಸಿದಾಗ ಗಂಗೆಯು ಅವನ ಪಿತೃಗಳು ಭಸ್ಮವಾಗಿದ್ದ ಸ್ಥಳವನ್ನು ತಲುಪುವವರೆಗೆ ದಾರಿ ಮಾರ್ಗದಲ್ಲಿ ಸಿಕ್ಕಿದ ಎಲ್ಲವನ್ನೂ ಪರಿಶುದ್ಧಗೊಳಿಸಿ, ಪಿತೃಗಳನ್ನೂ ಶುದ್ಧೀಕರಿಸಿ, ಅವರನ್ನು ಸ್ವರ್ಗಾರೋಹಣಕ್ಕೆ ಅರ್ಹನ್ನಾಗಿಸಿದಳು.

ಸೌದಾಸನು ಭಗೀರಥ ಮಹಾರಾಜನ ಸಂತತಿಯವನಾಗಿದ್ದು ಅವನಿಗಿರುವ ಇನ್ನಿತರ ಹೆಸರುಗಳೆಂದರೆ ಮಿತ್ರಸಾಹ ಅಥವಾ ಕಲ್ಮಷಪಾದ. ಅವನಿಗೆ ಪುತ್ರರಿಲ್ಲದೆ ವಸಿಷ್ಠ ಮುನಿಯಿಂದ ನರಭಕ್ಷಕನಾಗುವಂತೆ ಶಪಿಸಲ್ಪಟ್ಟನು. ಪರೀಕ್ಷಿತ ರಾಜನು ಈ ಶಾಪಕ್ಕೆ ಕಾರಣವನ್ನು ತಿಳಿಯಬಯಸಿದನು.

ಶ್ರೀ ಶುಕಾಚಾರ್ಯರು ಈ ಮುಂದಿನ ವೃತ್ತಾಂತವನ್ನು ತಿಳಿಸಿದರು. ಒಮ್ಮೆ ಸೌದಾಸನು ಅರಣ್ಯದಲ್ಲಿ ವಾಸಿಸಲು ತೆರಳಿದಾಗ ಅವನು ನರಭಕ್ಷಕನಾದ ದಾನವನೊಬ್ಬನನ್ನು ಕೊಂದರೂ ಪ್ರತೀಕಾರ ತೀರಿಸಿಕೊಳ್ಳಲು ಬಯಸಿದ ದಾನವನ ಸೋದರನನ್ನು ಕ್ಷಮಿಸಿದನು.

ದೊರೆಗೆ ಹಾನಿ ಮಾಡಲು ಬಯಸಿದ ಅವನು ದೊರೆಯ ಪಾಕಶಾಲೆಯಲ್ಲಿ ಅಡಿಗೆಯವನಾದನು. ಒಮ್ಮೆ ವಸಿಷ್ಠ ಮುನಿಯು ರಾಜನ ಬಳಿಗೆ ಭೋಜನಕ್ಕಾಗಿ ಆಗಮಿಸಿದಾಗ ಅಡಿಗೆಯಾತನು ಅವನಿಗೆ ನರಮಾಂಸವನ್ನು ನೀಡಿದಾಗ ಇದನ್ನು ತಿಳಿದ ವಸಿಷ್ಠನು ಸೌದಾಸನಿಗೆ ನರಭಕ್ಷಕನಾಗಬೇಕೆಂದು ಶಪಿಸಿದನು. ತನ್ನ ತಪ್ಪನ್ನು ಆನಂತರ ಅರಿತ ವಸಿಷ್ಠನು ಹನ್ನೆರಡು ವರ್ಷಗಳ ಕಾಲ ತಪಸ್ಸನ್ನು ಆಚರಿಸಿದನು. ಈ ಮಧ್ಯೆ ಸೌದಾಸನು ವಸಿಷ್ಠನನ್ನು ಶಪಿಸುವ ಸಲುವಾಗಿ "ಸರ್ಪಮಂತ್ರ" ವನ್ನು ಪ್ರಾರಂಭಿಸಿದಾಗ ಅವನ ಪತ್ನಿ ಮಧ್ಯಂತಿಯು ಅವನನ್ನು ತಡೆದಳು. ಸೌದಾಸನು ನರಭಕ್ಷಕನ ಶಕ್ತಿಯನ್ನು ಪಡೆದುಕೊಂಡು ತನ್ನ ಕಾಲಿನ ಮೇಲೆ ಕಪ್ಪು ಗುರುತನ್ನು ಪಡೆದವನಾಗಿ ಅರಣ್ಯದಲ್ಲಿ ಸಂಭೋಗ ಕ್ರಿಯೆಯಲ್ಲಿ ತೊಡಗಿದ್ದ ಓರ್ವ ಬ್ರಾಹ್ಮಣ ದಂಪತಿಗಳನ್ನು ಕಂಡನು. ಸೌದಾಸನು ಬ್ರಾಹ್ಮಣನನ್ನು ಹಿಡಿದೆಳೆದಾಗ, ಆತನ ಪತ್ನಿಯು ತನಗೆ ಪುತ್ರನೊಬ್ಬನ ಅಪೇಕ್ಷೆಯಿರುವುದರಿಂದ ತನ್ನ ಪತಿಯನ್ನು ಬಿಟ್ಟು ಬಿಡುವಂತೆ ಬೇಡಿಕೊಂಡಳು. ಆದರೆ ಶಾಪದ ಖಂಡನೆಗೆ ಒಳಗಾಗಿದ್ದ ಸೌದಾಸನು ಬ್ರಾಹ್ಮಣನನ್ನು ನುಂಗಿ ಹಾಕಿದನು. ಅವನ ಮಡದಿಯು ಕೋಪಾವಿಷ್ಟಳಾಗಿ ದೊರೆಯು ತನ್ನ ಮಡದಿಯೊಂದಿಗೆ ಸಂಭೋಗ ಮಾಡಲು ಪ್ರಯತ್ನಿಸಿದಲ್ಲಿ ಅವನೂ ಮರಣ ಹೊಂದಲಿ ಎಂದು ಶಪಿಸಿದಳು. ಅವಳು ತನ್ನ ಪತಿಯ ಅಸ್ಥಿಗಾಗಿ ಅಗ್ನಿಯನ್ನು ಸಿದ್ಧಪಡಿಸಿ ತಾನೂ ಅದರಲ್ಲಿ ಧುಮುಕಿದಳು. ಹನ್ನೆರಡು ವರ್ಷಗಳ ನಂತರ ಸೌದಾಸನು ಶಾಪದಿಂದ ವಿಮುಕ್ತನಾಗಿ, ತನ್ನ ಪತ್ನಿಯ ಬಳಿಗೆ ಲೈಂಗಿಕ ಅಪೇಕ್ಷೆಯಿಂದ ತೆರಳಿದಾಗ ಅವಳು ಅವನಿಗೆ ಬ್ರಾಹ್ಮಣನ ಪತ್ನಿಯ ಶಾಪವನ್ನು ನೆನಪಿಸಿದಳು. ಅನಂತರ ದೊರೆಯ ಅನುಮತಿಯೊಂದಿಗೆ ವಸಿಷ್ಠನ ಮಧ್ಯಸ್ಥಿಕೆಯಿಂದ ಮಗುವೊಂದನ್ನು ಪಡೆದಾಗ ಅವಳು ಅದಕ್ಕೆ ಜನ್ಮ ನೀಡದೆ ಅದನ್ನು ಏಳು ವರ್ಷಗಳ ಕಾಲ ತನ್ನ ಗರ್ಭದಲ್ಲೇ ಉಳಿಸಿಕೊಂಡಾಗ ವಸಿಷ್ಠನು ಮಧ್ಯಂತಿಯ ಹೊಟ್ಟೆಗೆ ಕುಟ್ಟಿದಾಗ ಮಗುವಿನ ಜನನವಾಗಿ ಅದಕ್ಕೆ "ಅಸ್ಮಕ" ಅಂದರೆ ಶಿಲೆಯಿಂದ ಜನಿಸಿದಂಥದ್ದು ಎಂಬ ಹೆಸರನ್ನಿಡಲಾಯಿತು.

ಅಸ್ಮಕನಿಂದ ಬಾಲಿಕನೆಂಬ ಪುತ್ರನ ಜನನವಾಯಿತು. ಅವನು ಸ್ತ್ರೀಯರಿಂದ ಆವೃತವಾಗಿದ್ದರಿಂದ ಪರಶುರಾಮನ ಕೋಪದಿಂದ ಅವನು ಉಳಿದುಕೊಂಡನು. ಆದ್ದರಿಂದ ಅವನಿಗೆ "ನಾರಿಕವಚ" ನೆಂಬ - ಸ್ತ್ರೀಯರಿಂದ ಸಂರಕ್ಷಿಸಲ್ಪಟ್ಟವನು - ಎಂಬ ಹೆಸರು ಬಂತು. ಪರಶುರಾಮನು ಎಲ್ಲ ಕ್ಷತ್ರಿಯರನ್ನೂ ನಾಶಪಡಿಸಿದಾಗ ಬಾಲಿಕನು ಇನ್ನೂ ಅನೇಕ ಕ್ಷತ್ರಿಯರನ್ನು ಮುಂದುವರಿಸಿದವನಾದನು.

ಖಟ್ವಾಂಗ ದೊರೆಯು ಅಸ್ಮಕನ ಸಂತತಿಗೆ ಸೇರಿದವನಾಗಿದ್ದು ದಾನವರ ವಿರುದ್ಧವಾಗಿ ಉಪದೇವತೆಗಳ ಪರವಾಗಿ ಸೆಣೆಸಿದನು. ಖಟ್ವಾಂಗ ದೊರೆಗೆ ವರವನ್ನು ನೀಡಿದ ಸಂದರ್ಭದಲ್ಲಿ ಅವನಿಗೆ ತನ್ನ ಜೀವಿತ ಕಾಲ ಕೇವಲ ಇನ್ನೊಂದು ಕ್ಷಣ ಮಾತ್ರ ಎಂಬುದಾಗಿ ತಿಳಿಸಲ್ಪಟ್ಟಾಗ ಅವನು ಭಗವಂತನ ಪಾದಾರವಿಂದದಲ್ಲಿ ಮನಸ್ಸನ್ನು ಕೇಂದ್ರೀಕರಿಸಿ ಧ್ಯಾನಮಗ್ನನಾದನು.

## ದಾಶರಥೀ ರಾಮ

ರಘು ಮಹಾರಾಜನು ಖಟ್ವಾಂಗ ಮಹಾರಾಜನ ಮೊಮ್ಮಗನಾಗಿದ್ದು ದಶರಥ ಮಹಾರಾಜನ ತಾತ. ದಶರಥನಿಂದ ಪ್ರಾರ್ಥನೆಗೆ ಒಳಗಾಗಿದ್ದ ಭಗವಂತನೇ ರಾಮಚಂದ್ರನಾಗಿ ಕಾಣಿಸಿಕೊಂಡನು.

ತನ್ನ ತಂದೆಯು ಕೈಕೇಯಿಗೆ ನೀಡಿದ್ದ ವಚನವನ್ನು ಪಾಲಿಸಬೇಕಾದ ಸಂದರ್ಭದಲ್ಲಿ ದಶರಥ ಮಹಾರಾಜನ ಮಗನಾಗಿ ಜನಿಸಿದ ಶ್ರೀ ರಾಮಚಂದ್ರನು ಪಿತೃವಾಕ್ಯ ಪರಿಪಾಲಕನಾಗಿ ಹದಿನಾಲ್ಕು ವರ್ಷಗಳ ಕಾಲ ವನವಾಸಕ್ಕಾಗಿ ತೆರಳಿದನು. ಅನಂತರ ರಾವಣನೊಂದಿಗೆ ನಡೆದ ಯುದ್ಧದ ಸಂದರ್ಭದಲ್ಲಿ ಅವನನ್ನು ಸಂಹರಿಸಿ ಅಯೋಧ್ಯೆಯನ್ನು ಆಳಲು ಹಿಂತಿರುಗಿದನು. ಅವನು ತ್ರೇತಾಯುಗದಲ್ಲಿ ದೊರೆಯಾಗಿ ಅವನ ಉತ್ತಮ ಆಳ್ವಿಕೆಯಿಂದಾಗಿ ಅದು ಸತ್ಯಯುಗವೆಂದು ಹೆಸರಾಯಿತು.

ರಾಮಚಂದ್ರನ ಮಗನ ಹೆಸರು ಕುಶನಾಗಿದ್ದು, ಇಕ್ಷ್ವಾಕು ವಂಶದ ಕೊನೆಯ ದೊರೆ ಸುಮಿತ್ರನು. ಅನಂತರ ಆ ಸಂತತಿಯಲ್ಲಿ ಪುತ್ರರಿರಲಿಲ್ಲ.

ಇಕ್ಷ್ವಾಕುವಿನ ಮಗನಾದ ನಿಮಿ ಮಹಾರಾಜನು ತಾನು ಮಾಡಬೇಕಾಗಿದ್ದ ಯಜ್ಞದಲ್ಲಿ ಮುಖ್ಯ ಪುರೋಹಿತನಾಗಿ ಕಾರ್ಯ ನಿರ್ವಹಿಸಬೇಕೆಂದು ವಸಿಷ್ಠ ಮುನಿಯನ್ನು ಪ್ರಾರ್ಥಿಸಿದನು. ಆದರೆ ಮುನಿಯು ತಾನು ಇಂದ್ರನಿಂದ ನಿಯೋಜಿಸಲ್ಪಟ್ಟ ಕಾರ್ಯವನ್ನು ಪೂರೈಸಿ ಬರುವವರೆಗೆ ಕಾಯಬೇಕೆಂದು ರಾಜನಿಗೆ ತಿಳಿಸಿದನು. ಆದರೆ ಸ್ವಯಂ ಸಾಕ್ಷಾತ್ಕಾರವನ್ನು ಪಡೆದಿದ್ದಂಥ ನಿಮಿಯು ತನ್ನ ಜೀವನವು ಸ್ಥಿರವಿಲ್ಲವೆಂದು ಭಾವಿಸಿ ಮುನಿಯು ಹಿಂತಿರುಗುವುದನ್ನು ಕಾಯದೆ ಯಜ್ಞವನ್ನು ಪ್ರಾರಂಭಿಸಿದಾಗ ಹಿಂತಿರುಗಿದ ವಸಿಷ್ಠರು ಕೋಪಗೊಂಡು ರಾಜನನ್ನು ಹೀಗೆ ಶಪಿಸಿದರು. "ತಾನೇ ಪಂಡಿತನೆಂದು ತಿಳಿದಿರುವ ನಿಮಿಯ ಲೌಕಿಕ ದೇಹವು ಕೆಳಗೆ ಬೀಳಲಿ". ವಿನಾಕಾರಣ ತನ್ನನ್ನು ಶಪಿಸಿದ್ದಕ್ಕಾಗಿ ನಿಮಿಯು ವಶಿಷ್ಠರನ್ನು ಮರು ಶಪಿಸಿದನು. "ಸ್ವರ್ಗದ ಅಧಿಪತಿಯಿಂದ ಕೊಡುಗೆಗಳನ್ನು ಪಡೆದುಕೊಳ್ಳುವ ಸಲುವಾಗಿ ನೀನು ಧಾರ್ಮಿಕ ತಿಳಿವಳಿಕೆಯನ್ನು ಕಳೆದುಕೊಂಡಿದ್ದೀಯೆ. ಆದ್ದರಿಂದ ನಿನ್ನ ದೇಹವೂ ಕೆಳಗೆ ಬೀಳಲೆಂದು ನಾನು ಶಪಿಸುತ್ತೇನೆ". ನಿಮಿ ಮಹಾರಾಜ ಮತ್ತು ವಸಿಷ್ಠ ಮುನಿ ಇಬ್ಬರೂ ತಮ್ಮ ದೇಹಗಳನ್ನು ಬಿಟ್ಟರು. ಊರ್ವಶಿಯನ್ನು ಕಂಡಾಗ ಮಿತ್ರ ಮತ್ತು ವರುಣರು ಹೊರಗೆಡವಿದ ವೀರ್ಯದಿಂದ ವಶಿಷ್ಠರು ಪುನ: ಜನಿಸಿದರು. (ಮಿತ್ರ ಹಾಗೂ ವರುಣರು ಆಕಸ್ಮಿಕವಾಗಿ ಊರ್ವಶಿಯನ್ನು ಕಂಡು ಕಾಮುಕತೆಯಿಂದ ಒಡಗೂಡಿದರು. ಅವರು ಮಹಾನ್ ಮುನಿಗಳಾದ್ದರಿಂದ ಅವರು ತಮ್ಮ ಕಾಮವನ್ನು ನಿಯಂತ್ರಿಸಲು ಪ್ರಯತ್ನಿಸಿದರೂ ಹಾಗೆ ಮಾಡಲಾಗದಿದ್ದಾಗ ವೀರ್ಯವನ್ನು ಹೊರಚೆಲ್ಲಿದರು. ಆ ವೀರ್ಯವನ್ನು ಎಚ್ಚರಿಕೆಯಿಂದ ನೀರಿನ ಮಡಿಕೆಯಲ್ಲಿ ಸಂಗ್ರಹಿಸಿಡಲಾಗಿ, ಅದರಿಂದ ವಸಿಷ್ಠರು ಜನಿಸಿದರು).

ಮಹಾರಾಜ ನಿಮಿಯ ಶರೀರವು ಸಂರಕ್ಷಿಸಲ್ಪಟ್ಟಿತು. ಸತ್ಯ ಯುಗದ ಅಂತ್ಯದಲ್ಲಿ ಮುನಿಗಳು ಮತ್ತು ಬ್ರಾಹ್ಮಣರು ನಿಮಿಯನ್ನು ಜೀವಂತಗೊಳಿಸುವಂತೆ ಉಪದೇವತೆಗಳನ್ನು

ಬೇಡಿದರು. ಆದರೆ ನಿಮಿ ಮಹಾರಾಜನು ಮತ್ತೆ ಜೀವ ಪಡೆಯಲು ಅಪೇಕ್ಷಿಸಲಿಲ್ಲ. ಅವನೆಂದನು: "ನಾನು ನಶ್ವರ ಶರೀರವನ್ನು ಪಡೆಯಲು ಬಯಸುವುದಿಲ್ಲ. ಏಕೆಂದರೆ ಅಂಥ ಶರೀರ ಬೇಗುದಿ, ಕಳವಳ ಮತ್ತು ಭೀತಿಗೆ ಒಳಗಾಗುತ್ತದೆ. ಜಗತ್ತಿನ ಎಲ್ಲೆಡೆಗಳಲ್ಲೂ ಇದೇ ರೀತಿಯಾಗಿದೆ. ಭಯಪೀಡಿತವಾಗಿಯೇ ನಿರಂತರವಾಗಿ ಕಳವಳದಿಂದ ಜೀವಿಸುವ ಮೀನಿನ ತರಹದ ಬದುಕು ಅದು". ಉಪದೇವತೆಗಳೆಂದರು: "ಮಹಾರಾಜ ನಿಮಿಯು ನಶ್ವರ ಶರೀರವಿಲ್ಲದೆಯೇ ಬದುಕಲಿ. ಅವನು ಪರಮಾತ್ಮನ ಖಾಸಗಿ ಸಹಚರನಾಗಿ ದೈವಿಕ ಶರೀರದೊಂದಿಗೆ ಜೀವಿಸಲಿ ಹಾಗೂ ಅವನ ಇಚ್ಛೆಗೆ ಅನುಗುಣವಾಗಿ ಸಾಮಾನ್ಯವಾದ ನಶ್ವರ ಜೀವಿಗಳಿಗೆ ವ್ಯಕ್ತವಾಗಲಿ ಅಥವಾ ಅವ್ಯಕ್ತವಾಗಲಿ".

ನಿಮಿಯ ಸಾವಿನ ನಂತರ ಅನಾಯಕತ್ವದಿಂದ ಜನರನ್ನು ತಪ್ಪಿಸುವ ಸಲುವಾಗಿ ಮುನಿಗಳು ನಿಮಿಯ ಐಹಿಕ ಶರೀರವನ್ನು ಹಿಂಡಿದಾಗ ಅದರಿಂದ ಪುತ್ರನೊಬ್ಬನು ಜನಿಸಿದನು. ಪುತ್ರನು ಅಸಾಮಾನ್ಯ ರೀತಿಯಾಗಿ ಜನಿಸಿದ್ದರಿಂದ ಅವನನ್ನು ಜನಕನೆಂದು ಕರೆಯಲಾಯಿತಲ್ಲದೆ, ತನ್ನ ತಂದೆಯ ಮೃತದೇಹದಿಂದ ಹುಟ್ಟಿದ್ದರಿಂದ ವೈದೇಹಿ ಎಂಬುದಾಗಿಯೂ ಕರೆಯಲ್ಪಟ್ಟನು. ತನ್ನ ತಂದೆಯ ಐಹಿಕ ಶರೀರವನ್ನು ಹಿಂಡಿದ್ದರಿಂದಾಗಿ ಈ ಭೂಮಿಗೆ ಬಂದವನಾದ್ದರಿಂದ ಅವನನ್ನು ಮಿಥಿಲನೆಂದು ಕರೆಯಲಾಯಿತಲ್ಲದೆ, ಅವನು ಮಿಥಿಲೆಯೆಂಬ ನಗರವನ್ನು ನಿರ್ಮಿಸಿದ್ದರಿಂದಲೂ ಅವನನ್ನು ಹೀಗೆ ಹೆಸರಿಸಲಾಯಿತು.

ಮಿಥಿಲೆಯ ವಂಶದ ಎಲ್ಲ ದೊರೆಗಳೂ ತಮ್ಮ ಆಧ್ಯಾತ್ಮಿಕ ಗುರುವಿನ ಬಗ್ಗೆ ಸಂಪೂರ್ಣ ತಿಳಿವಳಿಕೆ ಹೊಂದಿದ್ದರಿಂದ ಅವರು ಮನೆಯಲ್ಲಿ ವಾಸವಾಗಿದ್ದರೂ ಸಹ ಅವರು ಐಹಿಕ ಅಸ್ತಿತ್ವದ ದ್ವಂದ್ವದಿಂದ ವಿಮುಕ್ತರಾಗಿದ್ದರು ಎಂಬುದಾಗಿ ಶ್ರೀ ಶುಕಾಚಾರ್ಯರು ಹೇಳಿದರು. ತಾವು ಸೂರ್ಯ ವಂಶಸ್ಥರ ಬಗ್ಗೆ ವಿವರಿಸಿರುವುದಾಗಿ ಶ್ರೀ ಶುಕಾಚಾರ್ಯರು ಪರೀಕ್ಷಿತ ರಾಜನಿಗೆ ತಿಳಿಸಿದರು.

ಶ್ರೀ ಶುಕಾಚಾರ್ಯರೆಂದರು : "ಈಗ ಚಂದ್ರ ವಂಶಸ್ಥರ ಅತ್ಯಂತ ವೈಭವಯುತವಾದ ಹಾಗೂ ಪವಿತ್ರಮಯ ವಿವರಣೆಯನ್ನು ಆಲಿಸುವಂಥವನಾಗು. ಈ ವಿವರಣೆಯು ಕೇಳಲು ಅದ್ಭುತವೆನಿಸುವಂಥ ಐಲನಂಥ (ಪುರೂರವ) ದೊರೆಗಳ ವಿವರಗಳನ್ನು ಒಳಗೊಂಡಿರುತ್ತದೆ.

## ಅಧ್ಯಾಯ - 13

# ಚಂದ್ರ ವಂಶ

(ಈ ಅಧ್ಯಾಯ ಚಂದ್ರವಂಶವನ್ನು ವಿವರಿಸುತ್ತದೆ. ಶ್ರೀ ಕೃಷ್ಣ ಪರಮಾತ್ಮನು ಕಾಣಿಸಿಕೊಂಡಿದ್ದು ಈ ವಂಶದಲ್ಲಿ. ಬ್ರಹ್ಮನ ಪುತ್ರನು ಅತ್ರಿ ಹಾಗೂ ಅತ್ರಿಯ ಮಗನು ಇಡೀ ಜಗತ್ತನ್ನು ಜಯಿಸಿದ ಸೋಮ. ಸೋಮನು ಔಷಧಿ ಹಾಗೂ ನಕ್ಷತ್ರಗಳಿಗೆಲ್ಲವಕ್ಕೂ ದೊರೆಯಾದವನು. ಶ್ರೀ ಕೃಷ್ಣ ಪರಮಾತ್ಮನ ಕಣ್ಮರೆಯೊಂದಿಗೆ ಈ ವಂಶವೂ ಅಂತ್ಯಗೊಳ್ಳುತ್ತದೆ).

ಮಹಾವಿಷ್ಣುವು ಚಂದ್ರವಂಶಕ್ಕೆ ಸೇರಿದವನು. ಇವನಿಗೆ ಸಹರ್ಸ ಶೀರ್ಷ ಪುರುಷನೆಂಬ ಹೆಸರೂ ಉಂಟು. ಅವನ ನಾಭಿಯ ಸರೋವರದಿಂದ ಕಮಲಪುಷ್ಪವು ಮೇಲೆದ್ದು ಅದರ ಮೂಲಕ ಬ್ರಹ್ಮನು ಕಾಣಿಸಿಕೊಂಡನು. ಬ್ರಹ್ಮ ದೇವನ ಪುತ್ರನಾದ ಅತ್ರಿಯು ತನ್ನ ತಂದೆಯಷ್ಟೇ ಅರ್ಹತೆಯುಳ್ಳವನು. ಅತ್ರಿಯ ಆನಂದಭಾಷ್ಪಗಳಿಂದ ಸೋಮನು ಜನಿಸಿದನು. ಬ್ರಹ್ಮನು ಸೋಮನನ್ನು ಬ್ರಾಹ್ಮಣರು, ಔಷಧಿಗಳು ಹಾಗೂ ಪ್ರಕಾಶಮಯವುಳ್ಳವುಗಳ ನಿರ್ದೇಶಕನಾಗಿ ನೇಮಿಸಿದನು. ಮೂರು ಜಗತ್ತುಗಳನ್ನೂ ಜಯಿಸಿದ ನಂತರ ಚಂದ್ರ ದೇವನಾದ ಸೋಮನು ಮಹಾನ್ ರಾಜಸೂಯ ಯಾಗವನ್ನು ನೆರವೇರಿಸಿದನು. ಅವನು ಬ್ರಹಸ್ಪತಿಯ ಪತ್ನಿಯಾದ ತಾರಾಳನ್ನು ಅಪಹರಿಸಿ ಅವಳನ್ನು ಹಿಂತಿರುಗಿಸದಿದ್ದಾಗ ಉಪದೇವತೆಗಳು ಹಾಗೂ ರಕ್ಕಸರ ಮಧ್ಯೆ ಕದನವೇರ್ಪಟ್ಟಿತು. ಬೃಹಸ್ಪತಿ ಮತ್ತು ಶುಕ್ರಾಚಾರ್ಯರ ಮಧ್ಯೆ ವೈರತ್ವ ಇದ್ದುದರಿಂದ ಶುಕ್ರಾಚಾರ್ಯರೂ ಇದರಲ್ಲಿ ಪಾಲ್ಗೊಂಡರು. ಇದನ್ನು ತಿಳಿದ ಬ್ರಹ್ಮನು ಚಂದ್ರದೇವನನ್ನು ಛೀಮಾರಿ ಮಾಡಿ ತಾರಾಳನ್ನು ಅವಳ ಪತಿಗೆ ಒಪ್ಪಿಸಿದಾಗ ಬೃಹಸ್ಪತಿಗೆ ತನ್ನ ಪತ್ನಿ ಗರ್ಭಿಣಿಯಾಗಿದ್ದಾಳೆಂದು ತಿಳಿಯಿತು.

ಬೃಹಸ್ಪತಿ ಕಸಿವಿಸಿಗೊಂಡು ಮಗುವನ್ನು ಹೆರುವಂತೆ ತನ್ನ ಪತ್ನಿಗೆ ತಿಳಿಸಿದಾಗ ತಾರಾ ಚಿನ್ನದ ದೇಹವನ್ನು ಹೊಂದಿದ್ದಂಥ ಸುಂದರವಾದೊಂದು ಶಿಶುವಿಗೆ ಜನ್ಮ ನೀಡಿದಳು. ಆದರೆ ಮಗುವು ತಮಗೆ ಸೇರಿದ್ದು ಎಂಬುದಾಗಿ ಬೃಹಸ್ಪತಿ ಹಾಗೂ ಚಂದ್ರದೇವ ಪರಸ್ಪರ ಸೆಣಸಾಡಿದರು. ತಾರಾಳು ತನಗೆ ಮಗುವಾದದ್ದು ಚಂದ್ರದೇವನಿಂದ ಎಂಬಂಶವನ್ನು ಬಹಿರಂಗ ಪಡಿಸಿದಳು. ಮಗುವು ಅತಿ ಬುದ್ಧಿಶಾಲಿಯಾದ್ದರಿಂದ ಬ್ರಹ್ಮನು ಅದಕ್ಕೆ ಬುಧನೆಂಬುದಾಗಿ ನಾಮಕರಣ ಮಾಡಿದನು. ಬುಧ ಹಾಗೂ ಇಳಾರಿಂದ ಪುತ್ರನೊಬ್ಬನು ಜನಿಸಿ ಅವನನ್ನು ಪುರೂರವನೆಂದು ಕರೆಯಲಾಯಿತು. ಪುರೂರವನನ್ನು ಮೋಹಿಸಿದ ಊರ್ವಶಿಯು ತನ್ನ ಸಭೆಯಲ್ಲಿ ಕಾಣಿಸದಿದ್ದಾಗ ಇಂದ್ರನು ಬೇಸರಗೊಂಡು ಅವಳನ್ನು ಕರೆತರಲು ಗಂಧರ್ವರನ್ನು ಕಳಿಸಿದಾಗ ಊರ್ವಶಿ ಹಿಂತಿರುಗಿದಳು. ಅನಂತರ ಗಂಧರ್ವರನ್ನು ಮುದಗೊಳಿಸಿದ ಪುರೂರವನಿಗೆ ಅವರು ಊರ್ವಶಿಯಂತೆಯೇ ರೂಪನ್ನು ಹೊಂದಿದ್ದ ಅಗ್ನಿಸ್ಥಳಿಯನ್ನು ಅವನಿಗೆ ನೀಡಿದಾಗ ನಿಜ

ಸಂಗತಿಯನ್ನು ಪತ್ತೆ ಹಚ್ಚಿದ ಪುರೂರವನು ಅರಮನೆಗೆ ಹಿಂತಿರುಗಿ ಇಡೀ ರಾತ್ರಿ ಊರ್ವಶಿಗಾಗಿಯೇ ಧ್ಯಾನ ಮಾಡಿದನು. ಅವನು ಧ್ಯಾನಮಗ್ನನಾಗಿದ್ದ ಸಮಯದಲ್ಲೇ ತ್ರೇತಾಯುಗವು ಪ್ರಾರಂಭವಾದ್ದರಿಂದ ಫಲಪ್ರದ ಚಟುವಟಿಕೆಗಳನ್ನು ಪೂರೈಸಿಕೊಳ್ಳಲು ಅಗತ್ಯವಾದ ಯಜ್ಞದ ಪ್ರಕ್ರಿಯೆಯನ್ನು ಒಳಗೊಂಡಂತೆ ಮೂರು ವೇದಗಳ ತತ್ವಗಳು ಅವನ ಹೃದಯದಲ್ಲಿ ಕಾಣಿಸಿಕೊಂಡವು. ಯಜ್ಞದ ಪ್ರಕ್ರಿಯೆಯು ತನ್ನ ಹೃದಯದಲ್ಲಿ ವ್ಯಕ್ತಗೊಂಡಾಗ ಪುರೂರವ ರಾಜನು ಅಗ್ನಿಸ್ಥಳಿಯನ್ನು ತಾನು ತ್ಯಜಿಸಿದ್ದ ಸ್ಥಳಕ್ಕೇ ಹಿಂತಿರುಗಿಸಿದನು. ಅಲ್ಲಿ ಅವನು ಶಮೀ ವೃಕ್ಷದ ಉದರದಿಂದ ಅಶ್ವತ್ಥ ಮರವೊಂದು ಬೆಳೆದಿರುವುದನ್ನು ಕಂಡನು. ಅನಂತರ ಅವನು ಆ ವೃಕ್ಷದಿಂದ ಒಂದು ಮರದ ತುಂಡನ್ನು ತೆಗೆದುಕೊಂಡು ಅದರಿಂದ ಎರಡು ಅರಣಿಗಳನ್ನು ತಯಾರಿಸಿದನು. ಊರ್ವಶಿಯು ಇದ್ದ ಗ್ರಹಕ್ಕೆ ತೆರಳಲು ಹಂಬಲಿಸಿದವನಾಗಿ ಅವನು ಮಂತ್ರಗಳನ್ನು ಪಠಿಸುತ್ತ ಕೆಳಗಿದ್ದ ಅರಣಿಯನ್ನು ಊರ್ವಶಿಯೆಂದೂ, ಮೇಲಿನದನ್ನು ತಾನೇ ಎಂದೂ, ಇವೆರಡರ ಮಧ್ಯೆ ಇದ್ದುದು ತನ್ನ ಮಗನೆಂದೂ ಭಾವಿಸುತ್ತ ಹೊರಟನು. ಈ ರೀತಿಯಾಗಿ ಅವನು ಬೆಂಕಿಯನ್ನು ಸೃಷ್ಟಿಸಲು ಮೊದಲು ಮಾಡಿದನು. ಅರಣಿಗಳ ತಿಕ್ಕಾಟದಿಂದ ಅಗ್ನಿಯು ಉದ್ಭವಿಸಿತು. ಇಂಥ ಅಗ್ನಿಯಿಂದ ಐಹಿಕ ಭೋಗದಲ್ಲಿ ಯಜ್ಞವನ್ನು ಸಾಧಿಸಿ "ಓಂ" ಎಂಬ ಶಬ್ದದಿಂದ ಪ್ರವೇಶಿಸಲ್ಪಟ್ಟ ಯಜ್ಞದಿಂದಾಗಿ ಜಯಶೀಲರಾಗಬಹುದು.

ಹೀಗೆ ಅಗ್ನಿಯನ್ನು ಪುರೂರವ ದೊರೆಯ ಪುತ್ರನೆಂದು ಪರಿಗಣಿಸಲಾಯಿತು. ಆ ಬೆಂಕಿಯಿಂದ ಊರ್ವಶಿಯು ವಾಸವಾಗಿದ್ದ ಗ್ರಹಕ್ಕೆ ತೆರಳಲು ಇಚ್ಛಿಸಿದ್ದ ಪುರೂರವನು ಯಜ್ಞವೊಂದನ್ನು ನೆರವೇರಿಸಿದಾಗ ಯಜ್ಞಫಲಗಳನ್ನು ಅನುಭವಿಸಿದ ಶ್ರೀ ಹರಿಯು ಸಂತೃಪ್ತನಾದನು. ಪುರೂರವನು ಇಂದ್ರಿಯಗಳಿಗೆ ಅತೀತನಾದ ಹಾಗೂ ಉಪದೇವತೆ ಗಳೆಲ್ಲರ ಅಗರವಾದ ಭಗವಂತನನ್ನು ಆರಾಧಿಸಿದನು. ಸತ್ಯಯುಗದಲ್ಲಿ, ಅಂದರೆ ಪ್ರಥಮ ಯುಗದಲ್ಲಿ - ವೈದಿಕ ಮಂತ್ರಗಳೆಲ್ಲವೂ ಎಲ್ಲ ಮಂತ್ರಗಳ ಮೂಲವಾದ ಪ್ರಣವ ಮಂತ್ರದಲ್ಲಿ ಸೇರ್ಪಡೆಯಾಯಿತು. ಇನ್ನೊಂದು ರೀತಿಯಾಗಿ ಹೇಳಬಹುದಾದರೆ ಅಥರ್ವಣ ಎಲ್ಲ ವೈದಿಕ ಜ್ಞಾನಗಳ ಏಕಮಾತ್ರ ದೇವನಾದನು; ಭಗವಾನ್ ನಾರಾಯಣ ಒಬ್ಬನೇ ಆರಾಧನೆಗೆ ಅರ್ಹನಾದ ಏಕಮಾತ್ರ ದೇವನಾದನು. ಉಪದೇವತೆಗಳನ್ನು ಆರಾಧಿಸಬೇಕೆಂಬ ಯಾವ ನಿರ್ದೇಶನವೂ ಇರಲಿಲ್ಲ. ಮಾನವ ಸಮಾಜದಲ್ಲಿ ಅಗ್ನಿಯೊಬ್ಬನೇ ಹಂಸವೆಂಬುದಾಗಿ ಜೀವನ ವ್ಯವಸ್ಥೆಯಲ್ಲಿದ್ದನು. ತ್ರೇತಾಯುಗದ ಪ್ರಾರಂಭದಲ್ಲಿ ಪುರೂರವ ದೊರೆಯು "ಕರ್ಮ ಖಾಂಡ" ಎಂಬ ಯಜ್ಞವನ್ನು ಪ್ರಾರಂಭಿಸಿದನು. ಊರ್ವಶಿಯಿರುವ ಸ್ಥಳಕ್ಕೆ ಪುರೂರವನು ತೆರಳಿದನು.

## ಪರಶುರಾಮ

ಪುರೂರವ ದೊರೆಯು ಊರ್ವಶಿಯಿಂದ ಆರು ಪುತ್ರರನ್ನು ಪಡೆದನೆಂದೂ ಅವರೆಂದರೆ ಆಯು, ಸ್ರುತಯು, ಸತ್ಯಯು, ರಾಯ, ವಿಜಯ ಮತ್ತು ಜಯ ಎಂದೂ ಶ್ರೀ ಶುಕಾಚಾರ್ಯರು ತಿಳಿಸಿದರು. ಪುರೂರವನ ವಂಶದಲ್ಲಿ ಗಾಧಿಯು ಜನಿಸಿದನು.

ಗಾಧಿ ದೊರೆಗೆ ಸತ್ಯವತಿಯೆಂಬ ಪುತ್ರಿಯಿದ್ದು ಅವಳು ಸುಂದರಿಯಾಗಿದ್ದಳು. ಬ್ರಾಹ್ಮಣ ಮುನಿಯಾದ ರೈಕನೆಂಬುವನು ಸತ್ಯವತಿಯನ್ನು ವಿವಾಹವಾಗಲು ಬಯಸಿ ಗಾಧಿಯನ್ನು ಸಮೀಪಿಸಿದಾಗ ಬ್ರಾಹ್ಮಣನೊಬ್ಬನಿಗೆ ತನ್ನ ಪುತ್ರಿಯನ್ನು ವಿವಾಹ ಮಾಡಿಕೊಡಲು ಇಚ್ಛಿಸದ ಅವನು ಬ್ರಾಹ್ಮಣನು ಪೂರೈಸಲು ಸಾಧ್ಯವಾಗಲಾರದೆಂಬುದಾಗಿ ಬಗೆದು ಅನೇಕ ಶರತ್ತುಗಳನ್ನು ಅವನಿಗೆ ಹಾಕಿದನು. ಆದರೆ ರೈಕನು ವರುಣನ ಬಳಿಗೆ ತೆರಳಿ ಗಾಧಿಯು ಅಪೇಕ್ಷಿಸಿದ ಎಲ್ಲವನ್ನೂ ತಂದಿತ್ತು ಸತ್ಯವತಿಯನ್ನು ವಿವಾಹವಾದನು.

ರೈಕನ ಹೆಂಡತಿ ಹಾಗೂ ಅವನ ಅತ್ತೆ ಇಬ್ಬರೂ ಪುತ್ರನೊಬ್ಬನನ್ನು ಅಪೇಕ್ಷಿಸಿ ಈ ಉದ್ದೇಶಕ್ಕಾಗಿ ಯಜ್ಞವೊಂದನ್ನು ನಡೆಸುವಂತೆ ಅವನನ್ನು ಕೇಳಿಕೊಂಡರು. ರೈಕನು ತನ್ನ ಪತ್ನಿಗಾಗಿ ಬ್ರಾಹ್ಮಣ ಮಂತ್ರವನ್ನು ಪಠಿಸಬೇಕಾದ ಹವಿಸ್ಸನ್ನು ಹಾಗೂ ಅತ್ತೆಗಾಗಿ ಕ್ಷತ್ರಿಯ ಮಂತ್ರವನ್ನು ಪಠಿಸಲು ಮತ್ತೊಂದು ಹವಿಸ್ಸನ್ನು ಸಿದ್ಧಪಡಿಸಿದನು. ಅನಂತರ ಅವನು ಅಭ್ಯಂಜನಕ್ಕಾಗಿ ತೆರಳಿದನು. ಈ ಮಧ್ಯೆ ತನ್ನ ಮಗಳಿಗಾಗಿ ಸಿದ್ಧಪಡಿಸಲಾದ ಹವಿಸ್ಸು ಉತ್ತಮವಾಗಿರಬೇಕೆಂದು ಭಾವಿಸಿ ಅದನ್ನು ಅತ್ತೆಯು ಕುಡಿದು, ತನಗಾಗಿ ತಯಾರಿಸಲ್ಪಟ್ಟಿದ್ದನ್ನು ತನ್ನ ಮಗಳಿಗೆ ನೀಡಿದಳು. ಹಿಂತಿರುಗಿದ ರೈಕ ಮುನಿಗೆ ನಡೆದದ್ದೆಲ್ಲವೂ ತಿಳಿಯಿತು. ಅವನು ಹೆಂಡತಿಗೆ ಹೇಳಿದನು : "ನೀನು ದೊಡ್ಡ ತಪ್ಪೊಂದನ್ನು ಮಾಡಿದ್ದೀಯೆ. ನಿನ್ನ ಮಗನು ಭೀಕರ ಕ್ಷತ್ರಿಯನಾಗಿ ಎಲ್ಲವನ್ನೂ ಹಿಂಸಿಸುವನಾಗಲಿದ್ದು, ನಿನ್ನ ಸೋದರನು ಅಧ್ಯಾತ್ಮಿಕ ಜ್ಞಾನದ ಪಾರಂಗತನಾಗುತ್ತಾನೆ" ಎಂದನು. ಸತ್ಯವತಿಯು ತನ್ನ ಪತಿಯನ್ನು ಮಧುರ ಮಾತುಗಳಿಂದ ಮುದಗೊಳಿಸಿ ತನ್ನ ಪುತ್ರನು ಭೀಕರ ಕ್ಷತ್ರಿಯನಾಗದೆ ಇರುವಂತೆ ಮಾಡಬೇಕೆಂದು ಪ್ರಾರ್ಥಿಸಿದಳು. ರೈಕ ಮುನಿಯು ಉತ್ತರಿಸಿದನು: "ಹಾಗಾದರೆ ನಿನ್ನ ಮೊಮ್ಮಗನು ಕ್ಷತ್ರಿಯ ಸ್ವಭಾವವನ್ನು ಹೊಂದಿರುವಂತವನಾಗುತ್ತಾನೆ" ಹೀಗೆ ಜಮದಗ್ನಿಯು ಸತ್ಯವತಿಯ ಮಗನಾಗಿ ಜನಿಸಿದನು. ಅನಂತರ ಜಮದಗ್ನಿಯು ರೇಣುಕಳನ್ನು ವಿವಾಹವಾದನು. ರೇಣುಕಳು ಅನೇಕ ಪುತ್ರರಿಗೆ ಜನ್ಮವಿತ್ತು ಅವರಲ್ಲಿ ಪ್ರಮುಖನಾದವನು ಪರಶುರಾಮ. ಪ್ರಾಜ್ಞರು ಪರಶುರಾಮನನ್ನು ವಾಸುದೇವನ ಅಪರಾವತಾರ ಎಂಬುದಾಗಿ ಭಾವಿಸಿದ್ದು, ಅವನು ಕ್ಷತ್ರಿಯರನ್ನು ಇಪ್ಪತ್ತೊಂದು ಬಾರಿ ನಿರ್ನಾಮಗೊಳಿಸಿದನು.

ಪರೀಕ್ಷಿತ ದೊರೆಯು ಕ್ಷತ್ರಿಯರು ಮಾಡಿದ ಅಪರಾಧ ಏನೆಂಬುದನ್ನು ತಿಳಿದುಕೊಳ್ಳಲು ಬಯಸಿದನು.

ಹೈಹಯರ ದೊರೆಯಾದ ಕಾರ್ತವೀರ್ಯಾರ್ಜುನನು ದತ್ತಾತ್ರೇಯನನ್ನು ಆರಾಧಿಸುವ ಮೂಲಕ ಒಂದು ಸಾವಿರ ಶಸ್ತ್ರಾಸ್ತ್ರಗಳನ್ನು ಪಡೆದುಕೊಂಡನು ಎಂಬುದಾಗಿ ಶ್ರೀ ಶುಕಾಚಾರ್ಯರು ತಿಳಿಸಿದರು. ಅವನು ಅಜೇಯನಾದನಲ್ಲದೆ, ಖ್ಯಾತಿ, ಶಕ್ತಿ ಇತ್ಯಾದಿಯನ್ನು ಪಡೆದನು. ಒಮ್ಮೆ ಅವನು ನರ್ಮದೆಯ ಹರಿಯುವಿಕೆಯನ್ನೇ ನಿಲ್ಲಿಸಿ ಅದರ ದಿಕ್ಕನ್ನು ಬದಲಾಯಿಸಿದನು. ಇದರ ಪರಿಣಾಮವಾಗಿ ರಾವಣನು ವಾಸವಾಗಿದ್ದ ಮಹಿಷ್ಮತಿ ನಗರದ ಮುಳುಗಡೆಯಾಯಿತು. ಕೋಪಾವಿಷ್ಟನಾದ ರಾವಣನು

ಕಾರ್ತವೀರ್ಯಾರ್ಜುನನ ಬಳಿಗೆ ಬಂದಾಗ ಸಂಭವಿಸಿದ ಕದನದಲ್ಲಿ ರಾವಣನು ಸೆರೆಹಿಡಿಯಲ್ಪಟ್ಟು ನಂತರ ಬಿಡುಗಡೆಯಾದನು.

ಒಮ್ಮೆ ಕಾರ್ತವೀರ್ಯಾರ್ಜುನನು ಜಮದಗ್ನಿಯ ಗುಡಿಸಿಲಿಗೆ ತೆರಳಿದಾಗ ಅಲ್ಲಿ ಕಾಮಧೇನುವನ್ನು ಕಂಡು ಅದನ್ನು ಪಡೆಯಲು ಬಯಸಿದನು. ದೊರೆಯ ಭಟರು ಕಾಮಧೇನುವನ್ನು ಅದರ ಕರುವಿನೊಂದಿಗೆ ಕದ್ದು ಮಹಿಷ್ಮತಿಗೆ ಕೊಂಡೊಯ್ದರು. ಪರಶುರಾಮನಿಗೆ ಈ ವಿಷಯ ತಿಳಿದಾಗ ಅವನ ಕ್ರೋಧಗೊಂಡನು. ಮಹಿಷ್ಮತಿಯನ್ನು ತಲಪುತ್ತಿದ್ದಂತೆಯೇ ಕಾರ್ತಿವೀರ್ಯರ್ಜುನನಿಗೆ ಪರಶುರಾಮನು ಕಾಣಿಸಿ ನಂತರ ನಡೆದ ಯುದ್ಧದಲ್ಲಿ ಅವನು ಪರಶುರಾಮನಿಂದ ಹತಗೊಂಡನು. ಜಮದಗ್ನಿಯು ತನ್ನ ಮಗನ ಕೃತ್ಯವನ್ನು ಒಪ್ಪದೆ ಅವನಿಗೆ ತನ್ನ ಪಾಪವನ್ನು ಕಳೆದುಕೊಳ್ಳಲು ತೀರ್ಥಯಾತ್ರೆಗೆ ಹೊರಡಬೇಕೆಂದು ತಿಳಿಸಿದಾಗ ತಂದೆಯ ಆಜ್ಞೆಯನ್ನು ಪರಿಪಾಲಿಸಿದ ಅವನು ಒಂದು ವರ್ಷದ ನಂತರ ಹಿಂತಿರುಗಿದನು.

ಒಮ್ಮೆ ರೇಣುಕೆಯು ತನ್ನ ಪತಿಯ ಯಜ್ಞಕ್ಕಾಗಿ ನೀರನ್ನು ತರಲು ನದಿಯ ಬಳಿಗೆ ತೆರಳಿದಾಗ ಅಲ್ಲಿ ಜಲಕ್ರೀಡೆಯಾಡುತ್ತಿದ್ದ ಗಂಧರ್ವರು ಹಾಗೂ ಅಪ್ಸರೆಯರನ್ನು ಕಂಡು ಅತ್ತ ಗಮನ ಸೆಳೆಯಲ್ಪಟ್ಟವಳಾಗಿ ಆಶ್ರಮಕ್ಕೆ ತಡವಾಗಿ ಹಿಂತಿರುಗಿದಳು. ಕಸಿವಿಸಿಗೊಂಡ ಜಮದಗ್ನಿಯು ತನ್ನ ಪುತ್ರರಿಗೆ ರೇಣುಕೆಯನ್ನು ಕೊಲ್ಲುವಂತೆ ತಿಳಿಸಿದನು. ಆದರೆ ಅವರು ಅವನ ಆಜ್ಞೆಯನ್ನು ಪರಿಪಾಲಿಸಲಿಲ್ಲ. ಜಮದಗ್ನಿಯು ತನ್ನ ಕಿರಿಯ ಮಗ ಪರಶುರಾಮನಿಗೆ ಆಜ್ಞಾಪಿಸಿದಾಗ ಅವನು ತಂದೆಯ ಮಾತನ್ನು ಪಾಲಿಸಿದ. ಜಮದಗ್ನಿಯು ವರವೊಂದನ್ನು ಕೇಳುವಂತೆ ಅವನಿಗೆ ತಿಳಿಸಿದಾಗ ಪರಶುರಾಮನು : "ನನ್ನ ತಾಯಿ ಹಾಗೂ ಸೋದರರಿಗೆ ಮತ್ತೆ ಪ್ರಾಣವನ್ನು ನೀಡಿ ನಾನು ಅವರನ್ನು ಕೊಂದದ್ದನ್ನು ಅವರು ಮರೆಯುವಂತಾಗಲಿ" ಎಂದನು. ಕಾರ್ತವೀರ್ಯಾರ್ಜುನನ ಪುತ್ರರು ಎಂದೂ ಸಂತೋಷದಿಂದಿರದೆ ತಪ್ಪುಗಳನ್ನೇ ಮಾಡುತ್ತಲಿದ್ದು ಜಮದಗ್ನಿಯನ್ನು ಕೊಂದರು.

ಪ್ರಾರ್ಥನೆ ಹಾಗೂ ಧ್ಯಾನದ ಮೂಲಕ ತನ್ನ ತಂದೆಯನ್ನು ಮತ್ತೆ ಬದುಕಿಸಿದಾಗ ಜಮದಗ್ನಿಯು ಸಪ್ತರ್ಷಿಗಳಲ್ಲಿ ಒಬ್ಬನಾದನು.

ತನ್ನ ತಂದೆಯು ಕೊಲ್ಲಲ್ಪಟ್ಟದ್ದನ್ನು ಕಂಡ ಪರಶುರಾಮನು ಕ್ಷತ್ರಿಯರನ್ನು ಕೊಲ್ಲಲು ನಿರ್ಧರಿಸಿದನು.

ಮಹಾರಾಜ ಗಾಧಿಯ ಪುತ್ರ ವಿಶ್ವಾಮಿತ್ರನು ಬಲಶಾಲಿ ದೊರೆಯಾಗಿದ್ದು ಅನಂತರ ತಪಸ್ಸಿನ ಮೂಲಕ ಬ್ರಾಹ್ಮಣನಾಗಿ, 101 ಪುತ್ರರನ್ನು ಪಡೆದನು. ಅವರಲ್ಲಿ ಮಧ್ಯದವನೇ ಮಧುಚ್ಛಂದ್ರ. ವಿಶ್ವಾಮಿತ್ರನು ಭೃಗು ಸಂತತಿಗೆ ಹುಟ್ಟಿದ ಸುನಶ್ಯೇಪನೆಂಬ ಅಜಿಗರ್ತನ ಮಗನನ್ನೂ ಅಂಗೀಕರಿಸಿದನು. ಸುನಶ್ಯೇಪನಿಗೆ ದೇವವ್ರತನೆಂಬ ಹೆಸರೂ ಇದ್ದು ವಿಶ್ವಾಮಿತ್ರರು ತನ್ನ ಪುತ್ರರಿಗೆ ಅವನನ್ನು ತಮ್ಮ ಹಿರಿಯಣ್ಣನಾಗಿ ಸ್ವೀಕರಿಸಬೇಕೆಂದು ಆದೇಶಿಸಿದರು.

## ಪುರೂರವನ ಪುತ್ರರ ಸಂತತಿಗಳು

ಪುರೂರವನ ಹಿರಿಯ ಮಗನಾದ ಅಯುವಿಗೆ ಐವರು ಪುತ್ರರು. ಅವರಲ್ಲಿ ಒಬ್ಬನು ನಹುಸ. ಅವನಿಗೆ ಯತಿ, ಯಯಾತಿ, ಸಮ್ಯತಿ, ಅಯತಿ, ವಿಯತಿ ಮತ್ತು ಕೀರ್ತಿ ಎಂಬು ಆರು ಪುತ್ರರು. ಯತಿಗೆ ಅವನ ತಂದೆಯು ಆಳಲು ಅಧಿಕಾರವನ್ನು ನೀಡಿದರೂ ಸಹ ಅವನು ಅದಕ್ಕೆ ಒಪ್ಪಲಿಲ್ಲ.

ನಹುಸ ದೊರೆಯು ಇಂದ್ರನ ಪತ್ನಿ ಶಚಿಯ ಮೇಲೆ ವ್ಯಭಿಚಾರವೆಸಗಿ ಅವಳು ಅಗಸ್ತ್ಯ ಹಾಗೂ ಇತರ ಬ್ರಾಹ್ಮಣರಿಗೆ ದೂರನ್ನು ಸಲ್ಲಿಸಿದಾಗ ಅವರು ಅವನಿಗೆ ಶಾಪವಿತ್ತು ಅವನು ಸ್ವರ್ಗಲೋಕದಿಂದ ಕೆಳಕ್ಕೆ ಬೀಳುವಂತೆ ಮಾಡಿದರು. ಪರಿಣಾಮವಾಗಿ ಯಯಾತಿಯು ದೊರೆಯಾಗಿ ಶುಕ್ರಾಚಾರ್ಯರ ಮಗಳಾದ ದೇವಯಾನಿಯನ್ನು ವಿವಾಹವಾದನು.

ಕ್ಷತ್ರಿಯನಾದ ಯಯಾತಿಯು ಬ್ರಾಹ್ಮಣ ಕನ್ಯೆಯಾದ ದೇವಯಾನಿಯನ್ನು ವಿವಾಹವಾದದ್ದು ಹೇಗೆ ಎಂಬುದನ್ನು ಪರೀಕ್ಷಿತ ರಾಜನು ತಿಳಿದುಕೊಳ್ಳಲು ಬಯಸಿದನು. ಅದಕ್ಕೆ ಶ್ರೀ ಶುಕಾಚಾರ್ಯರು ಒಂದು ದಿನ ವೃಷಪರ್ವನ ಪುತ್ರಿಯಾದ ಶರ್ಮಿಷ್ಠೆ ಹಾಗೂ ದೇವಯಾನಿಯರು ಗೆಳತಿಯರೊಂದಿಗೆ ಅರಮನೆಯ ತೋಟದಲ್ಲಿ ವಿಹರಿಸುತ್ತಿದ್ದರು ಎಂಬುದಾಗಿ ಹೇಳಿದನು. ಅವರು ಸರೋವರದಲ್ಲಿ ವಿಹರಿಸ ಬಯಸಿದರು. ಬಟ್ಟೆಗಳನ್ನು ಕಳಚಿ ಅವರು ನೀರಿಗೆ ಇಳಿದರು. ಆ ಸಮಯದಲ್ಲಿ ಮಹೇಶ್ವರನು ಪಾರ್ವತಿಯೊಂದಿಗೆ ಆ ಮಾರ್ಗವಾಗಿ ಹೋಗುತ್ತಲಿದ್ದನು. ಸ್ತ್ರೀಯರು ನಾಚಿ ಮೈಯನ್ನು ಮುಚ್ಚಿಕೊಳ್ಳತೊಡಗಿದಾಗ, ಆ ಗೊಂದಲದಲ್ಲಿ ಶರ್ಮಿಷ್ಠೆಯು ದೇವಯಾನಿಯ ಉಡುಪನ್ನು ಧರಿಸಿದಳು. ಆದರೆ ದೇವಯಾನಿಯು ಈ ಆಕಸ್ಮಿಕದಿಂದ ತುಂಬಾ ಕೋಪಗೊಂಡು ಶರ್ಮಿಷ್ಠೆಯನ್ನು ನಿಂದಿಸಿದಳು. ಖೇದಗೊಂಡ ಶರ್ಮಿಷ್ಠೆಯು ದೇವಯಾನಿಯನ್ನು ಬಾವಿಗೆ ತಳ್ಳಿದಳು. ಆ ಸಮಯದಲ್ಲಿ ಅಲ್ಲಿ ಹಾದು ಹೋಗುತ್ತಿದ್ದ ಯಯಾತಿಯು ಬಾಯಾರಿದವನಾಗಿ ನೀರಿಗಾಗಿ ಬಾವಿಯ ಬಳಿಗೆ ಬಂದಾಗ ನಗ್ನಳಾಗಿದ್ದ ದೇವಯಾನಿಯನ್ನು ಕಂಡು ಅವಳನ್ನು ಬಾವಿಯಿಂದ ಮೇಲೆತ್ತಿದಾಗ ಅವರಿಬ್ಬರೂ ವಿವಾಹವಾದರು.

ಆದರೆ ದಾಸಿಯಾಗಿ ಶರ್ಮಿಷ್ಠೆಯು ತನ್ನನ್ನು ಹಿಂಬಾಲಿಸಬೇಕೆಂದು ದೇವಯಾನಿಯು ಒತ್ತಾಯಿಸಿದಳು. ಆದರೆ ಶುಕ್ರಾಚಾರ್ಯರು ದೊರೆಗೆ ಶರ್ಮಿಷ್ಠೆಯನ್ನು ಹತ್ತಿರ ಸೇರಿಸಕೂಡದೆಂದು ಎಚ್ಚರಿಸಿದರು.

ದೇವಯಾನಿಗೆ ನಂತರ ಪುತ್ರನ ಜನನವಾದಾಗ ಶರ್ಮಿಷ್ಠೆಯೂ ಯಯಾತಿಯಿಂದ ಗರ್ಭಧಾರಣೆ ಮಾಡಲು ಬಯಸಿದಾಗ ದೊರೆಯು ಅವಳೊಂದಿಗೆ ಲೈಂಗಿಕ ಸಂಬಂಧವನ್ನು ಬೆಳೆಸಿಕೊಂಡನು.

ದೇವಯಾನಿಯು ಯದು ಹಾಗೂ ತುರ್ವಸು ಇವರಿಗೆ ಜನ್ಮವಿತ್ತಳು. ಶರ್ಮಿಷ್ಠೆಗೆ ದ್ರುಹ್ಯ, ಅನು ಮತ್ತು ಪುರು ಎಂಬ ಮೂವರು ಪುತ್ರರಾದರು. ತನ್ನ ಗಂಡ ಶರ್ಮಿಷ್ಠೆಯೊಂದಿಗೆ

ಹೊಂದಿರುವ ಸಂಬಂಧವನ್ನು ತಿಳಿದ ದೇವಯಾನಿ ತನ್ನ ತಂದೆಯ ಸ್ಥಳಕ್ಕೆ ಹೊರಟಳು. ಶುಕ್ರಾಚಾರ್ಯರು ಈ ರೀತಿ ಯಯಾತಿಯನ್ನು ಶಪಿಸಿದರು : "ನೀನು ದೊಡ್ಡದೊಂದು ಅಪರಾಧವನ್ನು ಮಾಡಿದ್ದೀಯೆ. ಆದ್ದರಿಂದ ನೀನು ವೃದ್ಧನೂ, ಅಂಗವಿಕಲನೂ ಅಗಲೆಂದು ನಾನು ಶಾಪ ಹಾಕಿದ್ದೇನೆ". ಯಯಾತಿಯು ಉತ್ತರಿಸಿದನು : "ನಾನು ನಿಮ್ಮ ಪುತ್ರಿಯೊಂದಿಗೆ ನನ್ನ ಲೈಂಗಿಕ ಬಯಕೆಗಳನ್ನು ಇನ್ನೂ ಪೂರೈಸಿಕೊಂಡಿಲ್ಲ". ಶುಕ್ರಾಚಾರ್ಯರೆಂದರು : "ನೀನು ನಿನಗೆ ಯೌವ್ವನವನ್ನು ನೀಡುವ ಯಾರೊಬ್ಬರಿಗಾದರೂ ನಿನ್ನ ವೃದ್ಧಾಪ್ಯವನ್ನು ನೀಡಬಹುದು".

ಯಯಾತಿ ರಾಜನು ತನ್ನ ಮಕ್ಕಳೆಲ್ಲರನ್ನೂ ತನ್ನ ವೃದ್ಧಾಪ್ಯವನ್ನೂ ಯೌವ್ವನಕ್ಕೆ ಬದಲಾಗಿ ಪಡೆಯಬೇಕೆಂದು ಕೋರಿದನು. ಅವನ ಕೊನೆಯ ಮಗ ಪುರು ಒಬ್ಬನನ್ನು ಉಳಿದು ಮಿಕ್ಕೆಲ್ಲರೂ ಅದನ್ನು ನಿರಾಕರಿಸಿದರು. ಯಯಾತಿಯು ಅನಂತರ ತನ್ನ ಪತ್ನಿ ದೇವಯಾನಿಯೊಂದಿಗೆ ಐಹಿಕ ಭೋಗವನ್ನು ಮುಂದುವರಿಸಿದನು.

ಅನಂತರ ಯಯಾಯತಿಯು ಇಡೀ ವಿಶ್ವಕ್ಕೇ ದೊರೆಯಾದನು. ಅವನು ತನ್ನ ಮಗನಿಂದಲೇ ಯೌವ್ವನ ಪಡೆದಿದ್ದರಿಂದ ಅವನ ಇಂದ್ರಿಯ ಆಕಾಂಕ್ಷೆಗಳು ಅಡೆತಡೆಯಿಲ್ಲದೆ ಮುಂದುವರಿದು ಅವನು ತಾನು ಬಯಸಿದಷ್ಟು ಆನಂದವನ್ನೂ ಪಡೆದನು. ದೇವಯಾನಿಯು ತನ್ನ ಪತಿಗೆ ಸಾಧ್ಯವಾದಷ್ಟು ಉನ್ನತವಾದ ಆಹ್ಲಾದತೆಯನ್ನು ನೀಡಿದಳು. ದೊರೆಯು ಅನೇಕ ಯಜ್ಞಯಾಗಾದಿಗಳನ್ನು ನೆರವೇರಿಸಿ ಶ್ರೀ ಹರಿಯನ್ನು ಸಂತೃಪ್ತಗೊಳಿಸಿದ್ದಲ್ಲದೆ, ಯಾವ ಐಹಿಕ ಆಸೆಯೂ ಇಲ್ಲದೆ ಭಗವಂತನನ್ನೂ ಆರಾಧಿಸಿದಳು. ಆದರೆ ಯಯಾತಿ ಮಹಾರಾಜನು ಜಗತ್ತಿಗೇ ದೊರೆಯಾಗಿ ತನ್ನ ಮನಸ್ಸು ಇಂದ್ರಿಯಗಳ ಭೋಗವನ್ನು ಅನುಭವಿಸುವುದಕ್ಕಾಗಿಯೇ ಒಂದು ಸಾವಿರ ವರ್ಷಗಳ ಕಾಲ ತೊಡಗಿದ್ದರೂ ಅವನಿಗೆ ತೃಪ್ತಿಯೆಂಬುದೇ ಸಿಗಲಿಲ್ಲ. ಅವನು ಸ್ತ್ರೀ ಲೋಲನಾಗಿದ್ದನು. ಕಾಲಕ್ರಮೇಣ ಅವನು ಲೈಂಗಿಕ ಸುಖ ಹಾಗೂ ಅದರ ಕೆಟ್ಟ ಪರಿಣಾಮಗಳ ಬಗ್ಗೆ ಜಿಗುಪ್ಸೆ ಹೊಂದಿ ಅಂಥ ಮಾರ್ಗವನ್ನು ತ್ಯಜಿಸಿದನು.

ಯಯಾತಿ ದೊರೆಯು ತನ್ನ ಮಡದಿ ದೇವಯಾನಿಗೆ, ವ್ಯಕ್ತಿಯೊಬ್ಬ ಕಾಮುಕನಾಗಿದ್ದಾಗ ಅವನಿಗೆ ಜಗತ್ತಿನಲ್ಲಿ ಎಲ್ಲವೂ ಸಾಕಷ್ಟಿದ್ದರೂ ಅವನ ಮನಸ್ಸು ತೃಪ್ತಿಹೊಂದುವುದಿಲ್ಲವೆಂದನು. ಅವನು ಮುಂದುವರಿದು ಹೇಳಿದನು: "ವ್ಯಕ್ತಿಯೊಬ್ಬ ಶತೃತ್ವದಿಂದ ಕೂಡಿರದೆ ಯಾರಿಗೂ ಕೆಡಕನ್ನು ಬಯಸದಿದ್ದರೆ, ಅವನು ಸಮತೂಕದವನಾಗಿರುತ್ತಾನೆ. ಅಂಥ ವ್ಯಕ್ತಿಗೆ ಎಲ್ಲ ದಿಕ್ಕುಗಳೂ ಸಂತಸಕರವಾಗಿಯೇ ತೋರುತ್ತವೆ. ಐಹಿಕ ಸುಖದ ಬಗ್ಗೆ ಅತಿಯಾದ ವ್ಯಾಮೋಹವನ್ನು ಬೆಳೆಸಿಕೊಂಡಿರುವವರಿಗೆ ಇಂದ್ರಿಯ ಸುಖವನ್ನು ಬಿಟ್ಟುಕೊಡುವುದು ಕಷ್ಟಕರವಾಗುತ್ತದೆ". ವೃದ್ಧಾಪ್ಯದಿಂದಾಗಿ ವಿಕಲತೆಯನ್ನು ಹೊಂದಿದ್ದರೂ, ಅಂಥವರು ಇಂದ್ರಿಯ ಸುಖದ ಬಯಕೆಯನ್ನು ಬಿಡಲಾರರು. ಆದ್ದರಿಂದ ವಾಸ್ತವವಾಗಿ ಸಂತಸವನ್ನು ಪಡೆಯಲು ಬಯಸುವವರು, ಅತೃಪ್ತ ಆಸೆಗಳನ್ನು, ಸಂಕಷ್ಟಗಳಿಗೆ ಕಾರಣವಾಗುವಂಥಹವನ್ನು, ಬಿಟ್ಟು ಬಿಡಬೇಕು".

ಆದ್ದರಿಂದ ದೊರೆಯು ಎಲ್ಲ ಆಸೆಗಳನ್ನೂ ತ್ಯಜಿಸಿ ಭಗವಂತನನ್ನು ಕುರಿತು ಧ್ಯಾನಿಸಿದನು. ಅವನು ಪ್ರಾಣಿಗಳೊಂದಿಗೆ ಕಾಡಿನಲ್ಲಿ ಸಂಚರಿಸಲು ಬಯಸಿದನು. ದೊರೆಯು ಹೇಳಿದನು : "ಒಳ್ಳೆಯದೇ ಆಗಲಿ ಕೆಟ್ಟದೇ ಆಗಲಿ, ಈ ಜೀವನದಲ್ಲೇ ಆಗಲಿ ಅಥವಾ ಮುಂದಿನ ಜನ್ಮದಲ್ಲೇ ಆಗಲಿ, ಈ ಲೋಕದಲ್ಲೇ ಆಗಲಿ ಅಥವಾ ಸ್ವರ್ಗಲೋಕದಲ್ಲೇ ಆಗಲಿ, ಐಹಿಕ ಆನಂದವು ಕ್ಷಣಿಕ ಹಾಗೂ ವ್ಯರ್ಥವೆಂದು ತಿಳಿಯ ಬೇಕಾಗಿದ್ದು ಅಂಥ ಬುದ್ಧಿವಂತನು ಇಂಥವುಗಳನ್ನು ಅನುಭವಿಸುವುದಾಗಲಿ ಅಥವಾ ಯೋಚಿಸುವುದಾಗಲಿ ಕೂಡದು. ಆತ್ಮ ಸಾಕ್ಷಾತ್ಕಾರಗೊಂಡ ಅಂಥ ವ್ಯಕ್ತಿಗೆ ಐಹಿಕ ಆನಂದವು ಐಹಿಕ ಅಸ್ತಿತ್ವದ ಮುಂದುವರಿಕೆಗೆ ಹಾಗೂ ಒಬ್ಬನ ಕರ್ತವ್ಯಗಳನ್ನು ಮರೆಯುವುದಕ್ಕೆ ಕಾರಣವಾಗುತ್ತದೆ ಎಂಬುದು ತಿಳಿದಿರುತ್ತದೆ".

ಯಯಾತಿಯು ತನ್ನ ಮಗ ಪುರುವನ್ನು ಕರೆದು ಅವನ ಯೌವ್ವನವನ್ನು ಅವನಿಗೇ ಹಿಂತಿರುಗಿಸಿ ತಾನು ವೃದ್ಧಾಪ್ಯವನ್ನು ಪಡೆದು ಅರಣ್ಯಕ್ಕೆ ತೆರಳಿದನು.

ಶ್ರೀ ಶುಕಾಚಾರ್ಯರು ನುಡಿದರು : "ಯಯಾತಿ ದೊರೆಯು ಭಗವಂತನಿಗೆ ಸಂಪೂರ್ಣವಾಗಿ ಶರಣಾಗಿದ್ದರಿಂದ ಅವನು ಐಹಿಕ ಪ್ರಾಕೃತಿ ವಿಧಾನಗಳ ಎಲ್ಲ ಕಲ್ಮಶಗಳಿಂದಲೂ ವಿಮುಕ್ತನಾದನು. ಅವನ ಆತ್ಮ ಸಾಕ್ಷಾತ್ಕಾರದಿಂದಾಗಿ, ಅವನು ಪರಬ್ರಹ್ಮ ವಾಸುದೇವನ ಮೇಲೆ ಚಿತ್ತವಿರಿಸಲು ಸಾಧ್ಯವಾಗಿ ಹೀಗೆ ಅವನು ಅಂತಿಮವಾಗಿ ಭಗವಂತನ ಸಹಚರಿಯ ಸ್ಥಾನವನ್ನು ಪಡೆದುಕೊಂಡನು".

ಆನಂತರ ದೇವಯಾನಿಯು ಪತಿ, ಗೆಳೆಯರು ಹಾಗೂ ಬಂಧುಗಳೊಂದಿಗಿನ ಐಹಿಕ ಸಂಪರ್ಕ ಕ್ಷಣಿಕವಾದದ್ದು ಎಂಬುದನ್ನು ಅರ್ಥಮಾಡಿಕೊಂಡಳು. ಸಮಾಜ, ಸ್ನೇಹ ಹಾಗೂ ಪ್ರಣಯ ಇವುಗಳೊಂದಿಗಿನ ಸ್ನೇಹವು ಭಗವಂತನು ಕನಸಿನಂತೆ ಸೃಷ್ಟಿಸಿದ ಮಾಯೆ. ದೈವ ಕೃಪೆಯಿಂದ ದೇವಯಾನಿಯು ಈ ಐಹಿಕ ಜಗತ್ತಿನಲ್ಲಿನ ತನ್ನ ಕಾಲ್ಪನಿಕ ಸ್ಥಾನವನ್ನು ಬಿಟ್ಟುಕೊಟ್ಟು ಸಂಪೂರ್ಣವಾಗಿ ಭಗವಂತನಲ್ಲಿ ಮನಸ್ಸಿಟ್ಟು ಸೂಕ್ಷ್ಮ ಶರೀರಗಳಿಂದ ವಿಮುಕ್ತಿಯನ್ನು ಸಾಧಿಸಿದಳು.

ಶ್ರೀ ಶುಕಾಚಾರ್ಯರು ನಂತರ ಪರೀಕ್ಷಿತನು ಜನಿಸಿದ ಪುರುವಿನ ವಂಶವನ್ನು ವಿವರಿಸಿದರು.

ಜನಮೇಜಯ ರಾಜನು ಪುರು ವಂಶದಲ್ಲಿ ಹುಟ್ಟಿದನು. ಜನಮೇಜಯನ ಮಗನು ಪ್ರಚಿನ್ವನ. ಅವನ ಮಗ ಪ್ರವೀರ. ಪ್ರವೀರನ ಮಗ ಮನಸ್ಯು ಹಾಗೂ ಅವನ ಮಗ ಚಾರುಪಾದ. ದುಶ್ಯಂತನು ಪುರುವಿನ ಸಂತತಿಯವನಾಗಿದ್ದು ಕಣ್ವ ಋಷಿಯ ಸಾಕು ಮಗಳಾದ ಶಕುಂತಲೆಯನ್ನು ವಿವಾಹವಾದನು. ವಿಶ್ವಾಮಿತ್ರ ಮತ್ತು ಮೇನಕೆಯರು ಶಕುಂತಲೆಯನ್ನು ಅರಣ್ಯದಲ್ಲಿ ಬಿಟ್ಟಿದ್ದರಿಂದ ಅವಳು ಕಣ್ವರಿಂದ ಸಾಕಲ್ಪಟ್ಟಳು.

ದುಶ್ಯಂತ ರಾಜನು ಶಕುಂತಲೆ ಹಾಗೂ ಅವಳ ಮಗನನ್ನು ಸ್ವೀಕರಿಸಲು ನಿರಾಕರಿಸಿದಾಗ ಅಶರೀರವಾಣಿಯೊಂದು ಮೊಳಗಿತು. "ಎಲೈ ಮಹಾರಾಜ ದುಶ್ಯಂತನೇ,

ವಾಸ್ತವವಾಗಿ ಪುತ್ರನೊಬ್ಬನು ತಂದೆಗೇ ಸೇರಿದವನಾಗಿದ್ದು, ತಾಯಿಯು ಕೇವಲ ಗರ್ಭಧಾರಣೆಯ ಕಲಶದಂತೆ. ವೈದಿಕ ಸೂಚನೆಗಳಿಗೆ ಅನುಗುಣವಾಗಿ ತಂದೆಯು ಮಗನಾಗಿ ಜನಿಸುತ್ತಾನೆ. ಆದ್ದರಿಂದ ನೀನು ನಿನ್ನ ಮಗನನ್ನು ಸಲಹಬೇಕೇ ಹೊರತು ಶಕುಂತಲೆಯನ್ನು ಅಪಮಾನಗೊಳಿಸಕೂಡದು. ಎಲೈ ದೊರೆ ದುಶ್ಯಂತನೇ, ವೀರ್ಯವನ್ನು ನೀಡುವವರೇ ನಿಜವಾದ ತಂದೆಯಾಗಿದ್ದು ಅವನ ಮಗನು ಅವನನ್ನು ಯಮರಾಜನ ಬಂಧನದಿಂದ ಬಿಡಿಸುತ್ತಾನೆ. ನೀನು ನಿಜವಾಗಿ ಈ ಮಗುವಿನ ತಂದೆ. ಶಕುಂತಲೆಯು ಸತ್ಯವನ್ನೇ ನುಡಿಯುತ್ತಿದ್ದಾಳೆ". ದುಶ್ಯಂತನು ಶಕುಂತಲೆಯನ್ನು ಪತ್ನಿಯಾಗಿ ಸ್ವೀಕರಿಸಿದನು. ದುಶ್ಯಂತನ ನಂತರ ಅವನ ಪುತ್ರ ಭರತನು ಚಕ್ರವರ್ತಿಯಾದನು. ಅವನು ಭಗವಂತನ ಭಾಗಶಃ ಪ್ರತಿರೂಪವೆಂಬುದಾಗಿ ಕರೆಯಲ್ಪಟ್ಟಿದ್ದಾನೆ.

ಭರತ ಮಹಾರಾಜನು ಎಲ್ಲ ದೈವಿಕ ಗುಣಗಳನ್ನೂ ಪಡೆದಿದ್ದು ಉತ್ತಮವಾಗಿ ಆಳ್ವಿಕೆಯನ್ನು ನಡೆಸಿದನು. ದೊರೆಗೆ ವಿದರ್ಭ ರಾಜನ ಪುತ್ರಿಯರಾದ ಮೂವರು ಪತ್ನಿಯರಿದ್ದರು. ಅವರು ಮೂರು ಜನರಿಗೂ ಮಕ್ಕಳಾದಾಗ ಅವು ತಂದೆಯನ್ನು ಹೋಲಲಿಲ್ಲ. ದೊರೆಯು ತಮ್ಮ ಬಗ್ಗೆ ಸಂಶಯ ತಳೆಯಬಹುದು ಎಂಬುದಾಗಿ ಭಾವಿಸಿದ ಅವನ ಪತ್ನಿಯರು ತಮ್ಮ ಮಕ್ಕಳನ್ನು ಕೊಂದಾಗ ಬೇಗುದಿಗೊಂಡ ದೊರೆಯು "ಮಹತ್ ಸ್ತೋಮ" ವೆಂಬ ಯಜ್ಞವನ್ನು ಆಚರಿಸಿ ಪುತ್ರನಿಗಾಗಿ ಪ್ರಾರ್ಥಿಸಿದಾಗ, ಮರುತನೆಂಬ ಉಪದೇವತೆಗಳು ಸಂಪ್ರೀತರಾಗಿ ಅವನಿಗೆ ಭರದ್ವಾಜನೆಂಬ ಮಗನನ್ನು ನೀಡಿದರು.

(ಬೃಹಸ್ಪತಿಯು ಆಗ ಗರ್ಭಿಣಿಯಾಗಿದ್ದ ತನ್ನ ಸೋದರನ ಪತ್ನಿ ಮಮತಾಳನ್ನು ಮೋಹಿಸಿ ಅವಳಿಂದ ಲೈಂಗಿಕ ಸುಖವನ್ನು ಅಪೇಕ್ಷಿಸಿದನು. ಅವಳ ಗರ್ಭದಲ್ಲಿದ್ದ ಮಗನು ಅದನ್ನು ಪ್ರತಿರೋಧಿಸಿದಾಗ ಅವನಿಗೆ ಶಾಪವಿತ್ತ ಬೃಹಸ್ಪತಿಯು ಬಲಾತ್ಕಾರದಿಂದ ಮಮತಾಳ ಗರ್ಭದಲ್ಲಿ ವೀರ್ಯವನ್ನು ಚೆಲ್ಲಿದನು. ತನ್ನ ಗಂಡನಿಂದ ಪರಿತ್ಯಜಿಸಲ್ಪಡುವೆನೆಂದು ಭೀತಿಗೊಂಡ ಮಮತಾಳು ಮಗುವನ್ನು ಬಿಟ್ಟುಕೊಡಲು ಯೋಚಿಸಿದಾಗ ಉಪದೇವತೆಗಳು ಸಮಸ್ಯೆಯನ್ನು ಪರಿಹರಿಸಿ ಅದಕ್ಕೆ ಹೆಸರನ್ನು ನೀಡಲು ನಿರ್ಧರಿಸಿದರು. ಮಮತಾಳಿಗೆ ಜನಿಸಿದ ಮಗು ಅಧಾರ್ಮಿಕ ರೀತಿಯದಾಗಿದ್ದು, ಬೃಹಸ್ಪತಿಯೇ ಬಲಾತ್ಕಾರದಿಂದ ವೀರ್ಯವನ್ನು ನೀಡಿದ್ದರಿಂದ ಬೃಹಸ್ಪತಿಯು ಭರ್ತ್ರನೆಂದು ಕರೆಯಲ್ಪಟ್ಟನು. ವೈದಿಕ ಗ್ರಂಥಗಳಿಗೆ ಅನುಗುಣವಾಗಿ ಪತ್ನಿಯು ತನ್ನ ಪತಿಯ ಸ್ವತ್ತಾಗಿದ್ದು ಅನೈತಿಕವಾಗಿ ಜನಿಸಿದ ಪುತ್ರನನ್ನು "ದ್ವಜ"ನೆಂದು ಕರೆಯಲಾಗುತ್ತಾನೆ. "ಭರದ್ವಾಜ" ಎಂಬ ಶಬ್ದ ಅನೈತಿಕವಾಗಿ ಹುಟ್ಟಿದ ಅವನನ್ನು ಮಮತಾ ಹಾಗೂ ಬೃಹಸ್ಪತಿ ಇಬ್ಬರೂ ಸಲಹಬೇಕೆಂದು ಸೂಚಿಸುತ್ತದೆ).

ಉಪದೇವತೆಗಳಿಂದ ಮಗುವನ್ನು ಸಾಕುವ ಬಗ್ಗೆ ಉತ್ತೇಜನ ಪಡೆದರೂ ಮಮತಾಳು ಮಗುವನ್ನು ನಿರುಪಯೋಗಿ ಎಂಬುದಾಗಿ ಪರಿಗಣಿಸಿ ಅದರ ಅನೈತಿಕ ಹಿನ್ನೆಲೆಯಿಂದಾಗಿ ಅದನ್ನು ತ್ಯಜಿಸಿದಳು. ಆನಂತರ ಉಪದೇವತೆಗಳಾದ ಮರುತರು ಅದನ್ನು ಸಲಹಿ, ಭರತ ಮಹಾರಾಜನು ಮಗನನ್ನು ಅಪೇಕ್ಷಿಸಿದಾಗ ಅವನನ್ನು ಅವನಿಗೆ ಸ್ವಂತಮಗನನ್ನಾಗಿ ನೀಡಿದರು.

ಶ್ರೀ ಶುಕಾಚಾರ್ಯರು ಭರತನ ವಂಶವನ್ನು ಕುರಿತು ನಿರೂಪಿಸಿದರು. ಭರದ್ವಾಜನಿಗೆ ವಿಥಾತನೆಂಬ ಹೆಸರೂ ಉಂಟು. ಶಂತನುವು ಈ ವಂಶದವನು. ಭೀಷ್ಮನು ಶಂತನುವಿನಿಂದ ಜನಿಸಿದನು.

ಸತ್ಯವತಿಯು ಶಂತನುವನ್ನು ವಿವಾಹವಾಗುವುದಕ್ಕೆ ಮೊದಲು ಪರಾಶರ ಮುನಿಯಿಂದ ಕೃಷ್ಣ ದ್ವೈಪಾಯನನೆಂದೂ ಹೆಸರಾದ ವ್ಯಾಸದೇವನಿಗೆ ಜನ್ಮವಿತ್ತಳು ಎಂಬುದಾಗಿ ಶ್ರೀ ಶುಕಾಚಾರ್ಯರು ತಿಳಿಸಿದರು. ಶುಕಾಚಾರ್ಯರು ವ್ಯಾಸದೇವನಿಂದ ಜನಿಸಿ ಭಾಗವತವನ್ನು ಅಧ್ಯಯನ ಮಾಡಿದರು. ಶ್ರೀ ಶುಕಾಚಾರ್ಯರು ಧೃತರಾಷ್ಟ್ರ ಹಾಗೂ ಪಾಂಡುವಿನ ಮಕ್ಕಳ ಹೆಸರುಗಳನ್ನು ವಿವರಿಸಿದರು. ಶ್ರೀ ಶುಕಾಚಾರ್ಯರು ಪರೀಕ್ಷಿತನಿಗೆ ತಿಳಿಸಿದರು : "ಕುರುವಂಶದ ನಂತರ ಕುರುಕ್ಷೇತ್ರ ಯುದ್ಧದಲ್ಲಿ ಕುರುವಂಶವು ನಿರ್ನಾಮವಾಗಿ, ನೀನೂ ಸಹ ಅಶ್ವತ್ಥಾಮನು ಪ್ರಯೋಗಿಸಿದ ಬ್ರಹ್ಮಾಸ್ತ್ರದಿಂದ ವಿನಾಶ ಹೊಂದಲಿದ್ದರೂ, ಶ್ರೀ ಕೃಷ್ಣ ಪರಮಾತ್ಮನ ಕೃಪೆಯಿಂದ ಮೃತ್ಯುವಿನಿಂದ ಪಾರಾದೆ".

ಪರೀಕ್ಷಿತ ರಾಜನಿಗೆ ಜನಮೇಜಯ, ಶೃತಸೇನ, ಭೀಮಸೇನ ಮತ್ತು ಉಗ್ರಸೇನನೆಂಬ ನಾಲ್ವರು ಪುತ್ರರು. ಶ್ರೀ ಶುಕಾಚಾರ್ಯರು ದೊರೆಯ ಭವಿಷ್ಯ ಕಾಲದಲ್ಲಿನ ಸಂಗತಿಗಳು ಹಾಗೂ ಅವನ ಸಂತತಿಯನ್ನು ಕುರಿತು ವಿವರಿಸಿದರು.

ಜನಮೇಜಯನ ಮಗನಾದ ಶತಾನಿಕನು ಯಜ್ಞವಲ್ಕ್ಯನಿಂದ ಮೂರು ವೇದಗಳನ್ನು ಹಾಗೂ ಧಾರ್ಮಿಕ ವಿಧಿಗಳ ಆಚರಣೆಯ ವಿಧಾನಗಳನ್ನು ಕಲಿಯುತ್ತಾನಲ್ಲದೆ, ಕೃಪಾಚಾರ್ಯರಿಂದ ಯುದ್ಧಕಲೆ ಹಾಗೂ ಶೌನಕ ಮುನಿಯಿಂದ ಅತಿಶಯ ವಿಜ್ಞಾನವನ್ನು ಕಲಿಯುತ್ತಾನೆ. ಶ್ರೀ ಶುಕಾಚಾರ್ಯರು ಇಡೀ ಚಂದ್ರವಂಶವನ್ನೇ ವಿವರಿಸಿದರು. ಕಲಿಯುಗದಲ್ಲಿ ಕ್ಷೇಮಕನು ಚಕ್ರವರ್ತಿಯಾದನು.

ಯಯಾತಿಯ ವಂಶವನ್ನು ವಿವರಿಸಿದ ನಂತರ ಶ್ರೀ ಶುಕಾಚಾರ್ಯರು ಯಯಾತಿಯ ಮೊದಲ ಮಗನಾದ ಯದುವಿನ ವಂಶವನ್ನು ವಿವರಿಸಲು ತೊಡಗಿದರು.

ಶ್ರೀ ಶುಕಾಚಾರ್ಯರು ತಮ್ಮ ವ್ಯಾಖ್ಯಾನವನ್ನು ಮುಂದುವರಿಸಿ ಶ್ರೀ ಕೃಷ್ಣ ಪರಮಾತ್ಮನು ಮಾನವನಾಗಿ ಕಾಣಿಸಿಕೊಂಡ ತನ್ನ ಮೂಲ ರೂಪದಲ್ಲಿ ಯದು ವಂಶದಲ್ಲಿ ಜನಿಸಿದನೆಂದು ತಿಳಿಸಿದರು.

ಶ್ರೀ ಶುಕಾಚಾರ್ಯರು ರಾಜನಿಗೆ ಧಾರ್ಮಿಕ ತತ್ತ್ವಗಳು ನಶಿಸಿ ಹೋಗುವ ಸಂದರ್ಭಗಳು ಒದಗಿ ಅಧಾರ್ಮಿಕತೆಯು ಹೆಚ್ಚಾದಾಗಲೆಲ್ಲ ಭಗವಂತನು ತನ್ನ ಇಚ್ಛೆಗೆ ಅನುಗುಣವಾಗಿ ಅವತಾರವನ್ನೆತ್ತುತ್ತಾನೆ. "ಎಲೈ ಪರೀಕ್ಷಿತ ರಾಜನೇ, ಭಗವಂತನು ಸ್ವತಃ ಇಚ್ಛಿಸದ ಹೊರತು ಅವನು ಕಾಣಿಸಿಕೊಳ್ಳುವುದಕ್ಕೆ, ಕಣ್ಮರೆಯಾಗುವುದಕ್ಕೆ ಅಥವಾ ಚಟುವಟಿಕೆಗಳಿಗೆ ಬೇರೆ ಕಾರಣವೇ ಇರುವುದಿಲ್ಲ. ಉನ್ನತಾತ್ಮನಾದ ಅವನು ಎಲ್ಲವನ್ನೂ ಬಲ್ಲವನು. ಪರಿಣಾಮವಾಗಿ ಅವನನ್ನು ಫಲಪ್ರದ ಚಟುವಟಿಕೆಗಳ ಪರಿಣಾಮಗಳೂ ಸಹ ಬಾಧಿಸಲಾರವು. ಭಗವಂತನು ಈ ಜಗತ್ತಿನ ಸೃಷ್ಟಿ, ನಡೆಸುವಿಕೆ ಹಾಗೂ

ನಿರ್ನಾಮಕ್ಕಾಗಿ ತನ್ನ ಐಹಿಕ ಶಕ್ತಿಯ ಮೂಲಕ ಕ್ರಿಯೆಗೈಯ್ಯುತ್ತಾನೆ. ಇದಕ್ಕೆ ಕಾರಣ ಜೀವಿಗಳ ಬಗ್ಗೆ ತನ್ನ ಕರುಣೆಯನ್ನು ತೋರಿ, ಐಹಿಕ ಜಗತ್ತಿನಲ್ಲಿ ಅವರ ಜನನ, ಸಾವು ಹಾಗೂ ಆಯುಷ್ಯವನ್ನು ನಿಲ್ಲಿಸಿ ಅವರು ತಮ್ಮ ಮೂಲವಾಸಸ್ಥಾನಕ್ಕೆ, ಅಂದರೆ ಭಗವಂತನೆಡೆಗೆ ತೆರಳಲು ಅನುವು ಮಾಡಿಕೊಡುವುದು.

## ಶ್ರೀ ಕೃಷ್ಣ ಪರಮಾತ್ಮ

ಶ್ರೀ ಕೃಷ್ಣ ಪರಮಾತ್ಮನು ವಸುದೇವನ ಪುತ್ರನಾಗಿ ಕಾಣಿಸಿಕೊಂಡು ತಕ್ಷಣವೇ ತನ್ನ ಆಪ್ತ ಭಕ್ತಾದಿಗಳಿಗೆ ತನ್ನ ಪ್ರೇಮಮಯ ಬಾಂಧವ್ಯವನ್ನು ವಿಸ್ತರಿಸಿಕೊಳ್ಳುವ ಸಲುವಾಗಿ ಬೃಂದಾವನಕ್ಕೆ ತೆರಳಿದನು. ಬೃಂದಾವನದಲ್ಲಿ ಅವನು ಅನೇಕ ದಾನವರನ್ನು ಸಂಹರಿಸಿ ದ್ವಾರಕೆಗೆ ಹಿಂತಿರುಗಿ ಅಲ್ಲಿ ವೈದಿಕ ತತ್ವಗಳಿಗೆ ಅನುಗುಣವಾಗಿ ಅನೇಕ ಮಡದಿಯರನ್ನು ಹೊಂದಿ ಅವರ ಮೂಲಕ ನೂರಾರು ಪುತ್ರರನ್ನು ಪಡೆದನಲ್ಲದೆ ಗೃಹಸ್ಥನ ಜೀವನ ತತ್ವವನ್ನು ಸ್ಥಾಪಿಸುವ ಸಲುವಾಗಿ ತನ್ನನ್ನೇ ಯಜ್ಞಯಾಗಾದಿಗಳ ಮೂಲಕ ಆರಾಧಿಸಿಕೊಂಡನು. ಅನಂತರ ಭಗವಂತನು ಜಗತ್ತಿನ ಹೊರೆಯನ್ನು ಕುಗ್ಗಿಸುವ ಸಲುವಾಗಿ ತನ್ನದೇ ಕುಟುಂಬದ ಸದಸ್ಯರ ಮಧ್ಯೆ ತಪ್ಪು ತಿಳಿವಳಿಕೆಯನ್ನು ಉಂಟು ಮಾಡಿ ಕೊನೆಗೆ ಉದ್ಧವನಿಗೆ ಅತಿಶಯ ಜೀವನ ಹಾಗೂ ಭಕ್ತಿಯ ಬಗ್ಗೆ ಸೂಚನೆಗಳನ್ನು ನೀಡಿ ತನ್ನ ಮೂಲರೂಪದಲ್ಲಿ ತನ್ನ ವಾಸಸ್ಥಾನಕ್ಕೆ ಹಿಂತಿರುಗಿದನು.

ಪುರುಷ ಸೂಕ್ತ ಎಂಬುದು ವೈದಿಕ ಮಂತ್ರವಾಗಿದ್ದು ಅದರ ಮೂಲಕ ಉಪದೇವತೆಗಳು ಶ್ರೀ ಕೃಷ್ಣ ಪರಮಾತ್ಮನಿಗೆ ಪ್ರಾರ್ಥನೆಯನ್ನು ಸಲ್ಲಿಸುತ್ತಾರೆ. ಈ ಮೂಲಕ ಪ್ರತಿಯೊಂದು ಗ್ರಹದ ಪ್ರಮುಖ ದೇವತೆಯೂ ಜಗತ್ತಿನ ಒಡೆಯನನ್ನು ಕಾಣಬಹುದೆಂಬುದಾಗಿ ತಿಳಿದು ಬಂದಿದೆ.

ಕಂಸ ದೊರೆಯು ಯುದುವಿನ ರಾಜ್ಯವನ್ನು ಆಕ್ರಮಿಸಿಕೊಂಡಿದ್ದೇ ಅಲ್ಲದೆ, ಭೋಜ ಮತ್ತು ಅಂಧಕ ಸಂತತಿಗಳನ್ನು ಹಾಗೂ ಪೂರಸೇನನ ರಾಜ್ಯವನ್ನು ಅಧೀನದಲ್ಲಿಟ್ಟುಕೊಂಡು ಇನ್ನಿತರ ದಾನವ ದೊರೆಗಳ ಜತೆ ಸಂಬಂಧವನ್ನು ಇಟ್ಟುಕೊಂಡಿದ್ದರಿಂದ ಜನರೆಲ್ಲರೂ ಅವನ ಹಿಂಸೆಗೊಳಗಾಗಿದ್ದರು.

ಬ್ರಹ್ಮದೇವನು ಧ್ಯಾನಾಸಕ್ತನಾಗಿದ್ದಾಗ ಭಗವಂತನು ದಾನವರನ್ನು ನಿರ್ನಾಮ ಮಾಡಿ ಭಕ್ತರನ್ನು ಕಾಪಾಡುವ ಸಲುವಾಗಿ ತನ್ನೆಲ್ಲ ಅತ್ಯುನ್ನತ ಶಕ್ತಿ ಸಾಮರ್ಥ್ಯಗಳೊಂದಿಗೆ ಭೂಮಿಯಲ್ಲಿ ಸಧ್ಯದಲ್ಲೇ ಕಾಣಿಸಿಕೊಳ್ಳಲಿದ್ದಾನೆಂಬ ಸಂದೇಶ ತಲುಪಿತು. ಭಗವಂತನು ಅನಂತರ ವಸುದೇವನ ಮಗನಾಗಿ ಕಾಣಿಸಿಕೊಂಡನು.

ಭಗವಂತನು ಯೋಗಮಾಯೆಗೆ ತಿಳಿಸಿದನು. (ಯೋಗಮಾಯಳು ಭಗವಂತನ ಪ್ರಧಾನ ಶಕ್ತಿ). ಕಂಸನ ಬಂಧನದಲ್ಲಿ ದೇವಕಿ ಹಾಗೂ ವಸುದೇವರಿದ್ದು ನನ್ನ ಉಪಾಧಿಕ ವಿಸ್ತರಣೆಯಾದ ಶೇಷನು ಪ್ರಸ್ತುತದಲ್ಲಿ ದೇವಕಿಯ ಗರ್ಭದಲ್ಲಿದ್ದಾನೆ. ನೀನು ಶೇಷನನ್ನು ದೇವಕಿಯ ಗರ್ಭದಿಂದ ರೋಹಿಣಿಯ ಗರ್ಭಕ್ಕೆ ವರ್ಗಾಯಿಸಬೇಕು. ಈ ವ್ಯವಸ್ಥೆಯ ನಂತರ ನಾನೇ ಸ್ವತಃ ನನ್ನ ಸಂಪೂರ್ಣ ಸಾಮರ್ಥ್ಯದೊಂದಿಗೆ ದೇವಕಿಯ ಗರ್ಭದಲ್ಲಿ

ಕಾಣಿಸಿಕೊಳ್ಳುತ್ತೇನೆ. ನಾನು ಅನಂತರ ದೇವಕಿ ಹಾಗೂ ವಸುದೇವನ ಮಗನಾಗುತ್ತೇನೆ. ನೀನು ನಂದ ಮತ್ತು ಯಶೋದೆಯ ಮಗಳಾಗಿ ಬೃಂದಾವನದಲ್ಲಿ ಕಾಣಿಸಿಕೊಳ್ಳುತ್ತೀಯೆ".

ಭಗವಂತನು ಯೋಗಮಾಯಳಿಗೆ ತನ್ನ ಸಮಕಾಲೀನ ಸಹೋದರಿಯಾಗಿ ಕಾಣಿಸಿಕೊಳ್ಳುವ ಅವಳು ಪೂಜಿಸಲ್ಪಡುತ್ತಾಳೆ ಎಂದು ತಿಳಿಸಿದನು. ಅವಳು ದುರ್ಗೆ, ಭದ್ರಕಾಳಿ, ವಿಜಯಿ, ವೈಷ್ಣವಿ, ಕುಮುದು, ಚಂದ್ರಿಕ ಇತ್ಯಾದಿಯಾಗಿ ಹೆಸರಾಗುತ್ತಾಳೆ. ಅನಂತ ಶೇಷನು ಬಲರಾಮನಾಗಿ ಕಾಣಿಸಿಕೊಳ್ಳುತ್ತಾನೆಂದೂ ಪರಮಾತ್ಮನು ತಿಳಿಸಿದನು.

ಶ್ರೀ ಕೃಷ್ಣನ ಜನನದ ಸಂದರ್ಭದಲ್ಲಿ ಪ್ರತಿಯೊಂದೂ ಪ್ರಶಸ್ತವಾಗುವಂತೆ ಗ್ರಹ ವ್ಯವಸ್ಥೆಗಳೆಲ್ಲವೂ ತಾವಾಗಿಯೇ ಹೊಂದಾಣಿಕೆಯಾದವು. ಎಲ್ಲೆಡೆಯೂ ಶಾಂತಿ ನೆಲೆಸಿತ್ತು. ಭಗವಂತನು ದೇವಕಿಗೆ ತನ್ನ ಹಿಂದಿನ ಅವತಾರಗಳ ವಿವರಗಳೆಲ್ಲವನ್ನೂ ನೀಡಿದನು. ಅದ್ದರಿಂದ ಅವನು ವಸುದೇವನಿಗೆ ತನ್ನನ್ನು ಗೋಕುಲಕ್ಕೆ ಕರೆದೊಯ್ದು ಆಗ ತಾನೇ ಯಶೋದೆಗೆ ಹುಟ್ಟಿದ ಮಗಳನ್ನು ತನ್ನ ಸ್ಥಳದಲ್ಲಿ ಇಡಬೇಕೆಂದಾಗ ವಸುದೇವನು ಪರಮಾತ್ಮನನ್ನು ನಂದ ಹಾಗೂ ಯಶೋದೆಯ ಬಳಿಗೆ ಕರೆದೊಯ್ದು ಅವನಿದ್ದ ಸ್ಥಳದಲ್ಲಿ ಆಗ ತಾನೇ ಹುಟ್ಟಿದ ಹೆಣ್ಣುಮಗುವನ್ನಿಟ್ಟನು.

ಕಾರಾಗೃಹದಲ್ಲಿ ಹೆಣ್ಣು ಮಗು ಕಾಣಿಸಿಕೊಂಡಾಗ ಕಂಸನು ಅದನ್ನು ಕೊಲ್ಲಲು ನಿರ್ಧರಿಸಿದಾಗ ಅಶರೀರವಾಣಿಯೊಂದು ಅವನನ್ನು ಕೊಲ್ಲಲಿರುವ ಮಗುವು ಈಗಾಗಲೇ ಜಗತ್ತಿನ ಬೇರೆಡೆಯಲ್ಲೆಲ್ಲೋ ಜನಿಸಿದೆಯೆಂದು ತಿಳಿಸಿತು. ಕಂಸನು ತನ್ನ ಸಹೋದರಿಯ ಬಗ್ಗೆ ತನ್ನ ವರ್ತನೆಯನ್ನು ನೆನೆದು ಪಶ್ಚಾತ್ತಾಪ ಪಟ್ಟನು. ಆದರೆ ಮರುದಿನ ಅವನು ತನ್ನ ಜನರೊಂದಿಗೆ ಸಮಾಲೋಚಿಸಿ ನಡೆದದ್ದನ್ನೆಲ್ಲ ಹೇಳಿದಾಗ ಅವನ ಸಲಹೆಗಾರರು ಅವನಿಗೆ ಆ ಸಮಯದಲ್ಲಿ ಅವನ ರಾಜ್ಯದಲ್ಲಿ ಜನಿಸಿದ ಮಕ್ಕಳೆಲ್ಲವನ್ನೂ ಕೊಲ್ಲಬೇಕೆಂದು ಉಪದೇಶಿಸಿದರು.

ಭಗವಂತನು ನಂದನ ಮನೆಯಲ್ಲಿ ಬೆಳೆದನು. ವಸುದೇವನು ನಂದನಿಗೆ, ಕಂಸನ ಅನುಯಾಯಿಗಳು ಮಗುವಿಗೆ ಹಾನಿ ಮಾಡಬಹುದಾದ್ದರಿಂದ ಅವನು ತುಂಬಾ ಎಚ್ಚರಿಕೆಯಿಂದ ಇರಬೇಕೆಂದು ಹೇಳಿದನು. ನಂದನು ಈ ಸಲಹೆಯನ್ನು ಸ್ವೀಕರಿಸಿದನು.

ಕಂಸನು ಮಾಯ ಮಾಟ ಮಾಡಲು ಶಕ್ತನಾಗಿದ್ದ ಪೂತನಿಗೆ ಎಲ್ಲೆಡೆಯಲ್ಲೂ ಸಂಚರಿಸಿ ಆ ಅವಧಿಯಲ್ಲಿ ಹುಟ್ಟಿದ ಎಲ್ಲ ಮಕ್ಕಳನ್ನು ಕೊಲ್ಲಬೇಕೆಂದು ಸೂಚಿಸಿದನು. ಪೂತನಿಯು ಗೋಕುಲವನ್ನು, ನಂದ ಮಹಾರಾಜನ ವಸತಿಗೃಹವನ್ನು ಅಪ್ಪಣೆಯಿಲ್ಲದೆಯೇ ಪ್ರವೇಶಿಸಿದಳು. ಸುಂದರ ಸ್ತ್ರೀಯಂತೆ ಅಲಂಕರಿಸಿಕೊಂಡು ಅವಳು ಯಶೋದೆಯ ಮನೆಗೆ ಹೊರಟಳು. ಮಗುವನ್ನು ಕಂಡಾಗ ಪೂತನಿಗೆ, "ಈ ಮಗು ಎಷ್ಟು ಬಲಶಾಲಿಯಂತೆ ಕಾಣುವುದೆಂದರೆ ಅದು ಇಡೀ ಜಗತ್ತನ್ನೇ ಈ ಕ್ಷಣ ನಾಶ ಮಾಡಬಲ್ಲದು" ಎನ್ನಿಸಿತು. ಪೂತನಿಯು ಮಗುವಿಗೆ ಹಾಲನ್ನು ಉಣಿಸಲು ತನ್ನ ತೊಡೆಯ ಮೇಲೆ ಮಲಗಿಸಿಕೊಂಡಳು. ಅವಳು ತನ್ನ ಮೊಲೆಗಳಿಗೆ ವಿಷವನ್ನು ಬಳೆದುಕೊಂಡಿದ್ದು ಮೊಲೆಯ ತೊಟ್ಟನ್ನು

ಮಗುವಿನ ಬಾಯಿಗಿಟ್ಟು ಅದು ತೊಟ್ಟನ್ನು ಚೀಪುವುದೆಂದು ನಿರೀಕ್ಷಿಸಿದಳು. ಆದರೆ ಭಗವಂತನು ವಿಷ ಮಿಶ್ರಿತ ಹಾಲನ್ನು ಕುಡಿದದ್ದಲ್ಲದೆ ಪೂತನಿಯ ಪ್ರಾಣವನ್ನೇ ತೆಗೆದನು. ಮಗುವು ಮೊಲೆಯುಣ್ಣ ತೊಡಗಿದಾಗ ಪೂತನಿಗೆ ಉಸಿರುಗಟ್ಟಿ ನೆಲದ ಮೇಲೆ ಬಿದ್ದು ಚೀರಾಡಿದಾಗ ಭೂಮ್ಯಾಕಾಶಗಳು ನಡುಗಿದವು. ಆಗಲೂ ಶ್ರೀ ಕೃಷ್ಣ ಪರಮಾತ್ಮನು ಅವಳ ಮೈ ಮೇಲೆ ಆಡುತ್ತಿದ್ದು ಗೋಪಿಯರು ಅವನನ್ನೆತ್ತಿಕೊಂಡು ಒಳಗೆ ಹೋದರು. ನಂದ ಮಹಾರಾಜನಿಗೆ ಈ ಸಮಾಚಾರ ತಿಳಿದಾಗ ಅವನಿಗೆ ವಸುದೇವನ ಭವಿಷ್ಯವಾಣಿಯು ನೆನಪಾಯಿತು.

ಶ್ರೀ ಕೃಷ್ಣ ಪರಮಾತ್ಮನ ಮೊದಲ ಹುಟ್ಟು ಹುಬ್ಬಕ್ಕೆ ನಂದ ಮಹಾರಾಜ ಹಾಗೂ ಯಶೋದೆ ದೊಡ್ಡ ಸಮೂಹವನ್ನೇ ಆಹ್ವಾನಿಸಿದ್ದರು. ಮಗುವನ್ನು ಹಾಸಿಗೆಯ ಮೇಲೆ ಮಲಗಿಸಲಾಗಿತ್ತು. ತನಗೆ ಹಾಲುಣಿಸಲು ಸುತ್ತಲೂ ಯಾರೂ ಇಲ್ಲದಿದ್ದಾಗ ಹಸಿದಿದ್ದ ಮಗುವು ಗಾಡಿಯೊಂದರ ಚಕ್ರವನ್ನು ಒದ್ದು ಗಟ್ಟಿಯಾಗಿ ಅತ್ತಾಗ ಗಾಡಿಯು ಅದರೊಳಗಿದ್ದ ಪಾತ್ರೆಯೊಂದಿಗೇ ಕೆಳಗೆ ಬಿತ್ತು. ಎಲ್ಲರೂ ಆಶ್ಚರ್ಯ ಚಕಿತರಾದರು.

ಒಂದು ದಿನ ಮೊದಲ ಹುಟ್ಟುಹಬ್ಬದ ಸ್ವಲ್ಪ ಸಮಯದ ನಂತರ ಯಶೋದೆಯು ತನ್ನ ಮಗುವನ್ನು ತೊಡೆಯ ಮೇಲೆ ಮಲಗಿಸಿಕೊಂಡು ತಟ್ಟುತ್ತಿದ್ದಾಗ ಮಗುವು ತುಂಬಾ ಭಾರವೆನ್ನಿಸಿ ಅದನ್ನು ಹೊರಲಾರದೆ ಕೆಳಗಿಳಿಸಿ ಮನೆಗೆಲಸಗಳಲ್ಲಿ ತೊಡಗಿದಳು. ಆ ಸಮಯದಲ್ಲಿ ಕಂಸನ ಅನುಯಾಯಿಗಳಲ್ಲಿ ಒಬ್ಬನಾದ ತೃಣವೃತನು ಬಿರುಗಾಳಿಯ ರೂಪದಲ್ಲಿ ಕಾಣಿಸಿಕೊಂಡು ಬೃಂದಾವನದ ಸುತ್ತಲೂ ಧೂಳನ್ನೆಬ್ಬಿಸಿದನು. ರಾಕ್ಷಸನು ಮಗುವನ್ನು ಆಕಾಶದಲ್ಲಿ ಮೇಲಕ್ಕೆತ್ತಿಕೊಂಡು ಹೊರಟರೂ ಮಗುವಿನ ಭಾರವನ್ನು ತಡೆಯಲಾರದೆ ಬಿರುಗಾಳಿಯನ್ನು ನಿಲ್ಲಿಸಲೇ ಬೇಕಾದಾಗ ಕೆಳಗೆ ಬಿದ್ದು ಛಿದ್ರಗೊಂಡನು.

ಒಮ್ಮೆ ಯಶೋದೆಯು ಮಗುವಿಗೆ ಹಾಲನ್ನು ಉಣಿಸುತ್ತಾ ಅಪಾರ ಅಕ್ಕರೆ ಯಿಂದ ಅವನನ್ನು ತಟ್ಟುತ್ತಿದ್ದಾಗ ಅವಳ ಎದೆಯಿಂದ ಹಾಲು ಉಕ್ಕಲು ತೊಡಗಿ ಅವಳು ಮೊಲೆಯನ್ನು ಮಗುವಿನ ಬಾಯಿಗಿಡಲು ಪ್ರಯತ್ನಿಸಿದಾಗ ಮಗುವಿನ ತೆರೆದ ಬಾಯಿಯಲ್ಲಿ ಇಡೀ ವಿಶ್ವವನ್ನೇ ಕಂಡಳು.

ಮಗುವು ದೊಡ್ಡದಾದಂತೆ ತುಂಟನಾಯಿತು. ಒಮ್ಮೆ ಅದು ಮಣ್ಣು ತಿಂದಾಗ ಅದನ್ನು ಗದರಿಸಿದ ಯಶೋದೆ ಅದರ ಬಾಯನ್ನು ತೆರೆದಾಗ ಅಲ್ಲಿ ಇಡೀ ಸೃಷ್ಟಿಯ ಸಮೃದ್ಧಿಯೇ ಅವಳಿಗೆ ಕಂಡಿತು. ಅವಳು ಎಲ್ಲ ದಿಕ್ಕುಗಳಲ್ಲಿನ ಸಮಸ್ತ ಸ್ಥಳಗಳು, ಪರ್ವತಗಳು, ದ್ವೀಪಗಳು, ಸಾಗರ ಸಮುದ್ರಗಳು, ಗ್ರಹಗಳು ಇತ್ಯಾದಿಯನ್ನು ಕಂಡದ್ದಲ್ಲದೆ ಅಲ್ಲಿ ಶ್ರೀ ಕೃಷ್ಣನನ್ನು ತೊಡೆಯ ಮೇಲೆ ಮಲಗಿಸಿಕೊಂಡಿದ್ದ ತನ್ನನ್ನೇ ಕಂಡಳು.

ಮಹೇಶ್ವರನ ಪರಮ ಭಕ್ತನಾದ ಕುಬೇರನ ಇಬ್ಬರು ರಾಕ್ಷಸಪುತ್ರರಾದ ನಳಕುಬೇರ ಮತ್ತು ಮಣಿಗ್ರೀವರು ಹೆಂಡ ಹಾಗೂ ಸ್ತ್ರೀ ವ್ಯಸಿನಿಗಳಾಗಿದ್ದರು. ಇವರಿಬ್ಬರೂ ಒಮ್ಮೆ ಕೈಲಾಸದಲ್ಲಿದ್ದ ಶಿವನ ತೋಟವನ್ನು ಪ್ರವೇಶಿಸಿ ಸಂಗೀತವನ್ನು ಆಲಿಸುತ್ತಾ ಸುಖಿಸುತ್ತಿದ್ದರು. ಆ ಮಾರ್ಗದಲ್ಲಿ ತೆರಳುತ್ತಿದ್ದ ನಾರದ ಮುನಿಗೆ ಇವರಿಬ್ಬರೂ ಮದೋನ್ಮತ್ತರಾಗಿ,

ನಗ್ನರಾಗಿ ಬಿದ್ದುಕೊಂಡಿದ್ದು ತನ್ನ ಆಗಮನವನ್ನೂ ತಿಳಿಯದೇ ಹೋದದ್ದು ಕಂಡಿತು. ನಾರದ ಮುನಿಯು ಅವರ ಹಿತಾಸಕ್ತಿಯನ್ನೇ ಗಮನದಲ್ಲಿಟ್ಟುಕೊಂಡು ಅವರು ಉಪದೇವತೆಗಳ ಕಾಲದಲ್ಲಿ ಒಂದು ನೂರು ವರ್ಷಗಳ ಕಾಲ ವೃಕ್ಷಗಳ ರೂಪದಲ್ಲಿ ಉಳಿಯಲಿ ಎಂದು ಶಪಿಸಿದ್ದಲ್ಲದೆ ಕರುಣಾಮಯನಾದ ದೈವಕೃಪೆಯಿಂದ ಭಗವಂತನನ್ನು ಮುಖಾಮುಖಿಯಾಗಿ ಕಾಣುವ ಅವಕಾಶವನ್ನು ಪಡೆಯಲಿ ಎಂದೂ ಹಾರೈಸಿದನು. ಅನಂತರ ಅವರು ಉಪದೇವತೆಗಳಾಗಿ ಭಗವಂತನ ಭಕ್ತರಾಗುತ್ತಾರೆ. ಹೀಗೆ ಕುಬೇರನ ಪುತ್ರರು ವೃಕ್ಷಗಳಾದರು.

ತುಂಟತನದಲ್ಲಿ ತೊಡಗಿದ್ದ ಕೃಷ್ಣನನ್ನೊಮ್ಮೆ ಯಶೋದೆಯು ಗಚ್ಚಿನ ಕಾಲಿಗೆ ಕಟ್ಟಿ ಹಾಕಿದಳು. ಶ್ರೀ ಕೃಷ್ಣನಿಗೆ ತನ್ನ ಮುಂದೆ ಅರ್ಜುನ ವೃಕ್ಷಗಳೆಂಬ ಎರಡು ಮರಗಳು ಕಂಡವು. ಅವನು ಕಟ್ಟಿ ಹಾಕಲ್ಪಟ್ಟಿದ್ದರೂ ಅದನ್ನೂ ಎಳೆದುಕೊಂಡು ಮರಗಳತ್ತ ನಡೆದು ಹೋದಾಗ ಮರಗಳೆರಡೂ ಕೆಳಕ್ಕೆ ಬಿದ್ದು ಅವುಗಳಿಂದ ಹೊರಬಂದ ಇಬ್ಬರು ವ್ಯಕ್ತಿಗಳು ಅವನಿಗೆ ಪ್ರಣಾಮಗಳನ್ನು ಸಲ್ಲಿಸಿದರು.

ಹಿರಿಯರೆಲ್ಲ ಈ ದೃಶ್ಯವನ್ನು ಕಂಡು ಚಕಿತರಾದರು. ಶ್ರೀ ಕೃಷ್ಣನ ಸುತ್ತಲಿದ್ದ ಮಕ್ಕಳು ನಡೆದುದನ್ನು ವಿವರಿಸಿದರು. ಅವರೆಂದರು : "ಶ್ರೀ ಕೃಷ್ಣನು ಎರಡು ಮರಗಳ ನಡುವೆ ಬಂದಾಗ ಗಚ್ಚಿನ ಗಾಲಿಯು ತಲೆಕೆಳಗಾಗಿ ಮರಗಳ ಮಧ್ಯೆ ಸಿಕ್ಕಿಕೊಂಡಿತು. ಶ್ರೀ ಕೃಷ್ಣ ಹಗ್ಗವನ್ನು ಎಳೆಯ ತೊಡಗಿದಾಗ ಮರಗಳು ಕೆಳಗೆ ಬಿದ್ದು ಅವುಗಳಿಂದ ಇಬ್ಬರು ಪ್ರಕಾಶಮಯ ಪುರುಷರು ಹೊರಬಂದು ಶ್ರೀ ಕೃಷ್ಣನೊಂದಿಗೆ ಮಾತನಾಡಲು ತೊಡಗಿದರು".

ಮಹಾವನದಲ್ಲಿ ದಾನವರು ಗೊಂದಲವನ್ನು ಉಂಟು ಮಾಡುತ್ತಿದ್ದಾಗ ಹಿರಿಯರು ತಮ್ಮೊಳಗೇ ಇದನ್ನು ಹೇಗೆ ನಿವಾರಿಸಬೇಕೆಂಬ ಬಗ್ಗೆ ಚರ್ಚಿಸುತ್ತಿದ್ದರು. ಹಿರಿಯರು ಆ ಸ್ಥಳವನ್ನು ಬಿಟ್ಟು ಮತ್ತೆಲ್ಲಿಗಾದರೂ ಹೋಗಲು ಒಪ್ಪಿದರು. ಅವರೆಲ್ಲರೂ ಬೃಂದಾವನಕ್ಕೆ ಆಗಮಿಸಿದರು. ಅಲ್ಲಿ ಶ್ರೀ ಕೃಷ್ಣ ಬಲರಾಮರಿಗೆ ಒಂದು ಸಾವಿರ ಹಸುಗಳು ಹಾಗೂ ಕರುಗಳನ್ನು ವಹಿಸಿಕೊಡಲಾಯ್ತು. ಒಂದು ದಿನ ಹಸುಗಳಿಗೆ ಮೇವನ್ನುಣಿಸಿ ಬಾಲಕರು ಸುತ್ತಲೂ ಕೂತಿದ್ದರು. ಅಲ್ಲಿ ಅವರು ದೈತ್ಯಾಕಾರದ ಪ್ರಾಣಿಯ ರೂಪದಲ್ಲಿದ್ದ ಕಂಸನ ಗೆಳೆಯನಾದ ಬಕಾಸುರನು ಶ್ರೀ ಕೃಷ್ಣನತ್ತ ತನ್ನ ಚೂಪಾದ ಕೊಕ್ಕನ್ನು ನುಗ್ಗಿಸಿ ಅವನನ್ನು ನುಂಗಲು ಪ್ರಯತ್ನಿಸಿದನು. ಮಿಕ್ಕ ಮಕ್ಕಳು ಗಲಿಬಿಲಿಗೊಂಡರು. ಬಕಾಸುರನು ಶ್ರೀ ಕೃಷ್ಣನನ್ನು ನುಂಗುತ್ತಿದ್ದಾಗ ರಕ್ಕಸನಿಗೆ ಗಂಟಲು ಉರಿಯುವ ಅನುಭವವಾಯಿತು. ಇದು ಶ್ರೀ ಕೃಷ್ಣನ ಪ್ರಕಾಶದಿಂದ ಉಂಟಾದ್ದು. ಅನಂತರ ಆ ರಕ್ಕಸನು ಶ್ರೀ ಕೃಷ್ಣನನ್ನು ಮೇಲೆಸೆದು ಅವನನ್ನು ತನ್ನ ಕೊಕ್ಕಿನಿಂದ ಚುಚ್ಚಿ ಕೊಲ್ಲಲು ಪ್ರಯತ್ನಿಸಿದಾಗ ಶ್ರೀ ಕೃಷ್ಣನು ಕೊಕ್ಕನ್ನು ಹಿಡಿದು ಪ್ರಾಣಿಯನ್ನು ಕೊಂದನು.

ಶ್ರೀ ಕೃಷ್ಣ ಬಲರಾಮರನ್ನು ಕೊಲ್ಲಲು ಕಂಸನು ಕಳಿಸಿದ ಅನೇಕ ದಾನವರನ್ನು ಶ್ರೀ ಕೃಷ್ಣನು ಕೊಂದನು. ಅವರಲ್ಲೊಬ್ಬ ಅಘಾಸುರ. ಆದರೆ ಅಘಾಸುರನ ಸಂಹಾರವನ್ನು

ಗೋಪಾಲಕರು ಒಂದು ವರ್ಷ ಕಾಲ ಬಹಿರಂಗ ಪಡಿಸಲಿಲ್ಲ. ಪರೀಕ್ಷಿತ ರಾಜನಿಗೆ ಆಶ್ಚರ್ಯವಾಗಿ ಬಾಲಕರು ಪೌಗಂಡ ವಯಸ್ಸನ್ನು ತಲುಪುವವರೆಗೂ ಒಂದು ವರ್ಷ ಕಾಲ ಆ ವಿಷಯವನ್ನು ರಹಸ್ಯವಾಗಿ ಇಟ್ಟದ್ದೇಕೆ ಎಂದು ಕೇಳಿದಾಗ ಶ್ರೀ ಶುಕಾಚಾರ್ಯರು ಹೇಳಿದರು : "ನನ್ನ ಪ್ರೀತಿಯ ದೊರೆಯೇ, ನೀನು ನಿನ್ನ ವಿಚಾರಣೆಯ ಮೂಲಕ ಶ್ರೀ ಕೃಷ್ಣನ ಅತಿಶಯ ವಿಹಾರಗಳನ್ನು ಕುರಿತಾದ ವಿಷಯವನ್ನು ಮತ್ತೂ ಹೊಸದನ್ನಾಗಿ ಸುತ್ತಿದ್ದೀಯೆ". (ಅಘಾಸುರನ ಕೊಲ್ಲುವಿಕೆಯು ಶ್ರೀ ಕೃಷ್ಣ ಪರಮಾತ್ಮ ಮತ್ತು ಇತರರು ಐದು ವರ್ಷದವರಾಗಿದ್ದಾಗ ಸಂಭವಿಸಿತು. ಐದು ವರ್ಷಕ್ಕಿಂತಲೂ ಕೆಳಗಿನ ಮಕ್ಕಳನ್ನು "ಕೌಮರರೆಂದು" ಕರೆಯಲಾಗುತ್ತದೆ. ಐದು ವರ್ಷಗಳ ನಂತರ ಹತ್ತು ವರ್ಷಗಳವರೆಗೆ ಅವರನ್ನು ಪೌಗಂಡರೆನ್ನಲಾಗುತ್ತದೆ).

ದೊರೆಯ ತನಿಖೆಗೆ ಉತ್ತರವಾಗಿ ಶ್ರೀ ಶುಕಾಚಾರ್ಯರು ಹೇಳಿದರು : "ಈಗ ಈ ರಹಸ್ಯವನ್ನು ಗಮನವಿಟ್ಟು ಕೇಳು. ಅಘಾಸುರನ ಬಾಯಿಂದ ತನ್ನ ಸ್ನೇಹಿತರನ್ನು ಉಳಿಸಿ, ರಾಕ್ಷಸನನ್ನು ಕೊಂದ ನಂತರ ಶ್ರೀ ಕೃಷ್ಣ ಪರಮಾತ್ಮನು ತನ್ನ ಗೆಳೆಯರನ್ನು ಯಮುನಾ ತೀರಕ್ಕೆ ಕರೆತಂದು ಅಲ್ಲಿ ಊಟಕ್ಕಾಗಿ ಕುಳಿತನು. ಹಸುಗಳನ್ನು ಹುಲ್ಲನ್ನು ಮೇಯಲು ಬಿಡಲಾಯಿತು. ಹಸುಗಳು ಅರಣ್ಯದೊಳಕ್ಕೆ ಹೋಗಿ ಕಾಣೆಸದಂಥಾದವು. ಗೋಪಾಲಕರು ಧಾವಂತಗೊಂಡು ಗಟ್ಟಿಯಾಗಿ "ಕೃಷ್ಣಾ" ಎಂದು ಕರೆದರು. ಭಗವಂತನು ತನ್ನ ಸ್ನೇಹಿತರಿಗೆ ಊಟವನ್ನು ಮುಂದುವರಿಸುವಂತೆ ತಿಳಿಸಿ ತಾನೇ ಸ್ವತಃ ಹಸುಗಳು ಹಾಗೂ ಕರುಗಳನ್ನು ಪತ್ತೆ ಮಾಡಲು ಹೊರಟನು. ಆದರೆ ಬ್ರಹ್ಮನಿಗೆ ಶ್ರೀ ಕೃಷ್ಣನೇ ಪರಮಾತ್ಮನು ಎಂದು ತಿಳಿಯದೆ ಎಲ್ಲ ಕರುಗಳನ್ನೂ ಕದ್ದು ಅವನ್ನು ಬೇರೆ ಸ್ಥಳಕ್ಕೆ ತೆಗೆದುಕೊಂಡು ಹೊರಟನು. ಭಗವಂತನು ತಾನೇ ಕರುಗಳು, ಹಸುಗಳು ಮತ್ತು ಗೋಪಾಲಕನಾಗಿ, ತಾಯಂದಿರನ್ನು ತೃಪ್ತಿ ಪಡಿಸಿ, ಬ್ರಹ್ಮನಿಗೆ ತನ್ನ ಔನ್ನತ್ಯದ ಬಗ್ಗೆ ತಿಳಿಸುವ ಸಲುವಾಗಿ ಬೃಂದಾವನವನ್ನು ಪ್ರವೇಶಿಸಿದನು. ಶ್ರೀ ಕೃಷ್ಣ ಹೀಗೆ ಒಂದು ವರ್ಷಗಳ ಕಾಲ ಎಲ್ಲ ರೂಪಗಳನ್ನು ತಾನೇ ಧರಿಸಿದನು. ಆದ್ದರಿಂದಲೇ ಇದು ಒಂದು ವರ್ಷ ಕಾಲದವರೆಗೆ ರಹಸ್ಯವಾಗಿತ್ತು. ಇದೇ ರೀತಿ ತಾನೇ ಉನ್ನತನಾಗಿ ವಿಸ್ತರಿಸಿಕೊಳ್ಳುವುದಕ್ಕೆ ಬದಲಾಗಿ ಭಗವಂತನು ಹಸು, ಕರು, ಗೋಪಾಲಕರಾಗಿ ಕಾಣಿಸಿಕೊಂಡನು. ಬ್ರಹ್ಮನಿಗೆ ಇದು ಕಂಡಾಗ ಅಚ್ಚರಿಗೊಂಡ ಅವನು "ಬಾಲಕರು, ಕರುಗಳು, ಹಸುಗಳು ಇವೆಲ್ಲವೂ ಇರುವುದು ಹೇಗೆ ಸಾಧ್ಯ" ಎಂದುಕೊಂಡ. ಶ್ರೀ ಕೃಷ್ಣನಿಗೆ ಬ್ರಹ್ಮನಿಗೆ ವಿಷಯಗಳನ್ನು ಕುರಿತು ಅರ್ಥ ಮಾಡಿಕೊಳ್ಳುವ ಬಗ್ಗೆ ಇದ್ದ ಅಸಾಮರ್ಥ್ಯದ ಬಗ್ಗೆ ಕರುಣೆಯಾಗಿ ತನ್ನ ಯೋಗಮಾಯೆಯನ್ನು ಕಳಸಿದ. (ಭಗವಂತನಲ್ಲಿ ಭಾಗಶಃ ಸಾಕಾರಗೊಳ್ಳುವ ಮತ್ತು ಯಾರಿಗೂ ಭಾಗಶಃ ಕಾಣಲು ಬಿಡದಂಥದ್ದೇ ಯೋಗಮಾಯ). ಯೋಗಮಾಯವು ತೆಗೆಯಲ್ಪಟ್ಟ ಕೂಡಲೇ ಬ್ರಹ್ಮನ ಗೊಂದಲ ಪರಿಹಾರವಾಯಿತು. ಅವನು ಭಗವಂತನ ಪಾದಗಳಿಗೆ ನಮಸ್ಕರಿಸಿದನು.

ಶ್ರೀ ಕೃಷ್ಣನು ತನ್ನ ಅಣ್ಣ ಬಲರಾಮನೊಂದಿಗೆ ಕೌಮಾರನಾಗಿ ಬಾಲ್ಯವನ್ನು ಕಳೆದು ಪೌಗಂಡ ವಯಸ್ಸನ್ನು ತಲಪಿದನು.

ಶ್ರೀ ಕೃಷ್ಣ ಬಲರಾಮರು ಬೃಂದಾವನದಲ್ಲಿ ವಿಹರಿಸುತ್ತಿದ್ದಾಗ ಶ್ರೀ ಕೃಷ್ಣನಿಗೆ ತಾನು ಭಗವಂತನೆಂದು ತೋರಿಸುವ ಮತ್ತೊಂದು ಅವಕಾಶವು ಒದಗಿತು. ಒಮ್ಮೆ ಬಲರಾಮ ಶ್ರೀ ಕೃಷ್ಣರು ಅರಣ್ಯವನ್ನು ಪ್ರವೇಶಿಸಿದರು. ರಕ್ಕಸನಾದ ಧೇನುಕಾಸುರನು ಕತ್ತೆಯ ರೂಪದಲ್ಲಿ ಬಲರಾಮನ ಮೇಲೆ ಬಿದ್ದಾಗ ಶ್ರೀ ಕೃಷ್ಣನು ರಕ್ಕಸನನ್ನು ಕೊಂದು ಎಸೆದನು. ಅನಂತರ ಅರಣ್ಯವು ಇತರರಿಗೆ ತೆರೆಯಲ್ಪಟ್ಟಿತು.

ಕಾಳಿಯ ಸರ್ಪ ಯಮುನಾ ನದಿಯಲ್ಲಿ ಇದ್ದುಕೊಂಡು ಅದರ ನೀರನ್ನೆಲ್ಲ ಕಲುಷಿತಗೊಳಿಸಿದಾಗ ಶ್ರೀ ಕೃಷ್ಣನು ಅವನನ್ನು ಅಲ್ಲಿಂದ ಹೊರಡುವಂತೆ ಮಾಡಿದ ವೃತ್ತಾಂತವನ್ನು ಶ್ರೀ ಶುಕಾಚಾರ್ಯರು ತಿಳಿಸಿದರು. ಯಮುನಾ ನದಿಯ ಸಮೀಪದಲ್ಲಿನ ಸರೋವರದಲ್ಲಿ ಕಾಳಿಯನೆಂಬ ಕಾಳಿಂಗ ಸರ್ಪವಿದ್ದು ಅವನು ಸದಾ ವಿಷವನ್ನು ಉಗುಳುತ್ತಿದ್ದರಿಂದ ನೀರೆಲ್ಲ ಕಲ್ಮಶಗೊಂಡು ಸುತ್ತಲಿನ ಹುಲ್ಲು ಮರಗಳು ಒಣಗಿದವು. ಸರ್ಪವನ್ನು ಶಿಕ್ಷಿಸುವ ಸಲುವಾಗಿ ಶ್ರೀ ಕೃಷ್ಣನು ನೀರಿಗೆ ಧುಮುಕಿದಾಗ ಬೃಂದಾವನದ ಸಮಸ್ತ ಜನವೂ ಭಯಭೀತರಾಗಿ ನಿಂತು ನೋಡಿದರು. ಕಾಳಿಯನು ಶ್ರೀ ಕೃಷ್ಣನನ್ನು ತನ್ನ ಹಿಡಿತಕ್ಕೆ ಸಿಕ್ಕಿಸಿಕೊಂಡಾಗ ಶ್ರೀ ಕೃಷ್ಣನು ತನ್ನ ಶರೀರವನ್ನು ಹಿಗ್ಗಿಸಿಕೊಳ್ಳುತ್ತಲೇ ಹೋದಾಗ ಸರ್ಪವು ಅವನನ್ನು ಬಿಟ್ಟುಕೊಟ್ಟಾಗ ಶ್ರೀ ಕೃಷ್ಣನು ಸರ್ಪದ ಮೇಲೆ ಹಾರಿ, ಹೆಡೆಯನ್ನು ಆದುಮಿ ಅದರ ಮೇಲೆ ಕೂತನು. ಕೃಷ್ಣನು ಭಗವಂತನೆಂದು ಅರಿತುಕೊಂಡ ಕಾಳಿಯು ಅವನಿಗೆ ಶರಣಾಗತನಾದಾಗ ಪರಮಾತ್ಮನು ಅವನ ಹಾಗೂ ಅವನ ಹೆಂಡತಿಯರನ್ನು ಕಂಡು ಮುದಗೊಂಡು ಹೇಳಿದನು : "ನೀನು ಇಲ್ಲಿಗೆ ನಿನ್ನನ್ನು ಬಯಸಿದ ಗರುಡನಿಗೆ ಹೆದರಿ ಬಂದೆ. ಈಗ ನನ್ನ ಪದ್ಮಪಾದದಿಂದ ನಿನ್ನ ತಲೆಯ ಮೇಲಾಗಿರುವ ಗುರುತನ್ನು ಕಂಡಾಗ ಗರುಡ ನಿನ್ನನ್ನು ಹಿಂಸಿಸಲು ಬರುವುದಿಲ್ಲ". ಭಗವಂತನಿಗೆ ವಿಧೇಯನಾದ ಕಾಳಿಯು ಆ ಸರೋವರವನ್ನು ತ್ಯಜಿಸಿದನು.

ಇದನ್ನು ಕೇಳಿದ ಪರೀಕ್ಷಿತ ರಾಜನು ಕಾಳಿಯು ಈ ಸುಂದರ ಸ್ಥಳವನ್ನು ಬಿಟ್ಟಿದ್ದೇಕೆ ಹಾಗೂ ಗರುಡನು ಅವನ ಬಗ್ಗೆ ಏಕೆ ಅಷ್ಟೊಂದು ಶತ್ರುತ್ವವನ್ನು ಹೊಂದಿದ್ದನು ಎಂಬುದಾಗಿ ವಿಚಾರಿಸಿದ. ಅದಕ್ಕೆ ಶ್ರೀ ಶುಕಾಚಾರ್ಯರು ನಾಲಾಲಯವೆಂಬ ದ್ವೀಪವು ಸರ್ಪಗಳಿಂದ ಕೂಡಿದ್ದು ಕಾಳಿಯು ಮುಖ್ಯ ಸರ್ಪಗಳಲ್ಲಿ ಒಬ್ಬನಾಗಿದ್ದ ಎಂಬುದಾಗಿ ತಿಳಿಸಿದರು. ಸರ್ಪಗಳನ್ನು ಕೊಲ್ಲಲು ಗರುಡನು ಇಲ್ಲಿಗೆ ಬರುವ ವಾಡಿಕೆಯಿತ್ತು. ಅವನು ಕೆಲವನ್ನು ಕೊಂದು ಮತ್ತೆ ಕೆಲವನ್ನು ಕೇವಲ ಸಾಯಿಸುತ್ತಿದ್ದ. ಸರ್ಪಗಳು ದಿಗಿಲುಗೊಂಡು, ಅವುಗಳ ಮುಖಂಡನಾದ ವಾಸುಕಿಯು ಬ್ರಹ್ಮನನ್ನು ಪ್ರಾರ್ಥಿಸಿದ. ಆಗ ಮಾಡಿಕೊಳ್ಳಲಾದ ಒಪ್ಪಂದದ ಪ್ರಕಾರ ಗರುಡನು ಪ್ರತಿ ಅರ್ಧ ಚಂದ್ರದ ದಿವಸ ಅಲ್ಲಿಗೆ ಆಗಮಿಸಿದಾಗ ಸರ್ಪ ಕುಟುಂಬವು ಗರುಡನಿಗೆ ಒಂದು ಸರ್ಪವನ್ನು ಅರ್ಪಿಸಬೇಕೆಂಬ ಶರತ್ತಾಯಿತು. ಕಾಳಿಯನಿಗೆ ಅಹಂಕಾರವುಂಟಾಗಿ ಗರುಡನಿಗೆ ಏಕೆ ವಿಶೇಷ ಮನ್ನಣೆ ನೀಡಬೇಕೆಂದು ಪ್ರಶ್ನಿಸಿ, ಅವನಿಗೆ ಮೀಸಲಾದ ಸರ್ಪಗಳನ್ನು ತಾನೇ ತಿನ್ನುತ್ತೇನೆಂದ. ಕಾಳಿಯ ಮತ್ತು ಗರುಡರ ಮಧ್ಯೆ ಕದನವಾಯಿತು. ಕಾಳಿಯ ಯಮುನಾ ನದಿಯನ್ನು ಬಿಟ್ಟು ಇಲ್ಲಿಗೆ ಆಶ್ರಯಕ್ಕಾಗಿ ಬಂದನು. ಗರುಡನು ಮೀನನ್ನು ತಿನ್ನಲು ಯಮುನಾ ನದಿಗೆ ಬರುತ್ತಿದ್ದ.

ಇಲ್ಲಿ ಧ್ಯಾನಕ್ಕೆ ಕೂರುತ್ತಿದ್ದ ಸಭಾರಿಯೆಂಬ ಮುನಿಯು ಇಲ್ಲಿಗೆ ಬಂದು ಶಾಂತಿಯನ್ನು ಕದಡಬಾರದೆಂದು ಗರುಡನಿಗೆ ತಿಳಿಸಿದ. ಆದರೆ ಒಂದು ದಿನ ಗರುಡನು ದೊಡ್ಡದೊಂದು ಮೀನನ್ನು ತೆಗೆದುಕೊಂಡು ಹೊರಟನು. ಸಭಾರಿ ಮುನಿಯು ಗರುಡನಿಗೆ ಶಾಪವನ್ನಿತ್ತನು "ಮತ್ತೊಮ್ಮೆ ಎಂದಾದರೂ ಗರುಡನು ಇಲ್ಲಿಗೆ ಮೀನಿಗಾಗೇನಾದರೂ ಬಂದರೆ, ನಾನು ನನ್ನೆಲ್ಲ ಶಕ್ತಿಯನ್ನು ಒಟ್ಟುಗೂಡಿಸಕೊಂಡು ಹೇಳುತ್ತೇನೆ, ಅವನು ಕೂಡಲೇ ಕೊಲ್ಲಲ್ಪಡಲಿ" ಎಂದು. ಈ ಶಾಪವು ಕಾಳಿಯನಿಗೆ ತಿಳಿದಿದ್ದರಿಂದ ಅವನು ಯಮುನೆಯನ್ನು ತನ್ನ ಮನೆಯನ್ನಾಗಿಸಿಕೊಂಡಿದ್ದನು. ಆದರೆ ಸಭಾರಿ ಮುನಿಯು ವಿಷ್ಣುವಿನ ವಾಹನನಾದ ಗರುಡನನ್ನು ಶಪಿಸಿ ತಪ್ಪು ಮಾಡಿದನು. ಇದರ ಪರಿಣಾಮವಾಗಿ ಅವನು ತನ್ನ ಯೋಗ ಶ್ರೇಷ್ಠತೆಯಿಂದ ಕೆಳಗೆ ಬಿದ್ದು ಗೃಹಸ್ಥನಾದನು.

ಕಾಳಿಯನನ್ನು ಕೊಂದು ನದಿಯಿಂದ ಹೊರಬಂದ ಶ್ರೀ ಕೃಷ್ಣನನ್ನು ದಂಡೆಯಲ್ಲಿ ನೆರೆದವರೆಲ್ಲ ಕೊಂಡಾಡಿದರು.

ಶ್ರೀ ಕೃಷ್ಣ ಪರಮಾತ್ಮನ ವಿಹಾರಗಳಲ್ಲಿ ಪ್ರಲಂಬಾಸುರನ ಹತ್ಯೆ ಹಾಗೂ ಅರಣ್ಯದ ಅಗ್ನಿಯ ನುಂಗುವಿಕೆ ಇವು ಮುಖ್ಯವಾದವು.

ಪರಮಾತ್ಮನ ವಿವಿಧ ಲೀಲೆಗಳು ಹಾಗೂ ಅವನ ವೇಣುವಾದನ ಬೃಂದಾವನದ ಗೋಪಿಯರನ್ನು ಆಕರ್ಷಿಸಿದವು. ಗೋಪಿಯರು ತಮ್ಮೊಳಗೇ ಮಾತನಾಡಿಕೊಂಡರು: "ಪ್ರೀತಿಯ ಸ್ನೇಹಿತರೇ, ಈ ಜಗತ್ತು ದೇವಕಿಯ ಮಗನಾದವನ ಹೆಜ್ಜೆ ಗುರುತುಗಳಿಂದ ವೈಭವೀಕರಿಸಲ್ಪಟ್ಟಿರುವುದರಿಂದ ಬೃಂದಾವನವೇ ಈ ಇಡೀ ಜಗತ್ತಿನ ವೈಭವವನ್ನು ಸಾರುತ್ತಿದೆ. ಅಲ್ಲದೆ ಗೋವಿಂದನು ಕೊಳಲು ಬಾರಿಸ ತೊಡಗಿದಾಗ ನವಿಲುಗಳು ಕುಣಿದಾಡುತ್ತವೆ. ಗೋವರ್ಧನ ಗಿರಿ ಅಥವಾ ಕಣಿವೆಯಲ್ಲಿನ ಪ್ರಾಣಿಗಳು, ವೃಕ್ಷಗಳು ಹಾಗೂ ಗಿಡಗಳು ನವಿಲುಗಳ ನರ್ತನವನ್ನು ನೋಡುತ್ತಿದ್ದಾಗ, ನಿಶ್ಚಲವಾಗಿ ನಿಂತು ಕೊಳಲಿನ ಅತಿಶಯ ಮಾಧುರ್ಯವನ್ನು ಸಂತಸದಿಂದ ಅನುಭವಿಸುತ್ತಾರೆ". ಗೋಪಿಯರು ಶ್ರೀ ಕೃಷ್ಣ ಬಲರಾಮರ ಆಹ್ಲಾದತೆ, ಸೌಂದರ್ಯ, ಚಟುವಟಿಕೆಗಳನ್ನು ಕುರಿತು ತಮ್ಮೊಳಗೇ ಮಾತನಾಡಿಕೊಳ್ಳುತ್ತಿದ್ದರು.

ವೈದಿಕ ನಾಗರಿಕತೆಯ ಪ್ರಕಾರ ಹತ್ತರಿಂದ ಹದಿನಾಲ್ಕು ವಯಸ್ಸಿನೊಳಗಿದ ಕನ್ಯೆಯರು ಒಳ್ಳೆಯ ಪತಿಯನ್ನು ಪಡೆಯಲು ಮಹೇಶ್ವರ ಅಥವಾ ದುರ್ಗಾಮಾತೆಯನ್ನು ಪೂಜಿಸಬೇಕು. ಪ್ರತಿ ದಿನವೂ ಗೋಪಿಯರು ಸ್ನಾನಕ್ಕಾಗಿ ಯಮುನಾ ತೀರಕ್ಕೆ, ಕೈ ಕೈ ಹಿಡಿದು, ಶ್ರೀ ಕೃಷ್ಣನ ಲೀಲೆಗಳನ್ನು ಗಟ್ಟಿಯಾಗಿ ಹಾಡುತ್ತಾ ನಡೆಯುತ್ತಿದ್ದರು. ಶ್ರೀ ಕೃಷ್ಣನ ಮತ್ತೊಂದು ಹೆಸರು ಯೋಗೀಶ್ವರ ಅಥವಾ ಅತೀಂದ್ರಿಯ ಶಕ್ತಿಗಳ ಒಡೆಯನು. ಗೋಪಿಯರು ಯಮುನಾ ತೀರದಲ್ಲಿ ಶ್ರೀ ಕೃಷ್ಣನ ಲೀಲೆಗಳನ್ನು ಕುರಿತು ಹಾಡುತ್ತಿದ್ದಾಗ ದಂಡೆಯಲ್ಲಿ ಕಾಣಿಸಿಕೊಂಡ ಶ್ರೀ ಕೃಷ್ಣನು ನೀರಿನಲ್ಲಿ ಸ್ನಾನಕ್ಕಿಳಿದ ಗೋಪಿಯರಿಗೆ ತಮ್ಮ ಉಡುಪುಗಳನ್ನು ತೆಗೆದುಕೊಳ್ಳುವಂತೆ ತಿಳಿಸುತ್ತಿದ್ದನು. ಅವರಲ್ಲಿ ಪ್ರತಿಯೊಬ್ಬರ ಸಂಪೂರ್ಣ

ಸೌಂದರ್ಯವನ್ನು ಅವನು ಆಸ್ವಾದಿಸಲು ಬಯಸುತ್ತಿದ್ದುದರಿಂದ ಅವರು ತತ್‌ಕ್ಷಣವೇ ಅವನ ಬಳಿಗೆ ಹೋಗಬೇಕೆಂದು ಅವನು ಅಪೇಕ್ಷಿಸುತ್ತಿದ್ದ. ಶ್ರೀ ಕೃಷ್ಣನ ಮಾತುಗಳನ್ನು ಆಲಿಸಲು ಗೋಪಿಯರಿಗೆ ಆನಂದವಾಗುತ್ತಿದ್ದರೂ ತಾವು ನಗ್ನರಾಗಿದ್ದುದರಿಂದ ಅವರು ಅವನ ಬಳಿಗೆ ಹೋಗುವ ಧೈರ್ಯ ಮಾಡಲಿಲ್ಲ. ಪರಿಹಾಸ್ಯ ಸಾಕೆಂದು ಅವರು ಶ್ರೀ ಕೃಷ್ಣನನ್ನು ಬೇಡಿದರೂ, ಕೊನೆಗೂ ತಮ್ಮ ವಸ್ತ್ರಗಳಿಗಾಗಿ ಅವನ ಬಳಿಗೆ ಹೋದರು. ಶ್ರೀ ಕೃಷ್ಣನು ಅವರಿಗೆ ತಿಳಿಸಿದನು: "ನನ್ನ ಪ್ರೀತಿಯ ಬಾಲಕಿಯರೇ, ಯಮುನಾ ನದಿಗೆ ನೀವು ಬತ್ತಲೆಯಾಗಿ ಹೋಗುವ ಮೂಲಕ ದೊಡ್ಡದೊಂದು ತಪ್ಪನ್ನು ಮಾಡುತ್ತಿದ್ದೀರಿ. ಇದರಿಂದಾಗಿ ಯಮುನಾ ನದಿಯ ಒಡೆಯನಾದ ವರುಣ ದೇವನು ನಿಮ್ಮ ಬಗ್ಗೆ ಅಸಂತುಷ್ಟಗೊಂಡಿದ್ದಾನೆ. ಆದ್ದರಿಂದ ನೀವು ಕೈಮುಗಿದು ಅದಕ್ಕೆ ನಿಮ್ಮ ಹಣೆಯನ್ನು ಹಚ್ಚಿ ಈ ಅಪರಾಧವನ್ನು ಮನ್ನಿಸಬೇಕೆಂದು ವರುಣ ದೇವನಿಗೆ ವಂದಿಸಿ".

ಒಮ್ಮೆ ಗೋಪಾಲಕರು ಮಳೆ ತರುವ ಹೊಣೆಗಾರನಾಗಿದ್ದ ಇಂದ್ರನನ್ನು ಸಂಪ್ರೀತಗೊಳಿಸಲು ಯಜ್ಞವೊಂದನ್ನು ಸಿದ್ಧ ಮಾಡಿದಾಗ, ಶ್ರೀ ಕೃಷ್ಣ ಬಲರಾಮರು ಅದನ್ನು ನಿಲ್ಲಿಸಲು ಬಯಸಿದರು. ಏಕೆಂದರೆ ಒಮ್ಮೆ ಯಾರೇ ಆದರೂ ಶ್ರೀ ಕೃಷ್ಣನ ಆರಾಧನೆಯಲ್ಲಿ ತೊಡಗಿದ್ದರೆ ಇನ್ನಿತರ ಉಪದೇವತೆಗಳಿಗೆ ಹವಿಸ್ಸನ್ನು ಅರ್ಪಿಸುವ ಅಗತ್ಯವಿಲ್ಲ. ಆದರೆ ಗೌರವದ ದೃಷ್ಟಿಯಿಂದ ಶ್ರೀ ಕೃಷ್ಣನು ತನ್ನ ತಂದೆಯನ್ನು ಕೇಳಿದನು "ನನ್ನ ಪ್ರಿಯ ತಂದೆಯೇ, ಯಜ್ಞಕ್ಕಾಗಿ ಇಂಥ ಏರ್ಪಾಟುಗಳು ಏತಕ್ಕಾಗಿ? ಅಂಥ ಯಜ್ಞದ ಪರಿಣಾಮವೇನು ಹಾಗೂ ಅದು ಯಾರನ್ನು ಉದ್ದೇಶಿಸಿ ನಡೆಸಲ್ಪಡುತ್ತಿದೆ ? ಅದನ್ನು ಹೇಗೆ ನಡೆಸಲಾಗುತ್ತದೆ?" ಅದರ ವಿಧಾನ, ಉದ್ದೇಶಗಳು ಹಾಗೂ ಅದು ವೈದಿಕ ಸೂತ್ರಗಳಿಗೆ ಅನುಗುಣವಾಗಿ ನಡೆಯುತ್ತವೆಯೇ ಎಂಬುದನ್ನು ಶ್ರೀ ಕೃಷ್ಣನು ತಿಳಿಯ ಬಯಸಿದನು. ಅದಕ್ಕೆ ನಂದ ಮಹಾರಾಜನು ಇದು ಸಾಂಪ್ರದಾಯಿಕವಾಗಿದ್ದು, ಮೋಡಗಳು ಇಂದ್ರನ ಪ್ರತಿನಿಧಿಗಳಾಗಿದ್ದು ಅವನ ಕರುಣೆಯಿಂದ ಅದು ಸಂಭವಿಸುವುದರಿಂದ ಯಜ್ಞವು ಅವನನ್ನು ಉದ್ದೇಶಿಸಿದೆ ಎಂದನು.

ಶ್ರೀ ಕೃಷ್ಣ ಪರಮಾತ್ಮನು ಯಜ್ಞವನ್ನು ನಿಲ್ಲಿಸಲು ಆದೇಶಿಸಿದನು. ಇದಕ್ಕೆ ಕಾರಣ ಎರಡು ಬಗೆಯವು. ಮೊದಲನೆಯದು, ಯಾವುದೇ ಐಹಿಕ ಸಾಧನೆಗಾಗಿ ಉಪದೇವತೆಗಳನ್ನು ಆರಾಧಿಸುವ ಅವಶ್ಯಕತೆ ಇಲ್ಲದಿರುವುದು; ಉಪದೇವತೆಗಳನ್ನು ಪೂಜಿಸುವುದರಿಂದ ಲಭಿಸುವ ಫಲಗಳು ತಾತ್ಕಾಲಿಕವಾಗಿದ್ದು ಹೆಚ್ಚು ಬುದ್ಧಿಯಿಲ್ಲದವರು ಮಾತ್ರ ತಾತ್ಕಾಲಿಕ ಫಲಗಳಿಗೆ ಆಶೆಯನ್ನು ಪಡುವುದು. ಅಲ್ಲದೆ ಅದನ್ನು ನೀಡುವವನೂ ಭಗವಂತನು ಮಾತ್ರ.

ಪರಮಾತ್ಮನು ಹೇಳಿದನು: ವ್ಯಕ್ತಗೊಂಡ ವಿಶ್ವವು ಒಳಿತು, ಕಾಮ ಮತ್ತು ಮೌಢ್ಯ ಎಂಬ ಮೂರು ಐಹಿಕ ಪ್ರಕೃತಿಯ ವಿಭಾಗಗಳ ಪ್ರಭಾವದಿಂದಾಗಿ ನಡೆಯಲ್ಪಡುತ್ತಿದೆ. ಈ ಮೂರು ವಿಧಾನಗಳು ಸೃಷ್ಟಿ, ಸಲಹುವಿಕೆ ಮತ್ತು ನಿರ್ನಾಮಕ್ಕೆ ಕಾರಣಗಳು. ಮೋಡವು ಕಾಮದ ವಿಧಾನದ ಕ್ರಿಯೆಯ ಮೂಲಕ ಸಂಭವಿಸುತ್ತದೆ;

ಆದ್ದರಿಂದ ಕಾಮದ ವಿಧಾನವೇ ಮಳೆಯನ್ನು ಉಂಟು ಮಾಡುವಂಥದ್ದು. ಮಳೆಯ ನಂತರ ಜೀವಿಗಳು ಫಲವನ್ನು ಪಡೆಯುತ್ತಾರೆ - ಅದೆಂದರೆ ಕೃಷಿ ಕೆಲಸದಲ್ಲಿ ಯಶಸ್ಸು. ಆದರೆ ಈ ಕೆಲಸದಲ್ಲಿ ಇಂದ್ರನ ಪಾತ್ರವೇನಿದೆ? ನೀವು ಇಂದ್ರನನ್ನು ಮುದಗೊಳಿಸದಿದ್ದರೂ ಅವನೇನು ಮಾಡಬಲ್ಲ? ನಾವು ಇಂದ್ರನಿಂದ ಯಾವ ವಿಶೇಷ ಪ್ರಯೋಜನವನ್ನೂ ಪಡೆಯಲಾರೆವು. ಅವನು ನೀರಿನ ಅವಶ್ಯಕತೆಯೇ ಇಲ್ಲದ ಸಾಗರದ ಮೇಲೂ ನೀರನ್ನು ಸುರಿಸುತ್ತಾನೆ. ಆದ್ದರಿಂದ ಸಾಗರದ ಅಥವಾ ಭೂಮಿಯ ಮೇಲೆ ನೀರು ಸುರಿಯುವುದು ಅವನನ್ನು ಆರಾಧಿಸುವುದನ್ನು ಅವಲಂಬಿಸಿಲ್ಲ. ನಾವು ಬೇರೆ ಸ್ಥಳಕ್ಕೆ ಹೋಗುವ ಅಗತ್ಯವಿಲ್ಲ. ನಾವು ಬೃಂದಾವನದ ಕಾನನದಲ್ಲಿ ವಾಸವಾಗಿರುವುದರಲ್ಲೇ ತೃಪ್ತಿಯಿಂದಿದ್ದೇವೆ. ನಮ್ಮ ನಿರ್ದಿಷ್ಟ ಸಂಬಂಧ ಗೋವರ್ಧನಗಿರಿಯೊಂದಿಗೆ ಹಾಗೂ ಬೃಂದಾವನದ ಅರಣ್ಯದೊಂದಿಗೆ ಮಾತ್ರವಿದೆ. ಆದ್ದರಿಂದ, ನನ್ನ ಪ್ರೀತಿಯ ತಂದೆಯೇ, ನಾವು ಸ್ಥಳೀಯ ಬ್ರಾಹ್ಮಣರು ಮತ್ತು ಗೋವರ್ಧನ ಗಿರಿಯನ್ನು ತೃಪ್ತಿಪಡಿಸುವಂಥ ಯಜ್ಞವನ್ನು ಮಾಡಬೇಕಲ್ಲದೆ ಇಂದ್ರನನ್ನು ಮುದುಗೊಳಿಸುವಂಥದ್ದಲ್ಲ".

ಯಜ್ಞದ ಆಚರಣೆಯನ್ನು ಕುರಿತು ಭಗವಂತನು ಹೇಳಿದನು : "ಯಜ್ಞಕ್ಕಾಗಿ ಸಂಗ್ರಹಿಸಲಾದ ಎಲ್ಲ ವಿಧದ ಧಾನ್ಯಗಳು ಹಾಗೂ ತುಪ್ಪದಿಂದ ರುಚಿಕರವಾದ ಭಕ್ಷ್ಯಗಳನ್ನು ತಯಾರಿಸಿ. ಸಿಹಿ ಅನ್ನ, ಲಡ್ಡುಗಳ ಹಾಲಿನ ಖಾದ್ಯಗಳನ್ನು ತಯಾರಿಸಿ ವೈದಿಕ ಮಂತ್ರಗಳನ್ನು ಪಠಿಸಬಲ್ಲ ಬ್ರಾಹ್ಮಣರನ್ನು ಆಹ್ವಾನಿಸಿ ಅಗ್ನಿಗೆ ಹವಿಸ್ಸನ್ನು ಅರ್ಪಿಸಿ. ಭ್ರಾಹ್ಮಣರಿಗೆ ದಾನವಾಗಿ ಎಲ್ಲ ಬಗೆಯ ಧಾನ್ಯಗಳನ್ನೂ ನೀಡಬೇಕು. ಅನಂತರ ಎಲ್ಲ ಗೋವುಗಳಿಗೂ ಚೆನ್ನಾಗಿ ಅಲಂಕರಿಸಿ ಅವಕ್ಕೆ ಮೇವನ್ನು ನೀಡಿ. ಇದಾದ ನಂತರ ಬ್ರಾಹ್ಮಣರಿಗೆ ದಕ್ಷಿಣೆಯನ್ನು ನೀಡಿ. ಹಸುಗಳಿಗೆ ಚೆನ್ನಾದ ಹುಲ್ಲನ್ನು ನೀಡಿದ ನಂತರ ಗೋವರ್ಧನ ಪೂಜೆಯೆಂಬ ಯಜ್ಞವು ಕೂಡಲೇ ಪ್ರಾರಂಭವಾಗಬೇಕು. ಈ ಯಜ್ಞವು ನನಗೆ ತುಂಬಾ ತೃಪ್ತಿಯನ್ನು ಉಂಟು ಮಾಡುವಂಥದ್ದು". ಇಂದ್ರಯಜ್ಞಕ್ಕೆ ಬದಲಾಗಿ ಗೋವರ್ಧನ ಪೂಜೆಯನ್ನು ವ್ಯವಸ್ಥೆಗೊಳಿಸಲಾಯಿತು.

ಯಜ್ಞವು ನಿಂತ ಸಂಗತಿಯನ್ನು ತಿಳಿದ ಇಂದ್ರನು ಕೋಪಾವಿಷ್ಟನಾಗಿ "ಸಂವರ್ತಕ" ನೆಂಬ ಮೇಘವನ್ನು ಬರಮಾಡಿಕೊಂಡು ಅದಕ್ಕೆ ಬೃಂದಾವನಕ್ಕೆ ತೆರಳಿ ಇಡೀ ಸ್ಥಳವನ್ನು ಕೊಚ್ಚಿ ಹಾಕಬೇಕೆಂದು ತಿಳಿಸಿದನು. "ಸಂವರ್ತಕ ಮೇಘವು ಸಾಮಾನ್ಯವಾಗಿ ನಿರ್ನಾಮದ ಸಂದರ್ಭದಲ್ಲಿ ಮಾತ್ರ ಕರೆಯಲ್ಪಡುವಂಥದ್ದು". ಬೃಂದಾವನದ ಮೇಲೆ ಎಲ್ಲ ವಿಧ್ವಂಸಕ ಮೇಘಗಳೂ ಗೋಚರಿಸಿ ಭೀಕರ ಮಳೆಯನ್ನು ಸುರಿಸಲು ತೊಡಗಿದವು. ನಿವಾಸಿಗಳು ಹೆದರಿ ಶ್ರೀ ಕೃಷ್ಣನಿಗೆ ಪ್ರಾರ್ಥನೆಯನ್ನು ಸಲ್ಲಿಸಿದಾಗ ಪರಮಾತ್ಮನು ಗೋವರ್ಧನ ಗಿರಿಯನ್ನು ತನ್ನ ಎಡಗೈನ ಕಿರು ಬೆರಳಿನಿಂದ ಮೇಲೆತ್ತಿ ಪರ್ವತವನ್ನು ಮೇಲೆತ್ತುವಂಥ ತನ್ನ ಅತಿಶಯ ವಿಹಾರವನ್ನು ಪ್ರದರ್ಶಿಸಿದನು. ಅವನು ತನ್ನ ಭಕ್ತಾದಿಗಳನ್ನು ಉದ್ದೇಶಿಸಿ ಹೇಳಿದನು: "ನಾನೀಗ ಮೇಲೆತ್ತಿರುವ ಗೋವರ್ಧನ ಗಿರಿಯ ಕೆಳಗೆ ನೀವು ನಿರ್ಯೋಚನೆಯಿಂದ ಆಶ್ರಯವನ್ನು ಪಡೆಯಬಹುದು. ಗಿರಿಯ ಬಗ್ಗೆ ಭಯಪಡದಿರಿ. ನನ್ನ ಬೆರಳಿನಿಂದ ಅದು ಜಾರುವುದಿಲ್ಲ. ನೀವು ಭಾರಿ ಮಳೆ ಹಾಗೂ ಪ್ರಬಲ

ಬಿರುಗಾಳಿಯಿಂದ ತುಂಬಾ ಭೀತಿಗೊಂಡಿರುವುದರಿಂದ ನಾನು ಗಿರಿಯನ್ನು ಮೇಲೆತ್ತಿದ್ದು ಅದು ನಿಮ್ಮನ್ನು ಕೊಡೆಯೊಂದರಂತೆ ರಕ್ಷಿಸುತ್ತದೆ. ಇದೊಂದೇ ನಿಮ್ಮನ್ನು ಸದ್ಯದ ಸಂಕಷ್ಟದಿಂದ ಪಾರು ಮಾಡಬಲ್ಲ ಮಾರ್ಗ. ಈ ಪರ್ವತದ ಕೆಳಗೆ ನೀವು ನಿಮ್ಮ ಪ್ರಾಣಿಗಳೊಂದಿಗೆ ನಿಶ್ಚಿಂತರಾಗಿರಿ".

ಬೃಂದಾವನದ ನಿವಾಸಿಗಳು ಹಾಗೂ ಹಸುಗಳು ಒಂದು ವಾರ ಆ ಗಿರಿಯ ಆಶ್ರಯದಲ್ಲಿ ಉಳಿದು, ಶ್ರೀ ಕೃಷ್ಣನು ಅದನ್ನು ಎತ್ತಿ ಹಿಡಿದಿರುವುದರ ಬಗ್ಗೆ ಆಶ್ಚರ್ಯಚಕಿತರಾದರು. ಇದನ್ನು ಕಂಡ ಇಂದ್ರನು ಸ್ತಂಭೀಭೂತನಾಗಿ ಮೋಡಗಳನ್ನು ಹಿಂದಕ್ಕೆ ಕರೆದಾಗ ನಿವಾಸಿಗಳು ತಮ್ಮ ಮನೆಗಳಿಗೆ ಹಿಂತಿರುಗಿದರು.

ಬೃಂದಾವನದ ನಿವಾಸಿಗಳು ಭಗವಂತನ ವೈಭವಗಳನ್ನು ಕುರಿತು ತಮ್ಮ ತಮ್ಮಲ್ಲೇ ಚರ್ಚಿಸಿದರು. ಹಿಮ್ಮೆಟ್ಟಿದ ಇಂದ್ರನು ಶ್ರೀ ಕೃಷ್ಣನ ಮೇಲೆ ತಾನು ಎಸಗಿದ ಅಪಚಾರಕ್ಕಾಗಿ ಅವನ ಕ್ಷಮೆಯನ್ನು ಯಾಚಿಸಿದನು. ಭಗವಂತನು ಇಂದ್ರನಿಗೆ ಹೇಳಿದನು : "ನಾನು ನಿನ್ನ ಯಜ್ಞವನ್ನು ನಿಲ್ಲಿಸಿರುವುದಕ್ಕೆ ಕಾರಣ ನನ್ನ ಕರುಣೆಯನ್ನು ತೋರಿ ನಾನು ನಿನ್ನ ಶಾಶ್ವತ ಒಡೆಯನೆಂಬುದನ್ನು ನಿನ್ನ ಸ್ಮರಣೆಗೆ ಮತ್ತೆ ತರುವುದಾಗಿದೆ. ನಾನು ನಿನಗೆ ಮಾತ್ರ ಒಡೆಯನಲ್ಲದೆ, ಇನ್ನಿತರ ಉಪದೇವತೆಗಳಿಗೂ ಒಡೆಯನು. ನಿನ್ನ ಐಹಿಕ ಸಮೃದ್ಧಿಯೆಲ್ಲವೂ ನನ್ನ ಕೃಪೆಯಿಂದ ಪಡೆದದ್ದು ಎಂಬುದನ್ನು ನೀನು ಸದಾ ನೆನಪಿನಲ್ಲಿ ಇಡಬೇಕು. ಪ್ರತಿಯೊಬ್ಬನೂ ಸದಾಕಾಲವೂ ನಾನು ಪರಮಾತ್ಮನೆಂಬುದನ್ನು ಸ್ಮರಿಸಬೇಕು. ನಾನು ಯಾರಿಗಾದರೂ ನನ್ನ ಕೃಪೆಯನ್ನು ತೋರಬಲ್ಲೆ. ಯಾರಿಗಾದರೂ ಛೀಮಾರಿ ಹಾಕಬಲ್ಲೆ. ಏಕೆಂದರೆ ಯಾರೂ ನನಗಿಂತಲೂ ಶ್ರೇಷ್ಠರಲ್ಲ. ಯಾರಾದರೂ ಸುಳ್ಳು ಅಹಂಮಿಕೆಯನ್ನು ಹೊಂದಿದವರಾಗಿ ನನಗೆ ಕಂಡರೆ, ನನ್ನ ಕೃಪೆಯನ್ನು ತೋರಿಸುವ ಸಲುವಾಗಿಯೇ, ನಾನು ಅವರೆಲ್ಲ ಸಮೃದ್ಧಿಯನ್ನೂ ಹಿಂತೆಗೆದುಕೊಳ್ಳುತ್ತೇನೆ".

## ರಾಸಲೀಲೆ

ಶ್ರೀ ಶುಕಾಚಾರ್ಯರು ಪರೀಕ್ಷಿತ ರಾಜನಿಗೆ ಬೃಂದಾವನದಲ್ಲಿ ಗೋಪಿಯರೊಂದಿಗೆ ಶ್ರೀ ಕೃಷ್ಣ ಪರಮಾತ್ಮನ ರಾಸಲೀಲೆಯನ್ನು ಕುರಿತು ಹೇಳಿದರು. ರಾಸಲೀಲೆಯು ಶರದೃತುವಿನ ಪೂರ್ಣಿಮೆಯಂದು ನಡೆಯಿತೆಂದು ಅವರು ಹೇಳಿದರು. ಶ್ರೀ ಕೃಷ್ಣನು ತನ್ನ ಎಳನೆಯ ವಯಸ್ಸಿನಲ್ಲಿ ಗೋವರ್ಧನ ಗಿರಿಯನ್ನೆತ್ತಿ ರಾಸಲೀಲೆಯು ಅವನು ಎಂಟು ವರ್ಷದವನಿದ್ದಾಗ ನಡೆಯಿತು. ನಾಟ್ಯ ಮಂದಿರದ ನಟನೊಬ್ಬನು ಅನೇಕ ನರ್ತಕಿಯರೊಂದಿಗೆ ನರ್ತಿಸಿದಾಗ ಅಂಥ ಸಮೂಹ ನೃತ್ಯವನ್ನು ರಾಸಲೀಲೆಯೆಂದು ಕರೆಯಲಾಗುತ್ತದೆ ಎಂಬುದಾಗಿ ವೈದಿಕ ಸಾಹಿತ್ಯದಿಂದ ತಿಳಿದು ಬರುತ್ತದೆ. ಶರದೃತು ನೃತ್ಯಕ್ಕೆ ಸೂಕ್ತವಾದ ಕಾಲ. ಶ್ರೀ ಕೃಷ್ಣ ಪರಮಾತ್ಮನು ಪರಮಾತ್ಮನ ಉನ್ನತ ಸ್ವರೂಪನು. ಅವನಿಗೆ ಪೂರೈಕೆಯಾಗಬೇಕಾದ ಯಾವ ಹಂಬಲವೂ ಇಲ್ಲ. ಏಕೆಂದರೆ ಅವನೇ ಸದಾ ಆರು ವಿಧಗಳಿಂದ ಸಮೃದ್ಧನು. ಗೋಪಿಯರೊಂದಿಗೆ ಆಡುವ ರಾಸಲೀಲೆಯು ಸಾಮಾನ್ಯ ತರುಣ ತರುಣಿಯರ ಮಧ್ಯೆ ನಡೆಯುವಂಥ ನರ್ತನವಲ್ಲ. ಶ್ರೀಮದ್ಭಾಗವತದಲ್ಲಿ

ಬಳಸಲ್ಪಟ್ಟಿರುವ ಶಬ್ದವು ಮಹಾಮಾಯೆಯಲ್ಲ. ಅದು ಬಾಹ್ಯ ಶಕ್ತಿ ಅಥವಾ ಯೋಗ ಮಾಯೆ. ಶ್ರೀ ಕೃಷ್ಣನು ಗೋಪಿಯರೊಂದಿಗೆ ಮಾಡಿದ ನರ್ತನ ಯೋಗಮಾಯೆಯ ವೇದಿಕೆಯ ಮೇಲೆ ಜರುಗಿದಂಥದ್ದು. ಇವರೆಡರ ಮಧ್ಯದಲ್ಲಿನ ವ್ಯತ್ಯಾಸ (ಮಹಾಮಾಯೆ ಹಾಗೂ ಯೋಗಮಾಯೆ), ಚೈತನ್ಯನಿಗೆ ಅನುಗುಣವಾಗಿ ಚಿನ್ನ ಹಾಗೂ ಕಬ್ಬಿಣದ ಮಧ್ಯದಲ್ಲಿನ ವ್ಯತ್ಯಾಸದಷ್ಟೇ ತೀಕ್ಷ್ಣ.

ಮಹಾಮಾಯೆ ವೇದಿಕೆಯ ಮೇಲೆ ಇಂದ್ರಿಯ ಕೃತಾರ್ಥತೆಗಾಗಿ ನರ್ತನಗಳು ನಡೆದವು. ಆದರೆ ಶ್ರೀ ಕೃಷ್ಣನು ವೇಣು ವಾದನ ಮಾಡುತ್ತಾ ಗೋಪಿಯರನ್ನು ಕರೆದಾಗ ಅವರು ರಾಸಲೀಲೆಯ ಸ್ಥಳಕ್ಕೆ ಶ್ರೀ ಕೃಷ್ಣನ ಅತಿಶಯ ಹಂಬಲವನ್ನ ಪೂರೈಸುವ ಸಲುವಾಗಿ ಓಡೋಡಿಬಂದರು. ಶ್ರೀ ಕೃಷ್ಣನು ತಾನು ಎಂಟು ವರ್ಷದವನಾಗಿದ್ದಾಗ ಗೋಪಿಯರೊಂದಿಗೆ ರಾಸಲೀಲೆಯನ್ನಾಡಿ ಸುಖಿಸಿದನು. ಆ ಸಮಯದಲ್ಲಿ ಅನೇಕ ಗೋಪಿಯರಿಗೆ ವಿವಾಹವಾಗಿತ್ತು. ಶ್ರೀ ಕೃಷ್ಣ ಹಾಗೂ ಗೋಪಿಯರ ಮಧ್ಯದಲ್ಲಿನ ಸಂಬಂಧವನ್ನು "ಪಾರುಕಿಯ" ರಾಸವೆಂದು ಕರೆಯಲಾಗಿದೆ. ಅದು ಅಧ್ಯಾತ್ಮಿಕ ನೆಲೆಯಲ್ಲಿ ಅಸ್ತಿತ್ವದಲ್ಲಿರುವಂಥದ್ದು. ಗೋಪಿಯರೆಲ್ಲರೂ ಶ್ರೀ ಕೃಷ್ಣನ ಕೊಳಲಿನ ದನಿಯನ್ನು ಕೇಳಿ ಸಮಸ್ತವನ್ನೂ ಎಲ್ಲಿದ್ದಲ್ಲೆ ಬಿಟ್ಟು ಅವನ ಬಳಿಗೆ ಓಡಿದಾಗ ಅವರ ಪತಿಯರು, ಸೋದರರು ಅವರ ವರ್ತನೆಯನ್ನು ಕಂಡು ಆಶ್ಚರ್ಯಚಕೀತರಾದರು ಅದರಲ್ಲಿ ಕೆಲವರನ್ನು ತಡೆದರೂ ಅವರು ಕಣ್ಮುಚ್ಚಿ ಭಗವಂತನನ್ನು ಹಾಗೂ ಅವನ ಅತಿಶಯ ಆಕೃತಿಯನ್ನು ಕುರಿತು ಧ್ಯಾನಿಸತೊಡಗಿದರು. ಅಧ್ಯಾತ್ಮಿಕ ಜಗತ್ತಿನಲ್ಲಿ ಶ್ರೀ ಕೃಷ್ಣನ ಅನುಯಾಯಿಗಳು ಅದರಲ್ಲೂ ಗೋಪಿಯರು, ಶ್ರೀ ಕೃಷ್ಣ ಪರಮಾತ್ಮನ ಸಂತಸದ ಸಾಮರ್ಥ್ಯದ ಸಾಕಾರ ರೂಪಗಳು.

ಪರೀಕ್ಷಿತ ರಾಜನು ಹೇಳಿದನು : "ಗೋಪಿಯರಿಗೆ ಶ್ರೀ ಕೃಷ್ಣನು ಭಗವಂತನ ಸಾಕಾರ ರೂಪವೆಂಬುದು ತಿಳಿದಿರಲಿಲ್ಲ. ಅವರು ಅವನನ್ನು ಸುಂದರ ಬಾಲಕನನ್ನಾಗಿ ಸ್ವೀಕರಿಸಿ ಅವನನ್ನು ತಮ್ಮ ಅಪರಪತಿ ಎಂಬುದಾಗಿ ಭಾವಿಸಿದ್ದರು. ಹೀಗಾಗಿ ಅವರು ಕೇವಲ ಅಪರಪತಿಯನ್ನು ಕುರಿತು ಚಿಂತಿಸುವುದರಿಂದಾಗಿ ಐಹಿಕ ಸ್ಥಿತಿಯಿಂದ ವಿಮುಕ್ತಗೊಳ್ಳಲು ಸಾಧ್ಯವಾಯಿತು"

ಭಗವಂತನ ಹೆಸರನ್ನು ಪಡೆಯುವ ಮೂಲಕವೇ ಶ್ರೀ ಕೃಷ್ಣನ ಶತೃವಾದ ಶಿಶುಪಾಲನು ಮುಕ್ತಿಯನ್ನು ಪಡೆದ ಬಗೆಗಿನ ಕಥೆಗಳನ್ನು ಶ್ರೀ ಶುಕಾಚಾರ್ಯರು ದೊರೆಗೆ ನೆನಪಿಸಿದರು. ಹೀಗಿರುವಾಗ ಅವನ ಗೆಳೆಯರಾಗಿದ್ದ ಗೋಪಿಯರು ಮುಕ್ತಿಯನ್ನು ಪಡೆದೇ ಪಡೆಯುತ್ತಾರೆ. ಶ್ರೀ ಕೃಷ್ಣನನ್ನು ಹೃಷಿಕೇಶ ಮತ್ತು ಅದೋಕ್ಷಜನೆಂದೂ ಕರೆಯಲಾಗಿದೆ. ಶ್ರೀ ಕೃಷ್ಣ ಹಾಗೂ ಅವನ ಶರೀರ ಭಿನ್ನವೆಂಬುದನ್ನು ಯಾರೂ ತಿಳಿಯಲಾರರು. ಹೃಷೀಕೇಶನು ಉನ್ನತ ಆತ್ಮನು ಮತ್ತು ಅದೋಕ್ಷಜನು ಉನ್ನತ ಪರಮಾತ್ಮನು.

ಶ್ರೀ ಶುಕಾಚಾರ್ಯರು ಮುಂದುವರಿದು ಹೇಳಿದರು : "ಶ್ರೀ ಕೃಷ್ಣನು ಅಧ್ಯಾತ್ಮಿಕ ಗುಣಗಳನ್ನುಳ್ಳ ಪರಮಾತ್ಮನು. ಅವನು ಈ ಐಹಿಕ ಜಗತ್ತಿನಲ್ಲಿ ತನ್ನ ಕರುಣೆಯನ್ನು ತೋರಿಸಲು ಕಾಣಿಸಿಕೊಂಡಿದ್ದು, ಅವನು ಕಾಣಿಸಿಕೊಂಡಾಗಲೆಲ್ಲ ಬದಲಾವಣೆ ರಹಿತನಾಗಿಯೇ ಉಳಿಯುತ್ತಾನೆ."

ಮೇಲೆ ವಿವರಿಸಿದಂತೆ ಗೋಪಿಯರೆಲ್ಲರೂ ಶ್ರೀ ಕೃಷ್ಣನ ಮುಂದೆ ಸಮಾವೇಶ ಗೊಂಡಾಗ, ಅವನು ಹೇಳಿದನು : "ನೀವೆಲ್ಲರೂ ಅದೃಷ್ಟಶಾಲಿಗಳು ಹಾಗೂ ನನಗೆ ತುಂಬಾ ಪ್ರಿಯರಾದವರು. ನಾನು ನಿಮಗಾಗಿ ಏನನ್ನು ಮಾಡಬಲ್ಲೆ? ಈ ನಡುರಾತ್ರಿಯಲ್ಲಿ ನನ್ನ ಬಳಿಗೆ ಬಂದಿರುವ ಉದ್ದೇಶವೇನು? ಆಸೀನರಾಗಿರಿ. ನನ್ನಿಂದ ಏನಾಗಬೇಕೆಂದು ತಿಳಿಸಿರಿ". ಶ್ರೀ ಕೃಷ್ಣನು ಗೋಪಿಯರಿಗೆ ತಮ್ಮ ಕುಟುಂಬದ ಬಗೆಗಿನ ಕರ್ತವ್ಯಗಳನ್ನು ತಿಳಿಸಿ ಹಿಂತಿರುಗುವಂತೆ ತಿಳಿಸಿದನು. ಆದರೆ ಶ್ರೀ ಕೃಷ್ಣನೊಂದಿಗೆ ನರ್ತಿಸಬೇಕೆಂಬ ಆಸೆಯನ್ನು ಹೊಂದಿದ್ದ ಗೋಪಿಯರಿಗೆ ಅವನ ಮಾತನ್ನು ಕೇಳಿ ನಿರಾಸೆಯಾಯಿತು.

ಗೋಪಿಯರು ಸಾಮಾನ್ಯ ಸ್ತ್ರೀಯರಲ್ಲ. ಅವರು ಶ್ರೀ ಕೃಷ್ಣನೊಂದಿಗೆ ಸಮಾನ ಸ್ತರದಲ್ಲಿ ನಿಂತವರು. ಅವರು ಅವನ ಶಾಶ್ವತ ಅನುಯಾಯಿಗಳು. ಅವರು ಭಗವಂತನ ಹರ್ಷದ ಸಾಮರ್ಥ್ಯದ ವಿಸ್ತರಣೆಯಾದ್ದರಿಂದ ಯಾವ ರೀತಿಯಲ್ಲೂ ಅವನಿಗಿಂತಲೂ ಬೇರೆಯಲ್ಲ ಎಂಬುದಾಗಿ ಬ್ರಹ್ಮಸಂಹಿತವು ಪುಷ್ಟೀಕರಿಸುತ್ತದೆ.

ಶ್ರೀ ಕೃಷ್ಣನ ಮಾತನ್ನು ಆಲಿಸಿದ ಗೋಪಿಯರು ತಾವು ಶರಣಾಗತರಾದ ಪರಿಪೂರ್ಣ ಆತ್ಮರು ಎಂಬುದಾಗಿ ಉತ್ತರಿಸಿ ತಮ್ಮನ್ನು ಸ್ವೀಕರಿಸುವಂತೆ ಅವನನ್ನು ಬೇಡಿದರು. ತಾವು ಸರ್ವವನ್ನೂ ಪರಿತ್ಯಾಗ ಮಾಡಿ ಅವನ ಪಾದಾರವಿಂದದಲ್ಲಿ ಆಶ್ರಯ ಪಡೆಯಲು ಬಂದಿರುವುದಾಗಿ ಅವರೆಂದರು. ಗೋಪಿಯರು ಅವನ ಸೂಚನೆಗಳನ್ನು ಒಪ್ಪಿದರೂ ಅವನಿಗೆ ಶರಣಾಗುವ ಮೂಲಕವೇ ತಾವು ಅವನ್ನೂ ಪರಿಪಾಲಿಸುತ್ತೇವೆ ಎಂಬುದಾಗಿ ನುಡಿದರು. ಗೋಪಿಯರೆಂದರು : "ನಿನ್ನನ್ನು ಪತಿಯನ್ನಾಗಿ ಹೊಂದುವ ನಮ್ಮ ದೀರ್ಘ ಕಾಲದ ಆಸೆಯನ್ನು ದಯವಿಟ್ಟು ನಿರುತ್ತೇಜನಗೊಳಿಸದಿರು. ತನ್ನ ಸ್ವಯಂ ಆಸಕ್ತಿಯ ಆಕಾಂಕ್ಷೆಯಿರುವ ಯಾರೇ ಬುದ್ಧಿಶಾಲಿ ವ್ಯಕ್ತಿಯು ನಿನ್ನಲ್ಲಿ ದೈವಿಕ ಪ್ರೀತಿಯನ್ನು ಇಡುತ್ತಾರೆ. ಪತಿ, ಗೆಳೆಯ, ಪುತ್ರ, ಪುತ್ರಿ ಅಥವಾ ತಂದೆ ತಾಯಿ ಎಂದು ಕರೆಯಲ್ಪಡುವವರು ಕೇವಲ ಐಹಿಕ ಸಂಕಷ್ಟಗಳಿಗೆ ಮೂಲ". ಅವರೆಲ್ಲರೂ ಅವನಿಗೆ ತಮ್ಮ ಬಗ್ಗೆ ಕರುಣೆ ತೋರಿಸಿ ತಮ್ಮನ್ನು ಸ್ವೀಕರಿಸಿಬೇಕೆಂದು ಕೋರಿದರು. ಗೋಪಿಯರಿಂದ ಆವೃತನಾದ ಶ್ರೀಕೃಷ್ಣನು ಅರಣ್ಯದೆಲ್ಲೆಡೆ ಸುತ್ತಾಡಿದಾಗ ಭಗವಂತನು ಸಾಮಾನ್ಯ ಲೈಂಗಿಕ ಜೀವನದ ಕ್ರಿಯೆಗಳಿಗೆ ಎಳ್ಳಷ್ಟೂ ಅವಕಾಶವನ್ನು ನೀಡದೆಯೇ ಅವರ ಸಹವಾಸದಲ್ಲಿ ಸುಖಿಸಿದನು. ಅವರೊಂದಿಗೆ ಆನಂದದಿಂದ ಇದ್ದಾಗಲೇ ಅವನು ತಟಕ್ಕನೆ ಕಣ್ಮರೆಯಾಗಿ ತನ್ನ ಪರಿತ್ಯಕ್ತ ಗುಣವನ್ನೂ ಪ್ರದರ್ಶಿಸಿದನು. ಈ ಪರಿತ್ಯಕ್ತತೆಯು ನಿರ್ವ್ಯಾಮೋಹವನ್ನು ಖಚಿತಪಡಿಸುವಂಥದ್ದು. ಗೋಪಿಯರಿಗೆ ಹೆಮ್ಮೆಯುಂಟಾಗಿ ತಾವೇ ಅದೃಷ್ಟಶಾಲಿಗಳು ಎಂದು ಭಾವಿಸಿದರು. ಅವರ ಈ ಮನಸ್ಥಿತಿಯನ್ನು ಕಂಡೇ ಪರಮಾತ್ಮನು ಮಾಯವಾದನು.

ಶ್ರೀ ಕೃಷ್ಣನು ತಟಕ್ಕನೆ ಕಣ್ಮರೆಯಾದ್ದರಿಂದ ಗೋಪಿಯರು ಬೇಗುದಿಗೊಂಡು ಅವನನ್ನು ಎಲ್ಲೆಡೆ ಹುಡುಕಾಡಿ ಅವನ ವೈಭವಗಳನ್ನು ಕೊಂಡಾಡಲು ತೊಡಗಿದಾಗ ಮತ್ತೊಮ್ಮೆ ಶ್ರೀ ಕೃಷ್ಣನು ಕಾಣಿಸಿಕೊಂಡು ಅವರ ಸಹವಾಸವನ್ನು ಅನುಭವಿಸಿದ.

ಗೋಪಿಯರು ಸಾಮಾನ್ಯವಾಗಿ ವೇದಗಳ ಅನುಯಾಯಿಗಳು. ತಮ್ಮ ಪೂರ್ವ ಜನ್ಮದಲ್ಲಿ ಶ್ರೀ ರಾಮಚಂದ್ರನ ಅವತಾರದಲ್ಲಿ ಅವರು ವೇದ ಪಾರಂಗತರಾಗಿದ್ದು ದಾಂಪತ್ಯ ಪ್ರೇಮವನ್ನು ಅವರು ಅಪೇಕ್ಷಿಸಿದರು. ಶ್ರೀ ರಾಮಚಂದ್ರನು ಅವರಿಗೆ ಕೃಷ್ಣಾವತಾರ ಸಮಯದಲ್ಲೂ ಹಾಜರಾಗಿರುವಂತೆ ದೀಕ್ಷೆಯನ್ನು ನೀಡಿದನು. ಗೋಪಿಯರ ಪ್ರೇಮ ಪರಿಶುದ್ಧ ಹಾಗೂ ಅತಿಶಯ ರೀತಿಯದು. ಗೋಪಿಯರು ಬೃಂದಾವನದಲ್ಲಿ ವ್ಯಕ್ತಗೊಳಿಸಿದ ಭಕ್ತಿಪೂರ್ವಕ ಸೇವೆಯು ಪರಮಾತ್ಮನನ್ನು ಸಮೀಪಿಸುವ ಮಿಕ್ಕೆಲ್ಲ ವಿಧಾನಗಳನ್ನೂ ಮೀರಿಸಿದ್ದಾಗಿತ್ತು.

### ಕಂಸ

ನಾರದ ಮುನಿಯು ಕಂಸನ ಮುಂದೆ ಕಾಣಿಸಿಕೊಂಡು ಹೇಳಿದನು : "ನೀನು ವಸುದೇವನ ಎಂಟನೇ ಪುತ್ರನಿಂದ ಅಂದರೆ ಶ್ರೀ ಕೃಷ್ಣನಿಂದ ಕೊಲ್ಲಲ್ಪಡುತ್ತೀಯೆ. ನೀನು ವಸುದೇವನ ಎಂಟನೇ ಮಗು ಪುತ್ರಿಯೆಂಬುದಾಗಿ ತಪ್ಪು ಕಲ್ಪನೆಗೆ ಒಳಗಾಗಿದ್ದೀಯ. ವಾಸ್ತವವಾಗಿ ನಂದ ಮಹಾರಾಜನ ಪತ್ನಿಯಾದ ಯಶೋದೆಗೆ ಪುತ್ರಿಯು ಜನನವಾಗಿ ವಸುದೇವನು ಆ ಮಗಳನ್ನು ತನ್ನ ಮಗುವಿಗೆ ಬದಲಾಯಿಸಿಕೊಂಡಿದ್ದಾನೆ. ಹೀಗೆ ಶ್ರೀ ಕೃಷ್ಣನು ಬಲರಾಮನಂತೆಯೇ ವಸುದೇವನ ಮಗ. ಅವರು ಬೃಂದಾವನದಲ್ಲಿ ಅವಿತುಕೊಂಡಿದ್ದಾರೆ. ನೀನು ಕಳಿಸಿದ ಎಲ್ಲ ಅಸುರರೂ ಶ್ರೀ ಕೃಷ್ಣ ಪರಮಾತ್ಮ ಹಾಗೂ ಬಲರಾಮರಿಂದ ಕೊಲ್ಲಲ್ಪಟ್ಟಿದ್ದಾರೆ".

ಕಂಸನಿಗೆ ಸತ್ಯದ ಅರಿವಾದಾಗ ಅವನು ವಸುದೇವನನ್ನು ಕೊಲ್ಲಲು ನಿಶ್ಚಯಿಸಿದನು. ಆದರೆ ನಾರದ ಮುನಿಯು ಅವನಿಗೆ ಅವನನ್ನು ಕೊಲ್ಲುವವನು ಶ್ರೀ ಕೃಷ್ಣನೇ ಹೊರತು ವಸುದೇವನಲ್ಲ ಎಂಬುದಾಗಿ ತಿಳಿಸಿ ಅವನನ್ನು ತಡೆದನು. ಕಂಸನು ವಸುದೇವ ಹಾಗೂ ದೇವಕಿಯರನ್ನು ಬಂಧಿಸಿದನು.

ಕಂಸನು ನಂತರ ತನ್ನ ರಾಜಧಾನಿಯಲ್ಲಿ ವಿವಿಧ ಕ್ರೀಡೆಗಳನ್ನು ಏರ್ಪಡಿಸಿ ಶ್ರೀ ಕೃಷ್ಣ ಹಾಗೂ ಬಲರಾಮರನ್ನು ಕೊಲ್ಲುವ ಉದ್ದೇಶದಿಂದ ಅವರನ್ನು ಅಲ್ಲಿಗೆ ಆಹ್ವಾನಿಸಿದನು. ಅವನು ಯದು ವಂಶಕ್ಕೆ ಸೇರಿದವರಲ್ಲಿ ಒಬ್ಬನಾದ ಅಕ್ರೂರನನ್ನು ಶ್ರೀ ಕೃಷ್ಣ ಬಲರಾಮರನ್ನು ಕರೆತರಲು ಬೃಂದಾವನಕ್ಕೆ ಕಳಿಸಿದನು.

ಈ ಮಧ್ಯೆ ಕಂಸನು ಕೇಸಿ ಎಂಬ ದಾನವನನ್ನು ಶ್ರೀ ಕೃಷ್ಣನನ್ನು ಕೊಲ್ಲಲು ಬೃಂದಾವನಕ್ಕೆ ಕಳಿಸಿದ್ದನು. ಈ ದಾನವನು ಭಯಾನಕ ಕುದುರೆಯ ರೂಪವನ್ನು ತಳೆದಾಗ ಪರಮಾತ್ಮನಿಂದ ಕೊಲ್ಲಲ್ಪಟ್ಟನಲ್ಲದೆ, ಅಲ್ಲಿಗೆ ಬಂದ ವ್ಯೋಮಾಸುರನೆಂಬ ಅಸುರನೂ ಹತ್ಯೆಗೊಳಗಾದ.

ಅಕ್ರೂರನು ಬೃಂದಾವನಕ್ಕೆ ಬಂದನಾದರೂ ಭಗವಂತನ ಅತಿಶಯ ಸ್ಥಾನವನ್ನು ತಿಳಿದವನಾಗಿದ್ದ. ಅಕ್ರೂರನು ಶ್ರೀ ಕೃಷ್ಣನ ವೈರಿಯಾದ ಕಂಸನಿಂದ ತಾನು ಅಲ್ಲಿಗೆ ತೆರಳಲು ಹೆದರಿದ್ದ. ಅವನೆಂದುಕೊಂಡನು: "ನಾನು ಶತೃವಿನ ಸಂದೇಶಕನಾಗಿ ಶ್ರೀ ಕೃಷ್ಣನನ್ನು ನೋಡಲು ಹೋಗುತ್ತಿದ್ದೇನೆ". ಮರುಗಳಿಗೆಯೇ ಅವನು ಚಿಂತಿಸಿದನು "ಶ್ರೀ ಕೃಷ್ಣನು ಪ್ರತಿಯೊಬ್ಬರ ಹೃದಯದಲ್ಲಿ ಉನ್ನತತ್ಮಾನಾಗಿದ್ದು, ಅವನಿಗೆ ನನ್ನ ಹೃದಯವೂ ತಿಳಿದಿರಬೇಕು". ಅಕ್ರೂರನು ಭಾವಿಸಿದನು "ನಾನು ಕಂಸನಿಂದ ಕಳಿಸಲ್ಪಟ್ಟು ಪಾಪಪೂರಿತ ಯಾತ್ರೆಯನ್ನು ಕೈಗೊಂಡಿದ್ದರೂ ನಾನು ಪರಮಾತ್ಮನನ್ನು ಸಮೀಪಿಸಿ, ಅವನ ಮುಂದೆ ಕೈಮುಗಿದು ದೀನನಾಗಿ ನಿಲ್ಲುತ್ತೇನೆ. ಖಂಡಿತವಾಗಿಯೂ ಅವನು ನನ್ನ ಭಕ್ತಿಪೂರ್ವಕ ಮನೋಭಾವದಿಂದ ಮುದಗೊಳ್ಳುತ್ತಾನೆ ಹಾಗೂ ಅವನು ನನ್ನನ್ನು ಕಂಡು ಪ್ರೀತಿಯಿಂದ ಮುಗುಳ್ನಕ್ಕು ನನ್ನನ್ನು ಎಲ್ಲ ಬಗೆಯ ಪಾಪಗಳಿಂದಲೂ ವಿಮುಕ್ತಗೊಳಿಸಬಹುದು. ನಾನಾಗ ಅತಿಶಯ ಆಹ್ಲಾದತೆ ಮತ್ತು ಜ್ಞಾನದ ವೇದಿಕೆಯ ಮೇಲೆ ನಿಲ್ಲುತ್ತೇನೆ. ಶ್ರೀ ಕೃಷ್ಣನಿಗೆ ನನ್ನ ಹೃದಯವು ತಿಳಿದಿರುವುದರಿಂದ ನಾನು ಅವನನ್ನು ಸಮೀಪಿಸಿದಾಗ ನನ್ನನ್ನು ಖುಷಿಯಾಗಿ ಆಲಂಗಿಸಿಕೊಳ್ಳುತ್ತಾನೆ. ಯದು ವಂಶದಲ್ಲಿನ ಸದಸ್ಯ ನಾನೊಬ್ಬನೇ ಅಲ್ಲವಾದರೂ ನಾನು ಪರಿಶುದ್ಧನಾದ ಭಕ್ತನು. ತನ್ನ ಕರುಣೆಯಿಂದೊಡಗೂಡಿದ ಅಪ್ಪುಗೆಯಿಂದ ನನ್ನ ಶರೀರ, ನನ್ನ ಹೃದಯ ಹಾಗೂ ಆತ್ಮವು ನನ್ನ ಪೂರ್ವ ಜನ್ಮದ ಕ್ರಿಯೆ ಪ್ರಕ್ರಿಯೆಗಳಿಂದ ಸಂಪೂರ್ಣವಾಗಿ ಶುಚಿಯಾಗುತ್ತದೆ".

ಅಕ್ರೂರನು ಬೃಂದಾವನಕ್ಕೆ ಆಗಮಿಸಿದಾಗ ಅವನು ಹಾಲು ಕರೆಯುವುದರ ಮೇಲ್ವಿಚಾರಣೆಯನ್ನು ವಹಿಸಿದ್ದ ಶ್ರೀ ಕೃಷ್ಣ ಬಲರಾಮರನ್ನು ಕಂಡನು. ಅಕ್ರೂರನನ್ನು ಗೌರವದಿಂದ ಬರಮಾಡಿಕೊಂಡ ನಂದ ಮಹಾರಾಜನು ಅವನನ್ನು ಕರುಣೆಯಿಂದ ಮಾತನಾಡಿಸಿದನು. ಶ್ರೀ ಕೃಷ್ಣನು ಅಕ್ರೂರನಿಂದ ಕಂಸನ ಹಾಗೂ ಅವನ ಜನರ ಯೋಗಕ್ಷೇಮವನ್ನು ತಿಳಿದುಕೊಂಡನು. ಅಕ್ರೂರನು ನಡೆಯುತ್ತಿರುವುದನ್ನೆಲ್ಲ ತಿಳಿಸಿದನು. ಅವನು ಶ್ರೀ ಕೃಷ್ಣನಿಗೆ ನಾರದ ಮುನಿಯು ಕಂಸನಿಗೆ ಎಲ್ಲವನ್ನೂ ಹೇಳಿದ್ದಾನೆಂದು ತಿಳಿಸಿದನು. ಕಂಸನು ಶ್ರೀ ಕೃಷ್ಣ ಬಲರಾಮರನ್ನು ತಮ್ಮ ಸ್ನೇಹಿತರೊಂದಿಗೆ "ಧನುರ್ಯಜ್ಞ"ದಲ್ಲಿ ಭಾಗವಹಿಸಲು ಆಹ್ವಾನಿಸಿದ್ದಾನೆ ಎಂದನು. ಆದರೆ ಗೋಪಿಯರಿಗೆ ಈ ವಿಷಯ ತಿಳಿದಾಗ ಅವರು ಅಸಂತೋಷಗೊಂಡರು.

ಶ್ರೀ ಕೃಷ್ಣ ಬಲರಾಮರು ಅಕ್ರೂರನೊಂದಿಗೆ ಮಥುರೆಗೆ ಹೋಗುವ ಮಾರ್ಗದಲ್ಲಿ ಯಮುನಾ ನದಿಯ ದಂಡೆಗೆ ಬಂದರು. ಸಹೋದರರಿಬ್ಬರೂ ಮಿಂದು ನೀರನ್ನು ಕುಡಿದರು. ನಂತರ ಅಕ್ರೂರನು ಮೀಯಲು ನೀರಿಗಿಳಿದಾಗ ಅವನಿಗಲ್ಲಿ ಶ್ರೀ ಕೃಷ್ಣ ಬಲರಾಮರು ಕಂಡಾಗ ಆಗ ತಾನೇ ಅವರಿಬ್ಬರನ್ನೂ ಮರದ ಬುಡದಲ್ಲಿ ಕಂಡಿದ್ದ ಅವನು ಆಶ್ಚರ್ಯಗೊಂಡನು. ಅಂದರೆ ಅಕ್ರೂರನು ಈ ಬಾಲಕರನ್ನು ವೈಭವಯುತ ದೈವದ ಪ್ರತೀಕವೆಂಬುದನ್ನು ಅರಿತನು. ಅವನು ಪ್ರಾರ್ಥನೆಯನ್ನು ಸಲ್ಲಿಸಿ ಹೇಳಿದನು : "ನನ್ನ ಪ್ರಿಯ ಒಡೆಯನೇ, ನಿನ್ನ ಅತಿಶಯವಾದ ಶಾಶ್ವತ ರೂಪವು ಜ್ಞಾನದಿಂದ ಕೂಡಿದುದು. ನಿನ್ನ ರೂಪದ ಮೇಲೆ ಚಿತ್ತವನ್ನು ಇರಿಸುವ ಮೂಲಕವೇ ಒಬ್ಬರು ಪ್ರತಿಯೊಂದರ

ಬಗೆಯೂ ತಿಳುವಳಿಕೆಯನ್ನು ಪಡೆಯಬಹುದು. ಏಕೆಂದರೆ ನೀನೇ ಎಲ್ಲ ಜ್ಞಾನದ ಮೂಲ ಪುರುಷನು. ನೀನು ಅತ್ಯಂತ ಶಕ್ತಿಶಾಲಿ, ಎಲ್ಲ ಬಗೆಯ ಸಾಮರ್ಥ್ಯಗಳನ್ನೂ ಬಲ್ಲವನು. ನೀನು ಉನ್ನತ ಬ್ರಹ್ಮ, ಉನ್ನತ ವ್ಯಕ್ತಿ, ಉನ್ನತ ನಿಯಂತ್ರಕ ಹಾಗೂ ಐಹಿಕ ಶಕ್ತಿಗಳ ಒಡೆಯನು. ಈಗ ನನ್ನ ಪ್ರಭುವೇ, ನಾನು ನಿನಗೆ ಸಂಪೂರ್ಣವಾಗಿ ಶರಣಾಗಿದ್ದೇನೆ. ನೀನು ನನಗೆ ರಕ್ಷಣೆಯನ್ನು ದಯಪಾಲಿಸು”.

ಶ್ರೀ ಕೃಷ್ಣ ಬಲರಾಮರು ಮಥುರೆಗೆ ಬಂದಾಗ ಅಲ್ಲಿ ಅವರಿಗೆ ಭವ್ಯ ಸ್ವಾಗತವನ್ನು ನೀಡಲಾಯಿತು. ಶ್ರೀ ಕೃಷ್ಣನು ಅಕ್ರೂರನಿಗೆ ತನ್ನ ನಿವಾಸಕ್ಕೆ ಹಿಂತಿರುಗುವಂತೆ ತಿಳಿಸಿ ಇಬ್ಬರು ಸೋದರರೂ ಮಥುರೆಯ ಬೀದಿಗಳಲ್ಲಿ ಓಡಾಡಿದರು. ಆದರೆ ಅಕ್ರೂರನು ಅವರಿಬ್ಬರೂ ತನ್ನ ಮನೆಗೆ ಬಂದು ಅದನ್ನು ಪವಿತ್ರಗೊಳಿಸಬೇಕೆಂದು ತಿಳಿಸಿದಾಗ ಶ್ರೀ ಕೃಷ್ಣನು ಇಲ್ಲಿ ತನ್ನ ಕೆಲಸ ಮುಗಿದ ಕೂಡಲೇ ಅಲ್ಲಿಗೆ ಬರುವೆನೆಂದು ತಿಳಿಸಿದನು. ಅವರನ್ನು ನೋಡಿ ಸಂತಸಗೊಂಡ ಮಥುರೆಯ ನಿವಾಸಿಗಳು ಅವರನ್ನು ಆದರದಿಂದ ಬರಮಾಡಿಕೊಂಡರು. ದಾರಿ ಮಾರ್ಗದಲ್ಲಿ ಅವರಿಗೆ ಕಂಸನ ಅರಮನೆಗೆ ತೇಯ್ದ ಶ್ರೀ ಗಂಧವನ್ನು ಹೊತ್ತುಕೊಂಡು ಹೋಗುತ್ತಿದ್ದ ಗೂನು ಬೆನ್ನಿನ ಹೆಂಗಸೊಬ್ಬಳು ಕಂಡಾಗ ಶ್ರೀ ಕೃಷ್ಣನು ಅದನ್ನು ತನಗೇ ನೀಡಬೇಕೆಂದಾಗ ಅವಳು ಹರ್ಷದಿಂದ ಅವರಂತೆಯೇ ಮಾಡಿದಳು. ಶ್ರೀ ಕೃಷ್ಣನು ಗೂನು ಬೆನ್ನಿನ ಹೆಂಗಸಿನ ಪಾದಗಳನ್ನು ತನ್ನ ಪಾದದಿಂದ ಅದುಮಿ, ಅವಳ ಕೆನ್ನೆಯನ್ನು ಬೆರಳುಗಳಿಂದ ಹಿಂಡಿದಾಗ ಆ ಹೆಂಗಸು ತತ್‌ಕ್ಷಣದಲ್ಲೇ ಸುಂದರ ಯುವತಿಯಾಗಿ ಮಾರ್ಪಟ್ಟಳು. ಅವಳು ಅವನನ್ನು ತನ್ನ ಮನೆಗೆ ಆಹ್ವಾನಿಸಿದಾಗಲೂ ಶ್ರೀ ಕೃಷ್ಣನು ಅವಳಿಗೂ ಅಕ್ರೂರನಿಗೆ ಹೇಳಿದ ಮಾತನ್ನೇ ತಿಳಿಸಿದನು.

ಶ್ರೀ ಕೃಷ್ಣ ಹಾಗೂ ಬಲರಾಮರು ಯಜ್ಞ ಮಂಟಪಕ್ಕೆ ಆಗಮಿಸಿದಾಗ ಅಲ್ಲಿ ದೊಡ್ಡದೊಂದು ಬಿಲ್ಲನ್ನು ಕಂಡು ಅದನ್ನು ಭಟರು ಸಂರಕ್ಷಿಸುತ್ತಿರುವುದು ಗೋಚರವಾಯಿತು. ಅವರು ಅದನ್ನು ಸಮೀಪಿಸಿದಾಗ ಅದನ್ನು ಮುಟ್ಟಬಾರದೆಂದು ಅವರಿಗೆ ಎಚ್ಚರಿಕೆ ನೀಡಿದಾಗಲೂ ಅದನ್ನು ಎಡಗೈಲಿ ಎತ್ತಿದ ಶ್ರೀ ಕೃಷ್ಣನು ಅದನ್ನು ಎರಡು ತುಂಡಾಗಿಸಿದನು. ಆಗ ಹೊರಟ ಶಬ್ಧ ಎಷ್ಟು ಗಟ್ಟಿಯಾಗಿತ್ತೆಂದರೆ ಅದನ್ನು ಕೇಳಿದ ಕಂಸನು ಚಿಂತೆಗೊಂಡು ಬಿಲ್ಲಿನ ಭಟರಿಗೆ ಶ್ರೀ ಕೃಷ್ಣನನ್ನು ಶಿಕ್ಷಿಸಬೇಕೆಂದು ತಿಳಿಸಿದಾಗ ಭಟರೇ ಅವನಿಂದ ಕೊಲ್ಲಲ್ಪಟ್ಟರು. ಕಂಸನಿಗೆ ಈ ವಿಷಯವೆಲ್ಲ ತಿಳಿದಾಗ ಅವನು ಭೀತಿಗೊಂಡ. ಭಗವಂತನ ಶಕ್ತಿಯ ಅರಿವು ಅವನಿಗಾಯಿತು. ಅವನು ಭೀಕರ ಸ್ವಪ್ನಗಳನ್ನು ಕಾಣತೊಡಗಿದ.

ಮಲ್ಲಯುದ್ಧದ ಮಂಟಪವು ಅಲಂಕೃತಗೊಂಡಿದ್ದು ವಿವಿಧೆಡೆಗಳಿಂದ ಬಂದಿದ್ದ ದೊರೆಗಳು ತಮ್ಮ ಸ್ಥಾನಗಳಲ್ಲಿ ಕೂತಿದ್ದರು. ಕಂಸನು ತನ್ನ ಸಚಿವರೊಡಗೂಡಿ ಅಲ್ಲಿಗೆ ಆಗಮಿಸಿದಾಗ ಕುಸ್ತಿಪಟುಗಳು ತಮ್ಮ ಶಕ್ತಿಯನ್ನು ಪ್ರದರ್ಶಿಸುವ ಸಲುವಾಗಿ ಅಲ್ಲಿಗೆ ಬಂದರು. ಶ್ರೀ ಕೃಷ್ಣ ಬಲರಾಮರೂ ಅಲ್ಲಿಗೆ ಆಗಮಿಸಿದಾಗ ದಾರಿಯನ್ನು “ಕುವಲಯ ಪೀಡ” ಎಂಬ ಆನೆಯು ತಡೆದಿರುವುದನ್ನು ಕಂಡಾಗ ಶ್ರೀ ಕೃಷ್ಣನು ಮಾವುತನಿಗೆ ಹಾದಿಯನ್ನು ತೆರೆಯಬೇಕೆಂದು ತಿಳಿಸಿದಾಗ ಅವನು ಆನೆಗೆ ಶ್ರೀ ಕೃಷ್ಣನ ಮೇಲೆ ಎರಗುವಂತೆ ಸೂಚಿಸಿದ. ಅದು ಶ್ರೀ ಕೃಷ್ಣನ ಮೇಲೆ ಬೀಳಲು ಬಂದಾಗ ಶ್ರೀ ಕೃಷ್ಣನು

ಆನೆಯ ಹಿಂಭಾಗಕ್ಕೆ ಸರಿದು ಅದರ ಬಾಲವನ್ನು ಹಿಡಿದು ಎಳೆದಾಡಿದಾಗ ಭೀಕರ ಸೆಣೆಸಾಟ ನಡೆದು ಆನೆಯನ್ನು ಕೊಂದ ಶ್ರೀ ಕೃಷ್ಣ ಮಂಟಪವನ್ನು ಪ್ರವೇಶಿಸಿದನು. ಅಲ್ಲಿದ್ದ ಜನಸ್ತೋಮ ತಮ್ಮ ತಮ್ಮ ಸಂಸ್ಕಾರಕ್ಕೆ ಅನುಗುಣವಾಗಿ ಅವನನ್ನು ಕಂಡರು. ಪ್ರಖ್ಯಾತ ಮಲ್ಲ ಚಾನೂರನು ಶ್ರೀ ಕೃಷ್ಣನನ್ನು ಮಲ್ಲಯುದ್ಧಕ್ಕೆ ಆಹ್ವಾನಿಸಿ ಬಲರಾಮನು ತನ್ನ ಸೋದರನಾದ ಮುಸ್ತಿಕನೊಂದಿಗೆ ಸೆಣೆಸಾಡಬೇಕೆಂದನು. ಚಾನೂರ ಮತ್ತು ಮುಸ್ತಿಕರು ಕೊಲ್ಲಲ್ಪಟ್ಟಾಗ ನೆರೆದಿದ್ದವರೆಲ್ಲ ಅವರನ್ನು ಅಭಿನಂದಿಸಿ ಚಪ್ಪಾಳೆ ತಟ್ಟಿದರು. ಕಂಸನು ಮಾತ್ರ ಅಸಂತೋಷಗೊಂಡಿದ್ದು ಶ್ರೀ ಕೃಷ್ಣ ಬಲರಾಮರನ್ನು ಅವರ ಸ್ನೇಹಿತರೊಂದಿಗೆ ಹೊರಗೆಸೆಯಬೇಕೆಂದಾಗ ಕೋಪಗೊಂಡ ಶ್ರೀ ಕೃಷ್ಣನು ಅವನ ಮೇಲೆ ಹಾರಿ ಅವನನ್ನು ಸಂಹರಿಸಿದನು. ಕಂಸನಿಗೆ ಸಾವಿನ ನಂತರ "ಸಾರೂಪ್ಯ ಮುಕ್ತಿ"ಯು ದೊರೆಯಿತು. ಶ್ರೀ ಕೃಷ್ಣನು ಉಗ್ರಸೇನನಿಗೆ ರಾಜ್ಯಭಾರವನ್ನು ನೀಡಿದನು.

ಶ್ರೀ ಕೃಷ್ಣ ಬಲರಾಮರಿಗೆ ಉಪನಯನವಾದ ಸಂದರ್ಭದಲ್ಲಿ "ಗಾಯತ್ರಿ ಮಂತ್ರ"ವನ್ನು ಉಪದೇಶಿಸಿದ ನಂತರ ಪದ್ಧತಿಯಂತೆ ಅಧ್ಯಾತಿಕ ಜೀವನದಲ್ಲಿ ತರಬೇತಿ ಪಡೆಯುವ ಸಲುವಾಗಿ ಅವರನ್ನು ಸಾಂದೀಪನಿ ಮುನಿಯ ಬಳಿಗೆ ಕಳಿಸಲಾಯಿತು. ಬಾಲಕರಿಬ್ಬರಿಗೂ ಯುದ್ಧವಿದ್ಯೆ, ರಾಜಕೀಯ ಶಾಸ್ತ್ರ ಹಾಗೂ ಗಣಿತವನ್ನು ಬೋಧಿಸಿ, ಅವರನ್ನು ಪಾರಂಗತರನ್ನಾಗಿಸಲಾಯಿತು.

ತಮ್ಮ ಶಿಕ್ಷಣವನ್ನು ಪೂರೈಸಿದ ಶ್ರೀ ಕೃಷ್ಣ, ಬಲರಾಮರು "ಗುರುದಕ್ಷಿಣೆ"ಯನ್ನು ಕೊಡಬಯಸಿದಾಗ ಸಾಂದೀಪನಿ ಮುನಿ ಹಾಗೂ ಅವನ ಪತ್ನಿಯು, ಬಾಲಕರಿಬ್ಬರ ಅಸಾಧಾರಣ ಸಾಮರ್ಥ್ಯವನ್ನು ಕಂಡವರಾದ್ದರಿಂದ ಅಸಾಮಾನ್ಯವಾದದ್ದನ್ನೇ ಬಯಸಿ ಪ್ರಭಾಸಕ್ಷೇತ್ರವೆಂಬ ನದಿಯಲ್ಲಿ ಮುಳುಗಿ ಹೋಗಿದ್ದ ತಮ್ಮ ಮಗನನ್ನು ಮತ್ತೆ ಬದುಕಿಸಿಕೊಡಬೇಕೆಂದರು. ಕೂಡಲೇ ಅವರು ಸಾಗರನ ಬಳಿಗೆ ತೆರಳಿದಾಗ ಸಾಗರದ ಒಡೆಯನು ಅಲ್ಲಿ ಪ್ರತ್ಯಕ್ಷನಾದ. ಭಗವಂತನು ಅವನನ್ನು ಉದ್ದೇಶಿಸಿ, "ಕೆಲಕಾಲದ ಹಿಂದೆ ನೀನು ನಮ್ಮ ಗುರುಗಳ ಮಗನನ್ನು ಮುಳುಗಿಸಿದ್ದೀಯೆ. ಅವನನ್ನು ಹಿಂತಿರುಗಿಸುವಂತೆ ನಾನು ನಿನಗೆ ಆಜ್ಞಾಪಿಸುತ್ತಿದ್ದೇನೆ" ಎಂದು ನುಡಿದನು. ಅದಕ್ಕೆ ಸಾಗರನು ಉತ್ತರಿಸಿದನು: "ನಾನು ಆ ಹುಡುಗನನ್ನು ಅಪಹರಿಸಿಲ್ಲ. ಆದರೆ ಪಾಂಚಜನ್ಯನೆಂಬ ರಕ್ಕಸನು ಅವನನ್ನು ಹಿಡಿದಿದ್ದಾನೆ. ಈ ಮಹಾನ್ ರಾಕ್ಷಸನು ಸಾಮಾನ್ಯವಾಗಿ ಶಂಖದ ಚಿಪ್ಪಿನ ರೂಪದಲ್ಲಿ ನೀರಿನ ಆಳದಲ್ಲಿ ವಾಸವಾಗಿರುತ್ತಾನೆ. ನಿನ್ನ ಗುರುಗಳ ಮಗನು ಆ ರಕ್ಕಸನ ಹೊಟ್ಟೆಯಲ್ಲಿ ಅಡಗಿಸಿಲ್ಪಟ್ಟಿದ್ದಾನೆ". ಇದನ್ನು ಕೇಳಿದ ಶ್ರೀ ಕೃಷ್ಣನು ನೀರಿನೊಳಕ್ಕೆ ಧುಮುಕಿ ರಾಕ್ಷಸನನ್ನು ಸ್ಥಳದಲ್ಲೇ ಕೊಂದರೂ ಗುರುವಿನ ಮಗನನ್ನು ಕಾಣದೆ ಹೋದನು. ಶಂಖದ ಚಿಪ್ಪಿನ ರೂಪದಲ್ಲಿದ್ದ ರಾಕ್ಷಸನ ಮೃತದೇಹವನ್ನು ಎತ್ತಿಕೊಂಡು ಅವನು ತನ್ನ ರಥಕ್ಕೆ ಹಿಂತಿರುಗಿ ಅಲ್ಲಿಂದ ಯಮರಾಜನ ಗ್ರಹವಾದ "ಸಮ್ಯಾಮಿನಿ"ಗೆ ತೆರಳಿ ಶಂಖವನ್ನು ಗಟ್ಟಿಯಾಗಿ ಊದಿ ಯಮರಾಜನಿಂದ ಗುರುಗಳ ಮಗನನ್ನು ಪಡೆದು ಸಾಂದೀಪನಿ ಮುನಿಗೆ ಅವನನ್ನಿತ್ತನು.

ಶ್ರೀ ಕೃಷ್ಣ ಬಲರಾಮರು ಮಥುರೆಗೆ ಹಿಂತಿರುಗಿದಾಗ ವಸುದೇವನ ಸೋದರನ ಮಗನಾದ ಉದ್ಧವನು ಭಗವಂತನನ್ನು ಕಾಣಲು ಬಂದನು. ಅವನೂ ಶ್ರೀ ಕೃಷ್ಣನ ವಯಸ್ಸಿನವನೇ. ಅವನನ್ನು ಕಂಡು ಆನಂದಗೊಂಡ ಶ್ರೀ ಕೃಷ್ಣನು ಅವನ ಮೂಲಕ ಬೃಂದಾವನಕ್ಕೆ ಸಂದೇಶವೊಂದನ್ನು ಕಳಿಸಲು ಬಯಸಿದನು.

ವೃಷ್ಣಿ ಕುಲದಲ್ಲಿ ಉದ್ಧವನು ಅತ್ಯಂತ ಉನ್ನತನಾದ ವ್ಯಕ್ತಿ ಎಂಬುದಾಗಿ ವಿವರಿಸಲಾಗಿದೆ. ಅವನು ಶ್ರೀ ಕೃಷ್ಣನಿಗೆ ಸರಿಸಮಾನನೆನ್ನಲಾಗಿದೆ. ಅವನು ಬೃಹಸ್ಪತಿಯ ನೇರ ಶಿಷ್ಯನಾಗಿದ್ದು ಅತ್ಯಂತ ಬುದ್ಧಿಶಾಲಿ ಹಾಗೂ ಸೂಕ್ಷ್ಮಮತಿಯಾಗಿದ್ದು ಶ್ರೀ ಕೃಷ್ಣನ ನಿಕಟ ಸ್ನೇಹಿತನು. ಬೃಂದಾವನದಲ್ಲಿ ನಡೆಯುತ್ತಿದ್ದ ಉನ್ನತ ಮಟ್ಟದ ಭಕ್ತಿಪೂರ್ವಕ ಸೇವೆಯನ್ನು ಕುರಿತು ಅಧ್ಯಯನ ಮಾಡಬೇಕೆಂದು ಉದ್ಧವನಿಗೆ ತಿಳಿಸಿದಾಗ ಅಲ್ಲಿಗೆ ತೆರಳಿದ ಉದ್ಧವನು ನಂದ ಮಹಾರಾಜನಿಗೆ ಶ್ರೀ ಕೃಷ್ಣನ ಲೀಲೆಗಳೆಲ್ಲವನ್ನೂ ತಿಳಿಸಿದನು. ಗೋಪಿಯರಿಗೂ ಅವನು ಶ್ರೀ ಕೃಷ್ಣನ ಸಂದೇಶವನ್ನು ತಿಳಿಸಿ ಮತ್ತೆ ಮಥುರೆಗೆ ಹಿಂತಿರುಗಿದಾಗ ಅವನು ಹಾಗೂ ಶ್ರೀ ಕೃಷ್ಣ ಎಣೆಯಿಲ್ಲದಂತೆ ದಿನಗಟ್ಟಲೆ ಮಾತನಾಡಿದರು. ಶ್ರೀ ಕೃಷ್ಣನಿಗೆ ಗಂಧದ ಲೇಹ್ಯವನ್ನು ಸರಬರಾಜು ಮಾಡಿದ ಕುಬ್ಜಳ ನೆನಪಾಗಿ ಉದ್ಧವನೊಂದಿಗೆ ಅಲ್ಲಿಗೆ ಹೊರಟನಲ್ಲದೆ, ಅಕ್ರೂರನ ನಿವಾಸಕ್ಕೂ ಭೇಟಿಕೊಟ್ಟನು.

ಪಾಂಡುವಿನ ಪುತ್ರರ ಬಗ್ಗೆ ತಿಳಿಯಲು ಬಯಸಿದ ಶ್ರೀ ಕೃಷ್ಣನು ಅವರನ್ನು ಕುರಿತು ವಿಚಾರಿಸಲು ಅಕ್ರೂರನನ್ನು ಹಸ್ತಿನಾಪುರಕ್ಕೆ ಕಳಿಸಿದಾಗ ಅವನಲ್ಲಿ ಧೃತರಾಷ್ಟ್ರ, ಕುಂತಿ ಹಾಗೂ ಇತರರನ್ನು ಭೇಟಿಯಾಗಿ ಪಾಂಡುವಿನ ಪುತ್ರರ ಬಗ್ಗೆ ತಾರತಮ್ಯ ಮಾಡಲಾಗಿದೆ ಎಂಬ ಭಾವನೆಯನ್ನೇ ಪಡೆದು ಶ್ರೀ ಕೃಷ್ಣನಿಗೆ ವಿಷಯವನ್ನು ತಿಳಿಸಿದನು.

ಕಂಸನ ಮರಣಾನಂತರ ಮಗಧದ ದೊರೆ ಜರಾಸಂಧನು ಮಥುರೆಯ ಮೇಲೆ ಧಾವಿಸಲು ನಿರ್ಧರಿಸಿದಾಗ ಸೋಲಿಸಲ್ಪಟ್ಟ. ಅವನು ಅದರ ಮೇಲೆ ಧಾಳಿ ಮಾಡಿದ್ದು ಹದಿನೇಳು ಸಲ. ಅವನೊಂದಿಗೆ ಕಾಲಯವನನೆಂಬ ದೊರೆಯೂ ಸೇರಿದ್ದ. ಆದರೆ ಎಲ್ಲ ಬಾರಿಯೂ ಅವರಿಗೆ ಪರಾಜಯ ಉಂಟಾಯಿತು.

ಯದು ಕಾಲದ ಪುರೋಹಿತ ಗಾರ್ಗ ಮುನಿಯು ಶಾಸ್ತ್ರಕ್ಕೆ ಸಂಬಂಧಿಸಿದಂತೆ ತನ್ನ ಭಾವನಿಂದ ಹೀಯಾಳಿಸಲ್ಪಟ್ಟನು. ಯದು ದೊರೆಗಳಿಗೆ ಈ ವಿಷಯ ತಿಳಿದಾಗ ಅವರೂ ಅಪಹಾಸ್ಯಗೈದು ಗಾರ್ಗ ಮುನಿಯು ಅವಹೇಳನಗೊಂಡನು. ಮಹೇಶ್ವರನ ವರದಿಂದ ಗಾರ್ಗನು ಯವನ ದೊರೆಯ ರಾಣಿಯ ಗರ್ಭದಲ್ಲಿ ಯದುಗಳನ್ನು ಬೆದರಿಸಲು ಕಾಲಯವನನನ್ನು ಹುಟ್ಟಿಸಿದ. ಯವನರ ದೊರೆಯಾದ ಕಾಲಯವನನು ಮಥುರೆಯ ಮೇಲೆ ಧಾಳಿ ನಡೆಸಿ ಅದನ್ನು ಎಲ್ಲ ದಿಕ್ಕುಗಳಿಂದಲೂ ವಶಪಡಿಸಿಕೊಂಡು ಜರಾಸಂಧನು ಇದರ ಉಪಯೋಗವನ್ನು ಪಡೆದುಕೊಳ್ಳುತ್ತಾನೆ ಎಂಬುದಾಗಿ ನಿರೀಕ್ಷಿಸಿದ್ದನು.

ಮಥುರೆಯು ಧಾಳಿಗೊಳಗಾದಾಗ ಶ್ರೀ ಕೃಷ್ಣನು ಎರಡು ಕಾಲಿನ ಯಾವುದೇ ಪ್ರಾಣಿ, ಮನುಷ್ಯ ಅಥವಾ ರಾಕ್ಷಸ ಪ್ರವೇಶಿಸಲಾರದಂಥ ಅಭೇದ್ಯ ಕೋಟೆಯನ್ನು ದ್ವಾರಕ ನಗರದಲ್ಲಿ ನಿರ್ಮಿಸಲು ನಿರ್ಧರಿಸಿದನು. ಅಲ್ಲಿ ಅವನು ಬಂಧುಗಳನ್ನು ಇಡಲು

ನಿಶ್ಚಯಿಸಿದನು. (ದ್ವಾರಕೆಯು ಮಥುರದ ಒಂದು ಭಾಗವಾಗಿದ್ದು ಶ್ರೀ ಕೃಷ್ಣನು ದ್ವಾರಕೆಯಲ್ಲಿ ಸಮುದ್ರದ ಕೆಳಗೆ ಕೋಟೆಯನ್ನು ನಿರ್ಮಿಸಿರುವುದಾಗಿ ತೋರುತ್ತದೆ) ಈ ಕೋಟೆಯಲ್ಲಿ ನಿಯೋಜಿತ ರೀತಿಯಲ್ಲಿ ಬೀದಿಗಳು ಹಾಗೂ ಹಾದಿಗಳಿದ್ದವು. ಅರಮನೆಗಳು ಹಾಗೂ ಗೋಪುರಗಳು ಇದ್ದವು. ಅವನು ಮಥುರೆಯ ಜನರನ್ನೆಲ್ಲ ದ್ವಾರಕೆಗೆ ವರ್ಗಾಯಿಸಿ ಬಲರಾಮನನ್ನು ಅಲ್ಲಿ ನೇಮಿಸಿದನು. ಶ್ರೀ ಕೃಷ್ಣ ಪರಮಾತ್ಮನು ಯಾವುದೇ ಆಯುಧವಿಲ್ಲದೆ ಮಥುರೆಯಿಂದ ಹೊರಬಂದಾಗ ಕಾಲಯವನನು ಅವನನ್ನು ಮೊದಲ ಬಾರಿಗೆ ಕಂಡಾಗ ತನ್ನನ್ನು ಗಮನಿಸದೆಯೇ ಹೊರಟ ಶ್ರೀ ಕೃಷ್ಣನನ್ನು ಅವನು ಹಿಂಬಾಲಿಸಿದಾಗ ಭಗವಂತನು ಗುಹೆಯೊಂದನ್ನು ಹೊಕ್ಕು ಅಂತರ್ಧಾನನಾದನು.

ಗುಹೆಯಲ್ಲಿ ಮಲಗಿದ್ದ ವ್ಯಕ್ತಿಯೊಬ್ಬನನ್ನು ಕಂಡಾಗ ಅವನೇ ಶ್ರೀ ಕೃಷ್ಣನೆಂದು ಭಾವಿಸಿದ ಕಾಲಯವನನು ಅವನನ್ನು ಒದ್ದಾಗ ಎಚ್ಚರಗೊಂಡ ಆ ವ್ಯಕ್ತಿ ಅವನನ್ನು ದಿಟ್ಟಿಸುವ ಮೂಲಕವೇ ನಾಶಪಡಿಸಿದನು. ಪರೀಕ್ಷಿತ ರಾಜನು ಈ ವ್ಯಕ್ತಿಯು ಯಾರೆಂಬುದನ್ನು ಶ್ರೀ ಶುಕಾಚಾರ್ಯರಿಂದ ತಿಳಿದುಕೊಳ್ಳಲು ಬಯಸಿದನು.

ಶ್ರೀ ಶುಕಾಚಾರ್ಯರೆಂದರು: "ಎಲೈ ದೊರೆಯೇ, ಈ ವ್ಯಕ್ತಿಯು ಶ್ರೀ ರಾಮಚಂದ್ರನ ವಂಶವಾದ ಇಕ್ಷ್ವಾಕುವಿನ ಉನ್ನತ ಕುಟುಂಬದಲ್ಲಿ ಜನಿಸಿದವನಾಗಿದ್ದು ಮಂಧಾತನೆಂಬ ಉನ್ನತ ರಾಜನ ಪುತ್ರನು. ಅವನೇ ಹಿರಿಯ ಆತ್ಮನಾಗಿದ್ದು ಮುಚುಕುಂದನೆಂಬುದಾಗಿ ಜನಪ್ರಿಯನಾಗಿದ್ದನು. ಮುಚುಕುಂದ ದೊರೆಯು ವೇದಪಾರಂಗತನು. ಬ್ರಾಹ್ಮಣ ಸಂಸ್ಕೃತಿಯ ಪ್ರತೀಕನಾದವನು. ಸತ್ಯಸಂಧ, ವಚನ ಪರಿಪಾಲಕ. ಅವನೆಷ್ಟು ಬಲಶಾಲಿಯಾಗಿದ್ದನೆಂದರೆ ಇಂದ್ರ ಹಾಗೂ ಇನ್ನಿತರ ಉಪದೇವತೆಗಳಂಥವರೂ ಸಹ ದಾನವರೊಂದಿಗೆ ಕಾದಾಟದಲ್ಲಿ ಅವನ ನೆರವನ್ನು ಬೇಡಿದಾಗ ಅವನು ಅವರೊಂದಿಗೆ ಹೊಡೆದಾಡಿ ಉಪದೇವತೆಗಳನ್ನು ಅದೆಷ್ಟೋ ಸಲ ರಕ್ಷಿಸಿದ್ದನು".

ಉಪದೇವತೆಗಳ ಸೇನಾ ಮುಖ್ಯಸ್ಥನಾದ ಕಾರ್ತಿಕೇಯನು ಮುಚಕುಂದ ದೀರ್ಘಕಾಲದಿಂದ ಹೋರಾಟ ನಡೆಸುತ್ತಿದ್ದರಿಂದ ತನ್ನ ರಾಜ್ಯಕ್ಕೆ ಹಿಂತಿರುಗಬೇಕೆಂದು ತಿಳಿಸಿದನು. ಆದರೆ ಅವನು ಅನೇಕ ಕಾಲ ತನ್ನ ರಾಜ್ಯವನ್ನು ಬಿಟ್ಟಿದ್ದರಿಂದ ಕಾಲಕ್ರಮದಲ್ಲಿ ತನ್ನದೆಲ್ಲವನ್ನೂ ಕಳೆದುಕೊಂಡಿದ್ದಾನೆ ಎಂಬುದಾಗಿಯೂ ಕಾರ್ತಿಕೇಯನಿಗೆ ತಿಳಿಸಿದ. "ಮುಕ್ತಿಯ" ಹೊರತಾಗಿ ಬೇರ್ಯಾವ ವರವನ್ನಾದರೂ ಬೇಡಬಹುದೆಂದು ಕಾರ್ತಿಕೇಯನು ಹೇಳಿದನು. ಮುಚುಕುಂದ ದೊರೆಯು ಅನೇಕ ಕಾಲದಿಂದ ನಿದ್ರಿಸಿರಲಿಲ್ಲ. ಅವನಿಗೆ ನಿದ್ರೆಯು ಅಗತ್ಯವೆನ್ನಿಸಿತು. ನನಗೆ ನಿದ್ರೆ ಬೇಕಾಗಿದೆ. ನನಗೆ ಈ ವರ ಬೇಕು. ನನ್ನ ನಿದ್ರೆಯನ್ನು ಭಂಗಗೊಳಿಸಿ ನನ್ನನ್ನು ಎಚ್ಚರಿಸುವವನು ನನ್ನ ನೋಟ ಮಾತ್ರದಿಂದಲೇ ಸುಟ್ಟು ಬೂದಿಯಾಗಲೆಂಬ ವರವನ್ನು ಕರುಣಿಸು". ಉಪದೇವತೆಯು ಅದಕ್ಕೆ ಒಪ್ಪಿ ಅವನು ಸಂಪೂರ್ಣ ವಿಶ್ರಾಂತಿ ಪಡೆಯಲೆಂದು ಆಶೀರ್ವದಿಸಿದನು. ಮುಚುಕುಂದನು ಗವಿಯನ್ನು ಪ್ರವೇಶಿಸಿದನು. ಅವನು ಮೇಲೆಯೇ ಹೇಳಿರುವಂತೆ ಕಾಲಯವನನ್ನು

ಸುಟ್ಟು ಭಸ್ಮ ಮಾಡಿದಾಗ ಭಗವಂತನು ಕಾಣಿಸಿಕೊಂಡು "ನೀನು ನಿನ್ನ ಮುಂದಿನ ಜನ್ಮದಲ್ಲಿ ಉನ್ನತ ಮಟ್ಟದ ವೈಷ್ಣವನಾಗಿ, ಬ್ರಾಹ್ಮಣರಲ್ಲೆಲ್ಲ ಅತ್ಯುತ್ತಮವಾದ ವರ್ಗದಲ್ಲಿ ಜನಿಸಲಿದ್ದು ಆ ಜನ್ಮದಲ್ಲಿ ನನ್ನ ಅತಿಶಯ ಸೇವೆಯಲ್ಲಿ ನಿರತನಾಗಿರುವುದೇ ನಿನ್ನ ಪ್ರಧಾನ ಕಾರ್ಯವಾಗಿರುತ್ತದೆ" ಎಂದನು.

ಈ ಮಧ್ಯೆ ಜರಾಸಂಧನು ಮತ್ತೆ ಎಲ್ಲ ಶಕ್ತಿಯನ್ನು ಒಟ್ಟು ಗೂಡಿಸಿಕೊಂಡು ಹದಿನೆಂಟನೇ ಬಾರಿ ಮಥುರೆಯ ಮೇಲೆ ಧಾಳಿ ಮಾಡಿದನು. ಶ್ರೀ ಕೃಷ್ಣ ಬಲರಾಮರು ಯುದ್ಧಭೂಮಿಯನ್ನು ಬಿಟ್ಟು ದ್ವಾರಕೆಗೆ ಹೊರಟರು. ಯುದ್ಧಭೂಮಿಯನ್ನು ತ್ಯಜಿಸಿದವನಾದ್ದರಿಂದ ಶ್ರೀ ಕೃಷ್ಣನಿಗೆ "ರಣಛೊಡ" ಎಂಬ ಹೆಸರೂ ಇದೆ. ಸೈನಿಕರು ಮುಂದೆಯೂ ಹತಗೈಯ್ಯುವುದನ್ನು ನಿಲ್ಲಿಸುವ ಸಲುವಾಗಿ ಹಾಗೂ ಇತರ ಪ್ರಮುಖ ಕಾರ್ಯಗಳನ್ನು ನೆರವೇರಿಸಲು ಪರಮಾತ್ಮನು ಕಾದಾಡದೆ ಯುದ್ಧಭೂಮಿಯಿಂದ ನಿರ್ಗಮಿಸಿದನು.

ದ್ವಾರಕೆಗೆ ಹಿಂತಿರುಗಿದ ನಂತರ ಬಲರಾಮನು ರೇವತಿಯನ್ನೂ, ಶ್ರೀ ಕೃಷ್ಣನು ರುಕ್ಮಿಣಿಯನ್ನೂ ವಿವಾಹವಾದರು. ರುಕ್ಮಿಣಿಯು ಭೀಷ್ಮಕನ ಪುತ್ರಿ. ಅವಳಿಗೆ ಶ್ರೀ ಕೃಷ್ಣನನ್ನು ವರಿಸುವ ಇಚ್ಛೆಯಿದ್ದರೂ ಅವಳ ಸಹೋದರನಿಗೆ ಅವಳು ಶಿಶುಪಾಲನನ್ನು ವಿವಾಹವಾಗ ಬೇಕೆಂದಿತ್ತು. ಅವಳು ಬ್ರಾಹ್ಮಣನೊಬ್ಬನ ಮೂಲಕ ಶ್ರೀ ಕೃಷ್ಣನಿಗೆ ಸಂದೇಶವನ್ನು ಕಳಿಸಿದಾಗ ಶ್ರೀ ಕೃಷ್ಣ ಅವಳನ್ನು ಕೊಂಡೊಯ್ದು ವಿವಾಹವಾದ. ರುಕ್ಮಿಣಿಯೊಂದಿಗೆ ಹಿಂತಿರುಗುತ್ತಿದ್ದಾಗ ಶಿಶುಪಾಲ ಹಾಗೂ ಇತರ ರಾಜಕುಮಾರರು ಅವನನ್ನು ಅಟ್ಟಿಸಿಕೊಂಡು ಬಂದರೂ ಅವರೆಲ್ಲ ಸೋತರು.

ವಸುದೇವನ ಅಂಶವಾದ, ಈ ಹಿಂದೆ ಮಹೇಶ್ವರನ ಕೋಪಕ್ಕೆ ಸಿಕ್ಕಿ ಭಸ್ಮವಾಗಿದ್ದ ಮನ್ಮಥನು ರುಕ್ಮಿಣಿಯ ಉದರದಲ್ಲಿ ಶ್ರೀ ಕೃಷ್ಣನಿಂದ ಪ್ರದ್ಯುಮ್ನ ಎಂಬ ಹೆಸರಿನಲ್ಲಿ ಜನಿಸಿದನೆನ್ನಲಾಗಿದೆ. ಪ್ರದ್ಯುಮ್ನನು ಸಾಂಬಾರನೆಂಬ ರಾಕ್ಷಸನನ್ನು ಕೊಂದನು.

## ಶ್ಯಮಂತಕ ಮಣಿ

ಸೂರ್ಯದೇವನು ಸತ್ರಜಿತ ಎಂಬ ದೊರೆಗೆ ವರದ ರೂಪವಾಗಿ "ಶ್ಯಮಂತಕ ಆಭರಣ" ವೆಂಬುದನ್ನು ನೀಡಿದನು. ಆಗ ದೊರೆ ಹಾಗೂ ಯದು ಕುಲದವರ ಮಧ್ಯೆ ಮನಸ್ತಾಪವೇರ್ಪಟ್ಟಿತು. ಸತ್ಯಜಿತನು ಆಭರಣದೊಂದಿಗೆ ತನ್ನ ಮಗಳಾದ ಸತ್ಯಭಾಮೆಯನ್ನು ಶ್ರೀ ಕೃಷ್ಣನಿಗೆ ವಿವಾಹ ಮಾಡಿಕೊಡಲು ಒಪ್ಪಿದಾಗ ಸ್ನೇಹವೇರ್ಪಟ್ಟಿತು. ಈ ಎರಡೂ ವಿವಾಹಗಳೂ ಪ್ರದ್ಯುಮ್ನನ ಜನನಕ್ಕೆ ಮೊದಲು ನಡೆದಂಥವು. ಇವು ಹೇಗೆ ನಡೆಯಿತೆಂಬುದೇ ಒಂದು ಸುಂದರ ಕಥಾನಕ.

ಸತ್ರಜಿತ ದೊರೆಯು ಸೂರ್ಯದೇವನೊಂದಿಗೆ ತುಂಬಾ ಸ್ನೇಹದಿಂದಿದ್ದು ತಾನು ಅವನಿಂದ ಗಳಿಸಿದ ಶ್ಯಮಂತಕ ಮಣಿಯನ್ನು ಧರಿಸಿ ದ್ವಾರಕೆಯನ್ನು ಆಗಿಂದಾಗ್ಗೆ ಸಂದರ್ಶಿಸುತ್ತಿದ್ದಾಗ ಅವನನ್ನೇ ಜನರು ಸೂರ್ಯದೇವನೆಂದು ಭಾವಿಸಿ, ಒಮ್ಮೆ

ನಿವಾಸಿಗಳು ದ್ವಾರಕೆಗೆ ಸೂರ್ಯದೇವನೇ ಆಗಮಿಸಿದ್ದಾನೆ ಎಂಬುದಾಗಿ ಶ್ರೀ ಕೃಷ್ಣನಿಗೆ ತಿಳಿಸಿದರು. ಆ ಸಂದರ್ಭದಲ್ಲಿ ಶ್ರೀ ಕೃಷ್ಣನು ಚದುರಂಗದಾಟದಲ್ಲಿ ತೊಡಗಿದ್ದನು. ಅವನು ಬಂದಿರುವವನು ಸೂರ್ಯದೇವನಲ್ಲವೆಂದೂ, ಅವನಿಂದ ಪಡೆದ ಆಭರಣವನ್ನು ಪ್ರದರ್ಶಿಸಲು ಅಲ್ಲಿಗೆ ಬಂದಿರುವ ದೊರೆ ಸತ್ರಜಿತನು ಎಂಬುದಾಗಿ ತಿಳಿಸಿದನು.

ಐಹಿಕ ಸ್ವತ್ತನ್ನು ಪೂಜಿಸುವುದು "ಬ್ರಾಹ್ಮಣರಲ್ಲಿ" ನಿಷೇಧಗೊಂಡಿದ್ದರೂ ದೊರೆಯು ಅದನ್ನು ಪೂಜೆಗಾಗಿ ದೇವಾಲಯವೊಂದರಲ್ಲಿ ಇಟ್ಟನು. ಶ್ರೀ ಕೃಷ್ಣನು ಅದನ್ನು ಬೇಡಿದರೂ ಅವನಿಗೆ ಅದನ್ನು ನೀಡಲಾಗಲಿಲ್ಲ. ಶ್ರೀ ಕೃಷ್ಣನು ದೊರೆಯಾದ ಉಗ್ರಸೇನನಿಗೆ ಅದನ್ನು ನೀಡಬೇಕೆಂದಿದ್ದನು.

ಒಮ್ಮೆ ಸತ್ರಜಿತನ ಸಹೋದರನಾದ ಪ್ರಸೇನನು ಶ್ಯಮಂತಕ ಆಭರಣವನ್ನು ಕತ್ತಿನಲ್ಲಿ ಧರಿಸಿ ಬೇಟೆಗೆ ಹೊರಟನು. ಆದರೆ ಅಲ್ಲಿ ಸಿಂಹವೊಂದು ಅವನನ್ನು ಕೊಂದು ಆ ಆಭರಣವನ್ನು ಕೊಂಡೊಯ್ದು ತನ್ನ ಗುಹೆಯಲ್ಲಿ ಇಟ್ಟಿತು. ಈ ಸಮಾಚಾರ ಗೋರಿಲ್ಲಾಗಳ ಮಧ್ಯೆ ಹರಡಿದಾಗ, ಅವುಗಳ ಮುಖ್ಯಸ್ಥ ಜಂಭುವಾನನು ಸಿಂಹವನ್ನು ಕೊಂದು ಅಭರಣವನ್ನು ಅಪಹರಿಸಿದನು. ಪ್ರಸೇನನು ಮನೆಗೆ ಹಿಂತಿರುಗದಿದ್ದಾಗ ಸತ್ರಜಿತನು ಶ್ರೀ ಕೃಷ್ಣನೇ ಪ್ರಸೇನನನ್ನು ಕೊಂದಿರಬಹುದೆಂದು ಭಾವಿಸಿ ಅವನನ್ನು ನಿಂದಿಸಿದನು. ಗುಲ್ಲೆಬ್ಬಿತು. ಆದರೆ ಶ್ರೀ ಕೃಷ್ಣನಿಗೆ ಈ ವಿಷಯ ಇಷ್ಟವಾಗದಿದ್ದರಿಂದ ಅವನೇ ಸ್ವತಃ ಸತ್ಯವನ್ನು ತಿಳಿಯಲು ಗೆಳೆಯರೊಂದಿಗೆ ಅರಣ್ಯವನ್ನು ಪ್ರವೇಶಿಸಿದಾಗ ಜಂಭುವಾನನು ಗುಹೆಯಲ್ಲಿ ವಾಸಿಸುತ್ತಿದ್ದನು. ಶ್ರೀ ಕೃಷ್ಣನು ತನ್ನ ಗೆಳೆಯರಿಗೆ ಹೊರಗೇ ಉಳಿದಿರಲು ಹೇಳಿ ಗುಹೆಯನ್ನು ಪ್ರವೇಶಿಸಿದಾಗ ಶ್ಯಮಂತಕ ಮಣಿಯು ಆಟಿಗೆಯೆಂದು ಭಾವಿಸಿ ಅದರೊಂದಿಗೆ ಆಟವಾಡುತ್ತಿದ್ದ ಜಂಭುವಾನನ ಮಗನನ್ನು ಕಂಡನು. ಶ್ರೀ ಕೃಷ್ಣನು ಅದನ್ನು ತೆಗೆದುಕೊಳ್ಳಬಯಸಿದಾಗ ಗಟ್ಟಿಯಾಗಿ ಅತ್ತ ಮಗುವಿನ ಸದ್ದು ಕೇಳಿದ ಜಂಭುವಾನನು ಹೊರಗೆ ಬಂದಾಗ ಅವನು ಹಾಗೂ ಶ್ರೀ ಕೃಷ್ಣರ ಮಧ್ಯೆ ಕಾಳಗ ನಡೆಯಿತು. ಜಂಭುವಾನನಿಗೆ ಬಂದಿರುವ ವ್ಯಕ್ತಿ ಯಾರೆಂದು ತಿಳಿದು ಹೇಳಿದನು : "ನನ್ನ ಒಡೆಯನೇ, ನೀನಾರೆಂಬುದು ನನಗೀಗ ಅರ್ಥವಾಗಿದೆ. ನೀನೇ ಮಹಾವಿಷ್ಣು. ಪ್ರತಿಯೊಬ್ಬರ ಶಕ್ತಿ, ಸಂಪತ್ತು, ಪ್ರತಿಷ್ಠೆ, ಸೌಂದರ್ಯ, ವಿವೇಕ ಹಾಗೂ ತ್ಯಾಗಗಳ ಮೂಲ".

ಆಭರಣದ ಅಪಹರಣದ ಸಂದರ್ಭದಲ್ಲಿ ತನ್ನ ಹೆಸರಿನ ಜೋಡಣೆಯಾಗಿರುವುದರಿಂದ ಅದು ತನಗೆ ಬೇಕಾಗಿದೆಯೆಂದು ಶ್ರೀ ಕೃಷ್ಣನು ಜಂಭುವಾನನಿಗೆ ತಿಳಿಸಿದಾಗ ಅವನು ಅದರ ಜತೆಗೆ ತನ್ನ ಪುತ್ರಿಯನ್ನೂ ಅವನಿಗೆ ವಿವಾಹ ಮಾಡಿಕೊಟ್ಟನು. ಹೊರಗೆ ನಿಂತಿದ್ದ ಗೆಳೆಯರು ಶ್ರೀ ಕೃಷ್ಣನಿಲ್ಲದೆಯೇ ವಾಪಸ್ಸಾದಾಗ ಎಲ್ಲರೂ ಚಿಂತಿತರಾದರು. ಶ್ರೀ ಕೃಷ್ಣ ತನ್ನ ಪತ್ನಿ ಜಾಂಬುವತಿಯೊಂದಿಗೆ ಬಂದು ನಡೆದುದ್ದೆಲ್ಲವನ್ನೂ ನಿರೂಪಿಸಿದಾಗ ಸತ್ರಜಿತ್ ದೊರೆಯು ತನ್ನ ತಿಳಿಗೇಡಿತನಕ್ಕಾಗಿ ಪಶ್ಚಾತ್ತಾಪ ಪಟ್ಟು ತನ್ನ ಮಗಳಾದ ಸತ್ಯಭಾಮೆಯನ್ನು ಶ್ಯಮಂತಕ ಮಣಿಯೊಂದಿಗೆ ಅವನಿಗೆ ಒಪ್ಪಿಸಿದಾಗ ಶ್ರೀ ಕೃಷ್ಣನು ಹೇಳಿದನು: "ಈ ಆಭರಣವು ನೀನು ಇಟ್ಟಂತೆಯೇ ದೇವಾಲಯದಲ್ಲಿ ಉಳಿದರೇ ಒಳಿತು. ನಮ್ಮಲ್ಲಿ ಪ್ರತಿಯೊಬ್ಬರೂ ಅದರಿಂದ ಪ್ರಯೋಜನವನ್ನು ಪಡೆಯುತ್ತೇವೆ.

ಏಕೆಂದರೆ ಅದು ದ್ವಾರಕನಗರಿಯಲ್ಲಿ ಇರುವುದರಿಂದ ಇಲ್ಲಿ ಕ್ಷಾಮಧಾಮಗಳು ಅಥವಾ ಬೇಸಿಗೆ, ಚಳಿಗಳು ಇರುವುದಿಲ್ಲ".

ಬಲರಾಮಕೃಷ್ಣರು ದ್ವಾರಕೆಯಿಂದ ದೂರವಿದ್ದಾಗ ಅದನ್ನು ಅಪಹರಿಸುವ ಕುತಂತ್ರ ನಡೆಯಿತು. ಸತಧನ್ವ, ಅಕ್ರೂರ ಹಾಗೂ ಕೃತವರ್ಮನು ಇದಕ್ಕೆ ಕಾರಣರು. ಅಕ್ರೂರ ಮತ್ತು ಕೃತವರ್ಮರು ಇದರಲ್ಲಿ ಒಳಗೊಂಡದ್ದೇಕೆ ಎಂಬುದಕ್ಕೆ ವಿವರಣೆಯಿದು. ಅಕ್ರೂರನು ಶ್ರೀ ಕೃಷ್ಣ ಮತ್ತು ಬಲರಾಮರನ್ನು ಮಥುರೆಗೆ ಕರೆದೊಯ್ದಾಗ ಅವನು ಗೋಪಿಯರಿಂದ ಶಪಿಸಲ್ಪಟ್ಟಿದ್ದನು. ಕೃತವರ್ಮನು ಶ್ರೀ ಕೃಷ್ಣನ ಮಹಾನ್ ಭಕ್ತನಾಗಿದ್ದರೂ ಕಂಸನ ಅನುಯಾಯಿಯಾಗಿದ್ದರಿಂದ ಅವನ ಪಾಪಕೃತ್ಯಗಳಿಂದ ಕಲುಷಿತನಾಗಿದ್ದನು.

ಸತ್ರಜಿತನನ್ನು ಕೊಲ್ಲಲು ಬಯಸಿದ ಸತಧನ್ವನು ಸತ್ರಜಿತನು ನಿದ್ರೆಯಲ್ಲಿದ್ದಾಗ ಅವನನ್ನು ಕೊಂದ ವಿಷಯವನ್ನು ತಿಳಿದು ಶ್ರೀ ಕೃಷ್ಣನು ಕಳವಳಿಸಿದನು. ಸತಧನ್ವನು ಪರಾರಿಯಾದನು. ಆದರೆ ಶ್ರೀ ಕೃಷ್ಣ ಬಲರಾಮರು ಅವನನ್ನು ಅಟ್ಟಿಸಿಕೊಂಡು ಹೋಗಿ ಮಿಥಿಲೆಯ ಬಳಿ ಅವನನ್ನು ಕೊಂದರೂ ಮಣಿಯು ಮಾತ್ರ ದೊರೆಯಲಿಲ್ಲ. ಅದನ್ನು ಪತ್ತೆ ಹಚ್ಚಲು ದ್ವಾರಕೆಗೆ ಹಿಂತಿರುಗಿದಾಗ ಅಲ್ಲಿಂದ ಅಕ್ರೂರ ಕೃತವರ್ಮರು ಆ ಸ್ಥಳವನ್ನು ಬಿಟ್ಟಿದ್ದರು. ಅಲ್ಲಿಗೆ ಬರಮಾಡಲ್ಪಟ್ಟ ಅಕ್ರೂರನಿಗೆ ಶ್ರೀ ಕೃಷ್ಣನು ಹೇಳಿದನು: "ಸತಧನ್ವನು ನಿನಗೆ ಈಗಾಗಲೇ ಆಭರಣವನ್ನು ನೀಡಿರುವ ಸಂಗತಿ ನನಗೆ ತಿಳಿದಿದೆ. ಪ್ರಸ್ತುತ ಸತ್ರಜಿತನು ಪುತ್ರರಿಲ್ಲದೇ ಮರಣಹೊಂದಿರುವುದರಿಂದ ಅದಕ್ಕೆ ನೇರ ವಾರಸುದಾರರಿಲ್ಲ. ಅವನ ಪುತ್ರಿಯಾದ ಸತ್ಯಭಾಮೆಗೂ ಅದರ ಮೇಲೆ ತೀವ್ರ ಆಸೆಯಿರದಿದ್ದರೂ, ಅಗತ್ಯ ವಾರಸುದಾರಿಕೆಯ ವಿಧಿಗಳನ್ನು ಅನುಸರಿಸಿದ ನಂತರ ತನ್ನ ಮಗನು, ಅಂದರೆ ಸತ್ರಜಿತನ ಮೊಮ್ಮಗನು ಅದನ್ನು ಪಡೆಯಬೇಕೆಂದು ಆಶಿಸುತ್ತಾಳೆ". ಅನಂತರ ಅಕ್ರೂರನು ಆ ಆಭರಣ ಅಲ್ಲಿಯವರೆಗೂ ತನ್ನ ಬಳಿಯೇ ಇತ್ತೆಂಬುದನ್ನು ಎಲ್ಲರ ಮುಂದೆ ಬಹಿರಂಗ ಪಡಿಸುವಂತೆ ಶ್ರೀ ಕೃಷ್ಣನು ಮಾಡಿದನು.

ಹಸ್ತಿನಾಪುರಕ್ಕೆ ತೆರಳಿದ ಶ್ರೀ ಕೃಷ್ಣನು ಕೆಲಕಾಲ ಪಾಂಡವರೊಂದಿಗೆ ಇದ್ದನು. ಅಲ್ಲಿ ಒಮ್ಮೆ ಅವನು ಅರ್ಜುನನೊಂದಿಗೆ ಬೇಟೆಗೆ ಹೊರಟಾಗ ಯಮುನಾ ನದಿಯ ಸಾಕಾರ ರೂಪವಾದ ಕಾಲಿಂದಿಯನ್ನು ಕಂಡನು. ಅವಳು ಸೂರ್ಯದೇವನ ಪುತ್ರಿ. ಅವಳ ಅಪೇಕ್ಷೆಯಂತೆ ಶ್ರೀ ಕೃಷ್ಣನು ಅವಳನ್ನು ವಿವಾಹವಾಗಿ, ಪಾಂಡವರಿಗೆ ರಾಜಧಾನಿಯನ್ನು ನಿರ್ಮಿಸಲು ಖಾಂಡವವನವನ್ನು ನಾಶ ಮಾಡಿ, ತನ್ನನ್ನು ಬಯಸಿದ ಮಿತ್ರವೃಂದ ಹಾಗೂ ಅವಳ ಇನ್ನಿತರ ರಾಜಪುತ್ರಿ ಗೆಳತಿಯರನ್ನೂ ವಿವಾಹವಾದನು.

ನರಕಾಸುರನೆಂಬ ಹೆಸರನ್ನೂ ಹೊಂದಿದ್ದ ಭೌಮಾಸುರನೆಂಬ ರಕ್ಕಸನು ತುಂಬಾ ಬಲಶಾಲಿಯಾಗಿದ್ದು 16,000 ರಾಜಪುತ್ರಿಯರನ್ನು ಅಪಹರಿಸಿ, ವರುಣನ ಛತ್ರಿಯನ್ನು, ಅದಿತಿಯ, ಅಂದರೆ ಉಪದೇವತೆಗಳ ಮಾತೆಯ ಕರ್ಣಕುಂಡಲಗಳನ್ನು ಕದ್ದು, ಮೇರು ಪರ್ವತದ ಒಂದು ಭಾಗವನ್ನು ಜಯಿಸಿ ಮಣಿ ಪರ್ವತದ ಸ್ವಲ್ಪ ಭಾಗವನ್ನೂ ಆಕ್ರಮಿಸಿಕೊಂಡಿದ್ದನು. ಇಂದ್ರನು ಶ್ರೀ ಕೃಷ್ಣನ ನೆರವನ್ನು ಬೇಡಿದನು. ರಾಕ್ಷಸನು ಪ್ರಗನ್ಯೋತಿ ಪುರದಲ್ಲಿ ವಾಸಿಸುತ್ತಿದ್ದ ಬಲವಾದ ಕೋಟೆಯನ್ನು ಕಟ್ಟಿಕೊಂಡಿದ್ದನು.

ಶ್ರೀ ಕೃಷ್ಣನು ರಾಕ್ಷಸನನ್ನು ಕೊಂದು ಸತ್ಯಭಾಮೆಯೊಂದಿಗೆ ಇಂದ್ರನ ಅರಮನೆಗೆ ಹೊರಟನು. ಅಲ್ಲಿ ಸತ್ಯಭಾಮೆಯು ಪಾರಿಜಾತ ಪುಷ್ಪವೊಂದನ್ನು ಕಿತ್ತು ಗರುಡನ ಬೆನ್ನಿನ ಮೇಲಿಟ್ಟಳು. ಆ ಗಿಡವನ್ನು ಅವಳು ದ್ವಾರಕೆಗೆ ಕೊಂಡೊಯ್ಯಲು ಅಪೇಕ್ಷಿಸಿದಳು. ಕ್ರೋಧಗೊಂಡ ಇಂದ್ರನೊಡನೆ ಶ್ರೀ ಕೃಷ್ಣನು ಸೆಣೆಸಾಡಿ ಇಂದ್ರನು ಪರಾಜಯಗೊಂಡಾಗ ಭಗವಂತನು ಪಾರಿಜಾತ ಗಿಡವನ್ನು ಭೂಮಿಗೆ ತಂದನು. ಭಗವಂತನು ಭೌಮಾಸುರನ ಅಧೀನದಲ್ಲಿದ್ದ 16,000 ರಾಜಪುತ್ರಿಯರನ್ನೂ ಬಿಡುಗಡೆ ಮಾಡಿ ಅವರೆಲ್ಲರನ್ನೂ ವಿವಾಹವಾದನು.

ಶ್ರೀ ಕೃಷ್ಣ ಪರಮಾತ್ಮನಿಗೆ 16,108 ಪತ್ನಿಯರಿದ್ದು ಅವರಲ್ಲಿ ಪ್ರತಿಯೊಬ್ಬರಿಂದಲೂ ಅವನು ಹತ್ತು ಪುತ್ರರನ್ನು ಪಡೆದನು. ಅವರೆಲ್ಲರೂ ಸಮೃದ್ಧತೆ, ಶಕ್ತಿ, ಸೌಂದರ್ಯ, ವಿವೇಕ, ಖ್ಯಾತಿ, ಸಂಪತ್ತು ಹಾಗೂ ತ್ಯಾಗದ ವಿಷಯದಲ್ಲಿ ತಂದೆಗೆ ಸರಿಸಮಾನರು.

ಅನಿರುದ್ಧನೊಂದಿಗೆ ಉಷೆಯ ವಿವಾಹ ವಿಷಯದಲ್ಲಿ ಕೃಷ್ಣ ಹಾಗೂ ಮಹೇಶ್ವರರ ಮಧ್ಯೆ ನಡೆದ ಕಾಳಗದ ಬಗ್ಗೆ ತಿಳಿದುಕೊಳ್ಳಲು ಪರೀಕ್ಷಿತ ರಾಜನು ಉತ್ಸುಕನಾದನು. ಉಷೆಯು ಬಾಣಾಸುರನ ಮಗಳು. ಬಾಣಾಸುರನು ಬಲಿಯ ಪುತ್ರ ಹಾಗೂ ಮಹೇಶ್ವರನ ಮಹಾನ್ ಭಕ್ತ. ದೀರ್ಘ ಕಾಲದ ಹಿಂದೆ ಮಹೇಶ್ವರನು ತಾಂಡವ ನೃತ್ಯ ಮಾಡುತ್ತಿದ್ದಾಗ, ಬಾಣಾಸುರನು ಢಮರುಗವನ್ನು ನುಡಿಸುವಲ್ಲಿ ಅವನಿಗೆ ನೆರವಾದಾಗ ಅದರಿಂದ ಮುದಗೊಂಡ ಈಶ್ವರನು ಅವನಿಗೆ ವರವನ್ನು ನೀಡಬಯಸಿದಾಗ ಬಾಣಾಸುರನು ಹೇಳಿದ್ದನು : "ನನ್ನ ಪ್ರೀತಿಯ ಒಡೆಯನೇ, ನೀನು ಇಚ್ಛಿಸಿದಲ್ಲಿ ನೀನು ನನ್ನನ್ನು ಶತ್ರುಗಳಿಂದ ರಕ್ಷಿಸಲು ನನ್ನ ನಗರದಲ್ಲೇ ಉಳಿದುಕೊಳ್ಳುವವನಾಗು".

## ಬಾಣಾಸುರ

ಬಾಣಾಸುರನೊಮ್ಮೆ ಶಿವನಿಗೆ ಹೇಳಿದನು: "ನನ್ನೊಡೆಯನೇ, ತಮ್ಮ ಇಷ್ಟಾರ್ಥಗಳನ್ನು ಪೂರೈಸಿಕೊಳ್ಳಲು ಸಾಧ್ಯವಾಗದಿರುವ ಯಾರೇ ಆಗಲಿ ನಿನ್ನ ಪದ್ಮಪಾದದಲ್ಲಿ, ಆಶೆಯ ವೃಕ್ಷಗಳಂತಿರುವ ಅವುಗಳಲ್ಲಿ, ಆಶ್ರಯ ಪಡೆದು ತಮ್ಮ ಅಭೀಷ್ಟಗಳನ್ನು ನೆರವೇರಿಸಿಕೊಳ್ಳಬಹುದು. ಭಗವಂತನೇ, ನೀನು ನನಗೆ ಒಂದು ಸಾವಿರ ಬಾಹುಗಳನ್ನು ನೀಡಿದ್ದೀಯೆ. ಆದರೆ ಅವನ್ನೇನು ಮಾಡಬೇಕೆಂದು ನನಗೆ ಗೊತ್ತಿಲ್ಲ. ನನ್ನನ್ನು ದಯವಿಟ್ಟು ಕ್ಷಮಿಸಿ. ನಾನು ಅವನ್ನು ಕಾದಾಟದಲ್ಲಿ ಬಳಿಸಲಾಗುವುದಿಲ್ಲ ಎಂಬುದಾಗಿ ನನಗೆ ತೋರುತ್ತದೆ. ಐಹಿಕ ಜಗತ್ತಿನ ಮೂಲ ಪಿತನಾದ ನಿನ್ನನ್ನು ಬಿಟ್ಟರೆ ನನ್ನೊಂದಿಗೆ ಕಾದಾಡಲು ಸಮರ್ಥರಾದ ಮತ್ಯಾರೂ ನನಗೆ ಕಾಣಿಸುತ್ತಿಲ್ಲ. ಕೆಲವೊಮ್ಮೆ ನನಗೆ ನನ್ನ ಬಾಹುಗಳನ್ನು ಕಾದಾಟಕ್ಕೆ ಬಳಸುವ ಬಯಕೆಯುಂಟಾಗುತ್ತದೆಯಾದರೂ ಸೂಕ್ತ ಯೋಧನನ್ನು ಹುಡುಕಲು ಸಾಧ್ಯವಾಗಿಲ್ಲ. ದುರದೃಷ್ಟವಶಾತ್ ಎಲ್ಲರೂ ನನ್ನ ಅಸಾಧಾರಣ ಶಕ್ತಿಯನ್ನು ಕಂಡು ಓಡಿ ಹೋಗುತ್ತಾರೆ. ಗೊಂದಲಗೊಂಡು ನಾನು ನನ್ನ ಆಮಿಷವನ್ನು ಪೂರೈಸಿಕೊಳ್ಳುವ ಸಲುವಾಗಿ ಬಾಹುಗಳನ್ನು ಪರ್ವತಗಳಿಗೆ ಬಡಿಯುತ್ತೇನೆ. ಈ ರೀತಿಯಾಗಿ ನಾನು ಬೃಹತ್ ಪರ್ವತಗಳನ್ನು ಚೂರಾಗಿಸುತ್ತೇನೆ". ತನ್ನ ವರದಿಂದ

ಬಾಣಾಸುರನಿಗೆ ತೊಂದರೆಯುಂಟಾಗಿವೆ ಎಂಬುದನ್ನು ಈಶ್ವರನ್ನು ತಿಳಿದನು. ಅವನೆಂದನು: "ಕಾದಾಡಲು ತುಂಬಾ ಕಾತುರನಾಗಿದ್ದ ನಿನ್ನೊಂದಿಗೆ ಸೆಣಸಾಡಲು ಯಾರನ್ನೂ ಕಾಣದಿರುವುದರಿಂದ ಖೇದನಾಗಿದ್ದೀಯೆ. ನನ್ನನ್ನುಳಿದು ನಿನ್ನೊಂದಿಗೆ ಸೆಣಸಾಡಲು ಜಗತ್ತಿನಲ್ಲೇ ಯಾರೂ ಇಲ್ಲವೆಂಬುದಾಗಿ ನೀನು ಭಾವಿಸಿದ್ದರೂ ನೀನು ಕಾಲಕ್ರಮದಲ್ಲಿ ಅಂಥ ಸಮರ್ಥ ವ್ಯಕ್ತಿಯೊಬ್ಬನನ್ನು ಕಾಣುತ್ತೀಯೆ. ಆ ಸಮಯದಲ್ಲಿ ನಿನ್ನ ದಿನಗಳು ಮುಕ್ತಾಯವಾಗುವ ಕಾಲವನ್ನು ಸಮೀಪಿಸಿರುತ್ತದೆ. ನಿನ್ನ ವಿಜಯದ ಧ್ವಜ ಹಾರಾಡುವುದನ್ನು ನಿಲ್ಲಿಸುತ್ತಾನೆ. ಆಗ ನೀನು ನಿನ್ನ ಹುಸಿ ಪ್ರತಿಷ್ಠೆಯು ಛಿದ್ರಗೊಳ್ಳುವುದನ್ನು ಕಾಣುತ್ತೀಯೆ".

ಬಾಣಾಸುರನ ಮಗಳಾದ ಉಷೆ ಹಾಗೂ ಶ್ರೀ ಕೃಷ್ಣನ ಮಗನಾದ ಅನಿರುದ್ಧನು ಪರಸ್ಪರರನ್ನು ಪ್ರೀತಿಸುತ್ತಿದ್ದು ಬಾಣಾಸುರನ ಅರಮನೆಯಲ್ಲಿ ವಾಸವಾಗಿದ್ದಾಗ ಈ ವಿಷಯವನ್ನು ತಿಳಿದ ಬಾಣಾಸುರನು ಅನಿರುದ್ಧನನ್ನು ಬಂಧಿಸಲು ಬಯಸಿದನು. ಹೋರಾಟದಲ್ಲಿ ಅನಿರುದ್ಧನನ್ನು ಬಂಧಿಸಲಾಯಿತು. ಅನಿರುದ್ಧನು ನಾಲ್ಕು ತಿಂಗಳಿನಿಂದಲೂ ಹಿಂತಿರುಗಿಲ್ಲವಾಗಿ ಯದುಕುಲವು ಚಿಂತೆಗೊಂಡಿರುವ ವಿಷಯ ಶ್ರೀ ಕೃಷ್ಣನಿಗೆ ತಿಳಿದಾಗ ಅವನು ಬಾಣಾಸುರನ ಮೇಲೆ ದಾಳಿ ಮಾಡುವ ಸಂದರ್ಭದಲ್ಲಿ ರಾಕ್ಷಸನು ದುರ್ಬಲನಾಗಿದ್ದನು. ಇದನ್ನು ಕಂಡ ಶಿವನು ಭಗವಂತನನ್ನು ಸಮೀಪಿಸಿ : "ಬಾಣಾಸುರನು ನನಗೆ ಆಪ್ತನಾದವನು. ನನಗೆ ಉನ್ನತ ಸೇವೆಯನ್ನು ಸಲ್ಲಿಸಿದವನು. ಆದ್ದರಿಂದ ಅವನನ್ನು ರಕ್ಷಿಸುವ ಭರವಸೆಯನ್ನು ನೀಡಿದ್ದೇನೆ. ನೀನು ಅವನ ಪಿತೃಗಳಾದ ಪ್ರಹ್ಲಾದ ಹಾಗೂ ಬಲಿ ಮಹಾರಾಜರ ಬಗ್ಗೆ ಸಂತಸ ತೋರಿದಂತೆ ಇವನಿಗೂ ನಿನ್ನ ಕೃಪೆ ತೋರಿಸು". ಅದಕ್ಕೆ ಶ್ರೀಕೃಷ್ಣನು ಉತ್ತರಿಸಿದನು: "ನನ್ನ ಪ್ರೀತಿಯ ಮಹೇಶ್ವರನೇ, ನಾನು ನಿನ್ನ ಹೇಳಿಕೆಗಳನ್ನು ಹಾಗೂ ಬಾಣಾಸುರನ ಬಗ್ಗೆ ನಿನ್ನ ಆಸಕ್ತಿಯನ್ನು ಒಪ್ಪುತ್ತೇನೆ. ಇವನು ಬಲಿ ಮಹಾರಾಜನ ಮಗನಾದ್ದರಿಂದ ಅವನನ್ನು ಕೊಲ್ಲುವಂತಿಲ್ಲ ಎಂಬುದು ನನಗೆ ಗೊತ್ತಿದೆ. ನಾನು ಪ್ರಹ್ಲಾದ ರಾಜನಿಗೆ ಅವನ ವಂಶದಲ್ಲಿ ಕಾಣಿಸಿಕೊಳ್ಳುವ ದಾನವರ್ಯಾರೂ ನನ್ನಿಂದ ಹತ್ಯೆಗೊಳ್ಳುವುದಿಲ್ಲ ಎಂಬ ವಚನವನ್ನು ನೀಡಿದ್ದೇನೆ. ಆದ್ದರಿಂದ ಬಾಣಾಸುರನನ್ನು ಕೊಲ್ಲದೆ ನಾನು ಅವನ ಬಾಹುಗಳನ್ನು ಮಾತ್ರ ಕತ್ತರಿಸಿ ಅವನ ಸುಳ್ಳು ಪ್ರತಿಷ್ಠೆಯನ್ನು ಅಡಗಿಸುತ್ತೇನೆ. ಅವನು ಇಟ್ಟುಕೊಂಡಿರುವ ಭಾರೀ ಸೈನ್ಯವು ಭೂಮಿಗೆ ಭಾರವಾಗಿರುವುದರಿಂದ ಅದನ್ನು ನಾಶಗೊಳಿಸುತ್ತೇನೆ". ಈ ಮಾತನ್ನು ಕೇಳಿದ ಬಾಣಾಸುರನು ಭಗವಂತನಿಗೆ ವಂದಿಸಿದನು. ಶ್ರೀ ಕೃಷ್ಣನು ಉಷೆ ಹಾಗೂ ಅನಿರುದ್ಧನೊಂದಿಗೆ ದ್ವಾರಕೆಗೆ ಮರಳಿದನು.

ಒಮ್ಮೆ ಯದುವಂಶದ ರಾಜಪುತ್ರರು ವಿಹಾರಕ್ಕೆ ತೆರಳಿದಾಗ ದೊಡ್ಡದೊಂದು ಬಾವಿಯಲ್ಲಿ ನೀರಿಲ್ಲದಿದ್ದರೂ ಸಹ ದೊಡ್ಡ ಹಲ್ಲಿಯೊಂದನ್ನು ಕಂಡಾಗ ಹಿಂತಿರುಗಿ ಅದನ್ನು ಭಗವಂತನಿಗೆ ಅರುಹಿದಾಗ ಅದನ್ನು ಅವನು ಬಿಡುಗಡೆ ಮಾಡಿ ಅದರ ನಿಜ ವೃತ್ತಾಂತವನ್ನು ವಿಚಾರಿಸಿದನು.

ಈ ಹಲ್ಲಿಯು ಹಿಂದೊಮ್ಮೆ ನೃಗ ದೊರೆಯಾಗಿದ್ದು ಅವನು ತನ್ನ ಕಥೆಯನ್ನು ಹೇಳಿಕೊಂಡನು. "ನನ್ನ ಭಗವಂತನೇ, ನಾನು ಇಕ್ಷ್ವಾಕು ದೊರೆಯ ಮಗನಾಗಿದ್ದು, ನೃಗನೆಂಬ ಹೆಸರಿನ ದೊರೆ. ದಾನಧರ್ಮಗಳಿಗೆ ಹೆಸರಾಗಿದ್ದ ದೊರೆಗಳ ಪರಿಚಯ ನಿನಗೇನಾದರೂ ಇದ್ದರೆ ನೀನು ನನ್ನ ಹೆಸರನ್ನು ಕೇಳಿರಲೇಬೇಕು. ಭಗವಂತನೇ ನೀನೇ ನನಗೆ ಸಾಕ್ಷಿ. ನೀನು ಎಲ್ಲ ಜೀವಿಗಳ - ಭೂತ, ವರ್ತಮಾನ ಹಾಗೂ ಭವಿಷ್ಯತ್ ಕಾಲಗಳಲ್ಲಿನ - ಕಾರ್ಯದ ವಿವರಗಳೆಲ್ಲವನ್ನೂ ಬಲ್ಲೆ. ನಿನ್ನ ದೈವಿಕ ದೃಷ್ಟಿಯಿಂದ ಯಾವುದನ್ನೂ ಬಚ್ಚಿಡಲಾಗದು. ಆದರೂ ನೀನು ನನ್ನ ಕಥೆಯನ್ನು ತಿಳಿಸುವಂತೆ ಆಜ್ಞೆ ಮಾಡಿರುವುದರಿಂದ ನಾನದನ್ನು ಹೇಳುತ್ತೇನೆ".

ನೃಗ ದೊರೆಯು ದಾನಶೀಲನಾಗಿದ್ದು ಅನೇಕ ಹಸುಗಳನ್ನು ದಾನವನ್ನಾಗಿ ಇತ್ತಿದ್ದನು. ಅಲ್ಲದೆ ಸುವರ್ಣ ಹಾಗೂ ಬೆಲೆಬಾಳುವ ಇನ್ನೂ ಅನೇಕ ವಸ್ತುಗಳನ್ನೂ ಸಹ ಅವನು ನೀಡಿದ್ದನು. ಒಮ್ಮೆ ಬ್ರಾಹ್ಮಣನೊಬ್ಬನಿಗೆ ನೀಡಲಾಗಿದ್ದ ಹಸುವೊಂದು ಅವರ ತಂಡವನ್ನು ಪ್ರವೇಶಿಸಿದಾಗ ಅದನ್ನು ತಿಳಿಯದಿದ್ದ ದೊರೆಯು ಅದೇ ಹಸುವನ್ನು ಮತ್ತೊಬ್ಬ ಬ್ರಾಹ್ಮಣನಿಗೆ ದಾನವನ್ನಾಗಿತ್ತನು. ಅದನ್ನು ಅಷ್ಟು ಹೊತ್ತಿಗಾಗಲೇ ಪಡೆದುಕೊಂಡಿದ್ದ ಮಾಲಿಕನು ಅದನ್ನು ತೆಗೆದುಕೊಳ್ಳಲು ಬಂದನು. ವಾದ ವಿವಾದಗಳು, ಕಾದಾಟಗಳು ಈ ಇಬ್ಬರ ಮಧ್ಯೆ ನಡೆದವು. ದೊರೆಯು ಪರಿಹಾರವನ್ನು ನೀಡುವುದಾಗಿ ಹೇಳಿ ಗೊಂದಲವನ್ನು ನಿಲ್ಲಿಸುವಂತೆ ಅವರನ್ನು ಪ್ರಾರ್ಥಿಸಿದರೂ ಅವರು ಆ ಸ್ಥಳದಿಂದ ನಿರ್ಗಮಿಸಿದರು. ದೊರೆಯು ಮೃತನಾದಾಗ ಯಮರಾಜನು ಅವನ ತಪ್ಪಿಗೆ ಶಿಕ್ಷೆಯಾಗಿ ಅವನನ್ನು ಹಲ್ಲಿಯನ್ನಾಗಿಸಿದನು. ಭಗವಂತನನ್ನು ಕಂಡ ದೊರೆಯು ಆನಂದಗೊಂಡು ನಂತರ ಸ್ವರ್ಗಕ್ಕೆ ತೆರಳಿದನು.

ಬಲರಾಮನು ತನ್ನ ತಂದೆತಾಯಿಯರನ್ನು ಕಾಣಲು ಬೃಂದಾವನಕ್ಕೆ ತೆರಳಿ ಅಲ್ಲಿ ಎರಡು ತಿಂಗಳುಗಳ ಕಾಲ ಅವರು ಹಾಗೂ ಗೋಪಿಯರ ಸಹವಾಸದಲ್ಲಿ ಆನಂದದಿಂದ ಇದ್ದನು.

## ಪೌಂಡ್ರಕ

ಪೌಂಡ್ರಕ ದೊರೆಯು ತಾನಲ್ಲದೆ ಶ್ರೀ ಕೃಷ್ಣನು ಉನ್ನತ ಆತ್ಮನಲ್ಲ ಎಂಬುದಾಗಿ ಘೋಷಿಸಿಕೊಂಡನು. ಪೌಂಡ್ರಕನು ಅಹಂಕಾರಿಯಾಗಿ ತಾನೇ ವಸುದೇವನ ನಿಜವಾದ ಮಗನೆಂದು ನಿರ್ಣಯಿಸಿದನು. ಭಗವಂತನ ಮೇಲೆ ಸವಾಲುಗಳನ್ನೆಸೆದು ಸಂದೇಶಗಳನ್ನು ಕಳಿಸಿದನು. ಈ ಸಂದೇಶವು ಹೀಗಿತ್ತು; ನಾನೊಬ್ಬನೇ ಭಗವಂತನ ಉನ್ನತವಾದ ವ್ಯಕ್ತಿತ್ವನಾದ ವಾಸುದೇವನು. ನನ್ನೊಂದಿಗೆ ಸ್ಪರ್ಧಿಸುವವರು ಯಾರೂ ಇಲ್ಲ. ನಾನು ನನ್ನ ಅನಿಯಮಿತ ಕರುಣೆಯಿಂದಾಗಿ ಕ್ಷೋಭೆಗೊಂಡ ಜೀವಿಗಳ ಮೇಲೆ ಕೃಪೆಯನ್ನು ತೋರಿಸುವ ಸಲುವಾಗಿ ಪೌಂಡ್ರಕ ದೊರೆಯಾಗಿ ಕಾಣಿಸಿಕೊಂಡಿದ್ದೇನೆ. ನೀನು ಯಾವ ಅಧಿಕಾರವೂ ಇಲ್ಲದೆಯೇ ವಾಸುದೇವನ ಸ್ಥಾನವನ್ನು ಪಡೆದುಕೊಂಡಿದ್ದೀಯೆ. ಈ

ಅಪಪ್ರಚಾರವನ್ನು ಮುಂದುವರಿಸದೆ ನೀನು ನಿನ್ನ ಸ್ಥಾನವನ್ನು ಬಿಟ್ಟುಕೊಡಬೇಕು. ಎಲೈ ಯದು ಸಂತತಿಯವನೇ, ನೀನು ಹುಸಿಯಾಗಿ ಪಡೆದುಕೊಂಡಿರುವ ವಸುದೇವನ ಎಲ್ಲ ಚಿಹ್ನೆಗಳನ್ನೂ ಬಿಟ್ಟುಕೊಡು. ನಿನ್ನ ಸ್ಥಾನವನ್ನು ತ್ಯಜಿಸಿದ ನಂತರ ನನ್ನಲ್ಲಿಗೆ ಬಂದು ಶರಣಾಗತನಾಗು. ನೀನು ನಿನ್ನ ಅಹಂಮಿಕೆಯಿಂದಾಗಿ ನನ್ನ ಮಾತನ್ನು ಆಲಿಸದಿದ್ದರೆ ನನ್ನೊಂದಿಗೆ ಹೋರಾಡುವ ಸವಾಲನ್ನು ಅಂಗೀಕರಿಸು. ಸತ್ಯವನ್ನು ಎತ್ತಿ ಹಿಡಿಯುವ ಸಲುವಾಗಿ ನಾನು ನಿನ್ನನ್ನು ಯುದ್ಧಕ್ಕೆ ಆಹ್ವಾನಿಸುತ್ತಿದ್ದೇನೆ. ಶ್ರೀ ಕೃಷ್ಣನು ಪೌಂಡ್ರಕನನ್ನು ಶಿಕ್ಷಿಸ ಬಯಸಿ ಅವನ ಬಳಿಗೆ ಹೊರಟನು. ಭಗವಂತನು ಅವನಿಗೆ ಹೇಳಿದನು: ಪೌಂಡ್ರಕನೇ, ನೀನು ನನಗೆ ವಿಷ್ಣುವಿನ ಚಿಹ್ನೆಯನ್ನು, ಮುಖ್ಯವಾಗಿ ಚಕ್ರವನ್ನು ಬಿಟ್ಟುಕೊಡುವಂತೆ ವಿನಂತಿಸಿಕೊಂಡಿದ್ದೀಯೆ. ಎಚ್ಚರದಿಂದಿರು. ನೀನು ನಿನ್ನನ್ನೇ ವಾಸುದೇವನೆಂದು ಸುಳ್ಳಾಗಿ ಘೋಷಿಸಿಕೊಂಡಿದ್ದೀಯೆ. ನನ್ನನ್ನೇ ಅನುಕರಿಸಿದ್ದೀಯೆ. ಆದ್ದರಿಂದ ನಿನಗಿಂತಲೂ ದೊಡ್ಡ ಮೂರ್ಖರಿಲ್ಲ. ಈ ಸುಳ್ಳು ಪ್ರಾತಿನಿಧ್ಯವನ್ನು ಬಿಟ್ಟುಕೊಡಲು ನಾನೀಗ ನಿನ್ನನ್ನು ಒತ್ತಾಯಿಸುತ್ತೇನೆ. ನಾನು ನಿನಗೆ ಶರಣಾಗತನಾಗಬೇಕೆಂದು ನೀನು ಬಯಸಿದ್ದೀಯೆ. ನಾನು ನಿನಗೀಗ ನೀಡುತ್ತಿರುವ ಅವಕಾಶವಿದು. ನಾವಿಬ್ಬರೂ ಹೋರಾಡೋಣ. ಮತ್ತು ನಾನು ಸೋತು ನೀನು ಜಯಶೀಲನಾದರೆ ನಾನು ಖಂಡಿತವಾಗಿಯೂ ಶರಣಾಗುತ್ತೇನೆ. ಭಗವಂತನು ಪೌಂಡ್ರಕ ಹಾಗೂ ಅವನ ಪುತ್ರನನ್ನು ಕೊಂದು ಹಾಕಿದನು.

ಜಾಂಬುವತಿಯಿಂದ ಜನಿಸಿದ ಶ್ರೀ ಕೃಷ್ಣನ ಪುತ್ರ ಸಾಂಬನು ದುರ್ಯೋಧನನ ಪುತ್ರಿಯಾದ ಲಕ್ಷ್ಮಣಳನ್ನು ವಿವಾಹವಾಗ ಬಯಸಿ ಸ್ವಯಂವರದ ಸಂದರ್ಭದಲ್ಲಿ ಅವಳನ್ನು ಅಪಹರಿಸಿದಾಗ ಅವಮಾನಗೊಂಡೆನೆಂದು ಭಾವಿಸಿದ ಕುರುಗಳು ಸಾಂಬನನ್ನು ಸೆರೆ ಹಿಡಿದರು. ಈ ಸಂಗತಿಯನ್ನು ನಾರದ ಮುನಿಗಳು ಶ್ರೀ ಕೃಷ್ಣನಿಗೆ ತಿಳಿಸಿದಾಗ ಬಲರಾಮನು ಹಸ್ತಿನಾಪುರಕ್ಕೆ ತೆರಳಿ ಸಾಂಬನನ್ನು ಬಿಡಿಸಿದನು.

ಶ್ರೀ ಕೃಷ್ಣನಿಗೆ 16,108 ಮಡದಿಯರಿದ್ದಾರೆಂದು ತಿಳಿದ ನಾರದ ಮುನಿಯು ಅವನು ಏಕ ಕಾಲದಲ್ಲಿ ಅವರೆಲ್ಲರೊಂದಿಗೂ ಹೇಗಿರುತ್ತಾನೆ ಎಂಬುದಾಗಿ ತಿಳಿಯಲು ದ್ವಾರಕೆಗೆ ಬಂದಾಗ ಅವನಿಗೆ ತಾನು ಸಂದರ್ಶಿಸಿದ ಎಲ್ಲ ಗೃಹಗಳೂ ಅಲಂಕರಿಸಲ್ಪಟ್ಟಿದ್ದು ಅವುಗಳೆಲ್ಲದರಲ್ಲೂ ಭಗವಂತನಿದ್ದುದು ಕಂಡಿತು. ದ್ವಾರಕೆಯಲ್ಲಿ ಶ್ರೀ ಕೃಷ್ಣನ ಲೀಲೆಗಳನ್ನು ವಿವರಿಸುತ್ತಾ ಶ್ರೀ ಶುಕಾಚಾರ್ಯರು ಪರೀಕ್ಷಿತ ದೊರೆಗೆ ಭಗವಂತನು ಈ ಐಹಿಕ ಜಗತ್ತಿಗೆ ತನ್ನ ಅಂತರಿಕ ಸಾಮರ್ಥ್ಯದ ಮಾಧ್ಯಮದ ಮೂಲಕ ಹೇಗೆ ಅವತರಿಸುತ್ತಾನೆಂದು ವರ್ಣಿಸಿದರಲ್ಲದೆ, ಅವನು ಸ್ವತಃ ಪ್ರದರ್ಶಿಸಿದ ತತ್ತ್ವಗಳನ್ನು ಯಾರಾದರೂ ಅನುಸರಿಸಿ ದ್ದಾದರೆ, ಜೀವನದ ಅಂತಿಮ ಗುರಿಯನ್ನು ಸಾಧಿಸಬಹುದೆಂದರು. ದ್ವಾರಕೆಯಲ್ಲಿನ ಹದಿನಾರು ಸಾವಿರಕ್ಕಿಂತಲೂ ಹೆಚ್ಚು ರಾಣಿಯರು, ನಗುತ್ತಾ ಸೇವೆ ಸಲ್ಲಿಸುತ್ತಾ ತಮ್ಮ ಆಕರ್ಷಕ ಸ್ತ್ರೀ ರೂಪುರೇಷೆಗಳ ಮೂಲಕ ಪರಮಾತ್ಮನ ಅತಿಶಯ ಆರಾಧನೆಯಲ್ಲಿ ತೊಡಗಿದ್ದಾಗ ಭಗವಂತನು ಗೃಹಸ್ಥ ಜೀವನವನ್ನು ಅನುಭವಿಸುವ ಪರಿಪೂರ್ಣ ಪತಿಯಂತೆಯೇ ಅವರೊಂದಿಗಿದ್ದನು. ಅಂಥಹ ಹವ್ಯಾಸಗಳನ್ನು ಶ್ರೀ ಕೃಷ್ಣನಲ್ಲದೆ

ಬೇರ್‍ಯಾರೂ ಮಾಡಲು ಸಾಧ್ಯವಿಲ್ಲ ಎಂಬುದನ್ನು ಒಬ್ಬರು ತಿಳಿಯಬೇಕು. ಶ್ರೀ ಕೃಷ್ಣ ಪರಮಾತ್ಮನು ಸೃಷ್ಟಿ, ಸಲಹುವಿಕೆ ಹಾಗೂ ವ್ಯಕ್ತಗೊಂಡ ಇಡೀ ಜಗತ್ತನ್ನು ನಿರ್ನಾಮಗೊಳಿಸಲು ಮೂಲ ಕಾರಣನು.

ಶ್ರೀ ಕೃಷ್ಣ ಪರಮಾತ್ಮನ ಚಟುವಟಿಕೆಗಳಲ್ಲಿ ತನ್ನನ್ನು ಕಾಣಲು ಬರುವ ಜನರನ್ನು ಭೇಟಿಯಾಗುವುದು, ಅವರ ಸಮಸ್ಯೆಗಳನ್ನು ಆಲಿಸುವುದು, ಸುಧರ್ಮ ಎಂಬ ಹೆಸರಿನ ಸಭೆಯಲ್ಲಿ ಭಾಗವಹಿಸುವುದು ಇವೆಲ್ಲವೂ ಕೂಡ ಸೇರಿದ್ದವು. ಸುಧರ್ಮ ಸಭೆಯನ್ನು ಸ್ವರ್ಗದಿಂದ ತಂದು ದ್ವಾರಕಾನಗರಿಯಲ್ಲಿ ಸ್ಥಾಪಿಸಲಾಯಿತು ಎಂಬುದನ್ನಿಲ್ಲಿ ಸ್ಮರಿಸಿಕೊಳ್ಳಬಹುದು. ಈ ಸಭೆಯ ನಿರ್ದಿಷ್ಟ ಮಹತ್ವವೆಂದರೆ ಈ ಸಭೆಯನ್ನು ಪ್ರವೇಶಿಸುವ ಯಾರೇ ಆದರೂ ಹಸಿವು, ಬಾಯಾರಿಕೆ, ಕಳವಳ, ಭ್ರಮೆ, ವೃದ್ಧಾಪ್ಯ ಮತ್ತು ಮರಣ ಇಂಥ ಆರು ವಿಧವಾದ ಐಹಿಕ ಬೇಗುದಿಗಳಿಂದ ಮುಕ್ತರಾಗುತ್ತಾರೆ ಎಂಬುದು.

ಒಮ್ಮೆ ಸಂದರ್ಶಕನೊಬ್ಬನು ಸಭೆಗೆ ಬಂದು ಜರಾಸಂಧನ ಕಿರುಕುಳವನ್ನು ವಿವರಿಸಿ ಅವನು 20,000 ಜನರನ್ನು ಬಂಧಿಗಳನ್ನಾಗಿ ಕೊಂಡೊಯ್ದಿದ್ದಾನೆ ಎಂದು ತಿಳಿಸಿದನು. ಭಗವಂತನು ಶಾಂತಿಯನ್ನು ಕಾಪಾಡಿ ಬಂಧಿಗಳನ್ನು ಬಿಡಿಸಬೇಕೆಂದನು. ಆ ಸಮಯದಲ್ಲಿ ನಾರದ ಮುನಿಯು ಸಭೆಗೆ ಬಂದರು. ಅಲ್ಲಿ ಶ್ರೀ ಕೃಷ್ಣ ಪರಮಾತ್ಮನು ಜರಾಸಂಧನ ರಾಜ್ಯದ ಮೇಲೆ ಧಾಳಿ ನಡೆಸುವುದರ ಬಗ್ಗೆ ತನ್ನ ಸಚಿವರೊಂದಿಗೆ ಸಮಾಲೋಚಿಸುತ್ತಿರುವುದು ಕಂಡಿತು. ನಾರದ ಮುನಿಯು ಆಗ ಶ್ರೀ ಕೃಷ್ಣ ಪರಮಾತ್ಮನು ಮಹಾರಾಜ ಯುಧಿಷ್ಠಿರನು ನಡೆಸುತ್ತಿರುವ ರಾಜಸೂಯ ಯಾಗಕ್ಕೆ ಹೋಗಬೇಕೆಂದು ಸಲಹೆ ಮಾಡಿದನು. ಮೊದಲು ಪರಮಾತ್ಮನು ಇದಕ್ಕೂ ಒಪ್ಪದೆ ಉದ್ಧವನ ಸಲಹೆಯನ್ನು ಕೇಳಿದನು.

## ಯುಧಿಷ್ಠಿರನ ರಾಜಸೂಯ ಯಾಗ

ಭಗವಂತನು ನಾರದ ಮುನಿಯ ಸಲಹೆಯನ್ನು ಸ್ವೀಕರಿಸಿ ಹಸ್ತಿನಾಪುರಕ್ಕೆ ತೆರಳಿ ಅಲ್ಲಿ ರಾಜಸೂಯ ಯಾಗದಲ್ಲಿ ಭಾಗವಹಿಸಬೇಕೆಂದು ಉದ್ಧವನು ಅಭಿಪ್ರಾಯಪಟ್ಟನು. ಇದರಿಂದ ಎರಡು ಉದ್ದೇಶಗಳು ನೆರವೇರುತ್ತವೆ. ಮೊದಲನೆಯದಾಗಿ, ಎಲ್ಲ ರಾಜರನ್ನೂ ಜಯಿಸಿದ ಹೊರತು ರಾಜಸೂಯ ಯಾಗ ಪೂರ್ಣಗೊಳ್ಳುವುದಿಲ್ಲ ಹಾಗೂ ಇದರಿಂದಾಗಿ ಯುದ್ಧದಲ್ಲಿ ಜರಾಸಂಧನನ್ನು ಕೊಲ್ಲುವುದು ಅನಿವಾರ್ಯವಾಗಿ, ಬಂಧಿಗಳನ್ನು ಬಿಡಿಸಲೇ ಬೇಕಾಗುತ್ತದೆ. ಜರಾಸಂಧನು ಸಾಮಾನ್ಯ ದೊರೆಯಲ್ಲ ಎಂಬುದಾಗಿಯೂ ಉದ್ಧವನು ತಿಳಿಸಿದನು. ಅವನ ದೇಹಶಕ್ತಿ 10,000 ಆನೆಗಳಿಗೆ ಸಮನಾದದ್ದು. ಭೀಮಸೇನನೇ ಅವನನ್ನು ಸೋಲಿಸಲು ತಕ್ಕವನು. ಹೋರಾಟ ಅವರಿಬ್ಬರ ಮಧ್ಯೆ ಮಾತ್ರ ಸಾಧ್ಯವಿದ್ದು ಮುಗ್ಧ ಜನರನ್ನು ಉಳಿಸಿದಂತಾಗುತ್ತವೆ. ಉದ್ಧವನೆಂದನು: ಆದ್ದರಿಂದ ಜರಾಸಂಧನನ್ನು ಸಾಯಿಸುವ ಕೆಲಸ ಮೊದಲು ನಡೆದಲ್ಲಿ, ಸಹಜವಾಗಿಯೇ ಮಿಕ್ಕೆಲ್ಲ ಸಮಸ್ಯೆಗಳೂ ಪರಿಹಾರವಾಗುತ್ತವೆ ಎಂದು ನನ್ನ ಅಭಿಪ್ರಾಯ. ಅವನು ಮುಂದೆ ಅಂದನು ಭಗವಂತನೇ, ಜರಾಸಂಧ ಮತ್ತು ಶಿಶುಪಾಲರಂಥ ದಾನವ ದೊರೆಗಳನ್ನು ಜಯಿಸಿ, ಸುಸ್ವಭಾವದ

ರಾಜರನ್ನು ಬಿಡುಗಡೆ ಮಾಡಿ ಅದೇ ಕಾಲಕ್ಕೆ ಮಹಾನ್ ರಾಜಸೂಯ ಯಾಗ ಮಾಡುವುದನ್ನು ಸಾಧ್ಯವಾಗಿಸಬೇಕಾದರೆ ಈ ಮಹಾನ್ ಯಾಗವನ್ನು ನೆರವೇರಿಸಲು ನೀನೇ ಸ್ವತಃ ಹಸ್ತಿನಾಪುರಕ್ಕೆ ತೆರಳಬೇಕೆಂದು ತೋರುತ್ತದೆ.

ಉದ್ಧವನ ಸಲಹೆಯನ್ನು ಅಲ್ಲಿದ್ದವರೆಲ್ಲರೂ ಒಪ್ಪಿದರು. ಶ್ರೀ ಕೃಷ್ಣ ಪರಮಾತ್ಮನು ಹಸ್ತಿನಾಪುರಕ್ಕೆ ತೆರಳಿದನು. ಯುಧಿಷ್ಠಿರನು ಶ್ರೀ ಕೃಷ್ಣನನ್ನು ಕಂಡು ಆನಂದಗೊಂಡು ಅವನನ್ನು ಹಾರ್ದಿಕವಾಗಿ ಸ್ವಾಗತಿಸಿದನು. ಪಾಂಡವರು ಉನ್ನತ ವ್ಯಕ್ತಿಗಳ ಸಭೆಯನ್ನು ಸೇರಿಸಿ ಅಲ್ಲಿ ಯುಧಿಷ್ಠಿರನು ಭಗವಂತನನ್ನು ಮತ್ತೆ ಬರಮಾಡಿಕೊಂಡು ಯಾಗದ ಉದ್ದೇಶವನ್ನು ವಿವರಿಸಿದನು. ದೊರೆಯು ಭಗವಂತನನ್ನು ಕೊಂಡಾಡಿ, ಅವನ ಉನ್ನತ ಲೀಲೆಗಳನ್ನು ಸ್ಮರಿಸಿದನು.

ಯುಧಿಷ್ಠಿರನ ಮಾತುಗಳನ್ನು ಆಲಿಸಿದ ಶ್ರೀ ಕೃಷ್ಣ ಪರಮಾತ್ಮನು ಹೇಳಿದನು : ನನ್ನ ಪ್ರಿಯ ದೊರೆಯೇ, ರಾಜಸೂಯ ಯಜ್ಞವನ್ನು ಆಚರಿಸುವ ನಿನ್ನ ನಿರ್ಧಾರವನ್ನು ನಾನು ಸಂಪೂರ್ಣವಾಗಿ ಬೆಂಬಲಿಸುತ್ತೇನೆ. ಮಾನವ ನಾಗರಿಕತೆಯ ಇತಿಹಾಸದಲ್ಲಿ ನಿನ್ನ ಹೆಸರು ಸದಾ ಸ್ಥಾಪಿತವಾಗುತ್ತದೆ. ಆದರೆ ಇದು ಅವಶ್ಯಕತೆಯಾದ್ದರಿಂದ ನೀನು ಜಗತ್ತಿನ ಎಲ್ಲ ರಾಜರನ್ನೂ ಮೊದಲು ಜಯಿಸಿ ಈ ಮಹಾನ್ ಯಾಗವನ್ನು ನಡೆಸಲು ಅಗತ್ಯವಾದ ಎಲ್ಲ ಸಾಮಗ್ರಿಗಳನ್ನೂ ಸಂಗ್ರಹಿಸಬೇಕು. ನಿನ್ನ ನಾಲ್ವರು ಸಹೋದರರು ಪ್ರಮುಖ ಉಪದೇವತೆಗಳ ನೇರ ಪ್ರತಿನಿಧಿಗಳು.

ತನಗೆ ಕಪ್ಪವನ್ನು ಒಪ್ಪಿಸಲು ಹಿಂಜರಿಯುತ್ತಿದ್ದ ಎಲ್ಲ ದೊರೆಗಳನ್ನು ಹತ್ತಿಕ್ಕಲು ಹೊರಡಬೇಕೆಂದು ಯುದ್ದಿಷ್ಠಿರನು ತನ್ನ ಸೋದರರಿಗೆ ತಿಳಿಸಿದನು. ಆದರೆ ಮಗಧದ ದೊರೆ ಜರಾಸಂಧನು ತನ್ನ ಸಾರ್ವಭೌಮತ್ವವನ್ನು ಅಂಗೀಕರಿಸಿಲ್ಲ ಎಂಬುದನ್ನು ತಿಳಿದು ಅವನು ಕಳವಳಗೊಂಡನು. ದೊರೆಯ ಧಾವಂತವನ್ನು ಕಂಡ ಭಗವಂತನು ಉದ್ಧವನು ಜರಾಸಂಧನನ್ನು ಹತ್ತಿಕ್ಕಲು ಯೋಜಿಸಿರುವ ಸನ್ನಿವೇಶವನ್ನು ಅವನಿಗೆ ವಿವರಿಸಿ, ನಂತರ ಶ್ರೀ ಕೃಷ್ಣ, ಅರ್ಜುನ ಹಾಗೂ ಭೀಮಸೇನರು ಮಗಧಗೆ ತೆರಳಿದರು.

## ಜರಾಸಂಧ

ಜರಾಸಂಧನು ಕರ್ತವ್ಯಪರ ಗೃಹಸ್ಥನಾಗಿದ್ದು ಬ್ರಾಹ್ಮಣರ ಬಗ್ಗೆ ತುಂಬಾ ಗೌರವವನ್ನು ಹೊಂದಿದ್ದನು. ಅವನು ಹಿರಿಯ ಹೋರಾಟಗಾರ ಹಾಗೂ ಕ್ಷತ್ರಿಯ ದೊರೆಯಾಗಿದ್ದರೂ ಎಂದೂ ವೈದಿಕ ಸೂತ್ರಗಳನ್ನು ಅನಾದರಿಸುತ್ತಿರಲಿಲ್ಲ. ಶ್ರೀ ಕೃಷ್ಣ, ಅರ್ಜುನ ಹಾಗೂ ಭೀಮಸೇನರು ಬ್ರಾಹ್ಮಣರ ವೇಷ ಧರಿಸಿ ಭಿಕ್ಷೆಗಾಗಿ ಅವನ ಬಳಿಗೆ ಹೋಗಿ ಶ್ರೀ ಕೃಷ್ಣನು ಅವನಿಂದ ದಾನವನ್ನು ಬೇಡಿದಾಗ ಜರಾಸಂಧನಿಗೆ ಅವರು ಬ್ರಾಹ್ಮಣರಲ್ಲದೆ, ಕ್ಷತ್ರಿಯರಿರಬಹುದೆಂದು ಅನುಮಾನ ಉಂಟಾಯಿತು. ಅವರು ಕ್ಷತ್ರಿಯರೇ ಆಗಿದ್ದರೂ ಅವರ ಬೇಡಿಕೆಯನ್ನು ಪೂರೈಸಲು ನಿರ್ಧರಿಸಿದನು. ಅನಂತರ ಭಗವಂತನು ಮೂವರಲ್ಲಿ ಅವನು ಯಾರೊಂದಿಗೆ ಕಾದಾಡ ಬಯಸುತ್ತಾನೆಂಬುದಾಗಿ ವಿಚಾರಿಸಿದನು. ದೊರೆಯು

ಭೀಮಸೇನನನ್ನು ಆಯ್ದುಕೊಂಡು ಪ್ರಾರಂಭಿಸಿದ ಕಾದಾಟ ಇಪ್ಪತ್ತೆಂಟು ದಿನಗಳ ಕಾಲ ಮುಂದುವರಿದು ಆ ದಿನ ಭೀಮಸೇನನು ತಾನು ಜರಾಸಂಧನೊಂದಿಗೆ ಸೆಣೆಸಾಡಲು ಅಸಮರ್ಥನು ಎಂಬುದಾಗಿ ಒಪ್ಪಿಕೊಂಡನು. ಅವನೆಂದನು : ನನ್ನ ಪ್ರಿಯ ಶ್ರೀ ಕೃಷ್ಣನೇ, ನಾನು ಜರಾಸಂಧನನ್ನು ಜಯಿಸಲು ಸಾಧ್ಯವಿಲ್ಲ ಎಂಬುದನ್ನು ಧೈರ್ಯವಾಗಿ ಒಪ್ಪಿಕೊಳ್ಳಲೇಬೇಕು. ಆದರೆ ಶ್ರೀ ಕೃಷ್ಣನಿಗೆ ಹೇಗಾದರೂ ಜರಾಸಂಧನ ಜನನದ ನಿಗೂಢತೆ ತಿಳಿದಿತ್ತು. ಅವನು ಇಬ್ಬರು ತಾಯಂದಿರ ಪ್ರತ್ಯೇಕ ಭಾಗಗಳಿಂದ ಹುಟ್ಟಿದವನಾಗಿದ್ದನು. ಮಗುವು ನಿರುಪಯೋಗಿ ಎಂಬುದಾಗಿ ಕಂಡಾಗ ಅವನ ತಂದೆಯು ಅದನ್ನು ಎರಡು ಭಾಗಗಳನ್ನಾಗಿಸಿ ಅರಣ್ಯಕ್ಕೆ ಎಸೆದಾಗ ಅವನ್ನಾಯ್ದುಕೊಂಡ ಜರಾಳೆಂಬ ಮಾಟಗಾತಿಯು ಅದನ್ನು ಜೋಡಿಸುವಲ್ಲಿ ಯಶಸ್ವಿಯಾದಳು. ಇದನ್ನು ತಿಳಿದಿದ್ದ ಶ್ರೀ ಕೃಷ್ಣನಿಗೆ ಅವನನ್ನು ವಧಿಸುವುದು ಹೇಗೆಂದು ಅರಿವಿತ್ತು. ಅವನ ದೇಹದ ಎರಡು ಭಾಗಗಳನ್ನು ಪ್ರತ್ಯೇಕಿಸುವುದರಿಂದ ಅವನು ಮರಣ ಹೊಂದುತ್ತಾನೆಂದು ಭೀಮಸೇನನಿಗೆ ತಿಳಿಸಿದ ಶ್ರೀ ಕೃಷ್ಣನು ತನ್ನ ಶಕ್ತಿಯನ್ನು ಭೀಮಸೇನನ ದೇಹದಲ್ಲಿ ತುಂಬಿದನು. ಮರದಿಂದ ಕಡ್ಡಿಯೊಂದನ್ನು ತೆಗೆದುಕೊಂಡು ಭಗವಂತನು ಅದರಿಂದ ಕೊಂಬೆಯೊಂದನ್ನು ಭೇದಿಸುವ ಮೂಲಕ ಭೀಮಸೇನನಿಗೆ ಸಾಂಕೇತಿಕವಾಗಿ ರಹಸ್ಯವನ್ನು ತಿಳಿಸಿದಾಗ ಭೀಮಸೇನನು ಜರಾಸಂಧನ ಕಾಲುಗಳನ್ನು ಸೀಳಿ ಅವನನ್ನೆತ್ತಿ ಎಸೆದನು. ಅವನನ್ನು ಎರಡು ಭಾಗಗಳನ್ನಾಗಿ ತುಂಡರಿಸಲಾಯಿತು. ಮಗಧೆಯ ನಾಗರಿಕರೆಲ್ಲರೂ ಸಂತೋಷಗೊಂಡರು. ಅನಂತರ ಶ್ರೀ ಕೃಷ್ಣ ಪರಮಾತ್ಮನು ಜರಾಸಂಧನ ಮಗನಾದ ಸಹದೇವನಿಗೆ ಕಿರೀಟಧಾರಣೆ ಮಾಡಿ ಬಂಧಿಗಳಾಗಿದ್ದ ರಾಜಪುತ್ರರನ್ನು ಬಿಡುಗಡೆ ಮಾಡಿದನು.

ಜರಾಸಂಧನ ಹತ್ಯೆಯ ಸುದ್ದಿಯನ್ನು ಕೇಳಿದ ಯುಧಿಷ್ಠಿರ ಮಹಾರಾಜನು ದುಷ್ಟರನ್ನು ಕೊಲ್ಲುವ ಭಗವಂತನನ್ನು ಕೊಂಡಾಡಿ ರಾಜಸೂಯ ಯಾಗವನ್ನು ನೆರವೇರಿಸಿದಾಗ ಈ ಮಹಾನ್ ಘಟನೆಯನ್ನು ವೀಕ್ಷಿಸಲು ಎಲ್ಲ ಉಪದೇವತೆಗಳು, ಗಂಧರ್ವರು, ಕಿನ್ನರರು, ಸಿದ್ಧರು ಹಾಗೂ ಇತರರು ಅಲ್ಲಿ ಹಾಜರಾದರು.

ಯಾಗದ ಮುಂದಿನ ವಿಧಿಯು ಆರಾಧನೆಯನ್ನು ಸಲ್ಲಿಸುವ ಸಲುವಾಗಿ ಉನ್ನತ ವ್ಯಕ್ತಿಯೊಬ್ಬನನ್ನು ಆಯ್ಕೆ ಮಾಡುವುದಾಗಿತ್ತು. ಇದಕ್ಕಾಗಿ ಶ್ರೀ ಕೃಷ್ಣನನ್ನು ಆರಿಸಲಾಯಿತು. ಸಹದೇವನು ಯದು ವಂಶದ ಸದಸ್ಯರಲ್ಲೆಲ್ಲ ಶ್ರೇಷ್ಠನಾದ ಹಾಗೂ ತನ್ನ ಭಕ್ತಾದಿಗಳನ್ನು ಕಾಪಾಡುವಂಥ ಶ್ರೀ ಕೃಷ್ಣನೇ ಈ ಸಭೆಯಲ್ಲಿ ಇರುವವರೆಲ್ಲೆಲ್ಲ ಸರ್ವಶ್ರೇಷ್ಠನು. ಆದ್ದರಿಂದ ಯಾವ ಅಭ್ಯಂತರವೂ ಇಲ್ಲದೆ ಅವನು ಪ್ರಪ್ರಥಮವಾಗಿ ಪೂಜೆಗೊಳ್ಳಬೇಕು ಎಂದನು. ಸಹದೇವನು ಭಗವಂತನ ಲೀಲೆಗಳನ್ನು ವರ್ಣಿಸಿ ಅವನ ಅವತಾರದ ಉದ್ದೇಶವನ್ನು ವಿವರಿಸಿದನು. ಆದರೆ ಅಲ್ಲಿ ಹಾಜರಿದ್ದ ಶಿಶುಪಾಲನು ಅದಕ್ಕೆ ಒಪ್ಪಲಿಲ್ಲ. ಬದಲಾಗಿ ಅವನು ಭಗವಂತನ ಬಗ್ಗೆ ಎಲ್ಲ ರೀತಿಯ ದೋಷಾರೋಪಣೆಯನ್ನು ಮಾಡಿದನು. ಇನ್ನಿತರರು ತಡೆದರೂ ಅವನು ಮಾತನ್ನು ಮುಂದುವರಿಸುತ್ತಲೇ ಹೋದ. ರಕ್ತಪಾತವಾಗುವ ಸೂಚನೆ ಕಂಡು ಬಂದಾಗ ಭಗವಂತನು ತನ್ನ ಚಕ್ರದಿಂದ ಶಿಶುಪಾಲನ

ತಲೆಯನ್ನು ಕತ್ತರಿಸಿದಾಗ ಸಭೆಯಲ್ಲಿ ಹಾಹಾಕಾರವುಂಟಾಯಿತು. ಆದರೂ ಶಿಶುಪಾಲನ ಅಸ್ಪೃಷ್ಟ. ಆತ್ಮವು ತಕ್ಷಣವೇ ಶ್ರೀ ಕೃಷ್ಣನಲ್ಲಿ ಎಲ್ಲರ ಸಮ್ಮುಖದಲ್ಲೇ ಲೀನವಾಯಿತು.

ಯಾಗದ ನಂತರ ದುರ್ಯೋಧನನು ಇಂದ್ರ ಪ್ರಸ್ಥದ ಅರಮನೆಯಲ್ಲಿ ಓಡಾಡುತ್ತ ನೀರು ಹಾಗೂ ನೆಲದ ಮಧ್ಯದಲ್ಲಿನ ವ್ಯತ್ಯಾಸವನ್ನು ತಿಳಿಯದೆಯೇ ಜಾರಿ ಬಿದ್ದಾಗ ಸ್ತ್ರೀಯರನ್ನೂ ಒಳಗೊಂಡಂತೆ ಅಲ್ಲಿದ್ದವರೆಲ್ಲರೂ ನಕ್ಕರು. ದುರ್ಯೋಧನನಿಗೆ ಅವಹೇಳನವಾದಂತಾಯಿತು. ಆದರೆ ಭಗವಂತನು ಮಾತ್ರ ಸುಮ್ಮನಿದ್ದಾಗ ಭಗವಂತನೇ ಅವನಿಗೆ ಭ್ರಮೆಯನ್ನು ಉಂಟು ಮಾಡಿ ಕುರು ವಂಶದ ಎರಡು ಬಣಗಳ ಮಧ್ಯದಲ್ಲಿನ ವೈರತ್ವ ಪ್ರಾರಂಭಗೊಂಡಂತೆ ತೋರಿತು. ಜಗತ್ತಿನ ಹೊರೆಯನ್ನು ಇಳಿಸಲು ತನ್ನ ಅವತಾರದಲ್ಲಿ ಶ್ರೀ ಕೃಷ್ಣನು ಯೋಜಿಸಿದ ಘಟನೆಯಿದು ಎಂಬುದಾಗಿ ತೋರಿತು.

ಸಾಮಾನ್ಯ ಮನುಷ್ಯನೊಬ್ಬನ ಪಾತ್ರ ವಹಿಸುತ್ತಲೇ ಭಗವಂತನು ನಡೆಸಿದ ವಿವಿಧ ಲೀಲೆಗಳನ್ನು ವಿವರಿಸುವುದರೊಂದಿಗೇ ಶ್ರೀ ಶುಕಾಚಾರ್ಯರು ಯದು ವಂಶದವರ ಮಧ್ಯೆ ನಡೆದ ಕದನದ ಇತಿಹಾಸ ಹಾಗೂ ಸಾಲ್ವನೆಂಬ ರಕ್ಕಸನ ಬಗ್ಗೆಯೂ ತಿಳಿಸಿದರು.

ಸೌಭಾದ ದೊರೆಯಾದ ಸಾಲ್ವನು ಶಿಶುಪಾಲನ ಆಪ್ತ ಮಿತ್ರ. ಭಗವಂತನು ರುಕ್ಮಿಣಿಯನ್ನು ಕೊಂಡೊಯ್ದಾಗ ಶಿಶುಪಾಲನೊಂದಿಗೇ ಸಾಲ್ವನು ಸೋಲಿಸಲ್ಪಟ್ಟಿದ್ದನು. ಅಂದಿನಿಂದ ಸಾಲ್ವನಿಗೆ ಭಗವಂತನ ಮೇಲೆ ವೈರವಿದ್ದು ಅವನನ್ನು ಪರಾಭವಗೊಳಿಸುವುದಾಗಿ ವಚನವನ್ನು ಕೈಗೊಂಡಿದ್ದ.

ಸಾಲ್ವ ದೊರೆಯು ಮಹೇಶ್ವರನ ಮಹಾನ್ ಭಕ್ತ. ಅವನು ಯಾವುದೇ ಉಪದೇವತೆ, ರಕ್ಕಸರು, ಮಾನವರು ಅಥವಾ ಇನ್ನಾರಿಂದಲೂ ನಾಶಪಡಿಸಲಾರದಷ್ಟು ಬಲವಾಗಿದ್ದ ವಿಮಾನಗಳನ್ನು ಶಿವನಿಂದ ಪಡೆದುಕೊಂಡಿದ್ದನು. ಅಲ್ಲದೆ ಈ ವಿಮಾನಗಳು ತಾನು ಅಪೇಕ್ಷಿಸಿದಾಗ, ಅಪೇಕ್ಷಿಸಿದೆಡೆಯಲ್ಲೆಲ್ಲ ತನ್ನನ್ನು ಕೊಂಡೊಯ್ಯಬಲ್ಲ ವರವನ್ನೂ ಪಡೆದಿದ್ದ. ಸಾಲ್ವ ದೊರೆಯು ಆಕಾಶದಿಂದ ದ್ವಾರಕಾನಗರಿಯ ಮೇಲೆ ಧಾಳಿ ಮಾಡಿ ಅದನ್ನು ಸುತ್ತುವರಿದಾಗ, ಯಾಗಕ್ಕೆ ತೆರಳಿದ್ದ ಶ್ರೀ ಕೃಷ್ಣ ಬಲರಾಮರ ಗೈರು ಹಾಜರಿಯಲ್ಲಿ ಅದನ್ನು ರಕ್ಷಿಸಲು ಮುಂದಾದ ಪ್ರದ್ಯುಮ್ನನಿಗೂ ಸಾಲ್ವನಿಗೂ ಭೀಕರ ಕಾಳಗ ನಡೆಯಿತು. ಸಾತ್ಯಕಿ, ಅಕ್ರೂರ, ಸಾಂಬಾ, ಕೃತವರ್ಮರೂ ಪ್ರದ್ಯುಮ್ನನನ್ನು ಬೆಂಬಲಿಸಲು ಬಂದರು. ಪ್ರದ್ಯುಮ್ನನು ವಿಮಾನಗಳ ನಿಗೂಢ ಶಕ್ತಿಯನ್ನು ಎದುರಿಸಿದರೂ ಸಾಲ್ವನು ದ್ವಾರಕೆಯ ಸುತ್ತಲೂ ಕತ್ತಲನ್ನು ಸೃಷ್ಟಿಸಿದ್ದನು; ಕಾದಾಟದಲ್ಲಿ ಪ್ರದ್ಯುಮ್ನನು ಗಾಯಗೊಂಡು ಅವನ ಸಾರಥಿ ಅವನನ್ನು ವಿಶ್ರಾಂತಿಗಾಗಿ ಕರೆದೊಯ್ದರೂ ಸ್ವಲ್ಪ ಕಾಲದಲ್ಲೇ ಪ್ರದ್ಯುಮ್ನನು ಮತ್ತೆ ಯುದ್ಧಮಾಡಲು ಹಿಂತಿರುಗಿದನು.

ದ್ವಾರಕೆಗೆ ಹಿಂತಿರುಗಿದ ಬಲರಾಮ ಶ್ರೀ ಕೃಷ್ಣರಿಗೆ ನಗರವು ಅಪಾಯ ಸ್ಥಿತಿಯಲ್ಲಿರುವುದು ತಿಳಿಯಿತು. ಬಲರಾಮನು ಪ್ರಬಲ ಸ್ಥಾನದಲ್ಲಿ ನಿಂತಾಗ ಶ್ರೀ ಕೃಷ್ಣನು ತನ್ನ ಸಾರಥಿಯಾದ ದಾರೂಕನಿಗೆ ಸಾಲ್ವನು ಎಲ್ಲಿ ಬಲವಾಗಿದ್ದಾನೋ ಅಲ್ಲಿಗೆ ತನ್ನನ್ನು ಕರೆದೊಯ್ಯುವಂತೆ ತಿಳಿಸಿದನು. ಕಾದಾಟದಲ್ಲಿ ಭಗವಂತನ ಸಾರಂಗ ಎಂಬ ಅಸ್ತ್ರವು

ಕೆಳಗೆ ಬಿದ್ದಾಗ ಸಾಲ್ವನು ತಾನು ಗೆದ್ದೆನೆಂದು ಭಾವಿಸಿ, ವಸುದೇವನ ಪ್ರತಿಮೆಯೊಂದನ್ನು ತಂದು, ಶ್ರೀ ಕೃಷ್ಣನ ತಂದೆಯನ್ನು ಸೆರೆ ಹಿಡಿದಿರುವುದಾಗಿ ಹೇಳಿದನು. ಅದರ ಹಿಂದಿರುವ ಮೋಸವನ್ನು ಅರಿತ ಶ್ರೀ ಕೃಷ್ಣನು ಸಾಲ್ವನನ್ನು ತನ್ನ ಚಕ್ರದಿಂದ ಸಂಹರಿಸಿದನು. ಅವನೊಂದಿಗೆ ದಂತವಕ್ರ ಹಾಗೂ ಅವನ ಸೋದರ ವಿದುರಥರೂ ಕೊಲ್ಲಲ್ಪಟ್ಟರು.

ಕುರುವಂಶದ ಕೌರವರು ಹಾಗೂ ಪಾಂಡವರ ಮಧ್ಯೆ ನಡೆಯಲಿದ್ದ ಯುದ್ಧದ ಬಗ್ಗೆ ತಿಳಿದ ಬಲರಾಮನು ತೀರ್ಥಯಾತ್ರೆಗೆ ಹೊರಟು ವಿವಿಧ ಪವಿತ್ರ ಕ್ಷೇತ್ರಗಳನ್ನು ಸಂದರ್ಶಿಸಿದನು. ಅವನು ಯಾಗವೊಂದು ನಡೆಯುತ್ತಿದ್ದ ನೈಮಿಷಾರಣ್ಯಕ್ಕೂ ಭೇಟಿ ನೀಡಿದಾಗ, ಯಜ್ಞದ ನೇತೃತ್ವವನ್ನು ವಹಿಸಿದ್ದ ವ್ಯಾಸದೇವನ ಶಿಷ್ಯನಾದ ರೋಮಹರ್ಷಣ ನೊಬ್ಬನನ್ನು ಉಳಿದು ಮಿಕ್ಕವರೆಲ್ಲರೂ ಗೌರವದಿಂದ ಎದ್ದು ನಿಂತರು. ಅವನು ವ್ಯಾಸಪೀಠದ ಮೇಲೆ ಕೂತಿದ್ದನು. ಧಾರ್ಮಿಕ ತತ್ವಗಳಿಗೆ ಅನುಗುಣವಾಗಿ ರೋಮ ಹರ್ಷಣ ಭಗವದ್ ಪ್ರಮುಖನಿಗೆ ಗೌರವವನ್ನು ಸಲ್ಲಿಸಲು ಎದ್ದು ನಿಲ್ಲಬೇಕಾಗಿದ್ದು ಅವನು ಹಾಗೆ ಮಾಡದಿದ್ದಾಗ ಬಲರಾಮನು ತನಗೆ ಅವಮಾನ ಮಾಡಬೇಕೆಂಬ ಉದ್ದೇಶದಿಂದ ಎದ್ದು ನಿಲ್ಲಲಿಲ್ಲ ಎಂದು ತಿಳಿದನು. ಬಲರಾಮನು ಅವನಿಗೆ ಛೀಮಾರಿ ಹಾಕಲು ನಿರ್ಧರಿಸಿದನು. ಅವನೆಂದುಕೊಂಡನು: "ವ್ಯಾಸದೇವನ ಶಿಷ್ಯನಾಗಿರುವ ಉತ್ತಮ ಅರ್ಹತೆಯನ್ನು ಪಡೆದಿದ್ದು ವೈದಿಕ ಸಾಹಿತ್ಯವನ್ನು ಅಧ್ಯಯನ ಮಾಡಿಕೊಂಡು ಉನ್ನತ ವ್ಯಕ್ತಿತ್ವವೆನ್ನಿಸಿಕೊಂಡಿದ್ದರೂ ಇವನು ಭಗವಂತನ ಮುಂದೆ ದೀನನಾಗಿಲ್ಲದೇ ಇರುವುದರಿಂದ ಇವನಿಗೆ ಮರಣದಂಡನೆಯೇ ಸರಿಯಾದ ಶಿಕ್ಷೆ". ನಂತರ ಬಲರಾಮನು ಕುಶ ಗರಿಕೆಯನ್ನು ರೋಮಹರ್ಷಣನ ಮೇಲೆಸೆದು ಅವನನ್ನು ಕೊಂದನು. ಅವನ ಮರಣದಿಂದ ದುಃಖಿತರಾಗಿ ಅಲ್ಲಿದ್ದವರೆಲ್ಲಾ ರೋದಿಸತೊಡಗಿದರು. ಬ್ರಾಹ್ಮಣರು ಭಗವಂತನ ಕೃತ್ಯವನ್ನು ವಿರೋಧಿಸಿ ದೀನರಾಗಿ ಹೇಳಿದರು: "ಎಲೈ ಭಗವಂತನೇ, ನಿನ್ನ ಈ ಕೃತ್ಯವು ಧಾರ್ಮಿಕ ತತ್ವಕ್ಕೆ ಅನುಸಾರವಾಗಿದೆ ಎಂಬುದಾಗಿ ನಮಗೆ ಎನ್ನಿಸುವುದಿಲ್ಲ. ಈ ಮಹಾನ್ ಯಜ್ಞದ ಅವಧಿಗಾಗಿ ನಾವು ರೋಮಹರ್ಷಣನನ್ನು ಈ ಉನ್ನತ ಪೀಠದ ಮೇಲೆ ಕೂರಿಸಿದ್ದೆವು. ವ್ಯಾಸ ಪೀಠದ ಮೇಲೆ ಕೂತಿದ್ದಾತ ಯಾರೇ ಬಂದರೂ ಎದ್ದು ನಿಲ್ಲುವುದು ತರವಲ್ಲ. ಅಲ್ಲದೆ ನಾವು ರೋಮಹರ್ಷನಿಗೆ ನಿರಾತಂಕವಾದ ಆಯುಷ್ಯವನ್ನು ನೀಡಿದ್ದೆವು. ನೀನು ನಿನ್ನ ಕೃತ್ಯಕ್ಕಾಗಿ ಪಶ್ಚಾತ್ತಾಪ ಪಡಬೇಕು." ಬಲರಾಮನೆಂದನು "ನಾನು ನನ್ನ ಕೃತ್ಯಕ್ಕಾಗಿ ಪಶ್ಚಾತ್ತಾಪ ಪಡಬೇಕು. ನಾನು ರೋಮಹರ್ಷಣನಿಗೆ ಮತ್ತೆ ಜೀವ ಬರಿಸಿ, ದೀರ್ಘಾಯಸ್ಸು, ಸಾಕಷ್ಟು ಶಕ್ತಿ ಹಾಗೂ ಇಂದ್ರಿಯ ಸಾಮರ್ಥ್ಯಗಳನ್ನು ನೀಡುವೆನು. ಅಲ್ಲದೆ ನೀವು ಇಚ್ಛಿಸಿದಲ್ಲಿ ನೀವು ಕೇಳಿದ ಏನನ್ನಾದರೂ ಅವನಿಗೆ ನೀಡಬಲ್ಲೆನು. ನಿಮ್ಮ ಆಸೆಯನ್ನು ಪೂರೈಸಲು ನನಗೆ ಆನಂದವಾಗುತ್ತಿದೆ." ಆದರೆ ಅಲ್ಲಿದ್ದ ಬ್ರಾಹ್ಮಣರು ರೋಮಹರ್ಷಣನು ಮರಳಿ ಜೀವವನ್ನು ಪಡೆಯಬೇಕೆಂದು ಅಪೇಕ್ಷಿಸಲಿಲ್ಲ. ಅವರೆಂದರು "ಆದರೆ ಅದೇ ಕಾಲಕ್ಕೆ ಭಗವಂತನಾದ ನೀನು ನೆನಪಿಟ್ಟುಕೊಳ್ಳ ಬೇಕಾದ್ದು ಮುನಿಗಳು ಹಾಗೂ ಬ್ರಾಹ್ಮಣರಾದ ನಾವು ಸ್ವಯಂ ಇಚ್ಛೆಯಿಂದ ಅವನಿಗೆ ಸುದೀರ್ಘ ಆಯುಷ್ಯವನ್ನು ನೀಡಿದ್ದು, ನಮ್ಮ ವರಗಳು ವ್ಯರ್ಥವಾಗಕೂಡದು. ಒಂದು

ಪರಿಹಾರವನ್ನು ಕಂಡು ಹಿಡಿದು ಬಲರಾಮನು ಹೇಳಿದನು "ಪುತ್ರನು ತಂದೆಯ ಶರೀರದಿಂದ ಉತ್ಪತ್ತಿಗೊಳ್ಳುವುದರಿಂದ, ವೇದಗಳ ಸೂತ್ರಗಳಿಗೆ ಅನ್ವಯವಾಗಿ ಮಗನು ತಂದೆಯ ಪ್ರತಿನಿಧಿಯಾಗಬೇಕು. ಆದ್ದರಿಂದ ಇನ್ನು ಮುಂದೆ ರೋಮಹರ್ಷಣನ ಪುತ್ರನಾದ ಉಗ್ರಸೇನನು ತನ್ನ ತಂದೆಯ ಸ್ಥಾನವನ್ನು ಪಡೆದು ಪ್ರವಚನಗಳನ್ನ ಮುಂದುವರಿಸುವನಾಗಲಿ ಹಾಗೂ ನಿಮ್ಮ ದೀರ್ಘಾಯುಷ್ಯ ವರ ಮಗನಿಗೆ ವರ್ಗಾಯಿಸಲ್ಪಡಲಿ". ಬ್ರಾಹ್ಮಣರೆಂದರು: "ಅಪರಿಶುದ್ಧ ಕಾರ್ಯಗಳ ಮೂಲಕ ಯಾಗ ವನ್ನು ಕಲುಷಿತಗೊಳಿಸುತ್ತಿರುವ ಇಳಾಳ ಮಗನಾದ ಬಲವಲನೆಂಬ ರಾಕ್ಷಸನಿದ್ದಾನೆ. ನೀನು ಅವನನ್ನು ಕೊಂದು ಹನ್ನೆರಡು ತಿಂಗಳುಗಳ ಕಾಲ ಪವಿತ್ರ ಸ್ಥಳಗಳನ್ನು ಸಂದರ್ಶಿಸಿದೆಯಾದರೆ ನೀನು ಎಲ್ಲ ದೋಷಗಳಿಂದಲೂ ಸಂಪೂರ್ಣವಾಗಿ ಮುಕ್ತ ವಾಗುತ್ತೀಯ. ನೀನು ರೋಮರ್ಷಣನನ್ನು ಕೊಂದದ್ದಕ್ಕೆ ಇದೇ ಪಶ್ಚಾತ್ತಾಪ".

ಬಲರಾಮನು ತನ್ನ ಯಾತ್ರೆಯನ್ನು ಮುಂದುವರಿಸಿ ದಾರಿ ಮಾರ್ಗದಲ್ಲಿ ಬಲವಲನನ್ನು ಕೊಂದನು. ಅವನು ಕೌಶಿಕ, ಸರಾಯು, ಸರಸ್ವತಿ ಹಾಗೂ ಪುಲಹನ ಆಶ್ರಮವನ್ನು ಸಂದರ್ಶಿಸಿ ಗಂಡಕಿ ಹಾಗೂ ಗೋಮತಿ ನದಿಗಳಿಗೆ ಭೇಟಿ ನೀಡಿದನು. ಸೋನಾ ನದಿಯ ಬಳಿಗೆ ತೆರಳಿ, ಗಯೆಗೆ ಹೊರಟು, ಕೊನೆಗೆ ಗಂಗಾ ಸಾಗರವನ್ನು ತಲುಪಿದನು. ಗಂಗಾ ನದಿಯು ಬಂಗಾಳ ಕೊಲ್ಲಿಯನ್ನು ಸೇರುವುದರಿಂದ ಇದೊಂದು ಪವಿತ್ರ ಸ್ಥಳ ಆನಂತರ ಅವನು ಮಹೇಂದ್ರ ಪರ್ವತಕ್ಕೆ ಹೊರಟು ಅಲ್ಲಿ ಪರಶುರಾಮನನ್ನು ಭೇಟಿಯಾದನು. ಅವನು ದಕ್ಷಿಣದಲ್ಲಿ ಗೋದಾವರಿ, ವೇಣಾ, ಪಂಪ, ಭೀಮರಥಿ ನದಿಗಳನ್ನು ಸಂದರ್ಶಿಸಿದನು. ದಕ್ಷಿಣದ ಅನೇಕ ಸ್ಥಳಗಳಿಗೆ ಭೇಟಿಯಿತ್ತು, ದುರ್ಯೋಧನ ಹಾಗೂ ಭೀಮಸೇನರ ಮಧ್ಯೆ ಕಟ್ಟ ಕಡೆಯ ಹಂತದ ಸಮರವು ನಡೆಯುವ ಕುರುಕ್ಷೇತ್ರಕ್ಕೆ ಬಂದು ಕಾದಾಟವನ್ನು ನಿಲ್ಲಿಸಿರೆಂದು ಹೇಳಿದ ತನ್ನ ಬುದ್ಧಿವಾದ ವ್ಯರ್ಥವಾದಾಗ ಮನೆಗೆ ಹಿಂತಿರುಗಿದನು.

ಶ್ರೀ ಕೃಷ್ಣ ಪರಮಾತ್ಮನ ವಿವಿಧ ಲೀಲೆಗಳನ್ನು ಶುಕಾಚಾರ್ಯರಿಂದ ತಿಳಿದ ಪರೀಕ್ಷಿತ ರಾಜನು ಆನಂದಗೊಂಡನು. ಅವನೆಂದನು. "ಭಗವಂತ ಅಥವಾ ಅವನ ಪ್ರತಿನಿಧಿಗಳ ಸೇವೆಯಲ್ಲಿ ತೊಡಗುವ ಮೂಲಕ ಯಾರೇ ಆಗಲಿ ತಮ್ಮ ಶರೀರದ ವಿವಿಧ ಭಾಗಗಳ ಕ್ರಿಯೆಯನ್ನು ಅತ್ಯುನ್ನವಾದ ಪರಿಶುದ್ಧ ಹಂತಕ್ಕೆ ಏರಿಸಬಹುದು. ಒಬ್ಬನಿಗೆ ಮತ್ತೇನನ್ನು ಮಾಡಲು ಸಾಧ್ಯವಿಲ್ಲದಿದ್ದರೆ, ಅಂಥವರು ಕೇವಲ ಭಗವಂತನ ಅಥವಾ ಅವನ ಪ್ರತಿರೂಪನ ಮುಂದೆ ತಲೆಬಾಗಿ ಭಗವಂತನ ಪದ್ಮಪಾದ ಅಥವಾ ಅವನ ಭಕ್ತನ ಪಾದವನ್ನು ತೊಳೆದ ಚರಣಾಮೃತ ಸೇವಿಸಬೇಕು." ಪರೀಕ್ಷಿತ ರಾಜನು ಭಗವಂತನ ಪ್ರವಚನವನ್ನು ಮುಂದುವರಿಸಬೇಕೆಂದು ಶ್ರೀ ಶುಕಾಚಾರ್ಯರನ್ನು ಕೇಳಿದಾಗ ಅವರು ಸುಧಾಮನ ಕತೆಯನ್ನು ಹೇಳಿದರು.

## ಸುಧಾಮ

ಸುಧಾಮನು ಭಗವಂತನ ಗೆಳೆಯನಾಗಿದ್ದು ಉತ್ತಮ ಬ್ರಾಹ್ಮಣನಾಗಿದ್ದನು. ಪರಿಪೂರ್ಣ ಬ್ರಾಹ್ಮಣನಾದ ಅವನು ಅತಿಶಯ ಜ್ಞಾನದಲ್ಲಿ ಉತ್ತುಂಗಕ್ಕೆ ಏರಿಸಲ್ಪಟ್ಟಿ, ಅವನ ಈ ತಿಳಿವಳಿಕೆಯಲ್ಲಿಯೇ ಅವನು ಐಹಿಕ ಜೀವನದ ಮೇಲೆ ವ್ಯಾಮೋಹವನ್ನು ಬೆಳಸಿಕೊಂಡಿರಲಿಲ್ಲ. ಹೀಗಾಗಿ ಅವನು ಶಾಂತಚಿತ್ತನಾಗಿದ್ದು ಇಂದ್ರಿಯಗಳ ಮೇಲೆ ಹತೋಟಿಯನ್ನು ಪಡೆದುಕೊಂಡಿದ್ದನು. ಸುಧಾಮ ಹಾಗೂ ಅವನ ಪತ್ನಿಗೆ ತೊಡಲು ಉತ್ತಮ ಉಡುಗೆಗಳಿಲ್ಲದೆ ಅವರ ದೈಹಿಕ ಸ್ಥಿತಿಯು ಅಸಮೃದ್ಧವಾಗಿದ್ದರಿಂದ ಅವರು ಬಡವರಂತೆ ಇದ್ದರು. ಅವರು ಸರಿಯಾಗಿ ಉಣ್ಣದಿದ್ದು ಸುಧಾಮನ ಪತ್ನಿಯು ತನ್ನ ಗಂಡನ ಬಗ್ಗೆ ಕಳವಳವನ್ನು ವ್ಯಕ್ತಪಡಿಸಿದಳು. ಆದ್ದರಿಂದ ಅವಳು ತನ್ನ ಪತಿಗೆ ಅವನು ತನ್ನ ಗೆಳೆಯನಾದ ಶ್ರೀ ಕೃಷ್ಣನ ಬಳಿಗೆ ತೆರಳಿ, ಜೀವನಕ್ಕೆ ಅತ್ಯಾವಶ್ಯಕವಾದದ್ದೇನಾದರೂ ಬೇಡಿ ತರಬೇಕೆಂದು ತಿಳಿಸಿದಳು. ಅವಳು ಅವನನ್ನು ಹೀಗೆ ಒತ್ತಾಯಪಡಿಸತೊಡಗಿದಾಗ ಸುಧಾಮನೆಂದುಕೊಂಡನು "ನಾನು ಅವನನ್ನು ಯಾವುದೇ ಐಹಿಕ ಲಾಭವನ್ನು ನೀಡಲು ಕೇಳದಿದ್ದರೂ ಇದೊಂದು ಸದಾವಕಾಶ". ಸುಧಾಮನು ಶ್ರೀ ಕೃಷ್ಣ ಪರಮಾತ್ಮನ ಬಳಿಗೆ ಹೋಗಲು ನಿಶ್ಚಯಿಸಿದಾಗ, ಭಗವಂತನಿಗೆ ತಾನು ಏನಾದರೂ ಕೊಡುಗೆಯನ್ನು ತೆಗೆದುಕೊಂಡು ಹೋಗಬೇಕಾಗಿದ್ದರಿಂದ ಅಂಥಹುದು ಏನಾದರೂ ಮನೆಯಲ್ಲಿ ಇದೆಯೇ ಎಂಬುದಾಗಿ ಪತ್ನಿಯನ್ನು ಕೇಳಿದನು. ಅದಕ್ಕೆ ಅವಳು ತನ್ನ ನೆರೆಯವರಿಂದ ಒಂದು ಹಿಡಿ ಅವಲಕ್ಕಿಯನ್ನು ತಂದು ಅದನ್ನು ಸಣ್ಣ ಚೌಕದಲ್ಲಿ ಕಟ್ಟಿ ಭಗವಂತನಿಗಾಗಿ ಕೊಂಡೊಯ್ಯಲು ಅದನ್ನು ಪತಿಯ ಕೈಗಿತ್ತಳು.

ಸುಧಾಮನು ದ್ವಾರಕೆಗೆ ಹೊರಟು ಇನ್ನಿತರ ಬ್ರಾಹ್ಮಣರೊಂದಿಗೆ ಅರಮನೆಯನ್ನು ಪ್ರವೇಶಿಸಿದನು. ಶ್ರೀ ಕೃಷ್ಣ ಹಾಗೂ ರುಕ್ಮಿಣಿಯರು ಪಲ್ಲಂಗದ ಮೇಲೆ ಆಸೀನರಾಗಿದ್ದರು. ಭಗವಂತನು ಸುಧಾಮನನ್ನು ಕಂಡಾಗ ಮುಂದೆ ಬಂದು ಅವನನ್ನು ಸ್ವಾಗತಿಸಿದನು. ಭಗವಂತನು ಅವನನ್ನು ಆಲಂಗಿಸಿಕೊಂಡು ಅವನನ್ನು ಪಲ್ಲಂಗದ ಮೇಲೆ ಕೂಡಿಸಿ ಕೊಂಡನು. ಎಲ್ಲರಿಗೂ ಆಶ್ಚರ್ಯವಾಯಿತು. ಅವರು ತಾವು ಸಂದೀಪನಿ ಆಶ್ರಮದಲ್ಲಿ ಶಿಷ್ಯರಾಗಿದ್ದ ದಿನಗಳನ್ನು ನೆನಪಿಸಿಕೊಂಡರು. ಶ್ರೀ ಕೃಷ್ಣ ಪರಮಾತ್ಮನು ಸುಧಾಮನನ್ನು ತನಗಾಗಿ ಅವನು ಏನನ್ನು ತಂದಿದ್ದಾನೆಂದು, ಅವನ ಪತ್ನಿ ತನಗೇನಾದರೂ ಕೊಟ್ಟು ಕಳುಹಿಸಿದ್ದಾಳೆಯೇ ಎಂದು ವಿಚಾರಿಸಿದನು. ಸುಧಾಮನು ಹಿಂಜರಿಯುತ್ತಿರುವುದು ಭಗವಂತನಿಗೆ ಗೋಚರಿಸಿತು. ಇದನ್ನು ಕಂಡ ಭಗವಂತನು ಹೇಳಿದನು, "ನನ್ನ ಪ್ರಿಯ ಮಿತ್ರನೇ, ನನಗೆ ಖಚಿತವಾಗಿಯೂ ಯಾವ ಅವಶ್ಯಕತೆಯಿಲ್ಲ. ಆದರೆ ನನ್ನ ಭಕ್ತರು ತಮ್ಮ ಪ್ರೇಮದ ಸಂಕೇತವಾಗಿ ನನಗೆ ಏನನ್ನಾದರೂ ನೀಡುತ್ತಾರೆ. ಅದು ಅಷ್ಟು ಮಹತ್ವದ್ದು ಅಲ್ಲದಿರಬಹುದು. ನಾನದನ್ನು ಅತ್ಯಂತ ಸಂತೋಷದಿಂದ ಸ್ವೀಕರಿಸುತ್ತೇನೆ. ಭಕ್ತಿ ಹಾಗೂ ಪ್ರೇಮದಿಂದ ನನಗೆ ನೀಡಿದ್ದನ್ನು ಮಾತ್ರ ನಾನು ಸ್ವೀಕರಿಸುತ್ತೇನೆ. ಅದಿಲ್ಲದೆ ಬೆಲೆ ಬಾಳುವುದನ್ನು ನೀಡಿದರೂ ನಾನದನ್ನು ಸ್ವೀಕರಿಸುವುದಿಲ್ಲ, ನನ್ನ ಪರಿಶುದ್ಧ ಭಕ್ತನು ಅತ್ಯಂತ ಸಣ್ಣವಾದವನ್ನು - ಒಂದು ಹೂವು, ಒಂದು ಎಲೆಯ ಚೂರು, ಒಂದಿಷ್ಟು ನೀರು ಇದನ್ನು ಭಕ್ತಿಪೂರ್ವಕ ಪ್ರೇಮದೊಂದಿಗೆ ನೀಡಿದಾಗ ನಾನು ಅದನ್ನು ಸಂತೋಷದಿಂದ ಸ್ವೀಕರಿಸುತ್ತೇನಲ್ಲದೆ, ಸಂತೋಷದಿಂದ ತಿನ್ನುತ್ತೇನೆ." ಆಗಲೂ ಸುಧಾಮನು

ಆಲೋಚಿಸುತ್ತಿದ್ದನು. ಇಂಥ ಸಾಮಾನ್ಯ ಸಾಮಾಗ್ರಿಯನ್ನು ಶ್ರೀ ಕೃಷ್ಣನಿಗೆ ಕೊಡುವುದಾದರೂ ಹೇಗೆ? ಆಗ ಶ್ರೀ ಕೃಷ್ಣನು ಬ್ರಾಹ್ಮಣನ ಬಗಲಲ್ಲಿ ತೂಗಡುತ್ತಿದ್ದ ಗಂಟನ್ನು ಕಿತ್ತುಕೊಂಡು ಸುಧಾಮನಿಗೆ ಹೇಳಿದನು "ಮಿತ್ರನೇ, ನೀನು ನನಗಾಗಿ ಈ ರುಚಿಕರ ಅವಲಕ್ಕಿಯನ್ನು ತಂದಿದ್ದೀಯೆ. ಈ ಹಿಡಿ ಅವಲಕ್ಕಿ ನನ್ನನ್ನು ಮಾತ್ರ ತೃಪ್ತಿಪಡಿಸುವುದಿಲ್ಲ, ಇಡೀ ಸೃಷ್ಟಿಯನ್ನೇ ಸಂತೃಪ್ತಿಗೊಳಿಸುತ್ತದೆ. ಭಗವಂತನು ಒಂದು ಹಿಡಿ ಅವಲಕ್ಕಿಯನ್ನು ತಿಂದು ಮತ್ತಿಷ್ಟು ತಿನ್ನಲು ಗಂಟಿಗೆ ಕೈ ಹಾಕಿದಾಗ ರುಕ್ಮಿಣಿ ಅವನನ್ನು ತಡೆದು ಹೇಳಿದಳು "ನನ್ನ ದೊರೆಯೇ, ನೀನು ತಿಂದಿರುವ ಹಿಡಿ ಅವಲಕ್ಕಿಯು ಇದನ್ನು ನೀಡಿದವರಿಗೆ ಈ ಜನ್ಮದಲ್ಲಿ ಸಮೃದ್ಧಿಯನ್ನು ಹೊಂದಿ ಮುಂದಿನ ಬದುಕಿನಲ್ಲೂ ಸಮೃದ್ಧನಾಗಲು ಸಾಕು. ನೀನು ನಿನ್ನ ಭಕ್ತರ ಬಗ್ಗೆ ಎಷ್ಟೊಂದು ಕರುಣಾಮಯಿಯಾಗಿದ್ದೀಯೆ ಎಂದರೆ ಈ ಹಿಡಿ ಅವಲಕ್ಕಿಯೂ ನಿನ್ನನ್ನು ಮುದಗೊಳಿಸಿ ಅವನಿಗೆ ಈ ಜನ್ಮ ಹಾಗೂ ಮುಂದಿನ ಜನ್ಮದಲ್ಲಿ ಸಮೃದ್ಧಿಯನ್ನು ಒದಗಿಸುತ್ತದೆ". ಸುಧಾಮನು ಮರುದಿನ ಮನೆಗೆ ಹಿಂತಿರುಗಿದನು. ಅವನಿಗೆ ಅಲ್ಲಿ ಅದ್ಭುತ ಸನ್ನಿವೇಶ ಕಾದಿತ್ತು. ಅವನನ್ನು ಸುಂದರ ತರುಣಿಯರು ಸ್ವಾಗತಿಸಿ, ಸುಧಾಮನ ಆಗಮನದಿಂದಾಗಿ ಅವನ ಪತ್ನಿಗೆ ಆನಂದವಾಯಿತು. ಅವನ ಮನೆ ಅರಮನೆಯಾಗಿ ಪರಿವರ್ತನೆಗೊಂಡಿತ್ತು. ಸುಧಾಮನು ಅದರಿಂದ ಆನಂದಿತನಾದರೂ ಅದನ್ನು ತ್ಯಾಗಮನೋಭಾವದಿಂದಲೇ ಸ್ವೀಕರಿಸಿ, ಇಂದ್ರಿಯಾಸಕ್ತಿಯಿಂದ ದೂರನಾಗೇ ಉಳಿದು ತನ್ನ ಪತ್ನಿಯೊಂದಿಗೆ, ತನಗಿರುವುದೆಲ್ಲವೂ ಭಗವಂತನ ಪ್ರಸಾದವೆಂಬುದಾಗಿ ಬಗೆದು ಕಾಲ ಹಾಕಿದನು.

## ಸೂರ್ಯಗ್ರಹಣ

ಬಲರಾಮ ಹಾಗೂ ಶ್ರೀಕೃಷ್ಣರು ದ್ವಾರಕೆಯಲ್ಲಿದ್ದಾಗ ಸೂರ್ಯ ಗ್ರಹಣದಂಥ ಅಪರೂಪ ಘಟನೆಯು ಸಂಭವಿಸಿತು. ಪ್ರತಿಯೊಂದು ಕಲ್ಪದ ಕೊನೆಯಲ್ಲಿ ಸೂರ್ಯನನ್ನು ಭಾರೀ ಮೋಡವೊಂದು ಕಲೆತುಕೊಂಡು ಸ್ವರ್ಗಲೋಕದವರೆಗೆ ಕೆಳಗಿನ ಗ್ರಹ ವ್ಯವಸ್ಥೆಯನ್ನು ಸತತ ಮಳೆಯು ಆವರಿಸುತ್ತದೆ. "ಶಮಂತ ಪಂಚಕ" ಯಾತ್ರಾ ಸ್ಥಳವನ್ನು ಪೂಜಿಸುವುದಕ್ಕೆ ಇಷ್ಟೊಂದು ಬಾರಿ ಕ್ಷತ್ರಿಯರನ್ನು ಸಂಹರಿಸಿದ ಎಂಬ ಕಾರಣಕ್ಕಾಗಿ, ಪರಶುರಾಮನು ಕ್ಷತ್ರಿಯರನ್ನು ಕೊಂದಾಗ ಅವರ ನೆತ್ತರು ಹೊಳೆಯಾಗಿ ಹರಿಯಿತು. ಆಗ ಪರಶುರಾಮನು ಶಮಂತ ಪಂಚಕದಲ್ಲಿ ಐದು ಸರೋವರಗಳನ್ನು ಅಗೆದು ನೆತ್ತರನ್ನು ಅದರಲ್ಲಿ ತುಂಬಿಸಿ, ಅಲ್ಲಿ ತನ್ನ ಪಾಪಕೃತ್ಯವೆಂದು ಕರೆಯಲಾದ ಕ್ರಿಯೆಯನ್ನು ಹೋಗಲಾಡಿಸಿಕೊಳ್ಳಲು ಯಾಗವೊಂದನ್ನು ನಡೆಸಿದನು.

ಶಮಂತ ಪಂಚಕಕ್ಕೆ ಕುರುಕ್ಷೇತ್ರವೆಂದು ಹೆಸರು. ಸೂರ್ಯ ಗ್ರಹಣದ ಸಂದರ್ಭದಲ್ಲಿ ಯದು ವಂಶಸ್ಥರು ಕುರುಕ್ಷೇತ್ರಕ್ಕೆ ತೆರಳಿದರು. ಅಲ್ಲಿ ಅವರೆಲ್ಲರೂ ಸ್ನಾನ ಮಾಡಿ ದಾನಗಳನ್ನಿತ್ತರು. ಅವರು ಅಲ್ಲಿ ಪರಶುರಾಮ ರಚಿಸಿದ್ದ ಸರೋವರದಲ್ಲಿ ಮಿಂದರು. ಭೋಜನದ ನಂತರ ಯದುವಂಶದ ಸದಸ್ಯರು ವಿಶ್ರಾಂತಿಯಲ್ಲಿದ್ದಾಗ ಅವರನ್ನು ಭೇಟಿಯಾಗಲು ಹಲವಾರು ಸ್ಥಳಗಳಿಂದ ಜನರು ಬಂದರು. ಅವರಲ್ಲಿ ಕುಂತಿ ಹಾಗೂ ಇತರ ಪಾಂಡವರು, ಮತ್ತು ಬೃಂದಾವನದ ನಾಗರಿಕರಿದ್ದರು. ದ್ರೌಪದಿಯು ಭಗವಂತನ

ಪತ್ನಿಯರನ್ನು ಭೇಟಿಯಾಗಿ ಅವರೆಲ್ಲರೂ ಹೇಗೆ ಭಗವಂತನನ್ನು ವಿವಾಹವಾದರೆಂದು ವಿಚಾರಿಸಿದಾಗ ಅವರಲ್ಲಿ ಪ್ರತಿಯೊಬ್ಬರೂ ಅವನೊಂದಿಗಿನ ತಮ್ಮ ವಿವಾಹವನ್ನು ವಿವರಿಸಿದರು.

ವ್ಯಾಸದೇವ, ನಾರದ, ಚ್ಯವನ, ದೇವಲ, ವಿಶ್ವಾಮಿತ್ರ, ಸಪ್ತರ್ಷಿಗಳು. ಸನತ್ಕುಮಾರರು ಹಾಗೂ ಇತರರೂ ಸಹ ಅಲ್ಲಿಗೆ ಆಗಮಿಸಿದರು.

ಭಗವಂತನು ನುಡಿದನು. : "ಇಲ್ಲಿ ನೆರೆದಿರುವ ಋಷಿಮುನಿಗಳಿಗೆಲ್ಲ ವೈಭವವುಂಟಾಗಲಿ. ಇಂದು ನಾವು ನಮ್ಮ ಜೀವನಗಳು ಯಶಸ್ವಿಯಾಗಿವೆಯೆಂದು ಭಾವಿಸುತ್ತಿದ್ದೇವೆ. ಇಂದು ನಾವು ಜೀವನದ ಗುರಿಯನ್ನು ಸಾಧಿಸಿದ್ದೇವೆ. ಏಕೆಂದರೆ ನಾವು ಉನ್ನತ ಮುಕ್ತರಾದ ಋಷಿ ಮುನಿಗಳನ್ನು, ಯಾರನ್ನು ಸ್ವರ್ಗಲೋಕದಲ್ಲಿರುವ ಉಪದೇವತೆಗಳೂ ಸಹ ನೋಡಲು ಹಂಬಲಿಸುತ್ತರೋ ಅಂಥವರನ್ನು ಮುಖಾಮುಖಿ ಯಾಗಿ ಭೇಟಿಯಾಗಿದ್ದೇವೆ. ಭಕ್ತಿಯ ಮಾರ್ಗವನ್ನು ಅರಿಯದೆ ದೇವಾಲಯಗಳಲ್ಲಿ ದೇವತೆಗಳಿಗೆ ತಮ್ಮ ಗೌರವವನ್ನು ಸಲ್ಲಿಸಿದರೂ ಪ್ರತಿಯೊಬ್ಬರ ಹೃದಯದಲ್ಲೂ ಭಗವಂತನು ವಾಸವಾಗಿದ್ದಾನೆ ಎಂಬುದನ್ನು ಅರಿಯದೆ, ತಮ್ಮ ಕಾಮುಕ ಆಶೆಗಳಿಗಾಗಿ ವಿವಿಧ ಉಪದೇವತೆಗಳನ್ನು ಕೇವಲ ಆರಾಧಿಸುವವರು ಈ ಮುನಿಗಳ ಪ್ರಾಮುಖ್ಯತೆಯನ್ನು ಅರ್ಥಮಾಡಿಕೊಳ್ಳಲು ಅಸಮರ್ಥರಾಗಿರುತ್ತಾರೆ.

ವಾಸುದೇವನು ಎಲ್ಲ ಋಷಿಮುನಿಗಳನ್ನೂ ಭೇಟಿಯಾಗಿ ಅವರಿಗೆ ಗೌರವವನ್ನು ಸಲ್ಲಿಸಿದನು. ಅವರ ನೆರವಿನಿಂದ ಮಹಾನ್ ಯಜ್ಞವೊಂದು ಏರ್ಪಾಟಾಗಿ ಎಲ್ಲೆಡೆ ಸಂತಸ ಸಂಭ್ರಮಗಳು ಉಂಟಾದವು.

ಯದುಗಳು ಕುರುಕ್ಷೇತ್ರದಿಂದ ಹಿಂತಿರುಗಿದಾಗ ವಸುದೇವನು ಪರಮಾತ್ಮ ಸ್ವರೂಪನಾದ ತನ್ನ ಮಕ್ಕಳಾದ ಬಲರಾಮ ಶ್ರೀ ಕೃಷ್ಣರನ್ನು ಉದ್ದೇಶಿಸಿ ಮಾತನಾಡಿ ದೈವಿಕ ಸೂಚನೆಗಳನ್ನು ಅಪೇಕ್ಷಿಸಿದನು. ತನ್ನ ಗುರುವಾದ ಸಾಂದೀಪನಿಯ ಮಗನಿಗೆ ಶ್ರೀ ಕೃಷ್ಣನು ಜೀವ ನೀಡಿದ್ದಾನೆಂಬುದನ್ನು ತಿಳಿದಿದ್ದ ದೇವಕಿಯು ಕಂಸನಿಂದ ಹತರಾಗಿದ್ದ ತನ್ನ ಇತರ ಮಕ್ಕಳೂ ಜೀವಂತಗೊಳ್ಳಲಿ ಎಂದು ಅಪೇಕ್ಷಿಸಿದಳು. ಅದಕ್ಕಾಗಿ ಅವಳೆಂದಳು "ನೀನು ಅವರಿಗೆ ಮತ್ತೆ ಜೀವ ನೀಡಿದೆಯಾದರೆ ನನ್ನ ಹೃದಯ ಆನಂದದಿಂದ ತುಂಬುತ್ತದೆ".

## ದೇವಕಿಯ ಇನ್ನಿತರ ಪುತ್ರರು

ಇದನ್ನು ಕೇಳಿದಾಗ ಶ್ರೀ ಕೃಷ್ಣ ಬಲರಾಮರು ಯೋಗಮಾಯೆಯ ನೆರವನ್ನು ಬೇಡಿ ಸುತಳಕ್ಕೆ ತೆರಳಿದರು. ಇದನ್ನು ಕಂಡ ಬಲಿ ಮಹಾರಾಜನು ಅವರನ್ನು ಬರಮಾಡಿಕೊಂಡು ಗೌರವಿಸಿ ಕೊಂಡಾಡಿದನು. ಬಲಿಮಹಾರಾಜನು ಪರಮಾತ್ಮರನ್ನು ತನ್ನನ್ನು ಅವರ ಸೇವೆಗೆ ನೇಮಿಸಿಕೊಳ್ಳಬೇಕೆಂದು ಕೇಳಿಕೊಂಡನು. ಭಗವಂತನೆಂದನು : "ನನಗೆ ಪ್ರಿಯವಾದ ದಾನವ ದೊರೆಯೇ, ಸ್ವಯಂಭು ಮನುವಿನ ಯಾಗದಲ್ಲಿ, ಮರೀಚಿ ಎಂಬ ಹೆಸರನ್ನೂ ಹೊಂದಿದ ಪ್ರಜಾಪತಿಯು ತನ್ನ ಪತ್ನಿ ಊರ್ಣಳ

ಗರ್ಭದಿಂದ ಉಪದೇವತೆಗಳಾದ ಆರು ಪುತ್ರರನ್ನು ಪಡೆದಳು. ಒಂದಾನೊಂದು ಕಾಲದಲ್ಲಿ ತನ್ನ ಮಗಳ ಸೌಂದರ್ಯದಿಂದಲೇ ವಿಚಲಿತನಾದ ಬ್ರಹ್ಮ ಅವಳನ್ನೇ ಅನುಸರಿಸಿ ಹೋಗಿ, ಲೈಂಗಿಕ ಬಯಕೆಯುಳ್ಳವನಾದ. ಅದೇ ಕಾಲಕ್ಕೆ ಈ ಆರು ಉಪದೇವತೆಗಳು ಬ್ರಹ್ಮದೇವನ ಕ್ರಿಯೆಯನ್ನು ಜಿಗುಪ್ಸೆಯಿಂದ ನೋಡಿದರು. ಬ್ರಹ್ಮನ ಕ್ರಿಯೆಯನ್ನು ಈ ದೇವತೆಗಳು ಟೀಕಿಸಿದ್ದೇ ಅವರ ಪಾಲಿನ ಮಹಾಪರಾಧವಾಯಿತು. ಈ ಪುತ್ರರನ್ನು ಆನಂತರ ದೇವತೆಯ ಗರ್ಭಕ್ಕೆ ಹಾಕಿದಾಗ, ಕಂಸನು ಅವರನ್ನು ಒಬ್ಬರಾದ ನಂತರ ಒಬ್ಬರಂತೆ ಕೊಂದನು. ಅವರೆಲ್ಲರೂ ನಿನ್ನಲ್ಲಿ ಬದುಕಿದ್ದಾರೆ ಎನ್ನುವುದು ನನಗೆ ಗೊತ್ತು. ನನ್ನ ತಾಯಿ ದೇವಕಿಯನ್ನು ಸಮಾಧಾನಪಡಿಸುವ ಸಲುವಾಗಿ ಅವರೆಲ್ಲರನ್ನೂ ನನ್ನೊಂದಿಗೆ ಕರೆದೊಯ್ಯಲು ನಾನು ನಿರ್ಧರಿಸಿದ್ದೇನೆ. ನನ್ನ ತಾಯಿಯನ್ನು ಕಂಡೊಡನೆಯೇ ಈ ಆತ್ಮಗಳು ವಿಮುಕ್ತಿಗೊಂಡು, ಅಪಾರ ಆನಂದದಿಂದ ತಮ್ಮ ಮೂಲಗ್ರಹಗಳಿಗೆ ರವಾನಿಸಲ್ಪಡುತ್ತವೆ. ಈ ಆರು ಆತ್ಮರ ಹೆಸರು - ಸ್ಮರ, ಉದ್ಗೀತಾ, ಪರಿಸ್ವಂಗ, ಪತಾಂಗ, ಕ್ಷುದ್ರಭೃೂತ್ ಮತ್ತು ಘೃಣಿ. ಅವರನ್ನು ಮತ್ತೆ ಉಪದೇವತೆಗಳೆಂಬ ಹೆಸರಿನಲ್ಲಿ ಪುನರಸ್ಥಾಪಿತಗೊಳಿಸಲಾಗುತ್ತದೆ". ಆನಂತರ ಪರಮಾತ್ಮನು ಅವರನ್ನು ದೇವಕಿಯ ಬಳಿಗೆ ಕರೆದೊಯ್ದು ಅವರನ್ನು ಪುಟ್ಟ ಮಕ್ಕಳ ರೂಪದಲ್ಲಿ ಅವಳಿಗೆ ಒಪ್ಪಿಸಿದನು. ಅವಳೆಷ್ಟು ಆನಂದಭರಿತಳಾದಳೆಂದರೆ ಅವಳ ಎದೆಯಿಂದ ಹಾಲು ಉಕ್ಕತೊಡಗಿತು. ಆ ಹಾಲನ್ನು ಕುಡಿದ ಮಕ್ಕಳು ಭಗವಂತನ ಸ್ಪರ್ಶದಿಂದಾಗಿ ಆತ್ಮಸಾಕ್ಷಾತ್ಕಾರವನ್ನು ಪಡೆದುಕೊಂಡವು. ಶ್ರೀ ಕೃಷ್ಣ ಬಲರಾಮರಿಗೆ ಪ್ರಣಾಮಗಳನ್ನು ಸಲ್ಲಿಸಲು ಪ್ರಾರಂಭಿಸಿದವು. ಆನಂತರ ಅವರನ್ನು ತಮ್ಮ ಮೂಲ ರೂಪಕ್ಕೆ ಪರಿವರ್ತಿಸಲಾಯಿತು.

ವಿವಿಧ ಮುನಿಗಳಿಗೆ ಶ್ರೀಮದ್ಭಾಗವತವನ್ನು ಬೋಧಿಸುತ್ತಿದ್ದ ಶ್ರೀ ಶುಕಾಚಾರ್ಯರು ಹೇಳಿದರು : "ಮಹಾಮುನಿಗಳೇ, ಶ್ರೀ ಕೃಷ್ಣ ಪರಮಾತ್ಮನ ಅತಿಶಯ ವಿಹಾರಗಳೆಲ್ಲವೂ ಶಾಶ್ವತವಾದವು ಎಂಬುದನ್ನು ಅರಿಯಿರಿ. ಅವು ಕೇವಲ ಸಾಮಾನ್ಯ ಇತಿಹಾಸ ಘಟನೆಗಳ ನಿರೂಪಣೆಯಲ್ಲ. ಅಂಥ ನಿರೂಪಣೆಗಳು ಪರಮಾತ್ಮನ ಸಮೀಕರಣವುಳ್ಳವು. ಭಗವಂತನ ವಿಹಾರಗಳನ್ನು ಕುರಿತ ಇಂಥ ನಿರೂಪಣೆಯನ್ನು ಕೇಳುವವರೆಲ್ಲರೂ ಲೌಕಿಕ ಅಸ್ತಿತ್ವದ ಕಲ್ಮಶದಿಂದ ಮುಕ್ತರಾಗುತ್ತಾರೆ. ಪರಿಶುದ್ಧ ಭಕ್ತರು ಈ ನಿರೂಪಣೆಗಳು ತಮ್ಮ ಕಿವಿಯನ್ನು ತುಂಬುತ್ತಿರುವ ಅಮೃತವೆಂದು ಭಾವಿಸುತ್ತಾರೆ".

ಪರೀಕ್ಷಿತ ರಾಜನು ಮತ್ತಷ್ಟು ಕುತೂಹಲವುಳ್ಳವನಾಗಿ ತನ್ನ ಅಜ್ಜಿ ಸುಭದ್ರೆಯನ್ನು ತನ್ನ ತಾತನಾದ ಅರ್ಜುನನು ಅಪಹರಿಸಿದ್ದು ಹೇಗೆಂದು ತಿಳಿದುಕೊಳ್ಳಲು ಬಯಸಿದನು. ಅದಕ್ಕೆ ಶ್ರೀ ಶುಕಾಚಾರ್ಯರು ಅರ್ಜುನನು ವಿವಿಧ ತೀರ್ಥಸ್ಥಳಗಳಿಗೆ ಯಾತ್ರೆಯನ್ನು ಕೈಗೊಂಡಿದ್ದಾಗ ದಾರಿಮಾರ್ಗದಲ್ಲಿ ಪ್ರಭಾಸ ಕ್ಷೇತ್ರವನ್ನು ಕಂಡನೆಂದು ಹೇಳಿದರು. ಅಲ್ಲಿ ಅವನಿಗೆ ಬಲರಾಮನು ತನ್ನ ಸಹೋದರಿ ಸುಭದ್ರೆಯನ್ನು ದುರ್ಯೋಧನನಿಗೆ ನೀಡುವ ಬಗ್ಗೆ ಸಮಾಲೋಚಿಸುತ್ತಿದ್ದರೂ ಅವನ ತಂದೆ ವಸುದೇವ ಹಾಗೂ ಶ್ರೀ ಕೃಷ್ಣ ಪರಮಾತ್ಮನು ಇದನ್ನು ಸಮ್ಮತಿಸುತ್ತಿಲ್ಲ ಎಂಬ ವಿಷಯವನ್ನು ಅರಿತನು. ಸುಭದ್ರೆಯ

ಸೌಂದರ್ಯದ ಬಗ್ಗೆ ಕೇಳಿದ್ದ ಅರ್ಜುನನು ಅವಳನ್ನು ವಿವಾಹವಾಗಲು ಅಪೇಕ್ಷಿಸಿದನು. ಅವನು ಸನ್ಯಾಸಿಯಂತೆ ವೇಷ ಧರಿಸಿ ದ್ವಾರಕೆಗೆ ತೆರಳಿ ಅಲ್ಲಿ ಭಗವಂತನ ನೆರವಿನಿಂದ ಸುಭದ್ರೆಯನ್ನು ಅಪಹರಿಸಿದನು. ಅನಂತರ ಬಲರಾಮನು ಖಿನ್ನನಾದರೂ ಭಗವಂತನು ಅವನನ್ನು ಸಮಾಧಾನ ಪಡಿಸಿದಾಗ ವಿಷಯ ಅಲ್ಲಿಯೇ ಪರಿಸಮಾಪ್ತಿಗೊಂಡಿತು.

ಶ್ರೀ ಶುಕಾಚಾರ್ಯರು ಮತ್ತೊಂದು ಕಥೆಯನ್ನು ಹೇಳಿದರು. ಅದು ಶ್ರುತದೇವನೆಂಬ ಬ್ರಾಹ್ಮಣ ಹಾಗೂ ಮಿಥಿಲೆಯ ದೊರೆಯಾದ ಬಹುಳಸ್ವನಿಗೆ ಸಂಬಂಧಿಸಿದ್ದು. ಇವರಿಬ್ಬರೂ ಶ್ರೀ ಕೃಷ್ಣನ ಪರಮ ಭಕ್ತರು. ಒಮ್ಮೆ ಶ್ರೀ ಕೃಷ್ಣನು ನಾರದ, ವ್ಯಾಸದೇವ, ಅತ್ರಿ, ವಾಮದೇವ, ಪರಶುರಾಮ ಮತ್ತು ಇತರ ಮಹಾಮುನಿಗಳೊಂದಿಗೆ ಅನರ್ತ, ಧನ್ವ, ಕಂಕ, ಪಾಂಚಲ ಹಾಗೂ ಇತರ ರಾಜ್ಯಗಳ ಮಾರ್ಗವಾಗಿ ಮಿಥಿಲೆಗೆ ತೆರಳಿದನು. ದಾರಿಯುದ್ದಕ್ಕೂ ಪರಮಾತ್ಮನನ್ನು ಕಾಣಲು ಜನರು ನೆರೆದಿದ್ದರು. ಮಿಥಿಲೆಯನ್ನು ತಲಪಿದಾಗ ಇವರೆಲ್ಲರೂ ಬಹುಲಸ್ಯ ಹಾಗೂ ಶ್ರತದೇವನೆಂಬ ಬ್ರಾಹ್ಮಣನೊಂದಿಗೆ ಉಳಿದುಕೊಂಡರು. ಅವರಿಬ್ಬರನ್ನೂ ಸ್ವರ್ಗ ಭೂಮಿಗೆ ರವಾನಿಸಲಾಯಿತು. ಇದರರ್ಥ ಅವರಿಬ್ಬರೂ ತನ್ನ ಭಕ್ತರಾದ್ದರಿಂದ ಭಗವಂತನು ಅವರಿಬ್ಬರಿಗೂ ಏಕ ರೀತಿಯ ಸ್ಥಾನವನ್ನು ಪ್ರಧಾನ ಮಾಡಿದನು.

ಪರೀಕ್ಷಿತ ರಾಜನು ಶ್ರೀ ಶುಕಾಚಾರ್ಯರನ್ನು ಕೇಳಿದನು : ವೈದಿಕ ಜ್ಞಾನವು ಸಾಮಾನ್ಯವಾಗಿ ಲೌಕಿಕ ಜಗತ್ತಿನ ತ್ರಿಗುಣಗಳನ್ನು ಕುರಿತು ಹೇಳುತ್ತದೆಯಾದ್ದರಿಂದ, ಈ ಮೂರು ಗುಣಗಳಿಗೂ ಅತೀತರಾದ ಅತಿಶಯತೆಯ ವಿಚಾರವನ್ನು ಕುರಿತು ಅದು ಹೇಳುವುದು ಹೇಗೆ ಸಾಧ್ಯ ? ಮನಸ್ಸು ಲೌಕಿಕವಾಗಿದ್ದು, ವಾದಗಳ ತರಂಗವು ಲೌಕಿಕ ತರಂಗವಾದ್ದರಿಂದ ಐಹಿಕ ನಾದ, ಮನಸ್ಸಿನ ಭಾವನೆಗಳು ಇವನ್ನು ವ್ಯಕ್ತಗೊಳಿಸುವ ವೈದಿಕ ಜ್ಞಾನವು ಅತಿಶಯತೆಯನ್ನು ಹೇಗೆ ಮುಟ್ಟಲು ಸಾಧ್ಯ ? ವಸ್ತುವೊಂದರ ವಿವರಣೆಯು ಅದರ ಹುಟ್ಟಿಗೆ ಮೂಲ, ಅದರ ಗುಣಗಳು ಹಾಗೂ ಅದರ ಚಟುವಟಿಕೆಯನ್ನು ವರ್ಣಿಸುವ ಅವಶ್ಯಕತೆಯನ್ನು ಹೊಂದಿರುತ್ತವೆ. ಅಂತಹ ವಿವರಣೆಯು ಲೌಕಿಕ ನಾದದ ತರಂಗದ ಮೂಲಕ, ಲೌಕಿಕ ಮನಸ್ಸಿನೊಂದಿಗೆ ಚಿಂತಿಸುವುದರಿಂದ ಮಾತ್ರ ಅಂಥ ವಿವರಣೆ ಸಾಧ್ಯ. ಬ್ರಹ್ಮನ್ ಅಥವಾ ಪರಮ ಸತ್ಯಕ್ಕೆ ಐಹಿಕ ಗುಣಗಳು ಇಲ್ಲದಿದ್ದರೂ ಮಾತನಾಡುವ ನಮ್ಮ ಶಕ್ತಿಯು ಐಹಿಕ ಗುಣಗಳಿಂದಾಚೆಗೆ ಹೋಗಲಾರದು. ಹೀಗಾದಾಗ ಹೇಗೆ 'ಬ್ರಹ್ಮನ್' ಪರಮಸತ್ಯನು ಮಾತುಗಳಿಂದ ವಿವರಿಸಲ್ಪಡುವುದು ಸಾಧ್ಯ? ಅಂಥ ಲೌಕಿಕ ದನಿಯುಳ್ಳ ಅಭಿವ್ಯಕ್ತಿಗಳ ಮೂಲಕ ಅತಿಶಯತೆಯನ್ನು ಅರಿವಾಗಿಸಿಕೊಳ್ಳುವುದು ಹೇಗೆ ಸಾಧ್ಯವೆಂದು ನನಗೆನ್ನಿಸಿದೆ?

ದೊರೆಯ ವಿವರಣೆಯ ಉದ್ದೇಶ ಶ್ರೀ ಶುಕಾಚಾರ್ಯರಿಂದ ವೇದಗಳು ಅಂತಿಮವಾಗಿ ಪರಮ ಸತ್ಯವನ್ನು ವಿವರಿಸುತ್ತದೆಯೇ ಎಂಬುದನ್ನು ತಿಳಿಯುವುದಾಗಿತ್ತು. ಪರಮ ಸತ್ಯವನ್ನು ತಿಳಿಯುವುದು ಮೂರು ರೀತಿಯಾಗಿ ಸಾಗುತ್ತದೆ - ನಿರ್ವಿಕಾರ ಬ್ರಹ್ಮನ್, ಪ್ರತಿಯೊಬ್ಬರ ಹೃದಯ ನಿವಾಸಿಯಾದ ಪರಮಾತ್ಮ ಹಾಗೂ ಉನ್ನತ ವ್ಯಕ್ತಿತ್ವ.

ವೇದಗಳು ಚಟುವಟಿಕೆಗಳ ಮೂರು ವಿಭಾಗಗಳನ್ನು ಕುರಿತು ಹೇಳುತ್ತವೆ -

ಕರ್ಮಕಾಂಡ ಅಥವಾ ಒಬ್ಬನನ್ನು ತನ್ನ ನಿಜವಾದ ಸ್ಥಾನವನ್ನು ತಿಳಿದುಕೊಳ್ಳುವಂತೆ ಕಾಲ ಕ್ರಮೇಣ ಪರಿಶುದ್ಧಗೊಳಿಸುವ ವೈದಿಕ ಸೂತ್ರಗಳು, ಜ್ಞಾನಕಾಂಡ, ಉಪಾವಿಧಾನಗಳ ಮೂಲಕ ಪರಮ ಸತ್ಯವನ್ನು ಅರ್ಥಮಾಡಿಕೊಳ್ಳುವ ಪ್ರಕ್ರಿಯೆ; ಹಾಗೂ ಮೂರನೆಯದು ಉಪಾಸನಾ ಕಾಂಡ ಅಥವಾ ಭಗವಂತನನ್ನು ಆರಾಧಿಸುವಂತೆ ಮತ್ತು ಕೆಲವೊಮ್ಮೆ ಉಪದೇವತೆಗಳನ್ನು ಆರಾಧಿಸುವಿಕೆ. ಉನ್ನತ ಭಗವಂತನಿಗೆ ಅನೇಕ ಭಾಗ ವಿಭಾಗಗಳಿವೆ. ಅವುಗಳಲ್ಲಿ ಕೆಲವನ್ನು "ಸ್ವಂಸಗಳು" ಹಾಗೂ ಅವನ ವೈಯಕ್ತಿಕ ವಿಸ್ತರಣೆಗಳೆಂದೂ ಹಾಗೂ ಮಿಕ್ಕವನ್ನೂ "ವಿಭಿಸ್ವಂಸಗಳು" ಅಥವಾ ಜೀವಿಗಳೆಂದು ಕರೆಯಲಾಗುತ್ತದೆ. ಈ ಎಲ್ಲ ವಿಸ್ತರಣೆಗಳೂ ಭಗವಂತನ ಮೂಲ ವ್ಯಕ್ತಿತ್ವದಿಂದ ಹೊಮ್ಮಿದಂಥವು. "ಸ್ವಂಸ" ವಿಸ್ತರಣೆಯನ್ನು ವಿಷ್ಣು ತತ್ತ್ವವೆಂದೂ, "ವಿಭಿಸ್ವಂಸ್ವಗಳನ್ನು" ಜೀವ ತತ್ತ್ವವೆಂದೂ ಕರೆಯಾಗಿದೆ. ವಿವಿಧ ಉಪದೇವತೆಗಳು ಜೀವ ತತ್ತ್ವಗಳು. ಉಪದೇವತೆಗಳ ಆರಾಧನೆಯನ್ನು ಇಂದ್ರಿಯ ಸಾರ್ಥಕತೆಗಾಗಿ ಶಿಫಾರಸು ಮಾಡಲಾಗಿದೆ.

ಪರೀಕ್ಷಿತ ರಾಜನ ಪ್ರಶ್ನೆಯೆಂದರೆ - ಆಹ್ಲಾದತೆ, ಚಿತ್ತದ ಕೇಂದ್ರಿಕರಿಸುವಿಕೆ, ಅಥವಾ ವ್ಯಕ್ತಿಗತ ರೂಪುರೇಷೆ - ಇಂಥವುಗಳಲ್ಲಿ ವೈದಿಕ ಜ್ಞಾನದ ಅಂತಿಮ ಗುರಿ ಯಾವುದು?

ಶ್ರೀ ಶುಕಾಚಾರ್ಯರ ಉತ್ತರವಿದು : ಉನ್ನತ ಆತ್ಮನು ಮನಸ್ಸು, ಬುದ್ಧಿ ಹಾಗೂ ಜೀವಶಕ್ತಿಯನ್ನು ಉಂಟು ಮಾಡಿದನು. ಇದರ ಉದ್ದೇಶ ಒಂದು ಶರೀರದಿಂದ ಮತ್ತೊಂದಕ್ಕೆ ಇಂದ್ರಿಯ ಸಾರ್ಥಕತೆಗಾಗಿ ವರ್ಗಾಯಿಸಲ್ಪಡುವುದು. ಅಲ್ಲದೆ ಲೌಕಿಕ ಸ್ಥಿತಿಗಳಿಂದ ಮುಕ್ತಿಯನ್ನು ಪಡೆಯಲು ಅನುವು ಮಾಡಿಕೊಡುವುದು. ಆತ್ಮಗಳಿಗೆ ಕ್ರಮಬದ್ಧ ತತ್ತ್ವಗಳ ಕೆಳಗೆ ಇಂದ್ರಿಯ ಸಾರ್ಥಕತೆಗೆ ಅವಕಾಶವನ್ನು ನೀಡಿ ಜೀವನದ ಉನ್ನತ ಸ್ಥಿತಿಗಳಿಗೆ ಅವರನ್ನು ಏರಿಸುವುದು ವೈದಿಕ ಸೂತ್ರಗಳ ಇರುವಿಕೆಗೆ ಕಾರಣ. ಅಂತಿಮವಾಗಿ, ಪ್ರಜ್ಞೆಯು ಪರಿಶುದ್ಧಗೊಂಡರೆ ಒಬ್ಬನು ತನ್ನ ಮೂಲಸ್ಥಾನಕ್ಕೆ ಬಂದು, ತನ್ನ ವಾಸಸ್ಥಾನಕ್ಕೆ ಅಂದರೆ ಪರಮಾತ್ಮನ ಬಳಿಗೆ ಹಿಂತಿರುಗುತ್ತಾನೆ. ಆತ್ಮವನ್ನು ಕಾಲ ಕ್ರಮೇಣ ಮೌಢ್ಯದಿಂದ ಕಾಮುಕತೆಯ ಕಡೆಗೆ, ಕಾಮುಕತೆಯೆಡೆಯಿಂದ ಒಳಿತಿನ ಮಾರ್ಗಕ್ಕೆ ನಡೆಸುವುದೇ ವೈದಿಕ ಪ್ರಕ್ರಿಯೆಯ ಕೆಲಸ.

ಪರಮ ಸತ್ಯನಾದ ಭಗವಂತನನ್ನು ನಿರ್ಗುಣವೆಂದು ಕರೆಯಲಾಗಿದೆ. ಇದರರ್ಥ ಅವನಿಗೆ ಗುಣಗಳಿಲ್ಲ ಎಂಬುದಲ್ಲ. ಪರಮಾತ್ಮನು ಸಗುಣ ಇರುವುದರಿಂದಲೇ ಜೀವಿಗಳಲ್ಲಿಯೂ ಮೂರು ಗುಣಗಳಿವೆ.

ಉಪನಿಷತ್ತುಗಳನ್ನು ವ್ಯಾಸಂಗ ಮಾಡುವ ಉದ್ದೇಶ ಮೌಢ್ಯ, ಕಾಮುಕತೆ ಹಾಗೂ ಒಳಿತು ಇವುಗಳ ಲೌಕಿಕ ಗುಣಗಳಿಗೆ ವಿರುದ್ಧವಾಗಿರುವ ಪರಮ ಸತ್ಯದ ಅತಿಶಯ ಗುಣವನ್ನು ಅರ್ಥಮಾಡಿಕೊಳ್ಳುವುದು. ವೈದಿಕ ಅರಿವಿಗೆ ಇದೇ ಮಾರ್ಗ, ಕುಮಾರರನ್ನೂ ಒಳಗೊಂಡಂತೆ ಎಲ್ಲ ಮಹಾಮುನಿಗಳೂ ವೈದಿಕ ಸೂತ್ರಗಳನ್ನು ಅನುಸರಿಸಿ ಕಾಲಕ್ರಮೇಣ ನಿರ್ವಿಕಾರ ಅರಿಯುವಿಕೆಯಿಂದ ಭಗವಂತನನ್ನು ವ್ಯಕ್ತಿಗತವಾಗಿ ಆರಾಧಿಸುವ ಹಂತವನ್ನು ತಲುಪಿದ್ದಾರೆ.

ಶ್ರೀ ಶುಕಾಚಾರ್ಯರು ಪರಮಾತ್ಮನಿಗೆ ಸಂಬಂಧಿಸಿದ ಮತ್ತೊಂದು ಕಥೆಯನ್ನು ಹೇಳಿದರು. ಅದು ನಾರಾಯಣ ಹಾಗೂ ನಾರದ ಮುನಿ ಇವರ ನಡುವಣ ಸಂಭಾಷಣೆಯನ್ನು ಆಧರಿಸಿದ್ದು. ನಾರಾಯಣ ಋಷಿಯು ಬದರೀಕಾಶ್ರಮದಲ್ಲಿ ಭಗವಂತನೆಡೆಗೆ ಹಿಂತಿರುಗು ಸಲುವಾಗಿ ಅತ್ಯುನ್ನತ ಪರಿಶುದ್ಧತೆಯನ್ನು ಪಡೆಯಬೇಕೆಂದು ಜನರಿಗೆ ತಿಳಿಸುವ ಸಲುವಾಗಿ ಇನ್ನೂ ತಪಸ್ಸನ್ನಾಚರಿಸುತ್ತ ವಾಸವಾಗಿದ್ದಾನೆ. ಅವನ ಆಚರಣೆ ತಪಸ್ಸುಗಳು ಮಾನವ ಜೀವಿಯೊಬ್ಬನು ಅನುಸರಿಸಬಹುದಾದ ಉದಾತ್ತ ವಿಧಾನಗಳು".

ಭಗವಂತನು ನಾರದನಿಗೆ ಹೇಳಿದನು : "ಒಮ್ಮೆ ಮಹಾಮುನಿಗಳ ಮಧ್ಯೆ ಪರಮಸತ್ಯ, ಅಂದರೆ, ಬ್ರಹ್ಮನ್‌ನನ್ನು ಅರ್ಥ ಮಾಡಿಕೊಳ್ಳುವ ಬಗ್ಗೆ ಚರ್ಚೆ ಎದ್ದಿತು. ಸುನಂದನು ಹೇಳಿದನು. ವ್ಯಕ್ತಗೊಂಡ ಇಡೀ ವಿಶ್ವವು ನಿರ್ಮಾಣಗೊಂಡ ನಂತರ ಇಡೀ ಸೃಷ್ಟಿಯು ತನ್ನ ಅಣುರೂಪದಲ್ಲಿ ಗರ್ಭೋದಕಶಾಯಿ ವಿಷ್ಣುವಿನ ಶರೀರವನ್ನು ಪ್ರವೇಶಿಸುತ್ತದೆ ಎಂದು ಹೇಳಿದನು. ಆ ಸಮಯದಲ್ಲಿ ಭಗವಂತನು ದೀರ್ಘಕಾಲ, ಸುದೀರ್ಘ ಕಾಲ ನಿದ್ರೆಯಲ್ಲಿ ಮುಳುಗುತ್ತಾನೆ. ಮತ್ತೆ ಸೃಷ್ಟಿಯ ಅಗತ್ಯತೆಯುಂಟಾದಾಗ ವೇದಗಳು ಭಗವಂತನ ಸುತ್ತಲೂ ನೆರೆದು ಅವನ ಅಮೃತ ಅತಿಶಯ ವಿಹಾರಗಳನ್ನು ಕೊಂಡಾಡತೊಡಗುತ್ತವೆ. ಸಾಕಾರ ರೂಪಗಳಾದ ವೇದಗಳ ಹೇಳಿಕೆಗಳು ವೈದಿಕ ಸಾಹಿತ್ಯವನ್ನು ಶ್ರೀ ಕೃಷ್ಣ ಪರಮಾತ್ಮನನ್ನು ಅರ್ಥ ಮಾಡಿಕೊಳ್ಳಲು ಮಾತ್ರ ನೀಡಲಾಗಿದೆ ಎಂಬ ಸ್ಪಷ್ಟ ಸಾಕ್ಷ್ಯವನ್ನು ವೇದಗಳು ನೀಡುತ್ತವೆ. ಈ ಐಹಿಕ ಜಗತ್ತಿನಿಂದ ವಿಮುಕ್ತಗೊಳ್ಳಲು ಬಯಸುವವರು ಎಲ್ಲ ಕಾರಣಗಳಿಗೂ ಕಾರಣೀಭೂತನಾದ ಭಗವಂತನನ್ನು ಆರಾಧಿಸಬೇಕು. ಬ್ರಹ್ಮನ್ ಶಬ್ದವು ಅತ್ಯುನ್ನತ ನಾಮವು ಪ್ರತಿಯೊಂದನ್ನು ಮುನ್ನಡೆಸುವುದನ್ನು ಸೂಚಿಸುತ್ತವೆ. ಬ್ರಹ್ಮನ್ ಅಂದರೆ ಭಗವಾನ್ ಶ್ರೀ ಕೃಷ್ಣನು. ಅವನ ಅನಿಯಮಿತ ಜ್ಞಾನ, ಸಾಮರ್ಥ್ಯ, ಶಕ್ತಿ, ಪ್ರಭಾವ, ಸೌಂದರ್ಯ ಹಾಗೂ ತ್ಯಾಗದಿಂದಾಗಿ ಅವನೇ ಅತ್ಯುನ್ನತ ಬ್ರಹ್ಮನ್ ಆದ್ದರಿಂದ ಬ್ರಹ್ಮನ್ ಎಂದರೆ ಶ್ರೀ ಕೃಷ್ಣ ಪರಮಾತ್ಮನು".

"ಸ್ವಯಂ ಖಲು ಇದಂ ಬ್ರಹ್ಮನ್" ಎಂಬುದರ ಅರ್ಥ ಎಲ್ಲವೂ ಶ್ರೀ ಕೃಷ್ಣ ಪರಮಾತ್ಮನೇ ಎಂಬುದಾಗಿದ್ದು ಇದೇ ಮಹಾಭಾಗವತಗಳ ದೃಷ್ಟಿ. ವೇದಗಳು ವಿವಿಧ ಉಪದೇವತೆಗಳನ್ನು ಶಿಫಾರಸು ಮಾಡಿದರೂ ಅಂಥ ಸೂಚನೆಗಳು ಇನ್ನೂ ಲೌಕಿಕ ಆನಂದದ ಬಗ್ಗೆ ಆಕರ್ಷಿತರಾದ ಕಡಿಮೆ ಬುದ್ಧಿಶಕ್ತಿಯುಳ್ಳವರಿಗೆ ಮೀಸಲಾದದ್ದಾಗಿದೆ. ಆದರೆ ನಿಜವಾಗಿಯೂ ಮಾನವ ಜೀವನ ಯಾತ್ರೆಯ ಪರಿಪೂರ್ಣ ಸಾರ್ಥಕತೆಯನ್ನು ಪಡೆಯ ಬಯಸುವವರು ಕೇವಲ ಶ್ರೀ ಕೃಷ್ಣ ಪರಮಾತ್ಮನನ್ನು ಪೂಜಿಸಬೇಕು.

ತಮ್ಮ ಬುದ್ಧಿಶಕ್ತಿಯ ಕಲ್ಪನೆಗಳ ಮೂಲಕ ಭಗವಂತನನ್ನು ಅರ್ಥ ಮಾಡಿಕೊಳ್ಳಲು ಪ್ರಯತ್ನಿಸಿದ ವಿವಿಧ ರೀತಿಯ ವೇದಾಂತಿಗಳಿದ್ದಾರೆ. ಅವರೆಂದರೆ ಪ್ರತಿಯೊಬ್ಬರೂ ಪವಿತ್ರ ಚಟುವಟಿಕೆಗಳಲ್ಲಿ ಅಥವಾ ಸೂಚಿತ ಕರ್ತವ್ಯಗಳಲ್ಲಿ ತೊಡಗಿದಾಗ ಅಂಥವರು ಮಾತ್ರ ಅತ್ಯುನ್ನತ ಪರಿಶುದ್ಧತೆಯನ್ನು ಪಡೆಯಬಹುದು ಎಂಬುದಾಗಿ ಹೇಳಿದ, ಜೈಮಿನಿಯಿಂದ ಪ್ರತಿನಿಧಿಸಲ್ಪಟ್ಟ ಮೀಮಾಂಸಕರು. ಆದ್ದರಿಂದ ಮೀಮಾಂಸಕರ ನಿರ್ಣಯವು ವಾಸ್ತವವಾಗಿ ಸತ್ಯವಲ್ಲ. ಅದರಂತೆಯೇ ತಾವು ಸಂಶೋಧಿಸಿದ ವೈಜ್ಞಾನಿಕ ವಿಧಾನಗಳ

ಮೂಲಕ ವ್ಯಕ್ತಗೊಂಡ ವಿಶ್ವವನ್ನು ಅಧ್ಯಯನ ಮಾಡಿದ ಸಾಂಖ್ಯ ವೇದಾಂತಿಗಳು ಉನ್ನತವಾದ ಭಗವಂತನನ್ನು ಸೃಷ್ಟಿಕರ್ತನೆಂಬುದಾಗಿ ಗುರುತಿಸುವುದಿಲ್ಲ. ಆದರೆ ಭಗವದ್ಗೀತೆಯು ಇದನ್ನು ಒಪ್ಪುವುದಿಲ್ಲ. ಅದು "ಜಗತ್ತಿನ ಚಟುವಟಿಕೆಗಳ ಹಿಂದೆ ಭಗವಂತನ ನಿರ್ದೇಶನವಿದೆ" ಎನ್ನುತ್ತದೆ.

ಗೌತಮ ಮತ್ತು ಕಾನಡರು ಐಹಿಕ ಅಂಶಗಳ ಕಾರಣ ಪರಿಣಾಮಗಳನ್ನು ಸೂಕ್ಷ್ಮವಾಗಿ ಅಧ್ಯಯನ ಮಾಡಿದ್ದು ಅಣುಗಳ ಸಮ್ಮಿಶ್ರಣವು ಸೃಷ್ಟಿಗೆ ಮೂಲ ಕಾರಣವೆಂದು ನಿರ್ಣಯಕ್ಕೆ ಬಂದಿದ್ದಾರೆ. ಪ್ರಸ್ತುತದಲ್ಲಿನ ವಿಜ್ಞಾನಿಗಳೂ ಸಹ ಪರಮಾಣುವಾದದ ತತ್ತ್ವವನ್ನು ಪ್ರತಿಪಾದಿಸುತ್ತಾರೆ. ಭಗವದ್ಗೀತೆಯಲ್ಲಿ ಶ್ರೀ ಕೃಷ್ಣನು ತಾನು ಎಲ್ಲದರ ಮೂಲ ಕಾರಣನೆಂದೂ ತನ್ನಿಂದಲೇ ಎಲ್ಲವೂ ಅಸ್ತಿತ್ವಕ್ಕೆ ಬಂದಿವೆಯೆಂದೂ ಹೇಳಿದ್ದಾನೆ.

ಅಂತೆಯೇ ಅಷ್ಟವಕ್ರ ಮತ್ತು ಶಂಕರಾಚಾರ್ಯರು ಬ್ರಹ್ಮನ ನಿರ್ವಿಕಾರ ಪ್ರಕಾಶವು ಪ್ರತಿಯೊಂದಕ್ಕೂ ಕಾರಣವೆನ್ನುತ್ತಾರೆ. ಅವರ ಅನ್ವಯ ಐಹಿಕ ವಿಶ್ವವು ತಾತ್ಕಾಲಿಕ ಹಾಗೂ ಅವಾಸ್ತವ. ಆದರೆ ಭಗವದ್ಗೀತೆಯಲ್ಲಿ ಬ್ರಹ್ಮನ್ ಪ್ರಕಾಶವು ತನ್ನ ವ್ಯಕ್ತಿತ್ವವನ್ನು ಆಧರಿಸಿದೆ ಎನ್ನುತ್ತಾರೆ. ಬ್ರಹ್ಮಸಂಹಿತೆಯಲ್ಲಿ ಬ್ರಹ್ಮನ ಪ್ರಕಾಶವು ಶ್ರೀ ಕೃಷ್ಣ ಪರಮಾತ್ಮನ ವೈಯಕ್ತಿಕ ಶರೀರದ ಕಿರಣಗಳೆನ್ನಲಾಗಿದೆ.

ವೈದಿಕ ಸಾಹಿತ್ಯವನ್ನು ಶ್ರುತಿಗಳು ಹಾಗೂ ಸ್ಮೃತಿಗಳಾಗಿ ಎರಡು ವಿಭಾಗಗಳಾಗಿ ವಿಭಜಿಸಲಾಗಿದೆ. ಶ್ರುತಿಗಳೆಂದರೆ ನಾಲ್ಕು ವೇದಗಳು ಮತ್ತು, ಉಪನಿಷತ್ತುಗಳು ಹಾಗೂ ಸ್ಮೃತಿಗಳು ಭಗವದ್ಗೀತೆಯನ್ನು ಒಳಗೊಂಡಂಥ ಮಹಾಭಾರತದಂಥ ಪುರಾಣಗಳು. ಒಟ್ಟು ಸಾರಾಂಶವೆಂದರೆ ಶ್ರೀ ಕೃಷ್ಣ ಪರಮಾತ್ಮನು ಪರಮ ಪುರುಷನಾಗಿದ್ದು ಅವನ ನೇತೃತ್ವದಲ್ಲಿ ಐಹಿಕ ಪ್ರಕೃತಿಯು ಸೃಷ್ಟಿ, ಮುನ್ನಡೆ ಹಾಗೂ ನಿರ್ನಾಮವು ನಡೆಯುತ್ತವೆ. ಸೃಷ್ಟಿಯ ನಂತರ ಭಗವಂತನು ಮೂರು ರೂಪಗಳಲ್ಲಿ - ಬ್ರಹ್ಮ ವಿಷ್ಣು, ಮಹೇಶ್ವರನಾಗಿ ಅವತರಿಸುತ್ತಾನೆ. ಇವರೆಲ್ಲರೂ ಐಹಿಕ ಪ್ರಕೃತಿಯ ಮೂರು ಗುಣಗಳನ್ನು ವಹಿಸಿಕೊಂಡರೂ ಅಂತಿಮ ನಿರ್ದೇಶನವು ಭಗವಾನ್ ವಿಷ್ಣುವಿನ ಕೈಯಲ್ಲಿದೆ.

ಪರೀಕ್ಷಿತ ರಾಜನು ಶ್ರೀ ಶುಕಾಚಾರ್ಯರನ್ನು ಕೇಳಿದನು "ವೇದಗಳ ಅಂತಿಮ ಗುರಿಯೇನು?" ಶ್ರೀ ಶುಕಾಚಾರ್ಯರು ವಿವರಿಸತೊಡಗಿದರು. ಸನಂದನನಿಂದ ಹಿಡಿದು ನಾರಯಣ ಋಷಿ, ನಾರದ, ವ್ಯಾಸದೇವ ಹಾಗೂ ತಮ್ಮನ್ನೊಳಗೊಂಡ ಪರಂಪರೆಯ ಅಧಿಕೃತ ವಿವರಗಳನ್ನು ನೀಡಿದರು. ಸಾರಾಂಶವೆಂದರೆ ವೇದಗಳ ಅಂತಿಮ ಗುರಿಯು ಭಕ್ತಿ.

ಮಹೇಶ್ವರನು ವೈಭವವಿಲ್ಲದೆಯೇ ಪರ್ವತದಲ್ಲಿ ವಾಸಿಸುತ್ತಿದ್ದರೂ ಅವನ ಭಕ್ತರು ವೈಭವಯುತರಾಗಿದ್ದು, ಮಹಾವಿಷ್ಣುವು ವೈಭವದಿಂದ ಇದ್ದರೂ ಅವನ ಭಕ್ತರು ಬಡವರಾಗಿರುವುದು ಏಕೆಂದು ಪರೀಕ್ಷಿತ ರಾಜನು ಪ್ರಶ್ನಿಸಿದನು.

ಶ್ರೀ ಶುಕಾಚಾರ್ಯರು ಹೇಳಿದರು : "ಮಹೇಶ್ವರನು ಐಹಿಕ ಶಕ್ತಿಯ ಒಡೆಯನಾಗಿದ್ದು ಅದು ದುರ್ಗಾಮಾತೆಯಿಂದ ಪ್ರತಿನಿಧಿಸಲ್ಪಟ್ಟು ಶಿವನು ಆಕೆಯ ಪತಿಯಾಗಿದ್ದಾನೆ. ಐಹಿಕ ಶಕ್ತಿಯು - ಒಳಿತು, ಕಾಮ ಮತ್ತು ಮೌಢ್ಯ ಈ ಮೂರು

ಗುಣಗಳಿಂದ ವ್ಯಕ್ತಗೊಂಡಿದ್ದು ಮಹೇಶ್ವರನು ಈ ಮೂರು ಗುಣಗಳ ಒಡೆಯನಾಗಿದ್ದಾನೆ." ವಿವಿಧ ಉಪದೇವತೆಗಳನ್ನು ಆರಾಧಿಸುವ ಮೂಲಕ ವಿವಿಧ ಪರಿಣಾಮಗಳು ದೊರೆತು ಮುಕ್ತಿ ಸಿಗುವುದಿಲ್ಲ. ಆದರೆ ವಿಷ್ಣುವನ್ನು ಆರಾಧಿಸುವ ಮೂಲಕ ವೈಕುಂಠಕ್ಕೆ ತೆರಳಬಹುದಾಗಿದ್ದು, ಅಲ್ಲಿಗೆ ಹೋದವರು ಹಿಂತಿರುಗುವುದಿಲ್ಲ". "ಪರಮಾತ್ಮನಾದ ಶ್ರೀ ಹರಿಯು ಐಹಿಕ ಸ್ವಭಾವದ ಮೂರು ಗುಣಗಳಿಗೆ ಅತಿಶಯನಾದವನು".

ಇಂಥದ್ದೇ ಪ್ರಶ್ನೆಯನ್ನು ಯುಧಿಷ್ಠಿರನು ಪರಮಾತ್ಮನನ್ನೇ ಕೇಳಿದ್ದು ಅದಕ್ಕೆ ಪರಮಾತ್ಮನ ಉತ್ತರ ಹೀಗಿತ್ತು ಎಂಬುದಾಗಿ ಶ್ರೀ ಶುಕಾಚಾರ್ಯರು ತಿಳಿಸಿದರು : "ನಾನು ಒಬ್ಬ ಭಕ್ತನಿಗೆ ವಿಶೇಷ ಅನುಕೂಲ ಮಾಡಿಕೊಟ್ಟು ವಿಶೇಷವಾಗಿ ಅವನ ಬಗ್ಗೆ ಜಾಗ್ರತೆ ವಹಿಸಿದರೆ ನಾನು ಮೊಟ್ಟ ಮೊದಲು ಮಾಡುವ ಕೆಲಸವೆಂದರೆ ಅವನ ಶ್ರೀಮಂತಿಕೆಯನ್ನು ಕಸಿದುಕೊಳ್ಳುವುದು". ಭಗವಂತನು ಮುಂದೆ ಹೇಳಿದನು : "ನನ್ನ ಭಕ್ತನು ಐಹಿಕ ಶ್ರೀಮಂತಿಕೆಯನ್ನೆಲ್ಲ ಕಳೆದುಕೊಂಡು, ಅವನ ಬಂಧು ಮಿತ್ರರು ಅವನನ್ನು ತ್ಯಜಿಸಿದಾಗ ಅವನಿಗೆ ಯಾರೂ ಇಲ್ಲದಂತಾದಾಗ ಅವನು ಸಂಪೂರ್ಣವಾಗಿ ನನ್ನ ಆಶ್ರಯಕ್ಕೆ ಬರುತ್ತಾನೆ". ಭಗವಂತನು ಮುಂದೆ ಯುಧಿಷ್ಠಿರನಿಗೆ ಹೇಳಿದನು : "ನನ್ನ ಭಕ್ತನು ಜೀವನದ ಯಾವುದೇ ಪ್ರತಿಕೂಲ ಪರಿಸ್ಥಿತಿಯಿಂದಾಗಿ ಭೀತಿಗೊಳ್ಳುವುದಿಲ್ಲ; ಅವನು ಸದಾ ಸ್ಥಿರವಾಗಿ ನಿಲ್ಲುತ್ತಾನೆ. ಆದ್ದರಿಂದ ನಾನು ನನ್ನನ್ನೇ ಅವನಿಗೆ ಕೊಟ್ಟುಕೊಳ್ಳುತ್ತೇನೆ. ಅವನಿಗೆ ಜೀವನದಲ್ಲಿ ಅತ್ಯುನ್ನತ ಯಶಸ್ಸು ದೊರೆಯುವಂತೆ ಅನುಕೂಲಗಳನ್ನು ಕಲ್ಪಿಸಿಕೊಡುತ್ತೇನೆ."

ಶ್ರೀ ಶುಕಾಚಾರ್ಯರು ಹೇಳಿದರು : "ಬ್ರಹ್ಮದೇವ ಹಾಗೂ ಮಹೇಶ್ವರನ ನೇತೃತ್ವದಲ್ಲಿನ ಹಾಗೂ ಇಂದ್ರದೇವ, ಚಂದ್ರ, ವರುಣ ಹಾಗೂ ಇತರರನ್ನು ಒಳಗೊಂಡ ಉಪದೇವತೆಗಳು ಬೇಗನೆ ತೃಪ್ತಿಗೊಳ್ಳುತ್ತಾರಲ್ಲದೆ ಬೇಗನೆ ಕೋಪಗೊಳ್ಳುತ್ತಾರೆ. ಅವರ ವರ್ತನೆಯು ಭಕ್ತರ ಸದ್ವರ್ತನೆ ಹಾಗೂ ದುರ್ವರ್ತನೆಯನ್ನು ಆಧರಿಸುತ್ತದೆ. ಆದರೆ ಇದನ್ನೇ ಭಗವಂತನಿಗೆ ಅನ್ವಯಿಸಲಾಗದು. ವಿಷ್ಣು ಪರಮಾತ್ಮನು ಉದಾರ ಸ್ವಭಾವದವನು. ಭಕ್ತನೊಬ್ಬನಿಗೆ ವಿಷ್ಣು ಪರಮಾತ್ಮನಿಂದ ಏನಾದರೂ ಅಗತ್ಯವಿದ್ದಾಗ ಅವನು ಮೊದಲು ಭಕ್ತನಿಗ ಅಂಥ ವರದಿಂದ ಒಳಿತಾಗುತ್ತದೆಯೇ ಎಂಬುದನ್ನು ಪರಿಗಣಿಸುತ್ತಾನೆ. ವಿಷ್ಣುವು ಎಂದೂ ತನ್ನ ಭಕ್ತನಿಗೆ ಅಂತಿಮವಾಗಿ ಹಾನಿಕಾರಕವೆನ್ನಿಸುವ ವರವನ್ನು ನೀಡುವುದಿಲ್ಲ. ಅವನು ತನ್ನ ಅತಿಶಯ ಸ್ವಭಾವದಿಂದಾಗಿ ಸದಾ ಕರುಣಾಮಯಿಯಾಗಿರುವುದರಿಂದ ಇಂಥ ಭಾವನೆಯನ್ನು ತಳೆಯುತ್ತಾನೆ. ಆದ್ದರಿಂದಲೇ ದಾನವನನ್ನು ಕೊಲ್ಲುವಾಗಲೇ ಆಗಲಿ ಅಥವಾ ಭಕ್ತನ ಬಗ್ಗೆ ಕೋಪ ತಳೆದಾಗಲೇ ಆಗಲಿ ಅವನ ಕ್ರಿಯೆಗಳು ಪವಿತ್ರವೆನಿಸುತ್ತವೆ".

ಅನೇಕ ಸಂದರ್ಭಗಳಲ್ಲಿ ವರಗಳನ್ನು ನೀಡಿದ ಮಹೇಶ್ವರನು ಕೊನೆಗೆ ತಾನೇ ಸಂಕಷ್ಟಗಳಿಗೆ ಈಡಾದಾಗ ಶ್ರೀ ಕೃಷ್ಣ ಪರಮಾತ್ಮನೇ ಅವನನ್ನು ರಕ್ಷಿಸಬೇಕಾಯಿತು.

ಒಮ್ಮೆ ಮುನಿಗಳು ತ್ರಿಮೂರ್ತಿಗಳಲ್ಲಿ ಯಾರು ಉನ್ನತರು ಎಂಬ ಬಗ್ಗೆ ಚರ್ಚಿಸಿದರು ಎಂಬುದಾಗಿ ಶ್ರೀ ಶುಕಾಚಾರ್ಯರು ಹೇಳಿದರು. ಅದನ್ನು ತಿಳಿಯಲು

ಭೃಗುಮುನಿಯನ್ನು ನೇಮಿಸಲಾಯಿತು. ಅಧಿದೇವತೆಗಳಲ್ಲಿ ಯಾರು ಒಳಿತಿನ ಸ್ವಭಾವವನ್ನು ಸಂಪೂರ್ಣವಾಗಿ ಹೊಂದಿದ್ದಾರೆ ಎನ್ನುವುದನ್ನು ತಿಳಿಯುವುದೇ ಅವರ ಉದ್ದೇಶವಾಗಿತ್ತು.

ಭೃಗುಮುನಿಯು ಮೊದಲು ತನ್ನ ತಂದೆಯ ಬಳಿಗೆ ತೆರಳಿದನು. ಮುನಿಯು ಯಾವ ಗೌರವವನ್ನೂ ಸಲ್ಲಿಸದಿದ್ದಾಗ ಕೋಪಗೊಂಡ ಬ್ರಹ್ಮನು ಅವನನ್ನು ಶಪಿಸಲು ಬಯಸಿದನು. ಭೃಗುವು ತನ್ನ ಮಗನಾದ್ದರಿಂದ ಬ್ರಹ್ಮನು ತನ್ನ ಕೋಪವನ್ನು ತಡೆದುಕೊಂಡ. ಇದರರ್ಥ ವ್ಯಾಮೋಹಿ ಗುಣವು ಬ್ರಹ್ಮನಲ್ಲಿ ಅಧಿಕ ಎನ್ನುವುದು. ಅನಂತರ ಅವನು ಕೈಲಾಸಕ್ಕೆ ಹೋದಾಗ ಭೃಗುಮುನಿಯನ್ನು ಮಹೇಶ್ವರನು ಕಂಡು ಅವನನ್ನು ಆಲಂಗಿಸಲು ಎದ್ದು ನಿಂತನು. ಆದರೆ ಭೃಗುಮುನಿಯು ಅವನನ್ನು ತಡೆದು ಬೂದಿಯನ್ನು ಬಳಿದು ಕೊಂಡಿರುವ ಅವನು ಅಶುಚಿಯಾಗಿದ್ದಾನೆಂದನು. ಮಹೇಶ್ವರನು ಮುನಿಯನ್ನು ಕೊಲ್ಲಲು ತ್ರಿಶೂಲವನ್ನು ಮೇಲೆತ್ತಿದಾಗ ಪಾರ್ವತಿಯು ಅವನನ್ನು ತಡೆದು ಪರಿಸ್ಥಿತಿಯನ್ನು ಸರಿಪಡಿಸಿದಳು. ಭೃಗುಮುನಿಗೆ ಅವಹೇಳನವಾದಂತಾಯಿತು - ಮೊದಲು ಬ್ರಹ್ಮನ ಮನಸ್ಸಿನಿಂದ ಹಾಗೂ ಅನಂತರ ಈಶ್ವರನ ಶರೀರದಿಂದ. ಭೃಗುಮುನಿಯು ಮಹಾವಿಷ್ಣುವು ತನ್ನ ಪತ್ನಿಯೊಂದಿಗೆ ಶಯನಾಸದಲ್ಲಿದ್ದ ಶ್ವೇತದ್ವೀಪಕ್ಕೆ ಹೊರಟನು. ಇಲ್ಲಿ ಭೃಗುವು ಪರಮಾತ್ಮನ ವಕ್ಷಸ್ಥಳವನ್ನು ತನ್ನ ಪಾದದಿಂದ ಮುಟ್ಟಿದನು. ಆದರೆ ಭಗವಂತನು ಅವನನ್ನು ಶಪಿಸಲಿಲ್ಲ. ಅದಕ್ಕೆ ಬದಲಾಗಿ ಅವನು ಕ್ಷಮೆಯನ್ನು ಯಾಚಿಸಿದನು. ಅವನೆಂದನು: "ನನ್ನ ವಕ್ಷಸ್ಥಲವೀಗ ನಿನ್ನ ಪಾದಸ್ಪರ್ಶದಿಂದ ಪವಿತ್ರವಾಗಿದೆ. ಅದೃಷ್ಟ ದೇವತೆಯಾದ ಲಕ್ಷ್ಮೀದೇವಿಯು ಇಲ್ಲಿ ನಿರಂತರವಾಗಿ ವಾಸಿಸುತ್ತಾಳೆಂಬ ಭರವಸೆ ನನಗೆ ಉಂಟಾಗಿದೆ".

ಭೃಗುಮುನಿಯು ತ್ರಿಮೂರ್ತಿಗಳಿಂದ ತನಗಾದ ಅನುಭವವನ್ನು ಇನ್ನಿತರ ಮುನಿಗಳಿಗೆ ಹೇಳಿದಾಗ ಅವರೆಲ್ಲರೂ ಮಹಾವಿಷ್ಣುವೇ ಪರಮ ಸತ್ಯ ಎಂಬುದನ್ನು ಒಪ್ಪಿದರು. ಅತ್ಯುನ್ನತ ಪರಿಪೂರ್ಣ ಜ್ಞಾನವೆಂದರೆ ಪರಮಾತ್ಮನನ್ನು ಅರಿಯುವುದು. ಭಕ್ತಿಪೂರ್ವಕ ಸೇವೆಯಲ್ಲದೆ ಇತರ ಧಾರ್ಮಿಕ ಕ್ರಿಯೆಯ ಮೂಲಕ ಅವನನ್ನು ಅರ್ಥಮಾಡಿಕೊಳ್ಳಲಾಗದು. ಆದ್ದರಿಂದ ಪರಿಪೂರ್ಣ ಜ್ಞಾನದ ತಕ್ಷಣದ ಪರಿಣಾಮವನ್ನು ಭಕ್ತಿಪೂರ್ವಕ ಸೇವೆಯಿಂದ ಪಡೆದುಕೊಳ್ಳಬಹುದು. ಹೀಗೆ ಸರಸ್ವತಿ ನದಿಯ ತೀರದಲ್ಲಿ ತ್ರಿಮೂರ್ತಿಗಳಲ್ಲಿ ಉನ್ನತರು ಯಾರು ಎಂಬುದನ್ನು ಅರಿಯಲು ಸಮಾವೇಶಗೊಂಡಿದ್ದ ಮುನಿಗಳು ವಿಷ್ಣು ಆರಾಧನೆಯನ್ನು ಕುರಿತು ತಮಗಿದ್ದ ಸಂಶಯವನ್ನು ನಿವಾರಿಸಿಕೊಂಡರು. ಇನ್ನೊಂದು ವಿಚಾರವೆಂದರೆ ನಾವು ಮಹೇಶ್ವರ ಮತ್ತು ಬ್ರಹ್ಮದೇವರಂಥ ಉಪದೇವತೆಗಳನ್ನು ಒಳಗೊಂಡಂತೆ ಯಾರನ್ನೂ ಮಹಾವಿಷ್ಣುವಿನ ಸಮಾನಾಂತರದಲ್ಲಿ ಪರಿಗಣಿಸಕೂಡದು. ಬ್ರಹ್ಮನೇ ಹೇಳುತ್ತಾನೆ "ಮಹೇಶ್ವರ ಹಾಗೂ ನಾನು ಅವನ ನಿರ್ದೇಶನದಲ್ಲಿ ವಿವಿಧ ಸಾಮರ್ಥ್ಯಗಳಲ್ಲಿ ಕ್ರಿಯೆಗೈಯ್ಯಲು ನೇಮಕಗೊಂಡವರು".

ಒಮ್ಮೆ ದ್ವಾರಕೆಯಲ್ಲಿ ಬ್ರಾಹ್ಮಣನ ಪತ್ನಿಯೊಳಗೆ ಜನಿಸಿದ ಮಗು ದುರದೃಷ್ಟವಶಾತ್ ಕೂಡಲೇ ಸತ್ತಿತು. ಮಗುವಿನ ಅಕಾಲಿಕ ಮರಣದ ದುಃಖವನ್ನು ತಡೆದುಕೊಳ್ಳಲಾರದ ಬ್ರಾಹ್ಮಣನು ಮಗುವಿನ ದೇಹವನ್ನು ದೊರೆ ಉಗ್ರಸೇನನ ಬಳಿಗೆ

ಕೊಂಡೊಯ್ದನು. ದೊರೆಯು ಕ್ಷತ್ರಿಯರ ಬಗ್ಗೆ ಪಕ್ಷಪಾತ ತಳೆದಿದ್ದಾನೆಂದು ಬ್ರಾಹ್ಮಣನು ದೂಷಿಸಿದನು. ಬ್ರಾಹ್ಮಣನಿಗೆ ಹುಟ್ಟಿದ ಎರಡನೇ ಮಗುವೂ ಜನನವಲ್ಲೇ ಸತ್ತಾಗ ಬ್ರಾಹ್ಮಣನು ಅರ್ಜುನನು ಇದ್ದಂಥ ಸಂದರ್ಭದಲ್ಲಿ ಶ್ರೀ ಕೃಷ್ಣನ ಬಳಿಗೆ ತೆರಳಿ ಅದೇ ಅಪವಾದವನ್ನು ಎಸೆದನು ಮತ್ತೆ ಅರ್ಜುನನು ಪರಮಾತ್ಮನ ಸಮ್ಮುಖದಲ್ಲೇ ತಾನು ಆ ಮಗುವನ್ನು ಜೀವಂತವಾಗಿ ಹಿಂದಕ್ಕೆ ತರುತ್ತೇನೆಂದೂ, ತಪ್ಪಿದಲ್ಲಿ ಅಗ್ನಿಪ್ರವೇಶ ಮಾಡುವುದಾಗಿಯೂ ಪ್ರಮಾಣ ಮಾಡಿದನು. ಆದರೆ ಬ್ರಾಹ್ಮಣನೆಂದನು: "ನಾನು ನಿನ್ನ ವಚನವನ್ನು ಅನನುಭವಿಯಾದ ಮಗುವೊಂದು ಮಾಡಿದ ವಚನವೆಂದು ಭಾವಿಸುತ್ತೇನೆ. ನಾನು ನಿನ್ನ ಮಾತಿನಲ್ಲಿ ನಂಬಿಕೆಯನ್ನಿಡಲಾರೆ". ಅರ್ಜುನನು ಆ ಬ್ರಾಹ್ಮಣನಿಗೆ ತಾನು ಗಾಂಢೀವವನ್ನು ಹೊತ್ತವನೆಂದೂ ಹಾಗೂ ಪರಮೇಶ್ವರನೊಂದಿಗೆ ಸೆಣೆಸಾಡಿದವನೆಂದೂ, ಆದ್ದರಿಂದ ತನ್ನ ಭರವಸೆಯನ್ನು ಹಗುರವಾಗಿ ತೆಗೆದುಕೊಳ್ಳಬಾರದೆಂದೂ ತಿಳಿಸಿದನು. ಆನಂತರ ಬ್ರಾಹ್ಮಣನು ಮತ್ತೊಂದು ಮಗುವನ್ನು ಪಡೆದಾಗ ಅದೂ ಸತ್ತಿತು. ಬ್ರಾಹ್ಮಣ ಎಲ್ಲರನ್ನೂ ಶಪಿಸಿದನು.

ಹೀಗೆ ಬ್ರಾಹ್ಮಣನಿಂದ ಖಂಡಿಸಲ್ಪಟ್ಟ ಅರ್ಜುನನು ತನ್ನನ್ನೇ ಅತೀಂದ್ರಿಯ ಯೋಗಶಕ್ತಿಯಿಂದ ಸನ್ನದ್ಧಗೊಳಿಸಿಕೊಂಡು ಗ್ರಹಗಳೆಲ್ಲೆಲ್ಲ ಸುತ್ತಾಡಿದರೂ ಮೃತರಾದ ಮಕ್ಕಳನ್ನು ಪತ್ತೆ ಹಚ್ಚುವಲ್ಲಿ ವಿಫಲನಾದ. ತನ್ನ ಕೆಲಸದಲ್ಲಿ ಅಸಫಲನಾದ ಅವನು ಅಗ್ನಿಯಲ್ಲಿ ಬೀಳಲು ನಿರ್ಧರಿಸಿದ. ಭಗವಂತನು ಅವನನ್ನು ತಡೆದು ಮೂರ್ಖತನದಿಂದಾಗಿ ಆತ್ಮಹತ್ಯೆ ಮಾಡಿಕೊಳ್ಳಕೂಡದೆಂದು ತಿಳಿಸಿದ. ಮಕ್ಕಳನ್ನು ತಾನು ಹುಡುಕಿ ಕೊಡುವುದಾಗಿ ಭಗವಂತನು ವಚನವನ್ನಿತ್ತನು. ಶ್ರೀ ಕೃಷ್ಣಾರ್ಜುನರು ಮತ್ತೊಮ್ಮೆ ಎಲ್ಲೆಡೆ ಹೊರಟು ಜಗತ್ತಿನ ಹೊರವಲಯಗಳನ್ನು ಪ್ರವೇಶಿಸಬೇಕಾಗಿದ್ದ ಸಂದರ್ಭದಲ್ಲಿ ಪರಮಾತ್ಮನಿಗೆ ತನ್ನ ಕುದುರೆಗಳು ಅವನ್ನು ಪ್ರವೇಶಿಸಲು ಹಿಂತೆಗೆಯುತ್ತಿದ್ದುದು ಕಂಡಿತು. ಅವನು ಕೂಡಲೇ ತನ್ನ ಚಕ್ರವನ್ನು ಬಿಡುಗಡೆ ಮಾಡಿ ಅದರಿಂದಾಗಿ ಸೂರ್ಯನ ಬೆಳಕಿಗಿಂತಲೂ ಸಾವಿರಪಟ್ಟು ಪ್ರಕಾಶಮಾನವಾದ ಬೆಳಕು ಮಾಡಿ ಕತ್ತಲಿನ ವಲಯವೆಲ್ಲ ಬೆಳಗಿದಾಗ ಅವರಿಬ್ಬರೂ ಐಹಿಕ ಜಗತ್ತನ್ನು ಕವಿದಿದ್ದ ಹೊದಿಕೆಯನ್ನು ಸಾಗಿ ಹೋದರು.

ಅರ್ಜುನನು ಬ್ರಹ್ಮಜ್ಯೋತಿ ಎಂಬುದಾಗಿ ಕರೆಯಲಾಗುವ ಬೆಳಕಿನ ಪ್ರಕಾಶವನ್ನು ಕಂಡನು. "ಬ್ರಹ್ಮಜ್ಯೋತಿಯ ಐಹಿಕ ಜಗತ್ತಿನ ಹೊರಭಾಗದಲ್ಲಿರುವ ವಲಯವನ್ನು ಹೊಚ್ಚಿದ್ದು ನಾವು ಅದನ್ನು ನಮ್ಮ ಕಣ್ಣುಗಳಿಂದ ನೋಡಲಾಗುವುದಿಲ್ಲ. ಇದನ್ನು ಕೆಲವೊಮ್ಮೆ ಅವ್ಯಕ್ತವೆಂದೂ ಕರೆಯಲಾಗುತ್ತದೆ. ಈ ದೈವೀಕ ಪ್ರಕಾಶವು ವೇದಾಂತಿಗಳು ಕರೆಯಲಾದ ನಿರ್ವಿಕಾರ ಸ್ವರೂಪಗಳ ಅತ್ಯುನ್ನತ ಗುರಿಯು. ಬ್ರಹ್ಮಜ್ಯೋತಿಯನ್ನು "ಅನಂತಪರಾ", ಅಂದರೆ ಅನಿಯಮಿತ ಹಾಗೂ ಅಭಾಧಿತವೆಂಬುದಾಗಿಯೂ ವಿವರಿಸಲಾಗಿದೆ. ಅರ್ಜುನನಿಗೆ ಈ ಹೊಳೆಯುವ ಪ್ರಕಾಶವನ್ನು ನೋಡಲು ಸಾಧ್ಯವಾಗದೆ ತನ್ನ ಕಣ್ಣುಗಳನ್ನು ಮುಚ್ಚಿಕೊಂಡನು. ಶ್ರೀ ಕೃಷ್ಣನು ಅರ್ಜುನನಿಗೆ ಹೇಳಿದನು : "ಎಲೈ ಅರ್ಜುನನೇ, ನೀನು ನೋಡುತ್ತಿರುವ ಈ ಅದ್ಭುತ ಪ್ರಕಾಶ, ಅತಿಶಯವಾದ ಬೆಳಕು ನನ್ನ

ಶರೀರದ ಕಿರಣಗಳು. ಭರತ ಸಂತತಿಯ ಮುಖ್ಯಸ್ಥನೇ, ಈ ಬ್ರಹ್ಮಜ್ಯೋತಿಯು ನಾನೇ", ಶ್ರೀ ಕೃಷ್ಣ ಹಾಗೂ ಬ್ರಹ್ಮಜ್ಯೋತಿಯನ್ನು ಪ್ರತ್ಯೇಕಿಸಲಾಗದು. ಹರಿವಂಶದಲ್ಲಿ ಕೃಷ್ಣನೆನ್ನುತ್ತಾನೆ: "ಬ್ರಹ್ಮಜ್ಯೋತಿಯು ನನ್ನ ದೈವಿಕ ಶಕ್ತಿಯ ವಿಸ್ತರಣೆ". ಅವನು ಮುಂದುವರೆದು ನುಡಿಯುತ್ತಾನೆ: "ಬ್ರಹ್ಮಜ್ಯೋತಿಯು ನನ್ನ ಬಾಹ್ಯ ಶಕ್ತಿಯ, ಮಾಯಾ ಶಕ್ತಿಯೆಂದು ಹೆಸರಾದ ವಲಯಕ್ಕಿಂತಲೂ ಅತೀತವಾದದ್ದು". ಇದಾದ ನಂತರ ಶ್ರೀ ಕೃಷ್ಣಾರ್ಜುನರು ಕರ್ಣರವ ಅಥವಾ ವಿರಾಜನೆಂಬ ಹೆಸರಿನ ವಿಸ್ತಾರವಾದ ದೈವಿಕ ಸಾಗರವನ್ನು ತಲುಪಿದರು. ಈ ಸಾಗರದ ಹೆಸರಿಗೆ ಲೌಕಿಕ ಜಗತ್ತಿನ ಸೃಷ್ಟಿಯ ಮೂಲವೆಂಬ ಅರ್ಥವೂ ಉಂಟು. ಅಲ್ಲಿ ಅವರು ನೀರಿನೊಳಗೆ ವಿಶಾಲವಾದ ಅರಮನೆಯನ್ನು ಕಂಡರು. ಅದು ಸುವರ್ಣ ಮಂದಿರ. ಅರಮನೆಯೊಳಗೆ ಅನಂತದೇವ, ಶೇಷನ ದೈತ್ಯಾಕಾರ ರೂಪವನ್ನು ಕಂಡರು. ಈ ಮಹಾನ್ ಸರ್ಪಕ್ಕೆ ಸಾವಿರಾರು ಹೆಡೆಗಳಿದ್ದು ಪ್ರತಿಯೊಂದು ಹೆಡೆಯೂ ಬೆಲೆಬಾಳುವ ಹೊಳೆಯುವ ಅಭರಣಗಳನ್ನು ಹೊಂದಿದ್ದಿತು. ಅರ್ಜುನನು ಶೇಷನಾಗನ ರೂಪವನ್ನು ಕಂಡಿದ್ದಲ್ಲದೆ ಅದರ ಮೃದುವಾದ ಶೇಷಾಂಗನ ಶ್ವೇತ ಶರೀರವನ್ನೂ ನೋಡಿದನು. ಅಲ್ಲಿ ಮಹಾವಿಷ್ಣುವು ಸುಖದಿಂದ ಪವಡಿಸಿದ್ದನು. ಅವನು ಸರ್ವವ್ಯಾಪಿಯಾಗಿ, ಸರ್ವಶಕ್ತನಾಗಿ ಕಂಡನು. ಅವನಿಗೆ ಪುರುಷೋತ್ತಮನೆಂಬ ಹೆಸರೂ ಇರುವುದಕ್ಕೆ ಕಾರಣ, ಈ ರೂಪದಿಂದಲೇ ವಿಷ್ಣುವಿನ ಮತ್ತೊಂದು ರೂಪದ ಗರ್ಭೋದಕಶಾಯಿ ವಿಷ್ಣುವು ಲೌಕಿಕ ಜಗತ್ತಿನಿಂದ ಉದ್ಭವಿಸುತ್ತಾನೆ. ಮಹಾವಿಷ್ಣುವಿನ ಬಣ್ಣ ಮಳೆಗಾಲದ ಹೊಚ್ಚ ಹೊಸ ಮೋಡದಷ್ಟೇ ಕಪ್ಪು. ಅವನು ಸುಂದರವಾದ ಅರಸಿನ ಬಣ್ಣದ ವಸ್ತ್ರವನ್ನು ಧರಿಸಿದ್ದನು. ಅವನ ಮುಖದ ಮೇಲೆ ಸದಾ ಮುಗುಳ್ನಗೆ ಇತ್ತು. ಕಮಲದ ದಳವನ್ನು ಹೋಲುತ್ತಿದ್ದ ಅವನ ಕಣ್ಣುಗಳು ಅತ್ಯಂತ ಆಕರ್ಷಕವಾಗಿದ್ದವು. ಅವನ ಮಸ್ತಕ ಬೆಲೆಬಾಳುವ ಆಭರಣಗಳಿಂದ ಅಲಂಕೃತವಾಗಿತ್ತು. ಅವನ ಕಿವಿಯಲ್ಲಿ ತೂಗಾಡುತ್ತಿದ್ದ ಸುಂದರ ಕುಂಡಲಗಳು ಅವನ ತಲೆಯ ಮೇಲಿನ ಗುಂಗುರು ಕೂದಲನ್ನು ಮತ್ತಷ್ಟು ಸುಂದರವಾಗಿತ್ತು. ಅವನಿಗೆ ಎಂಟು ಬಾಹುಗಳಿದ್ದವು. ಅವು ಉದ್ದವಾಗಿದ್ದು ಅವನ ಮಂಡಿಯ ಸಮಕ್ಕೆ ಬರುತ್ತಿದ್ದವು. ಅವನ ಕತ್ತಿನಲ್ಲಿ ಕೌಸ್ತುಭ ಮಣಿಯು ಹೊಳೆಯುತ್ತಿದ್ದು ಅವನ ವಕ್ಷಸ್ಥಲದಲ್ಲಿ ಅದೃಷ್ಟ ದೇವತೆಯ ವಿಶ್ರಾಂತಿ ಸ್ಥಳ ಎಂದು ಸೂಚಿಸುವ ಶ್ರೀವತ್ಸ ಚಿಹ್ನೆಯಿತ್ತು. ಭಗವಂತನು ತನ್ನ ಮಂಡಿಯವರೆಗೆ ಇಳಿಬಿದ್ದಿದ್ದ ಕಮಲ ಪುಷ್ಪಗಳ ಮಾಲೆಯನ್ನು ಧರಿಸಿದ್ದನು. ಈ ಉದ್ದನೆಯ ಮಾಲೆಗೆ ವೈಜಯಂತಿ ಮಾಲೆಯೆಂದು ಹೆಸರು. ಮಹಾವಿಷ್ಣುವಿನ ರೂಪ ಶ್ರೀ ಕೃಷ್ಣನ ದೇಹದ ವಿಸ್ತರಣೆ, ಬ್ರಹ್ಮಸಂಹಿತೆಯಲ್ಲಿ ಮಹಾವಿಷ್ಣುವು ಶ್ರೀ ಕೃಷ್ಣನ ಉಪಾಧಿಕ ಭಾಗವೆಂಬುದನ್ನು ಪುಷ್ಟೀಕರಿಸಲಾಗಿದೆ.

ಮಹಾವಿಷ್ಣುವು ಹೇಳಿದನು: "ನನ್ನ ಪ್ರೀತಿಯ ಶ್ರೀ ಕೃಷ್ಣಾರ್ಜುನರೆ, ನಾನು ನಿಮ್ಮಿಬ್ಬರನ್ನು ನೋಡಲು ಕಾತುರನಾಗಿದ್ದರಿಂದ ನಾನು ಬ್ರಾಹ್ಮಣನ ಮಕ್ಕಳನ್ನು ಕಸಿದುಕೊಂಡು ಅವನ್ನು ಇಲ್ಲಿ ಇಟ್ಟುಕೊಳ್ಳುವ ವ್ಯವಸ್ಥೆ ಮಾಡಿ, ನಿಮ್ಮ ಬರುವಿಕೆಯನ್ನು ನಿರೀಕ್ಷಿಸುತ್ತಿದ್ದೆ. ಜಗತ್ತಿಗೆ ಹೊರೆಯಾಗಿರುವ ರಾಕ್ಷಸರ ಪ್ರಾಬಲ್ಯವನ್ನು ಕಡಿಮೆ ಮಾಡುವ ಸಲುವಾಗಿ ನೀವು ಭೂಲೋಕದಲ್ಲಿ ನನ್ನ ಅವತಾರಗಳಾಗಿ ಕಾಣಿಸಿಕೊಂಡಿದ್ದೀರಿ. ನೀವಿಬ್ಬರೂ

ಮಹಾಮುನಿ ನರ ನಾರಯಣನ ಅಪರಾವತಾರಗಳು. ನೀವು ಎಲ್ಲ ವಿಧದಲ್ಲೂ ಪರಿಪೂರ್ಣರಾಗಿದ್ದರೂ, ನೀವು ಜಗತ್ತಿನಲ್ಲಿ ಶಾಂತಿ ನೆಮ್ಮದಿಯು ಮುಂದುವರಿಯಲಿ ಎಂಬುದರ ಸಲುವಾಗಿ ಮೂಲಭೂತ ತತ್ವಗಳನ್ನು ಬೋಧಿಸುತ್ತಿದ್ದೀರಿ".

ಶ್ರೀ ಕೃಷ್ಣಾರ್ಜುನರು ದ್ವಾರಕೆಗೆ ಹಿಂತಿರುಗಿ ತಾವು ತಂದಿದ್ದ ಬ್ರಾಹ್ಮಣನ ಮಕ್ಕಳನ್ನು ಅವನಿಗೆ ಜೀವಂತವಾಗಿತ್ತರು.

ಅರ್ಜುನನು ಶ್ರೀ ಕೃಷ್ಣನ ಕೃಪೆಯಿಂದ ತಾನು ಸಂದರ್ಶಿಸಿದ ಅತಿಶಯ ಜಗತ್ತಿನ ಸಂದರ್ಶನದಿಂದ ಸ್ತಂಭೀಭೂತನಾದ. ಈ ಲೌಕಿಕ ಜಗತ್ತಿನಲ್ಲಿ ಇರಬಹುದಾದ ಯಾವುದೇ ಸಮೃದ್ಧಿ ಭಗವಂತನಿಂದ ಉಂಟಾದ್ದು ಎಂಬುದನ್ನು ಅವನು ಅರಿತು ಕೊಂಡನು.

ದೈವಿಕ ರಾಜಧಾನಿಯಿಂದ ಹಿಂತಿರುಗಿದ ನಂತರ ಅರ್ಜುನನು ಏನೆಲ್ಲ ನಡೆದಿರಬಹುದೆಂದು ಚಿಂತಿಸುತ್ತಿದ್ದ. ಅವನ ಮುಂದೆ ಅನೇಕ ಪ್ರಶ್ನೆಗಳು ಉದ್ಭವಿಸಿದವು. ಮಹಾವಿಷ್ಣುವಿನ ಮಾತಿನಿಂದ ಅವನು ವಿಷ್ಣುವು ಶ್ರೀ ಕೃಷ್ಣನನ್ನು ಭೇಟಿಯಾಗಲು ಕಾತುರನಾಗಿದ್ದ ಎಂಬ ವಿಷಯವು ತಿಳಿಯಿತು. ಮಹಾವಿಷ್ಣುವು ಬ್ರಾಹ್ಮಣನ ಮಕ್ಕಳನ್ನು ಕೊಂಡೊಯ್ಯುವ ಸಲುವಾಗಿ ದ್ವಾರಕೆಗೆ ಬಂದಿರಲೇಬೇಕಾದರೂ ಅವನು ಅಲ್ಲಿ ಭಗವಂತನನ್ನೇಕೆ ಕಾಣಲು ಸಾಧ್ಯವಿಲ್ಲವಾಯಿತು ಎಂಬುದಾಗಿ ಚಿಂತಿಸಿದನು. ಇದಕ್ಕೆ ನೀಡಬಹುದಾದ ಉತ್ತರವೆಂದರೆ ದೇವಲೋಕದ ಕಾರಣ ಸಾಗರದಲ್ಲಿ ಶಯನಾಸನನಾಗಿದ್ದ ಮಹಾವಿಷ್ಣುವಿಗೂ ಶ್ರೀ ಕೃಷ್ಣನನ್ನು ಅಲ್ಲಿ ನೋಡಲು ಸಾಧ್ಯವಾಗಲಿಲ್ಲ ಎಂಬುದು. ಅರ್ಜುನನ ಮುಂದಿದ್ದ ಮುಂದಿನ ಪ್ರಶ್ನೆಯೆಂದರೆ ಮಹಾವಿಷ್ಣುವಿಗೆ ಭಗವಂತನನ್ನು ನೋಡಲು ಸಾಧ್ಯವಿಲ್ಲದಿದ್ದರೆ ಅವನು ಮಕ್ಕಳನ್ನು ಕೊಂಡೊಯ್ಯಲು ತನ್ನ ಅನುಯಾಯಿಗಳನ್ನು ಕಳಿಸಬಹುದಾಗಿತ್ತು. ಯಾರೇ ಆಗಲಿ ಭೂಲೋಕ ಅಥವಾ ದೇವಲೋಕದಲ್ಲಿ ತೋರಿಸಬಹುದಾದ ಅದ್ಭುತಗಳೆಲ್ಲವೂ ಶ್ರೀ ಕೃಷ್ಣನ ಕೊಡುಗೆ ಎಂಬುದಾಗಿ ಅರ್ಜುನನು ನಿರ್ಣಯಿಸಿದನು. ಅವನು ತನ್ನ ವಿವಿಧ ಅತಿಶಯ ವಿಹಾರಗಳಿಂದ ಪ್ರದರ್ಶಿತಗೊಳ್ಳಬಹುದಾದರೂ ಅವನು ಮೂಲ ಉನ್ನತ ವ್ಯಕ್ತಿಯಾಗೇ ಉಳಿಯುತ್ತಾನೆ.

ಶ್ರೀ ಶುಕಾಚಾರ್ಯರು ಪರೀಕ್ಷಿತ ರಾಜನಿಗೆ ಆತ್ಮಸಾಕ್ಷಾತ್ಕಾರಕ್ಕಾಗಿ ದ್ವಾರಕೆಯ ರಾಣಿಯರು ನಡೆಸಿದ ವ್ರತನಿಯಮಗಳಿಗೆ ಸರಿಸಾಟಿಯೇ ಇಲ್ಲವೆಂದರು. ಆತ್ಮ ಸಾಕ್ಷಾತ್ಕಾರದ ಉದ್ದೇಶವೇ ಶ್ರೀ ಕೃಷ್ಣನು. ಶ್ರೀ ಶುಕಾಚಾರ್ಯರು ಶ್ರೀ ಕೃಷ್ಣ ಪರಮಾತ್ಮನ ಐದು ಪ್ರಧಾನ ಅದ್ಭುತ ಗುಣಗಳನ್ನು ಪ್ರಸ್ತಾಪಿಸಿದರು. ಮೊದಲನೆಯದೆಂದರೆ ಶ್ರೀ ಕೃಷ್ಣನು ಯದುವಂಶದಲ್ಲಿ ಕಾಣಿಸಿಕೊಂಡದ್ದು. ಗಂಗೆಯ ನೀರು ಎಲ್ಲಕ್ಕಿಂತಲೂ ಪರಿಶುದ್ಧವಾಗಿದ್ದು ಅದರ ಸಂಪರ್ಕದಿಂದ ಅಪರಿಶುದ್ಧವಾದವುಗಳೂ ಪರಿಶುದ್ಧತೆಯನ್ನು ಪಡೆಯಬಹುದು. ಗಂಗಾಜಲದ ಈ ಅದ್ಭುತ ಶಕ್ತಿಗೆ ಕಾರಣ ಅದು ಮಹಾವಿಷ್ಣುವಿನ ಪಾದದಿಂದ ಉದ್ಭವಿಸಿರುವುದು. ಯದುವಂಶದಲ್ಲಿ ಅವನು ಜನಿಸಿದ ಕಾರಣದಿಂದಾಗಿ ಆ ವಂಶವೇ ಪ್ರಸಿದ್ಧಿ ಪಡೆಯಿತು. ಎರಡನೆಯ ಅತಿಶಯತೆಯೆಂದರೆ ಭಗವಂತನು ಭಕ್ತಾದಿಗಳಿಗೆ ಆಶ್ರಯ ಕೊಟ್ಟು ದಾನವರನ್ನು ನಿರ್ನಾಮ ಮಾಡಿದರೂ ಇಬ್ಬರೂ ಒಂದೇ

ಬಗೆಯ ಪರಿಣಾಮಗಳನ್ನೂ ಪಡೆದುದು. ಭಗವಂತನು ಐದು ವಿಧದ ಮುಕ್ತಿಯನ್ನು ನೀಡುವಂಥವನಾಗಿದ್ದು, ಅದರಲ್ಲಿ ಭಗವಂತನೊಂದಿಗೆ ಒಂದುಗೂಡಬಹುದಾದಂಥ ಸಂಯುಜ್ಯ ಮುಕ್ತಿಯನ್ನು ಶಿಶುಪಾಲ ಹಾಗೂ ಕಂಸರಂಥ ರಕ್ಕಸರಿಗೆ ನೀಡಿ, ಗೋಪಿಕೆಯರಿಗೆ ಭಗವಂತನೊಂದಿಗೆ ವೈಯುಕ್ತಿಕವಾಗಿ ಲೀನಗೊಳ್ಳುವ ಅವಕಾಶ ದೊರೆಯಿತು. ಇನ್ನೊಂದು ರೀತಿಯಲ್ಲಿ ಹೇಳಬಹುದಾದರೆ ರಕ್ಕಸರು ಹಾಗೂ ಗೋಪಿಯರಿಬ್ಬರೂ ದೈವಿಕವಾಗಿ ವಿಮುಕ್ತಿ ಹೊಂದಿದರು. ಏಕೆಂದರೆ ರಾಕ್ಷಸರು ಶತೃಗಳಾಗಿದ್ದು, ಗೋಪಿಯರು ಮಿತ್ರರಾಗಿದ್ದರಿಂದ, ರಕ್ಕಸರು ಕೊಲ್ಲಲ್ಪಟ್ಟು, ಗೋಪಿಯರು ಸಂರಕ್ಷಿಸಲ್ಪಟ್ಟರು. ಮೂರನೆಯ ಅತಿಶಯತೆ ಅದೃಷ್ಟ ದೇವತೆಗೆ ಸಂಬಂಧಿಸಿದ್ದು. ಶ್ರೀ ಲಕ್ಷ್ಮಿಯು ತಾನೂ ಗೋಪಿಯರ ಮಟ್ಟದಲ್ಲೇ ನಿಲ್ಲಲು ಸರ್ವಪ್ರಯತ್ನ ಮಾಡಿದರೂ ಅದು ಅವಳಿಗೆ ಸಾಧ್ಯವಾಗಲಿಲ್ಲ. ಅವಳು ಭಗವಂತನಿಗೆ ವಿಧೇಯಳಾಗಿದ್ದರೂ ಬ್ರಹ್ಮದೇವನಂಥ ಉಪದೇವತೆಗಳಿಂದ ಪೂಜಿಸಲ್ಪಟ್ಟರೂ ಒಂದೆಡೆ ನಿಲ್ಲುವುದು ಸಾಧ್ಯವಾಗಲಿಲ್ಲ. ನಾಲ್ಕನೆಯ ಅತಿಶಯತೆ ಶ್ರೀ ಕೃಷ್ಣನ ಗೋಚರಿಸುವಿಕೆ. ಅವನ ಹೆಸರಿನ ವೈಭವಕ್ಕೆ ಸಂಬಂಧಪಟ್ಟಂಥದ್ದು. ಮಹಾ ವಿಷ್ಣುವಿನ ವಿವಿಧ ಹೆಸರುಗಳನ್ನು ಒಂದು ಸಾವಿರ ಬಾರಿ ಪಠಿಸುವ ಮೂಲಕ ಶ್ರೀ ರಾಮನ ಪವಿತ್ರ ನಾಮವನ್ನು ಮೂರು ಬಾರಿ ಪಠಿಸುವುದರಿಂದ ದೊರೆಯುವಂಥ ಪ್ರಯೋಜನವನ್ನೇ ಪಡೆಯಬಹುದು. ಹಾಗೂ ಶ್ರೀ ಕೃಷ್ಣನ ಹೆಸರನ್ನು ಒಮ್ಮೆ ಮಾತ್ರ ಉಚ್ಚರಿಸುವ ಮೂಲಕ ಅಂಥ ಪ್ರಯೋಜನವನ್ನು ಪಡೆಯಬಹುದು. ಇನ್ನೊಂದು ರೀತಿಯಾಗಿ ಹೇಳಬಹುದಾದರೆ ಪರಮಾತ್ಮನ ಉನ್ನತ ವ್ಯಕ್ತಿತ್ವದ, ವಿಷ್ಣು ಮತ್ತು ರಾಮನನ್ನೂ ಒಳಗೊಂಡಂತೆ, ಎಲ್ಲ ಪವಿತ್ರ ನಾಮಗಳಲ್ಲಿ, ಶ್ರೀ ಕೃಷ್ಣನ ನಾಮಸ್ಮರಣೆಯೇ ಅತ್ಯಂತ ಪ್ರಭಾವಶಾಲಿಯಾದದ್ದು. ಐದನೆಯ ಅತಿಶಯತೆಯೆಂದರೆ "ಕೇವಲ ತನಗೆ ಶರಣಾಗತನಾಗುವ ಮೂಲಕ ಒಬ್ಬರು ಧಾರ್ಮಿಕ ವಿಧಿಗಳ ಎಲ್ಲ ತತ್ವಗಳನ್ನು ಪೂರೈಸಬಹುದು" ಎಂಬುದಾಗಿ ಭಗವದ್ಗೀತೆಯಲ್ಲಿ ಹೇಳಿದ ಒಂದೇ ವಾಕ್ಯದ ಮೂಲಕ ಎಲ್ಲ ಧಾರ್ಮಿಕ ತತ್ವಗಳ ಅತ್ಯಂತ ಅದ್ಭುತ ಅಂಶವನ್ನು ಸ್ಥಾಪಿಸಿದ್ದು. ಶ್ರೀ ಶುಕಾಚಾರ್ಯರು ಹೀಗೆ ಶ್ರೀ ಕೃಷ್ಣನ ವಿಹಾರಗಳನ್ನು ವಿವರಿಸಿದರು.

## ಯದು ವಂಶದ ಅಂತ್ಯ

ಬಲರಾಮ ದೇವ ಹಾಗೂ ಶ್ರೀ ಕೃಷ್ಣ ಪರಮಾತ್ಮನು ಅನೇಕ ದಾನವರ ಹತ್ಯೆಗೆ ಕಾರಣರಾದರು. ನಂತರ ಭೂಮಿಯ ಮೇಲಿನ ಭಾರವನ್ನು ಕಡಿಮೆ ಮಾಡುವ ಸಲುವಾಗಿ ಭಗವಂತನು ಕುರುಕ್ಷೇತ್ರ ಯುದ್ಧವನ್ನು ಏರ್ಪಡಿಸಿದನು. ಯುದ್ಧದ ಸಂದರ್ಭದಲ್ಲಿ ಸಾವಿರಾರು ಜನರು ಸತ್ತರೂ ವಸುಂಧರೆಯು ಹೊರೆಯಿಂದ ಮುಕ್ತಳಾಗಲಿಲ್ಲ. ಆದ್ದರಿಂದ ಭಗವಂತನು ತನ್ನಿಂದಲೇ ರಕ್ಷಿಸಲ್ಪಟ್ಟಿದ್ದ ಯದುವಂಶವನ್ನೇ ಬಳಸಿಕೊಂಡು, ತಮ್ಮ ಅಸಂಖ್ಯಾತ ಸೇನೆಗಳಿಂದಾಗಿ ಭೂಮಿಗೆ ಹೊರೆಯನ್ನಾಗಿಸಿದ್ದ ಅದರ ರಾಜರನ್ನೇ ಕೊಲ್ಲಲು ನಿರ್ಧರಿಸಿದನು. ಪರಮಾತ್ಮನೆಂದನು: "ಈಗ ಭೂಮಿಯ ಭಾರವು ಹೊರಟು ಹೋಗಿದೆ ಎಂಬುದಾಗಿ ಕೆಲವರು ಹೇಳಿದರೂ, ನನ್ನ ಅಭಿಪ್ರಾಯದಲ್ಲಿ ಹಾಗಾಗಿಲ್ಲ,

ಭೂಮಿಯು ಸಹಿಸಲಾಗದಂಥ ಶಕ್ತಿಯುಳ್ಳ ಯದುವಂಶವೇ ಉಳಿದುಕೊಂಡಿದ್ದು ಅದಿನ್ನೂ ಹೊರೆಯಾಗಿಯೇ ಇದೆ." ಆದ್ದರಿಂದ ಶ್ರೀ ಕೃಷ್ಣನು ಆಲೋಚಿಸಿದನು : "ತನ್ನ ವಂಶವಾದ ಯದುವಂಶವನ್ನು, ಯಾವುದರ ಸದಸ್ಯರು ಸದಾಕಾಲವೂ ತನಗೇ ಶರಣಾಗಿದ್ದು ತಮ್ಮ ಸಮೃದ್ಧಿಯಲ್ಲಿ ಅನಿಯಮಿತರಾಗಿದ್ದಾರೋ ಅಂಥ ವಂಶವನ್ನು, ಹೊರಗಿನ ಯಾವ ಶಕ್ತಿಯೂ ಸೋಲಿಸಲಾರದು. ಆದರೆ ನಾನು ನನ್ನ ವಂಶದಲ್ಲೇ ಕಲಹವನ್ನು ಉಂಟು ಮಾಡಿದರೆ ತಮ್ಮಲ್ಲಿಯ ತಿಕ್ಕಾಟದಿಂದ ಅರಣ್ಯವೊಂದರಲ್ಲಿ ಅಗ್ನಿಯೇಳುವಂತೆ ನನ್ನ ವಂಶದಲ್ಲಿ ವೈಮನಸ್ಯ ಹುಟ್ಟಿಕೊಂಡಾಗ ನಾನು ನನ್ನ ನಿಜವಾದ ಉದ್ದೇಶಗಳನ್ನು ಸಾಧಿಸಿದಂತಾಗಿ ನನ್ನ ಶಾಶ್ವತ ಸ್ಥಾನಕ್ಕೆ ಹಿಂತಿರುಗಿ ಹೋಗಬಹುದಾಗಿದೆ".

ಶ್ರೀ ಶುಕಾಚಾರ್ಯರು ಪರೀಕ್ಷಿತನಿಗೆ ಶ್ರೀ ಕೃಷ್ಣನು ಭಾವಿಸಿದೆಲ್ಲವೂ ನಿಜವಾಯಿತು ಎಂಬುದಾಗಿ ತಿಳಿಸಿದರು. ತನ್ನ ವೈಭವಗಳನ್ನು ಕೇವಲ ಆಲಿಸಿ ಪಠಿಸುವ ಮೂಲಕ ಮುಂದೆ ಜನಿಸುವ ಪಕ್ವಗೊಂಡ ಆತ್ಮಗಳು ಮೌಢ್ಯತೆಯ ಕಗ್ಗತ್ತಲಿನಿಂದ ಹೊರಸರಿಯುತ್ತವೆ ಎಂಬುದಾಗಿ ಭಗವಂತನು ಭಾವಿಸಿದನು. ಈ ಏರ್ಪಾಟಿನಿಂದ ತೃಪ್ತಿಹೊಂದಿದಾಗ ಅವನು ತಾನು ಆಶಿಸಿದ ಸ್ಥಳಕ್ಕೆ ಹೊರಟನು.

ಪರೀಕ್ಷಿತ ರಾಜನು ಶ್ರೀ ಶುಕಾಚಾರ್ಯರನ್ನು ವೃಷ್ಣಿಗಳ ಬಗ್ಗೆ, ಯಾವಾಗಲೂ ಗೌರವದಿಂದ ಇದ್ದ ಬ್ರಾಹ್ಮಣರು ಅವರನ್ನು ಶಪಿಸಲು ಹೇಗೆ ಸಾಧ್ಯವಾಯಿತು ಎಂಬುದಾಗಿ ಕೇಳಿದನು. ದೊರೆಯು ಇದಕ್ಕೆ ಕಾರಣ ವಿವರಗಳನ್ನು ತಿಳಿದುಕೊಳ್ಳಲು ಬಯಸಿದನು.

ಭಗವಂತನ ಕರ್ತವ್ಯದ ಸ್ವಲ್ಪ ಭಾಗವು ನೆರವೇರದೆಯೇ ಉಳಿದಿದ್ದರಿಂದ ಅವನು ತನ್ನ ವಂಶವನ್ನೇ ನಿರ್ನಾಮಗೊಳಿಸಲು ಬಯಸಿದ ಎಂಬುದಾಗಿ ಶ್ರೀ ಶುಕಾಚಾರ್ಯರು ಹೇಳಿದರು. ಶ್ರೀ ಶುಕಾಚಾರ್ಯರು ವಿವರಗಳನ್ನು ನೀಡಿದರು. ವಿಶ್ವಾಮಿತ್ರ, ಅಸಿತ, ಕಣ್ವ, ದೂರ್ವಾಸ, ಭೃಗು, ಅಂಗೀರ, ಕಶ್ಯಪ, ವಾಮದೇವ, ಅತ್ರಿ, ವಸಿಷ್ಠರು ನಾರದ ಮುನಿಯೊಂದಿಗೆ ಫಲಪ್ರದ ಪವಿತ್ರ ಪರಿಣಾಮಗಳನ್ನು ನೀಡಬಲ್ಲಂಥ ಯಜ್ಞಗಳನ್ನು ನಡೆಸಿದರು. ಕಲಿಯುಗದ ಪಾಪಗಳನ್ನು ನಿವಾರಿಸಿ ಸಂತಸವನ್ನು ಉಂಟು ಮಾಡುವುದೇ ಇವುಗಳ ಉದ್ದೇಶವಾಗಿತ್ತು. ಅನಂತರ ಮುನಿಗಳೆಲ್ಲರೂ ಪಿಂಡರ ಎಂಬ ಸ್ಥಳಕ್ಕೆ ಹೊರಟರು. ಅದೇ ಪವಿತ್ರ ಸ್ಥಳಕ್ಕೆ ಯದುವಂಶದ ಚಿಕ್ಕ ಹುಡುಗರು ಜಾಂಬವತಿಯ ಮಗನಾದ ಸಾಂಬನಿಗೆ ಸ್ತ್ರೀವೇಷ ತೊಡಿಸಿ ಅಲ್ಲಿಗೆ ಕರೆತಂದರು. ಅವರು ಮುನಿಗಳನ್ನು ತುಂಟುತನದಿಂದ ಸಮೀಪಿಸಿ ದೀನರಾಗಿ ಅವರನ್ನು ಕೇಳಿದರು. "ಎಲೈ ಪಂಡಿತರಾದ ಬ್ರಾಹ್ಮಣರೇ, ಕಪ್ಪು ಕಣ್ಣಿನ ಈ ಹೆಂಗಸು ನಿಮ್ಮನ್ನೇನೋ ಕೇಳಬೇಕೆಂದಿದ್ದಾಳೆ. ಅದನ್ನು ತಾನೇ ಕೇಳಲು ಅವಳಿಗೆ ನಾಚಿಕೆಯೆನ್ನಿಸುತ್ತದೆ. ಅವಳು ಇನ್ನೇನು ಮಗುವಿಗೆ ಜನ್ಮ ನೀಡಲಿದ್ದಾಳೆ. ನೀವೆಲ್ಲರೂ ಮಹಾ ಮುನಿಗಳಾದ್ದರಿಂದ ಅವಳಿಗೆ ಹುಟ್ಟುವ ಮಗು ಗಂಡೋ ಅಥವಾ ಹೆಣ್ಣೋ ಎಂಬುದನ್ನು ದಯವಿಟ್ಟು ತಿಳಿಸಬೇಕು" ಮುನಿಗಳು

ಕೋಪಾವೇಶದಿಂದ ಹೇಳಿದರು: "ಎಲೈ ಮೂರ್ಖನೇ, ಅವಳು ನಿಮ್ಮ ಇಡೀ ವಂಶವನ್ನೇ ನಾಶಪಡಿಸುವಂಥ ಕಬ್ಬಿಣದ ದೊಣ್ಣೆಯೊಂದನ್ನು ಹೆರುತ್ತಾಳೆ".

ಈ ಶಾಪವನ್ನು ಕೇಳಿ ಭೀತಿಗೊಂಡ ಬಾಲಕರು ಸಾಂಬಾನ ವಸ್ತ್ರಗಳನ್ನು ಕಳಚಿದಾಗ ಅಲ್ಲಿ ಕಬ್ಬಿಣದ ದೊಣ್ಣೆಯನ್ನೇ ಕಂಡರು. ಅವರು ಭಯವಿಹ್ವಲರಾಗಿ ಮನೆಗೆ ಆ ದೊಣ್ಣೆಯೊಂದಿಗೆ ಹಿಂತಿರುಗಿ ನಡೆದದ್ದೆಲ್ಲವನ್ನೂ ಯಾದವರ ಸಮ್ಮುಖದಲ್ಲೇ ಉಗ್ರಸೇನ ದೊರೆಗೆ ತಿಳಿಸಿದರು. ದೊರೆಯು ಆ ದೊಣ್ಣೆಯನ್ನು ಚೂರಾಗಿಸಿ ಅವನ್ನು ಸಾಗರಕ್ಕೆ ಎಸೆಯುವ ಏರ್ಪಾಟು ಮಾಡಿದನು. ಮೀನೊಂದು ಕಬ್ಬಿಣದ ಚೂರೊಂದನ್ನು ತಿಂದಿತು. ಕಬ್ಬಿಣದ ಚೂರುಗಳು ಅಲೆಗಳ ಹೊಡೆತದಿಂದಾಗಿ ದಂಡೆಗೆ ಹಿಂತಿರುಗಿ ಅಲ್ಲೇ ಸ್ಥಾಪನೆಗೊಂಡು ಎತ್ತರದ ಚೂಪಾದ ಬೆತ್ತಗಳಾಗಿ ಬೆಳೆದುನಿಂತವು. ಕಬ್ಬಿಣದ ಚೂರೊಂದನ್ನು ನುಂಗಿದ ಮೀನನ್ನು ಇನ್ನಿತರ ಮೀನುಗಳೊಂದಿಗೆ ಹಿಡಿಯಲಾಯಿತು. ಅದರ ಹೊಟ್ಟೆಯಲ್ಲಿದ್ದ ಕಬ್ಬಿಣವನ್ನು ಜರನೆಂಬ ಬೇಟಗಾರನು ತೆಗೆದುಕೊಂಡು ತನ್ನ ಬಿಲ್ಲಿನ ತುದಿಗೆ ಅದನ್ನು ಸಿಕ್ಕಿಸಿದನು. ಶ್ರೀ ಕೃಷ್ಣನಿಗೆ ಇದೆಲ್ಲವೂ ತಿಳಿದಿದ್ದರೂ ಅವನು ಮೌನವಾಗಿಯೇ ಉಳಿದು, ಕಾಲದ ತನ್ನ ರೂಪದಲ್ಲಿ ಅವನು ಸಂತೋಷದಿಂದಲೇ ಈ ಘಟನೆಗಳಿಗೆ ಅನುವು ಮಾಡಿಕೊಟ್ಟ.

ಹಿಂಪರ್ಕಕ್ಕೆ ತೆರಳಿದ್ದ ನಾರದ ಮುನಿಯು ದ್ವಾರಕದಲ್ಲೇ ಸ್ವಲ್ಪ ಕಾಲ ಉಳಿದನು. ಅಲ್ಲಿ ಅವನನ್ನು ವಸುದೇವನು ಬರಮಾಡಿಕೊಂಡು ಭಗವಂತನನ್ನು ಸಂತಸಪಡಿಸಬಹುದಾದ ಕರ್ತವ್ಯಗಳನ್ನು ಕುರಿತು ವಿಚಾರಿಸಿದನು. ವಸುದೇವನು ತನ್ನ ಹಿಂದಿನ ಜನ್ಮದಲ್ಲಿ ಮಗುವಿಗಾಗಿ ಅನಂತದೇವನನ್ನು ಆರಾಧಿಸಿದ್ದರೂ ಪರಮಾತ್ಮನನ್ನು ಮುಕ್ತಿಗಾಗಿ ಪೂಜಿಸಲಿಲ್ಲ ಎಂಬುದಾಗಿ ಹೇಳಿದನು. ವಸುದೇವನು ನಾರದ ಮುನಿಗೆ ನುಡಿದನು : "ನನ್ನ ಒಡೆಯನೇ, ನೀನು ಸದಾ ನಿನ್ನ ವಚನಕ್ಕೆ ಬದ್ಧನು. ಅನೇಕ ಅಪಾಯಗಳಿಂದ ತುಂಬಿದ್ದು ಸತತವಾಗಿ ನಮ್ಮನ್ನು ಭಯದಲ್ಲಿ ಇರುವಂಥ ಲೌಕಿಕ ಜಗತ್ತಿನಿಂದ ನಾನು ಸುಲಭವಾಗಿ ಮುಕ್ತಿ ಪಡೆಯಲು ನೆರವಾಗುವಂಥ ನಿನ್ನ ಕರುಣೆಯ ಮೂಲಕ ನನಗೆ ಸ್ಪಷ್ಟ ತಿಳಿವಳಿಕೆಯನ್ನು ನೀಡುವಂಥವನಾಗು".

ನಾರದ ಮುನಿಯು ಈ ಪ್ರಶ್ನೆಯಿಂದ ಸಂಪ್ರೀತಗೊಂಡು, ಉಪದೇವತೆಗಳು ಹಾಗೂ ಇನ್ನಿತರರನ್ನು ದ್ವೇಷಿಸಿದವರೂ ಸಹ ಭಗವಂತನಿಗೆ ಪರಿಶುದ್ಧ ಭಕ್ತಿಪೂರ್ವಕ ಸೇವೆಯನ್ನು ಸಲ್ಲಿಸುವ ಮೂಲಕ ಕೆಲವರು ತಕ್ಷಣವೇ ಪರಿಶುದ್ಧತೆಯನ್ನು ಪಡೆದಿದ್ದಾರೆ ಎಂದನು. ಮುನಿಯು ವಿದೇಹ ಅರಸು ನಿಮ್ಮಿ ದೊರೆಯಂಥ ಉನ್ನತ ವ್ಯಕ್ತಿ ಹಾಗೂ ಋಷಭ ದೇವನ ಪುತ್ರರ ಮಧ್ಯದಲ್ಲಿನ ವಿವಾದವನ್ನು ವಿವರಿಸಿದನು. ಋಷಭದೇವನು ಸ್ವಯಂಭು ಮನುವಿನ ಸಂತತಿಗೆ ಸೇರಿದವನು. ಅವನನ್ನು ಶ್ರೀ ಕೃಷ್ಣ ಪರಮಾತ್ಮನ ವಿಸ್ತರಣೆಯೆಂದು ಅಂಗೀಕರಿಸಲಾಗಿತ್ತು. ಅವನು ಅಂತಿಮವಾಗಿ ಮುಕ್ತಿಗೆ ಕೊಂಡೊಯ್ಯು ವಂಥ ಧಾರ್ಮಿಕ ತತ್ವಗಳಲ್ಲಿ ತೊಡಗಿದ್ದನು. ಋಷಭದೇವನ ಒಂದು ನೂರು ಮಕ್ಕಳಲ್ಲಿ ಒಂಬತ್ತು ಜನರು ಪರಮ ಸತ್ಯದ ಬಗೆಗಿನ ತಿಳಿವಳಿಕೆಯನ್ನು ತೀವ್ರ ರೀತಿಯಲ್ಲಿ ಪ್ರಚಾರ ಮಾಡುವಂಥ ಅದೃಷ್ಟಶಾಲಿ ಋಷಿಗಳಾಗಿದ್ದರು. ಅವರು ನಗ್ನರಾಗಿ ಅಲೆದಾಡುತ್ತಾ,

ಅಧ್ಯಾತ್ಮಿಕ ಜ್ಞಾನದಲ್ಲಿ ಪಾರಂಗತರಾಗಿದ್ದರು. ಅವರೆಂದರೆ ಕವಿ, ಹವೀರ, ಅಂತರಿಕ್ಷ, ಪ್ರಬುದ್ಧ, ಪಿಪ್ಪಲಾಯನ, ಅವಿರಹೋತ್ರ, ದ್ರುಮಿಳ, ಚಮಸ ಮತ್ತು ಕರಭಜ್ಞ. ಈ ಒಂಬತ್ತು ಜನರನ್ನು ಯೋಗೀಂದ್ರರು ಎಂದು ಕರೆಯಲಾಯಿತು. ಸುತ್ತಾಡುತ್ತ ಅವರು ದೊರೆ ನಿಮ್ಮಿ ನಡೆಸುತ್ತಿದ್ದ ಯಜ್ಞಸ್ಥಳಕ್ಕೆ ಬಂದಾಗ ಭಗವಂತನ ಈ ಮಹಾನ್ ಭಕ್ತರನ್ನು ಕಂಡ ಯಜ್ಞ ನಿರ್ವಾಹಕರು ಹಾಗೂ ಇತರರು ಎದ್ದು ನಿಂತರು.

ನಿಮ್ಮಿ ದೊರೆಯು ಮುನಿಗಳನ್ನು ಪೂಜಿಸಿ ಯೋಗೀಂದ್ರರಿಗೆ ಈ ಕೆಳಗಿನ ಪ್ರಶ್ನೆಗಳನ್ನು ಕೇಳಿದನು:

(1) ಅತ್ಯುನ್ನತ ಒಳಿತು ಯಾವುದು? (2) ಧಾರ್ಮಿಕ ತತ್ತ್ವಗಳು ಯಾವುವು? (3) ವಿಷ್ಣುವಿನ ಬಾಹ್ಯ ಶಕ್ತಿ ಯಾವುದು (4) ಒಬ್ಬನು ಈ ಮಾಯೆಯ ಸಂಪರ್ಕಕ್ಕೆ ಸಿಲುಕದಿರುವುದು ಹೇಗೆ (5) ಬ್ರಹ್ಮನ್‌ನ ನಿಜವಾದ ಗುರುತು ಯಾವುದು (6) ಕರ್ಮದ ಮೂರು ವಿಧಗಳು ಯಾವುವು - ಅಂದರೆ ಕಾರ್ಯದ ಫಲಗಳ ಅನುಭವಿಸುವಿಕೆಯನ್ನು ಆಧರಿಸಿದ ಕರ್ಮ; ಭಗವಂತನಿಗೆ ನೀಡಲಾದ ಹಾಗೂ ನೈಷ್ಕರ್ಮ್ಯ .(7) ಭಗವಂತನ ವಿವಿಧ ಆಕಾರಗಳ ಬೇರೆ ಬೇರೆ ಲೀಲೆಗಳು ಯಾವುವು (8) ಭಗವಂತನಿಗೆ ವಿರುದ್ಧವಾಗಿ ಭಕ್ತಿಯನ್ನು ಹೊಂದಿಲ್ಲದಂಥವನ ಗುರಿ ಅಥವಾ ಮುಟ್ಟಬೇಕಾದ ಅಂತಿಮ ಸ್ಥಳ ಯಾವುದು ಹಾಗೂ (9) ನಾಲ್ಕು ಯುಗವತಾರಗಳು. ಅಂದರೆ ನಾಲ್ಕು ಯುಗಗಳಲ್ಲಿ ಕಾಣಿಸಿಕೊಳ್ಳುವ ಭಗವಂತನ ನಾಲ್ಕು ಅವತಾರಗಳ ಬಣ್ಣ, ರೂಪ, ನಾಮಗಳು ಯಾವುವು ಹಾಗೂ ಅವುಗಳಲ್ಲಿ ಪ್ರತಿಯೊಂದನ್ನು ಆರಾಧಿಸುವ ವಿಧಾನ ಯಾವುದು?

ನಾರದ ಮುನಿಯು ವಸುದೇವನಿಗೆ ಯೋಗೀಂದ್ರರು ದೊರೆಗೆ ಧನ್ಯವಾದಗಳನ್ನು ಹೇಳಿ ನುಡಿದರು ಎಂಬುದಾಗಿ ತಿಳಿಸಿದನು. ಕವಿಯು ಉತ್ತರವಾಗಿ ಐಹಿಕ ಜಗತ್ತಿನೊಂದಿಗೆ ತನ್ನನ್ನು ಹುಸಿಯಾಗಿ ಗುರುತಿಸಿಕೊಂಡು ಪರಮಾತ್ಮನೊಬ್ಬನನ್ನೇ ಆರಾಧಿಸುವವನು ಮಾತ್ರ ನಿಜವಾದ ಮುಕ್ತಿಯನ್ನು ಸಾಧಿಸಬಹುದು ಎಂದನು. ಭಗವಂತನೇ ಸೂಚಿಸಿರುವ ವಿಧಾನಗಳನ್ನು ಅಳವಡಿಸಿಕೊಳ್ಳುವ ಮೂಲಕ ಮೂಢರೂ ಸಹ ಭಗವಂತನನ್ನು ತಿಳಿದುಕೊಳ್ಳುವುದು ಸಾಧ್ಯ. ಪರಮಾತ್ಮನು ಸೂಚಿಸಿರುವುದು ಭಾಗವತ ಧರ್ಮ ಅಥವಾ ಭಕ್ತಿಪೂರ್ವಕ ಸೇವೆ. ಈ ವಿಧಾನವನ್ನು ಅನುಸರಿಸುವವನು ತಪ್ಪನ್ನು ಮಾಡಲಾರ. ಯಾರಾದರೂ ಏನನ್ನೇ ಮಾಡಲಿ ಅದು ಶ್ರೀಮನ್ ನಾರಾಯಣನನ್ನು ಮುದಗೊಳಿಸುವದಾಗಿರಬೇಕು. ಬುದ್ಧಿಶಾಲಿ ವ್ಯಕ್ತಿಯಾಗಿರುವಂತಹವನು, ಭಗವಂತನ ಪರಿಶುದ್ಧ ಸೇವೆಯಲ್ಲಿ ಶ್ರೀ ಕೃಷ್ಣನಿಂದ ಪ್ರತ್ಯೇಕವಾಗಿ ವಿಷಯಗಳನ್ನು ನೋಡುವಂಥ ಭ್ರಮೆಯಿಂದ ಚಿತ್ತವನ್ನು ನಿಯಂತ್ರಿಸಿಕೊಂಡಾಗ ಅಂಥ ನಿಯಂತ್ರಣದಿಂದಲೇ ಅವನಿಗೆ ಭಯರಾಹಿತ್ಯದ ಅನುಭವ ಉಂಟಾಗುತ್ತದೆ. ಒಬ್ಬರು ಲೌಕಿಕ ವಸ್ತುಗಳಿಂದ ದೂರವಾಗಿ ಶ್ರೀ ಕೃಷ್ಣ ನಾಮಸ್ಮರಣೆಯನ್ನು ಮಾಡಬೇಕು. ಆಕಾಶ, ಅಗ್ನಿ, ವಾಯು, ನೀರು ಅಥವಾ ಇನ್ನಾವುದೇ ವಸ್ತುವಾಗಿರಲಿ, ಅದನ್ನು ದೇವರಿಂದ ಪ್ರತ್ಯೇಕ ಎಂಬುದಾಗಿ ನೋಡಲೇ ಕೂಡದು. ಭಕ್ತಿ, ಭಗವಂತನನ್ನು ನೇರವಾಗಿ ಅನುಭವಿಸುವುದು ಹಾಗೂ ನಿರ್ವ್ಯಾಮೋಹ

ಈ ಮೂರು ಭಗವಂತನ ಆಶ್ರಯ ಪಡೆದವನಿಗೆ ಏಕಕಾಲದಲ್ಲಿ ದೊರೆಯುತ್ತವೆ. ಸತತವಾಗಿ ಶ್ರಮಿಸುವ ಮೂಲಕ ಭಗವಂತನ ಪದ್ಮಪಾದವನ್ನು ಆರಾಧಿಸುವ ಭಕ್ತಾದಿಗಳಿಗೆ ಅವಿಚ್ಛಿನ್ನ ಭಕ್ತಿ ನಿರ್ವ್ಯಾಮೋಹ ಹಾಗೂ ಪರಮಾತ್ಮನ ಬಗ್ಗೆ ಸಾಕ್ಷಾತ್ಕಾರವು ದೊರೆತು ಈ ರೀತಿಯಾಗಿ ಯಶಸ್ವಿಯಾದ ಭಕ್ತನೊಬ್ಬ ಪರಮ ಅಧ್ಯಾತ್ಮಿಕ ಶಾಂತಿಯನ್ನು ಸಾಧಿಸುತ್ತಾನೆ.

ಶ್ರೀ ಹವೀರನು ದೊರೆಯ ಎರಡನೆ ಪ್ರಶ್ನೆಯನ್ನು ಉತ್ತರಿಸಿದನು. ಅವನೆಂದನು: "ಅತ್ಯಂತ ಮುನ್ನಡೆ ಸಾಧಿಸಿರುವ ಭಕ್ತನು ಪ್ರತಿಯೊಂದರಲ್ಲೂ, ಆತ್ಮನ ಆತ್ಮವಾದ ಶ್ರೀ ಕೃಷ್ಣನನ್ನು ಕಾಣುತ್ತಾನೆ. ಪರಿಣಾಮವಾಗಿ ಅವನು ಪ್ರತಿಯೊಂದೂ ಭಗವಂತನೊಂದಿಗೆ ಸಂಬಂಧವನ್ನು ಹೊಂದಿದೆ ಎಂಬುದಾಗಿ ಭಾವಿಸಿ ಅಸ್ತಿತ್ವದಲ್ಲಿರುವ ಪ್ರತಿಯೊಂದೂ ಭಗವಂತನಲ್ಲಿ ಶಾಶ್ವತವಾಗಿ ಸ್ಥಾಪಿತಗೊಂಡಿದೆ ಎಂಬುದನ್ನು ಅರ್ಥಮಾಡಿಕೊಳ್ಳುತ್ತಾನೆ. ಮಧ್ಯಮ ಮಟ್ಟದ ಅಥವಾ ಎರಡನೇ ದರ್ಜೆಯ ಭಕ್ತನು, ಅಂದರೆ ಮಧ್ಯಮಾಧಿಕಾರಿಯು, ಭಗವಂತನಿಗೆ ತನ್ನ ಪ್ರೇಮವನ್ನು ಸಲ್ಲಿಸಿ, ಮೂಢರಿಗೆ ಕರುಣೆಯನ್ನು ತೋರಿ, ಭಗವಂತನ ಭಕ್ತರೆಲ್ಲರಿಗೂ ಮಿತ್ರನಾಗಿರುತ್ತಾನೆ. ದೇವಾಲಯದಲ್ಲಿ ವಿಗ್ರಹದ ಆರಾಧನೆಯಲ್ಲಿ ನಿಸ್ಪೃಹನಾಗಿ ತೊಡಗಿದ್ದರೂ ಇತರ ಭಕ್ತರು ಅಥವಾ ಜನಸಾಮಾನ್ಯರ ಬಗ್ಗೆ ಸರಿಯಾಗಿ ವರ್ತಿಸದವರನ್ನು ಪ್ರಕೃತ ಭಕ್ತನೆಂದು ಅಂದರೆ ಐಹಿಕ ಭಕ್ತನೆಂದು ಕರೆಯಲಾಗಿದ್ದು ಅವನು ಅತ್ಯಂತ ಕೆಳಗಿನ ಮಟ್ಟದವನು. ತನ್ನ ಇಂದ್ರಿಯಗಳನ್ನು ಅವುಗಳ ವಸ್ತುಗಳಲ್ಲಿ ತೊಡಗಿಸಿರುವಾಗಲೂ ಇಡೀ ಜಗತ್ತನ್ನು ಮಹಾ ವಿಷ್ಣುವಿನ ಶಕ್ತಿಯೆಂಬುದಾಗಿ ಕಾಣುವವನು ಹಿಗ್ಗುವುದೂ ಇಲ್ಲ ಕುಗ್ಗುವುದೂ ಇಲ್ಲ. ಮೇಲಿನವನೂ ಅಲ್ಲ. ಅವನು ಭಕ್ತರಲ್ಲೆಲ್ಲ ಅತ್ಯುನ್ನತನು. ಲೌಕಿಕ ಜಗತ್ತಿನೊಳಗೆ ಒಬ್ಬರ ಲೌಕಿಕ ಶರೀರ ಸದಾಕಾಲವೂ ಜನನ ಹಾಗೂ ನಾಶಕ್ಕೆ ತೆರೆದುಕೊಂಡಿರುತ್ತವೆ. ಇದರಂತೆಯೇ ಜೀವವಾಯು ಹಸಿವು ಬಾಯಾರಿಕೆಯಿಂದ ಕಾಡಲ್ಪಟ್ಟು, ಮನಸ್ಸು ಸದಾ ಧಾವಂತದಿಂದಿದ್ದು, ಬುದ್ಧಿ ಇಲ್ಲದವರು ಯಾವುದನ್ನು ಪಡೆಯಲಾಗುವುದಿಲ್ಲವೋ ಅದಕ್ಕಾಗಿ ಹಂಬಲಿಸುತ್ತ, ಲೌಕಿಕದಲ್ಲಿ ಸತತವಾಗಿ ಹೋರಾಡುವುದರಲ್ಲೇ ಅವರ ಶಕ್ತಿಯೆಲ್ಲ ವ್ಯಯವಾಗುತ್ತದೆ. ಲೌಕಿಕ ಅಸ್ತಿತ್ವದ ಅನಿವಾರ್ಯ ಸಂಕಷ್ಟಗಳ ಬಗ್ಗೆ ಭೀತಿಗೊಳಗಾಗದೆಯೇ ಅವುಗಳಿಂದ ದೂರವಾಗಿ ಉಳಿದು ಭಗವಂತನ ಪದ್ಮಪಾದವನ್ನು ನೆನೆಯುತ್ತಿರುವವನೇ ಭಗವತ ಪ್ರಧಾನ, ಅಂದರೆ ಭಗವಂತನ ಭಕ್ತರಲ್ಲೆಲ್ಲ ಮೇಲ್ಮಟ್ಟವನು. ಭಗವಂತನ ವಿಶೇಷ ಆಶ್ರಯವನ್ನು ಪಡೆದಿರುವವನು ಲೌಕಿಕ ಕಾಮವನ್ನು ಆಧರಿಸಿದ ಫಲಪ್ರದ ಚಟುವಟಿಕೆಗಳಿಂದ ಮುಕ್ತನಾಗುತ್ತಾನೆ. ಅಂಥ ಭಕ್ತನಿಗೆ ಭಾಗವೋತ್ತಮನೆಂದು ಹೆಸರು. ಒಬ್ಬ ಶ್ರೀಮಂತ ಕುಟುಂಬದಲ್ಲಿ ಹುಟ್ಟಿ ಉನ್ನತ ಸಾಮಾಜಿಕ ಸ್ಥಾನವನ್ನು ಅಲಂಕರಿಸಿದ್ದರೂ ತನ್ನ ಬಗ್ಗೆಯೇ ಹೆಮ್ಮೆತಾಳದಿದ್ದರೆ ಅವನೂ ಭಗವಂತನಿಗೆ ಪ್ರಿಯನಾದ ಭಕ್ತನಾಗುತ್ತಾನೆ. ಭಕ್ತನೊಬ್ಬ ಸ್ವಾರ್ಥವನ್ನು ಬಿಟ್ಟುಕೊಟ್ಟು ತಾನೂ ಜೀವಿಗಳಲ್ಲಿ ಒಬ್ಬನೆಂದು, ಭಗವಂತನ ಅವಿಭಾಜ್ಯರಲ್ಲಿ ಸೇರಿದ್ದೇನೆಂದು ತಿಳಿದಾಗ ಅವನು ಭಗವದ್ ಸೇವೆಯ ಅತ್ಯುನ್ನತ ಮಟ್ಟದಲ್ಲಿ ಇದ್ದಾನೆಂಬುದಾಗಿ ಹೇಳಬಹುದು. ಭಗವಂತನ ಪರಿಶುದ್ಧ ಭಕ್ತನು ಎಂದೂ

ಯಾವ ಪರಿಸ್ಥಿತಿಯಲ್ಲೂ ಪದಪ್ರಾದವನ್ನು ಮರೆಯಲಾರನು. ಕ್ಷಣ ಮಾತ್ರವೂ ಅವರ ಆಶ್ರಯ ಬಿಡದವನನ್ನು ವೈಷ್ಣವರಲ್ಲೇ ಅತ್ಯುತ್ತಮನೆಂದು ಪರಿಗಣಿಸಲಾಗುತ್ತದೆ. ಭಗವಂತನ ಪಾದದಲ್ಲಿ ಆಶ್ರಯ ಪಡೆದವನು ನೈಜ ಪ್ರೇಮದಿಂದ ಶ್ರೀ ಕೃಷ್ಣನ ಪವಿತ್ರ ನಾಮವನ್ನು ಸ್ಮರಿಸಿದಲ್ಲಿ ಅವನನ್ನು ಭಗವಂತನೆಂದೂ ಬಿಟ್ಟುಕೊಡಲಾರ. ತನ್ನ ಹೃದಯದ ಮೂಲಕ ಭಗವಂತನನ್ನು ಸೆರೆ ಹಿಡಿದ ಭಕ್ತನೇ ಭಾಗವತ ಪ್ರಧಾನನು.

ಮೂರನೆಯ ಪ್ರಶ್ನೆಯನ್ನು ಉತ್ತರಿಸುತ್ತ ಶ್ರೀ ಅಂತರಿಕ್ಷನು ಹೇಳಿದನು : "ಆತ್ಮಗಳನ್ನು ತಮ್ಮ ಬಯಕೆಗೆ ಅನುಗುಣವಾಗಿ ಇಂದ್ರಿಯ ತೃಪ್ತಿಯನ್ನು ಪಡೆಯಲೋಸಗ ಅಥವಾ ಅತ್ಯುನ್ನತ ಮುಕ್ತಿಯನ್ನು ಸಾಧಿಸಿಕೊಳ್ಳಲೋಸಗ ಭಗವಂತನು ಅವುಗಳನ್ನು ಉನ್ನತ ಅಥವಾ ಕೆಳಗಿನ ಸ್ತರಗಳಿಗೆ ಕಳಿಸುತ್ತಾನೆ. ಉನ್ನತ ಆತ್ಮವು ಸೃಷ್ಟಿಗೊಂಡ ಲೌಕಿಕ ಶರೀರಗಳನ್ನು ಪ್ರವೇಶಿಸಿ, ಮನಸ್ಸು ಬುದ್ಧಿಯನ್ನು ಆಕರ್ಷಿಸಿ ಅನಂತರ ಯಾವುದೇ ಕೃತಾರ್ಥತೆಗಾಗಿ ಮೂರು ವಿಧದ ಲೌಕಿಕ ಸ್ವಭಾವವನ್ನು ಸಮೀಪಿಸಲು ಅವರ ಆತ್ಮವನ್ನು ಪಕ್ವಗೊಳಿಸುತ್ತವೆ. ವ್ಯಕ್ತಿಗತ ಜೀವಿಯು, ತನ್ನ ಐಹಿಕ ಶರೀರದ ಒಡೆಯನು ಉನ್ನತ ಆತ್ಮರಿಂದ ಕ್ರಿಯಾಶೀಲಗೊಂಡಂಥ ಇಂದ್ರಿಯಗಳನ್ನು ಪ್ರಕೃತಿಯ ಮೂರು ವಿಧಗಳಲ್ಲಿ ರೂಪುಗೊಂಡವವನ್ನು ಅನುಭವಿಸಲು ಪ್ರಯತ್ನಿಸುತ್ತಾನೆ. ಹೀಗೆ ಅವನು ಸೃಷ್ಟಿಗೊಂಡ ಲೌಕಿಕ ಶರೀರವನ್ನು ಇನ್ನೂ ಜನಿಸದ ಶಾಶ್ವತ ಆತ್ಮವೆಂದು ತಪ್ಪಾಗಿ ತಿಳಿದು ಭಗವಂತನ ಭ್ರಮಾಶಕ್ತಿಗೆ ಸಿಕ್ಕಿ ತೊಳಲಾಡುತ್ತಾನೆ. ಅಂಥ ವ್ಯಕ್ತಿಯು ಆನಂತರ ಮತ್ತು ದುಃಖವೆಂಬುದಾಗಿ ಕರೆಯಲ್ಪಟ್ಟ ಸ್ಥಿತಿಗಳಲ್ಲಿ ಜಗತ್ತಿನಾದ್ಯಂತ ಅಲೆದಾಡುವ ಮೂಲಕ ತನ್ನ ಲೌಕಿಕ ಕ್ರಿಯೆಗಳ ಪರಿಣಾಮಗಳನ್ನು ಅನುಭವಿಸುತ್ತಾನೆ. ಆದ್ದರಿಂದಲೇ ಅವನಿಗೆ ಪುನರ್ಜನ್ಮ, ಪುನರ್ಮರಣಗಳು. ಸೃಷ್ಟಿಯಿಂದ ಪ್ರಾರಂಭಿಸಿ ನಿರ್ನಾಮ ಹೊಂದುವವರೆಗೆ ಅವನು ಅಪ್ರಶಸ್ತವಾದ ಒಂದರಿಂದ ಅಪ್ರಶಸ್ತವಾದ ಮತ್ತೊಂದಕ್ಕೆ ಅಲೆದಾಡುತ್ತ ತೊಳಲಾಡುತ್ತಾನೆ. ಐಹಿಕ ವಸ್ತುಗಳ ನಿರ್ನಾಮವು ಅನಿವಾರ್ಯವೆನ್ನಿಸಿದಾಗ ಭಗವಂತನ ಶಾಶ್ವತ ಕಾಲರೂಪದಲ್ಲಿ ವ್ಯಕ್ತಗೊಂಡ ವಿಶ್ವವನ್ನು ಹಿಂದಕ್ಕೆ ತೆಗೆದುಕೊಂಡಾಗ ಇಡೀ ವಿಶ್ವವು ಅವ್ಯಕ್ತಗೊಂಡು ಮಾಯವಾಗುತ್ತದೆ. ನಿರ್ನಾಮವು ಹತ್ತಿರವಾದಾಗ ಭೀಕರ ಕ್ಷಾಮ ಉಂಟಾಗುತ್ತದೆ. ಸಂಕರ್ಷಣನ ಬಾಯಿಂದ ಅಗ್ನಿಯು ಹೊರಡುತ್ತದೆ. ಪ್ರವಾಹಗಳು ಉಕ್ಕುತ್ತವೆ. ಆಗ ವೈರಾಜ ಬ್ರಹ್ಮನು ತನ್ನ ವಿಶ್ವ ಶರೀರವನ್ನು ಬಿಟ್ಟುಕೊಟ್ಟು ಅವ್ಯಕ್ತವಾದ ಪ್ರಕೃತಿಯನ್ನು ಪ್ರವೇಶಿಸುತ್ತಾನೆ. ಭೂಮಿ ನೀರಾಗಿ ಪರಿವರ್ತಿತಗೊಂಡು, ತನ್ನ ಸುವಾಸನೆಯನ್ನು ಕಳೆದುಕೊಳ್ಳುತ್ತದೆ. ಅಂತೆಯೇ ಎಲ್ಲವೂ ತಮ್ಮ ಗುಣಗಳಿಂದ ದೂರಾಗುತ್ತವೆ. ತಾನು ಭಗವಂತನ ಭ್ರಮಾಶಕ್ತಿಯನ್ನು ವಿವರಿಸಿರುವುದಾಗಿ ಶ್ರೀ ಅಂತರಿಕ್ಷನು ಹೇಳಿದನು. ಈ ಲೌಕಿಕ ಪ್ರಕೃತಿಯ ಮೂರು ವಿಧಾನಗಳನ್ನು ಒಳಗೊಂಡ ಭ್ರಮಾ ಸಾಮರ್ಥ್ಯವನ್ನು ಭಗವಂತನ ಶಕ್ತಿಯಿಂದ ದೊರಕಿಸಿಕೊಳ್ಳಲಾಗಿದ್ದು ಇದರ ಉದ್ದೇಶ ಲೌಕಿಕ ಜಗತ್ತಿನ ಸೃಷ್ಟಿ, ಸಲಹುವಿಕೆ ಹಾಗೂ ನಿರ್ನಾಮ.

ಶ್ರೀ ಪ್ರಬುದ್ಧನು ನಾಲ್ಕನೆಯ ಪ್ರಶ್ನೆಗೆ ಉತ್ತರಿಸಿದನು. ಅವನೆಂದನು : ಲೌಕಿಕ ವ್ಯಕ್ತಿಗಳು ತಮ್ಮ ಅಸಂತೋಷವನ್ನು ಹೋಗಲಾಡಿಸಿಕೊಳ್ಳಲು ನಿರಂತರವಾಗಿ

ಪ್ರಯತ್ನಿಸುತ್ತಾರಾದರೂ, ಕೊನೆಗೆ ತಮ್ಮ ಐಹಿಕ ಅಸೌಕರ್ಯಗಳನ್ನು ಹೆಚ್ಚಿಸಿಕೊಳ್ಳುತ್ತಾರೆ. ಐಶ್ವರ್ಯವು ಸಂಕಷ್ಟಗಳಿಗೆ ಮೂಲ. ಅದರಂತೆಯೇ ಮನೆ, ಮಕ್ಕಳು, ಬಂಧುಗಳು ಮುಂತಾದ ಕಾರ್ಯಗಳ ಫಲಗಳು ಮುಗಿದಾಗ ಒಬ್ಬರು ದುಃಖವನ್ನೇ ಅನುಭವಿಸ ಬೇಕಾದ್ದರಿಂದ ಸ್ವರ್ಗದಲ್ಲೂ ಅವರಿಗೆ ಸಂತೋಷ ಸಿಗಲಾರದು. ಆದ್ದರಿಂದ ನಿಜವಾದ ಸಂತೋಷ ಒಬ್ಬ ಆಧ್ಯಾತ್ಮಿಕ ಗುರುವಿನ ಮಾರ್ಗದರ್ಶನದಲ್ಲಿ ಧ್ಯಾನದ ಮೂಲಕ ಪದ್ಮಪಾದದಲ್ಲಿ ಉಳಿಯುವುದಾಗಿದೆ. ಧ್ಯಾನಮಗ್ನತೆಯನ್ನು ಹೆಚ್ಚಿಸಿಕೊಳ್ಳಲು ಒಬ್ಬರು ಪ್ರತ್ಯೇಕ ಸ್ಥಳದಲ್ಲಿ ಉಳಿದು ಸುಳ್ಳು ವ್ಯಾಮೋಹವನ್ನು ಬಿಟ್ಟುಕೊಡಬೇಕು.

ಭಗವಂತನ ವೈಭವಗಳನ್ನು ವಿವರಿಸುವಂಥ ಧಾರ್ಮಿಕ ಗ್ರಂಥಗಳನ್ನು ಅನುಸರಿಸಿರುವ ಮೂಲಕ ಒಬ್ಬರು ತಾವು ಜೀವನದಲ್ಲಿ ಎಲ್ಲ ಯಶಸ್ಸುಗಳನ್ನು ಪಡೆಯಬೇಕು ಎಂಬ ಬಲವಾದ ನಂಬಿಕೆಯನ್ನು ಇಟ್ಟುಕೊಳ್ಳಬೇಕು. ಅದೇ ಕಾಲಕ್ಕೆ ಒಬ್ಬರು ಇನ್ನಿತರ ಧರ್ಮಗ್ರಂಥಗಳನ್ನು ಹೀಯಾಳಿಸಲು ಹೋಗಬಾರದು. ಒಬ್ಬರು ತಮ್ಮ ಮನಸ್ಸು, ಮಾತು ಹಾಗೂ ಶಾರೀರಿಕ ಚಟುವಟಿಕೆಗಳನ್ನು ನಿಯಂತ್ರಿಸಿಕೊಂಡು ಸದಾ ಸತ್ಯವನ್ನು ನುಡಿಯಬೇಕು. ಒಬ್ಬರು ಭಗವಂತನನ್ನು ಕುರಿತು ಆಲಿಸಿ, ಅವನನ್ನು ವೈಭವೀಕರಿಸಿ, ಧ್ಯಾನಮಗ್ನರಾಗಬೇಕು. ನಾರಾಯಣನಿಗೆ ಸತತವಾಗಿ ಭಕ್ತಿಯನ್ನು ತೋರಿಸುವುದರಿಂದ ಭ್ರಮಾಶಕ್ತಿ, ಮಾಯೆ ಇಂಥ ದುಸ್ತರವಾದ ಸ್ಥಿತಿಯನ್ನು ದಾಟಲು ನೆರವಾಗುತ್ತವೆ.

ಶ್ರೀ ಪಿಪ್ಪಲಾಯನು ಹೇಳಿದನು : "ಭಗವಂತನು ಪ್ರತಿಯೊಂದು ಜೀವಿಯ ಶರೀರವನ್ನು ಉನ್ನತ ಆತ್ಮನಾಗಿ ಪ್ರವೇಶಿಸಿ ಒಬ್ಬನಲ್ಲಿ ಎಲ್ಲ ಅಂಶಗಳನ್ನೂ ಜೀವಂತಗೊಳಿಸುತ್ತಾನೆ. ಮನಸ್ಸಾಗಲೀ ಅಥವಾ ಇನ್ನಿತರ ಅವಯವಗಳಾಗಲಿ ಪರಮ ಸತ್ಯವನ್ನು ಭೇದಿಸಲಾಗದು. ಸತ್ಯವನ್ನು ಮಾತಿನ ಮೂಲಕ ವ್ಯಕ್ತಗೊಳಿಸುವ ಸಾಧ್ಯತೆಯನ್ನು ವೇದಗಳೇ ತಳ್ಳಿ ಹಾಕುವುದರಿಂದ ವೇದಗಳೂ ಅವನ್ನು ವಿವರಿಸಲಾಗದು. ಆದರೆ ಅಪರೋಕ್ಷವಾಗಿ ಪ್ರಸ್ತಾಪಿಸುವ ಮೂಲಕ ವೈದಿಕ ಶಬ್ದವು ಪರಮ ಸತ್ಯದ ಸಾಕ್ಷ್ಯವಾಗಿ ಕೆಲಸ ಮಾಡುತ್ತದೆ. ಏಕೆಂದರೆ ಅಂತಿಮ ಸತ್ಯದ ಅಸ್ತಿತ್ವವಿಲ್ಲದೆಯೇ ವೈದಿಕ ಸಾಹಿತ್ಯ ದಲ್ಲಿರುವ ವಿವಿಧ ನಿರ್ಬಂಧನೆಗಳಿಗೆ ಯಾವ ಅಂತಿಮ ಉದ್ದೇಶವೂ ಇರುವುದಿಲ್ಲ. ಎಲ್ಲ ಸೂಕ್ಷ್ಮ ಹಾಗೂ ಸಾಂದ್ರ ವ್ಯಕ್ತತೆಗಳಿಗೆ ಮೂಲವಾಗಿರುವ ಬ್ರಹ್ಮ ಏಕಕಾಲಕ್ಕೆ ಅವುಗಳಿಗೆ ಪರಿಪೂರ್ಣನಾಗಿ, ಅತಿಶಯವಾಗಿರುತ್ತಾನೆ. ಮೂಲದಲ್ಲಿ ಒಬ್ಬನು, ಪರಮ ಬ್ರಹ್ಮನ್ ಮೂರು ವಿಧಗಳಾಗಿ ಆಗಮಿಸಿ, ಲೌಕಿಕ ಪ್ರಕೃತಿಯ ಮೂರು ವಿಧಾನಗಳಾಗಿ ಅಂದರೆ ಒಳಿತು, ಕಾಮ ಹಾಗೂ ಮೌಢ್ಯವಾಗಿ ವ್ಯಕ್ತಗೊಳ್ಳುತ್ತವೆ. ಬ್ರಹ್ಮನ್ ಮುಂದೆ ಅದರ ಸಾಮರ್ಥ್ಯವನ್ನು ವಿಸ್ತರಿಸಿದಾಗ ಕ್ರಿಯೆಗೈಯ್ಯುವ ಶಕ್ತಿ ಹಾಗೂ ಪ್ರಜ್ಞೆಯ ಶಕ್ತಿ ಅಪಕ್ವಗೊಂಡ ಜೀವಿಗಳ ಗುರುತಿಸುವಿಕೆಯನ್ನು ಒಳಗೊಂಡಂಥ ಸುಳ್ಳು ಅಹಂಮಿಕೆಯೊಂದಿಗೆ ವ್ಯಕ್ತಗೊಳ್ಳುತ್ತಾನೆ. ಹೀಗೆ ಪರಮಾತ್ಮ ಉಪದೇವತೆಗಳ ವೈವಿಧ್ಯಮಯ ಸಾಮರ್ಥ್ಯಗಳನ್ನು ಜ್ಞಾನದ ಸಾಕಾರ ರೂಪವಾಗಿ ವಿಸ್ತರಣೆಗೊಳಿಸಿದಾಗ. ಲೌಕಿಕ ವಿಧಾನಗಳು, ಅವುಗಳ

ವಸ್ತುಗಳು ಹಾಗೂ ಸಂತಸ ಮತ್ತು ದುಃಖಗಳಂಥ ಲೌಕಿಕ ಚಟುವಟಿಕೆಯ ಪರಿಣಾಮಗಳು ವ್ಯಕ್ತಗೊಳ್ಳುತ್ತವೆ. ಈ ರೀತಿಯಾಗಿ ಲೌಕಿಕ ಜಗತ್ತು ಸೂಕ್ಷ್ಮಾಕಾರವಾಗಿ ಹಾಗೂ ಲೌಕಿಕ ಪರಿಣಾಮವಾಗಿ ಲೌಕಿಕ ವಸ್ತುಗಳಲ್ಲಿ ಕಾಣಿಸಿಕೊಳುತ್ತದೆ. ಇವೆಲ್ಲಕ್ಕೂ ಬ್ರಹ್ಮನ್ ಮೂಲ. ಅವನು ಅವಿನಾಶಿ. ಅವನು ಯೌವ್ವನ, ಮಧ್ಯ ವಯಸ್ಸು ಹಾಗೂ ಸಾವನ್ನು ಬಲ್ಲವನು. ಎಲ್ಲೆಡೆಯಲ್ಲೂ ಉಳಿಯುವ ಪರಿಶುದ್ಧ ಪ್ರಜ್ಞೆ, "ಸರ್ವವೂ ಬ್ರಹ್ಮಮಯ". ಚೈತನ್ಯಾತ್ಮವು ಎಲ್ಲ ಜೀವಗಳಲ್ಲಿ ಉಳಿದು, ಜೀವಿಗಳ ಎಲ್ಲ ಸಂತತಿಗಳಲ್ಲೂ ಬದಲಾಗದೆ ಉಳಿಯುತ್ತದೆ. ನಾವು ಗಾಢ ನಿದ್ರೆಯಲ್ಲಿರುವಾಗ ಎಲ್ಲ ಲೌಕಿಕ ಪ್ರಜ್ಞೆಗಳು, ಬುದ್ಧಿ ಹಾಗೂ ಹುಸಿ ಅಹಂ ಕೂಡ ಸ್ಥಗಿತಗೊಳ್ಳುತ್ತವೆ. ಆದರೆ ಒಬ್ಬರು ಎಚ್ಚರಗೊಂಡಾಗ ಆತ್ಮವು ಶಾಂತವಾಗಿ ನಿದ್ರಿಸುತ್ತಿದ್ದುದು ನೆನಪಾಗುತ್ತದೆ. ಒಬ್ಬರು ಪರಮಾತ್ಮನ ಭಕ್ತಿಪೂರ್ವಕ ಸೇವೆಯಲ್ಲಿ ತಮ್ಮನ್ನೇ ತೊಡಗಿಸಿಕೊಂಡಾಗ ಅವರೆಲ್ಲ ಅಪರಿಶುದ್ಧ ಆಸೆಗಳೂ ನಾಶಹೊಂದಬಹುದು. (ಉಪನಿಷತ್ತಿನಲ್ಲಿ ಉನ್ನತ ವಾಸ್ತವತೆಯನ್ನು ಸೂಚಿಸಲು ಬಳಸಲಾಗಿರುವುದು 'ಬ್ರಹ್ಮನ್' ಎಂಬ ಶಬ್ದ. ಶಂಕರಾಚಾರ್ಯರು ಬ್ರಹ್ಮನ್‌ನೆಂಬ ಪದ ಬೃಹತಿಯ ಉತ್ಪತ್ತಿಯೆನ್ನುತ್ತಾರೆ. ಮಾಧ್ವರಿಗೆ ಬ್ರಹ್ಮನ್‌ನು ವ್ಯಕ್ತಿಯಾಗಿದ್ದು ಅವನಲ್ಲಿ ಎಲ್ಲ ಗುಣಗಳೂ ಸಂಪೂರ್ಣವಾಗಿರುತ್ತವೆ - "ಬೃಹಂತೋಹಿ ಅಸ್ಮಿನ್ ಗುಣಃ". ಋಗ್ವೇದದಲ್ಲಿ ಬ್ರಹ್ಮನ್ ಶಬ್ದವನ್ನು "ಪವಿತ್ರ ಜ್ಞಾನ ಅಥವಾ ಉಚ್ಚಾರಣೆ, ಒಂದು ಶ್ಲೋಕ ಅಥವಾ ಮಂತ್ರ ಎಂಬ ಅರ್ಥದಲ್ಲಿ ಬಳಸಲಾಗಿದೆ. ಇದು ಅಧ್ಯಾತ್ಮ ಜ್ಞಾನದ ಅಭಿವ್ಯಕ್ತಿಯ ನೆಲೆಗಟ್ಟು. ಎಸ್. ರಾಧಾಕೃಷ್ಣನ್ ತಮ್ಮ "ದಿ ಪ್ರಿನ್ಸಿಪಲ್ ಉಪನಿಷತ್ಸ್" ಎಂಬ ಗ್ರಂಥದಲ್ಲಿ. ಪುಟ.೫೨)

ಶ್ರೀ ಅವಿರಹೋತ್ರನು ಆರನೆಯ ಪ್ರಶ್ನೆಯನ್ನು ಉತ್ತರಿಸಿದನು. ಅವನೆಂದನು : "ವೈದಿಕ ಸಾಹಿತ್ಯದಲ್ಲಿ ಸೂಚಿತ ಕರ್ತವ್ಯಗಳು, ಅಂಥ ಕರ್ತವ್ಯಗಳನ್ನು ನೆರವೇರಿಸದಿರುವುದು ಹಾಗೂ ಮಾಡಬಾರದಂಥ ಕರ್ಮಗಳು ಇವೆಲ್ಲವನ್ನೂ ವಿವರಿಸಲಾಗಿವೆ. ಅಧಿಕೃತ ವೈದಿಕ ಸಾಹಿತ್ಯವು ಭಗವಂತನ ಶಬ್ದರೂಪವಾಗಿರುವುದರಿಂದಲೇ ಅದು ಪರಿಪೂರ್ಣವಾದದ್ದು. ಸೂಚಿತ ಕರ್ತವ್ಯಗಳೆಂದರೆ ಕರ್ಮವಾಗಿದ್ದು, ಅವನ್ನು ಮಾಡದಿರುವುದು ಅಕರ್ಮ. ಪ್ರತಿಬಂಧಿಸಲ್ಪಟ್ಟಿರುವವು ವಿಕರ್ಮ. ವೈದಿಕ ಸೂತ್ರಗಳು ಪರೋಕ್ಷವಾಗಿ ಒಬ್ಬನನ್ನು ಧಾರ್ಮಿಕ ಚಟುವಟಿಕೆಗಳನ್ನು ಸೂಚಿಸುವ ಮೂಲಕ ಅಂತಿಮ ವಿಮುಕ್ತಿಯ ಹಾದಿಯತ್ತ ನಡೆಸುತ್ತದೆ. ಸೂಚಿತ ಕರ್ತವ್ಯಗಳನ್ನು ಭಗವಂತನಿಗೆ ಸಲ್ಲಿಸುವವನು ಲೌಕಿಕ ಕಾರ್ಯಕ್ಕೆ ಬಂಧನದಿಂದ ವಿಮುಕ್ತನಾಗುವ ಪರಶುದ್ಧತೆಯನ್ನು ಪಡೆದುಕೊಳ್ಳುತ್ತಾನೆ. ಒಬ್ಬರು ವೈದಿಕ ಸಾಹಿತ್ಯದಲ್ಲಿ ಸೂಚಿಸಲಾಗಿರುವ ನಿಯಮಗಳಿಗೆ ಅನುಸಾರವಾಗಿ ಭಗವಂತನನ್ನು ಪೂಜಿಸಬೇಕು. ತಮ್ಮನ್ನು ಶುದ್ಧೀಕರಿಸಿಕೊಂಡು, ಪ್ರಾಣಾಯಾಮ, ಭೂತ ಸಿದ್ಧಿ ಹಾಗೂ ಇತರ ಪ್ರಕ್ರಿಯೆಗಳ ಮೂಲಕ ಶರೀರವನ್ನು ಶುಚಿಗೊಳಿಸಿ, ರಕ್ಷಣಾ ಕವಚವನ್ನಾಗಿ ಪವಿತ್ರ ತಿಲಕವನ್ನು ದೇಹಕ್ಕೆ ಲೇಪಿಸಿಕೊಂಡು, ಒಬ್ಬರು ಭಗವದ್ ಮೂರ್ತಿಯ ಮುಂದೆ ಕೂತು ತಮ್ಮ ಚಿತ್ತವನ್ನು ಅವನಲ್ಲಿ ಕೇಂದ್ರೀಕರಿಸಿ ಸೂಕ್ತ ಮಂತ್ರಗಳಿಂದ ಆರಾಧಿಸಬೇಕು. ಅವನು ಭಗವಂತನ ಆಯುಧಗಳು

ಹಾಗೂ ಅವನ ವೈಯಕ್ತಿಕ ಅನುಚರರನ್ನು ಪೂಜಿಸಿ ಭಗವಂತನಿಗೆ ಪ್ರಾರ್ಥನೆಯನ್ನು ಸಲ್ಲಿಸಬೇಕು.

ಏಳನೇ ಪ್ರಶ್ನೆಯನ್ನು ಉತ್ತರಿಸುತ್ತಾ ಶ್ರೀ ಧ್ರುಮಿಳನು ಹೇಳಿದನು : "ಶ್ರೀಮನ್ನಾರಾಯಣನು ತನ್ನ ವಿಶ್ವ ಶರೀರವನ್ನು ತಾನೇ ಉತ್ಪಾದಿಸಿದ ಪಂಚಭೂತಗಳಿಂದ ಸೃಷ್ಟಿಸಿ ತನ್ನದೇ ಉಪಾಧಿಕ ಭಾಗದಿಂದ ವಿಶ್ವರೂಪವನ್ನು ಪ್ರವೇಶಿಸಿ ಪುರುಷನೆಂಬ ಹೆಸರಿನಿಂದೊಡಗೂಡಿದನು. ಅವನ ಪ್ರಜ್ಞೆಯು ಅಪಕ್ವಗೊಂಡ ಬುದ್ಧಿಯನ್ನು ಹೊಮ್ಮಿಸುತ್ತದೆ. ಅವನ ಬಲವಾದ ಉಸಿರಾಟವು ಶಾರೀರಿಕ ಹಾಗೂ ಆಘ್ರಾಣಿಸುವ ಶಕ್ತಿಯನ್ನು ಉಂಟು ಮಾಡುತ್ತದೆ. ಅವನ ಚಟುವಟಿಕೆಗಳು ಅವುಗಳನ್ನು ಸೃಷ್ಟಿಸುತ್ತವೆ. ಅವನೇ ಪ್ರಧಾನ ನಿರ್ದೇಶಕ. ಒಳಿತು, ಕಾಮ ಮತ್ತು ಮೌಢ್ಯದ ವಿಧಾನಗಳ ಮೂಲಕ ನಡೆಸುವವನು. ಅವನಿಂದಲೇ ಸೃಷ್ಟಿ, ಸಲಹುವಿಕೆ ಹಾಗೂ ನಿರ್ನಾಮ.

ಭಗವಂತನು ಬ್ರಹ್ಮ ರುದ್ರರನ್ನು ಸೃಷ್ಟಿಸಿ, ವಿಷ್ಣುವಾಗಿ ತನ್ನನ್ನೇ ಸಾಕಾರಗೊಳಿಸಿಕೊಂಡನು. ನರ ನಾರಾಯಣ ಋಷಿಯು ಧರ್ಮ ಹಾಗೂ ದಕ್ಷನ ಮಗಳಾದ ಮೂರ್ತಿಯರಿಗೆ ಜನಿಸಿದನು. ನಾರಾಯಣ ಋಷಿಯು ಭಗವಂತನಿಗೆ ಭಕ್ತಿಪೂರ್ವಕ ಸೇವೆಯನ್ನು ಕುರಿತು ತಿಳಿಸಿಕೊಟ್ಟನು. ಅವನು ಇಂದಿಗೂ ಜೀವಿಸಿದ್ದು ಅವನ ಪದ್ಮ ಪಾದವನ್ನು ಅತ್ಯುನ್ನತ ಋಷಿಮುನಿಗಳೂ ಪೂಜಿಸುತ್ತಾರೆ. ನಾರಾಯಣ ಋಷಿಯು ಪ್ರಬಲನಾಗುತ್ತಾನೆಂದು ಭಾವಿಸಿ ಭಗವಂತನ ಅತಿಶಯ ವೈಭವಗಳನ್ನು ತಿಳಿಯದ ಇಂದ್ರ ದೇವನು ಬದರೀಕಾಶ್ರಮದಲ್ಲಿರುವ ಭಗವಂತನ ನಿವಾಸಕ್ಕೆ ಮನ್ಮಥ ಹಾಗೂ ಅವನ ಅನುಯಾಯಿಗಳನ್ನು ಕಳಿಸಿದನು. ಮನ್ಮಥನು ಸುಂದರ ಸ್ತ್ರೀಯರ ಅಸದಳ ನೋಟಗಳ ರೂಪದಲ್ಲಿ ಬಾಣಗಳನ್ನು ಬಿಟ್ಟನು. ಆದರೆ ಭಗವಂತನು ಘಾಸಿಗೊಳ್ಳಲಿಲ್ಲ. ಅದಕ್ಕೆ ಪ್ರತಿಫಲವಾಗಿ ಅವನು ಕೊಡುಗೆಗಳನ್ನು ಕಳಿಸಿ ತನ್ನ ಆಶ್ರಮವನ್ನು ಪುನೀತಗೊಳಿಸುವಂತೆ ಅವರನ್ನು ಕೇಳಿದನು. ಇಂದ್ರನು ತಲೆಬಾಗಿಸಿ ಅವನನ್ನು ಕೊಂಡಾಡಿದನು. ಸಾಮಾನ್ಯವಾಗಿ ಉಪದೇವತೆಗಳು ತಮಗೆ ಸಲ್ಲಬೇಕಾದ ಪಾಲನ್ನು ಯಜ್ಞಗಳಿಂದ ಪಡೆಯದಿದ್ದರೆ ಅವರು ಅಡ್ಡಿಗಳನ್ನು ಉಂಟು ಮಾಡುತ್ತಾರಾದರೂ ಶ್ರೀಮನ್ನಾರಾಯಣನಿಗೆ ಉಪದೇವತೆಗಳನ್ನು ಹಿಮ್ಮೆಟ್ಟಿಸಲು ಸಾಧ್ಯವಾಯಿತು.

## ಊರ್ವಶಿ

ಉಪದೇವತೆಗಳು ಭಗವಂತನನ್ನು ಕೊಂಡಾಡುತ್ತಿದ್ದಾಗ, ಸರ್ವಶಕ್ತ ಭಗವಂತನು ತಟಕ್ಕನೆ ಅವರ ಕಣ್ಮುಂದೆ ಅತ್ಯಂತ ಸುಂದರಿಯರಾಗಿದ್ದು, ವೈಭವಯುತವಾಗಿ ಅಲಂಕರಿಸಿಕೊಂಡಿದ್ದು ಭಗವಂತನ ಸೇವೆಯಲ್ಲಿ ತೊಡಗಿದ್ದ ಸ್ತ್ರೀಯರನ್ನು ತಂದನು. ಉಪದೇವತೆಗಳು ಸ್ತಂಭೀಭೂತರಾಗಿ ಆ ಅದ್ಭುತ ಸ್ತ್ರೀಯರನ್ನು ಕಂಡು ಸಂಪೂರ್ಣ ಮಂಕಾದರು. ಭಗವಂತನು ಹೇಳಿದನು : "ನೀವು ದಯವಿಟ್ಟು ನಿಮಗೆ ಸೂಕ್ತವೆನ್ನಿಸಿದ ಒಬ್ಬರನ್ನು ಈ ಸ್ತ್ರೀಯರ ಮಧ್ಯದಿಂದ ಆಯ್ದುಕೊಳ್ಳಿ. ಆಕೆ ಸ್ವರ್ಗದ ಆಭರಣವಾಗುತ್ತಾಳೆ. "ಓಂ" ಎಂಬ ಪವಿತ್ರ ಅಕ್ಷರವನ್ನು ಪಠಿಸುತ್ತ ಉಪದೇವತೆಗಳ ಸೇವಕರು ಊರ್ವಶಿಯನ್ನು ಆರಿಸಿದರು. ಇಂದ್ರನೆಡೆಗೆ ಅವರು ಹಿಂತಿರುಗಿದಾಗ ಅವರು ನಾರಾಯಣ ಋಷಿಯ ಅದ್ಭುತ ಶಕ್ತಿಯನ್ನು ವಿವರಿಸಿದರು. ಇಂದ್ರನಿಗೆ ತಾನು ಮಾಡಿದ ತಪ್ಪಿನ

ಅರಿವಾಯಿತು. ಧ್ರುಮಿಳನು ಭಗವಂತನ ವಿವಿಧ ಅವತಾರಗಳು ಹಾಗೂ ವೈಭವಗಳನ್ನು ವಿವರಿಸಿದನು. ಅವನೆಂದನು: "ಭಗವಂತನ ವೈಭವಗಳು ಅನಿಯಮಿತವಾದವು".

ಎಂಟನೆಯ ಪ್ರಶ್ನೆಯನ್ನು ಉತ್ತರಿಸಿದ ಶ್ರೀ ಚಮಸನು ನಾಲ್ಕು ವರ್ಣಗಳು ವಿರಾಟ ಪುರುಷನ ವಿವಿಧ ಭಾಗಗಳಿಂದ ಬಂದವೆಂಬುದಾಗಿ ಹೇಳಿದನು. ಅವನು ಮುಂದೆ ಹೀಗೆ ಹೇಳಿದನು : "ಪುರುಷೋತ್ತಮನನ್ನು ಪೂಜಿಸದವರು ಹಾಗೂ ಅವನನ್ನು ಅನಾದರಿಸುವವರು ನರಕದ ಪಾತಾಳಕ್ಕೆ ಹೋಗುತ್ತಾರೆ. ಎಲೈ ದೊರೆಯೇ, ಭಗವಂತನ ನಾಮಸ್ಮರಣೆಯು ಎಟಕದಂಥವರ ಬಗ್ಗೆ ನೀನು ಕರುಣೆಯಿಡಬೇಕು. ವೈದಿಕ ಸೂತ್ರಗಳನ್ನು ತಪ್ಪಾಗಿ ವ್ಯಾಖ್ಯಾನಿಸುವ ಇವರು ಸದಾ ತಮ್ಮ ಕರ್ಮಗಳ ಫಲಗಳಲ್ಲಿ ಲೌಕಿಕ ಸಂತಸದಲ್ಲಿ ಮುಳುಗಿರುತ್ತ ಜನರಿಗೆ ಹಾಗೂ ಪ್ರಜೆಗಳಿಗೆ ಹಿಂಸೆ ಮಾಡುತ್ತಾರೆ. ಇಂದ್ರಿಯ ತೃಪ್ತಿಯಲ್ಲೇ ತೊಡಗಿರುವವರು ಒಂದು ದಿನ ತಾವು ಗಳಿಸಿದ್ದೆಲ್ಲವನ್ನೂ ತ್ಯಜಿಸಿ ನರಕಕ್ಕೆ ಹೋಗುತ್ತಾರೆ.

ಶ್ರೀ ಕರಭಜ್ಞ ಒಂಬತ್ತನೆಯ ಹಾಗೂ ಕೊನೆಯ ಪ್ರಶ್ನೆಯನ್ನು ಉತ್ತರಿಸಿದನು. ಅವನು ಹೀಗೆ ಹೇಳಿದನು : "ನಾಲ್ಕು ಯುಗಗಳಿದ್ದು ಅವುಗಳೆಂದರೆ ಕೃತ, ತ್ರೇತಾ, ದ್ವಾಪರಾ ಮತ್ತು ಕಲಿ. ಕೃತ ಯುಗದಲ್ಲಿ ಭಗವಂತನು ಶ್ವೇತವರ್ಣದಿಂದ ಪ್ರತಿನಿಧಿಸಲ್ಪಟ್ಟು, ನಾಲ್ಕು ಬಾಹುಗಳು, ಸುರುಳಿ ಸುತ್ತಿದ ಕೂದಲನ್ನು ಹೊಂದಿದ ಕೌಪೀನಧಾರಿಯಾಗಿ ತೋರಿಸಲ್ಪಡುತ್ತಾನೆ. ಅವನು ಯಜ್ಞೋಪವಿತವನ್ನು ಧರಿಸಿ, ದಂಡ ಮತ್ತು ಕಮಂಡಲವನ್ನು ಹಿಡಿದಿರುತ್ತಾನೆ. ಈ ಅವಧಿಯಲ್ಲಿ ಜನರು ಅವನನ್ನು ಚಿತ್ತಶುದ್ಧಿ, ಮನಸ್ಸಿನ ಸಮತೋಲನ, ಭಕ್ತಿ ಮತ್ತು ಧ್ಯಾನದಿಂದ ಆರಾಧಿಸುತ್ತಾರೆ. ಭಗವಂತನನ್ನು ಹಂಸ, ವೈಕುಂಠ, ಧರ್ಮ, ಯೋಗೀಶ್ವರ, ಈಶ್ವರ ಮತ್ತು ಪುರಷನೆಂದು ಕೊಂಡಾಡಲಾಗುತ್ತದೆ. ತ್ರೇತಾಯುಗದಲ್ಲಿ ಭಗವಂತನನ್ನು "ಕೆಂಪು" ಬಣ್ಣದಲ್ಲಿ ಕಾಣಲಾಗುತ್ತದೆ. ಅವನು ನಾಲ್ಕು ಬಾಹುಗಳುಳ್ಳವನು ಹಾಗೂ ಯಜ್ಞಪುರುಷನು. ಧಾರ್ಮಿಕ ಸೂತ್ರಗಳನ್ನು ಅನುಸರಿಸುವವರು ವೇದಘೋಷಣೆಯ ಮೂಲಕ ಅವನನ್ನು ಆರಾಧಿಸುತ್ತಾರೆ. ಅವನಿಗೆ ಇಲ್ಲಿ ವಿಷ್ಣು, ಯಜ್ಞ, ಸರ್ವದೇವ, ಉರುಕ್ರಮ, ವೃಷಿಕಪಿ, ಜಯಂತನೆಂಬ ಹೆಸರುಗಳು. ದ್ವಾಪರ ಯುಗದಲ್ಲಿ ಅವನು ಕಪ್ಪು ಬಣ್ಣ, ಹಳದಿ ಬಣ್ಣದ ವಸ್ತ್ರಧಾರಿ. ಶಸ್ತ್ರಗಳಿಂದ ಸುಸಜ್ಜಿತ. ಕೌಸ್ತುಭಧಾರಿ. ವೈಜಯಂತೀ ಮಾಲೆಗಳಿಂದ ಅಲಂಕೃತನು. ಅವನ ಚಿಹ್ನೆಯು ಶ್ರೀವತ್ಸ. ಜನರು ಅವನನ್ನು "ಛತ್ರ ಚಾಮರಗಳಿಂದ" ಪೂಜಿಸಿ ಆಗಮ ಮತ್ತು ಯಮ ಸೂತ್ರಗಳಿಗೆ ಅನುಗುಣವಾಗಿ ಆರಾಧಿಸುತ್ತಾರೆ. ಕಲಿಯುಗದಲ್ಲಿ ವಿವಿಧ ವರ್ಣಗಳವರು ಮಂತ್ರಗಳನ್ನು ಪಠಿಸುತ್ತ ಅವನನ್ನು ಆರಾಧಿಸುತ್ತಾರೆ. ಅವನ ನಾಮಸ್ಮರಣೆಯ ಮೂಲಕ ಅವರು ಶಾಂತಿಯನ್ನು ಪಡೆಯುತ್ತಾರೆ. ಭಕ್ತಿಯೇ ಅತ್ಯುನ್ನತ ಮಾರ್ಗ.

ನಾರದ ಮುನಿಯು ವಸುದೇವನಿಗೆ ನಿಮ್ಮಿ ದೊರೆಯು ಒಂಬತ್ತು ಯೋಗೀಂದ್ರರು ನೀಡಿದ ಪ್ರವಚನಗಳಿಂದ ಮುದಗೊಂಡು ಅವರನ್ನು ಪೂಜಿಸಿದನು ಎಂಬುದಾಗಿ ತಿಳಿಸಿದನು. ಎಲ್ಲ ಜನರ ಸಮ್ಮುಖದಲ್ಲಿ ನಿಮ್ಮಿ ದೊರೆಯು ಮೋಕ್ಷವನ್ನು ಪಡೆದನು. ಮುನಿಯು ವಸುದೇವನಿಗೆ ಅವನೂ ಯಶಸ್ಸನ್ನು ಗಳಿಸಲು ಭಾಗವತ ಧರ್ಮವನ್ನು ಅನುಸರಿಸಬೇಕೆಂದನು. ಭಗವಂತನೇ ಅವನಲ್ಲಿ ಜನಿಸಿದ್ದು ಈಗಾಗಲೇ ಅವರು

ಆಹ್ಲಾದತೆಯನ್ನು ಪಡೆದಿದ್ದಾರೆ ಎಂದನು. ಇದನ್ನು ಕೇಳಿದ ವಸುದೇವ ದೇವಕಿಯರು ಆನಂದಗೊಂಡರು.

ಶ್ರೀ ಶುಕಾಚಾರ್ಯರೆಂದರು. ಒಂದು ದಿನ ಉಪದೇವತೆಗಳು, ಆದಿತ್ಯರು, ವಸುಗಳು, ಅಶ್ವಿನಿಯರು ಹಾಗೂ ಇತರರೊಂದಿಗೆ ಬ್ರಹ್ಮದೇವನು ಶ್ರೀ ಕೃಷ್ಣನನ್ನು ಕಾಣಲು ದ್ವಾರಕೆಗೆ ಬಂದನು. ಮಾನವ ಜೀವಿಗಳ ಆನಂದವಾದ ಭಗವಂತನು ಜಗತ್ತಿನಾದ್ಯಂತ ತನ್ನ ವೈಭವವನ್ನು ಹಾಕಿರುವಂಥ, ಯಾವ ವೈಭವವು ಎಲ್ಲ ಜೀವಿಗಳ ಅಪರಿಶುದ್ಧತೆಗಳನ್ನೂ ಹೋಗಲಾಡಿಸುತ್ತಾರೋ ಅಂಥ ಶರೀರದಲ್ಲಿದ್ದನು. ಅವರು ಭಗವಂತನನ್ನು ಕೊಂಡಾಡಿದರು. ಬ್ರಹ್ಮನೆಂದನು : "ಎಲೈ ಭಗವಂತನೇ, ನಾವು ಈ ಮೊದಲು ಭೂಮಿಯ ಹೊರೆಯನ್ನು ಹೋಗಲಾಡಿಸುವಂತೆ ನಿನ್ನನ್ನು ಪ್ರಾರ್ಥಿಸಿದ್ದೆವು. ನಾವು ಆಶಿಸಿದಂತೆಯೇ ನೀನು ಅದನ್ನು ನೆರವೇರಿಸಿದ್ದೀಯೆ. ಸತ್ಯಪರಿಪಾಲಕರಾದವರ ಸದ್ಗುಣಿಗಳ ಕೈಲಿ ಧರ್ಮವನ್ನು ಕೊಟ್ಟಿದ್ದೀಯೆ. ಎಲ್ಲರ ಅಪರಿಶುದ್ಧತೆಯನ್ನು ಹೋಗಲಾಡಿಸುವಂಥ ನಿನ್ನ ಖ್ಯಾತಿಯನ್ನು ಎಲ್ಲ ದಿಕ್ಕುಗಳಲ್ಲೂ ಹರಡುವಂಥವರು ಅವರು. ಎಲೈ ದೇವನೇ, ಈಗಾಗಲೇ ಒಂದು ನೂರ ಇಪ್ಪತ್ತೈದು ವರ್ಷಗಳು ಕಳೆದು ಹೋಗಿದ್ದು ನೀನಿನ್ನೂ ಯದುವಂಶದಲ್ಲೇ ಸಾಕಾರರೂಪನಾಗಿದ್ದೀಯೆ".

ಭಗವಂತನು ಅದಕ್ಕೆ ಉತ್ತರವಾಗಿ ತಾನು ಕೈಗೊಂಡ ಕಾರ್ಯವು ಪೂರ್ಣ ಗೊಂಡಿರುವುದರಿಂದ ತಾನು ತನ್ನ ಅವತಾರವನ್ನು ಮುಕ್ತಾಯಗೊಳಿಸಲು ಈಗಾಗಲೇ ನಿರ್ಧರಿಸಿದ್ದೇನೆ ಎಂಬುದಾಗಿ ತಿಳಿಸಿದನು. ಶಕ್ತಿ ಸಾಮರ್ಥ್ಯಗಳಿಂದ ದೊರಕಿದ ವೈಭವಗಳಿಂದಾಗಿ ಪ್ರಖ್ಯಾತ ಯದು ಕುಲವು ಅಹಂಕಾರವನ್ನು ಹೊಂದಿದಂಥದ್ದಾಗಿತ್ತು ಎಂಬುದಾಗಿ ಅವನು ಹೇಳಿದನು. ಆದ್ದರಿಂದ ಅವನು ಆ ಕುಲವನ್ನು ನಾಶಪಡಿಸಲು ನಿರ್ಧರಿಸಿದ್ದು ಅದು ಆಗದಿದ್ದರೆ ಅವರೆಲ್ಲರೂ ಮುಂದುವರೆದು ಜಗತ್ತನ್ನು ಅಂತ್ಯಗೊಳಿಸುತ್ತಾರೆ. ಭಗವಂತನೆಂದನು : "ಎಲೈ ಬ್ರಹ್ಮನೇ, ಈಗ ಈ ವಿನಾಶದ ಕಾರ್ಯವು ಬ್ರಾಹ್ಮಣನ ಶಾಪದಿಂದ ಪ್ರಾರಂಭವಾಗಿದ್ದು, ನಾನು ಪರಿಶುದ್ಧನಾಗಿ ಇವೆಲ್ಲದರ ಕೊನೆಯಲ್ಲಿ ನನ್ನ ಆವಾಸಸ್ಥಾನಕ್ಕೆ ಹಿಂತಿರುಗುತ್ತೇನೆ". ಇದನ್ನು ಕೇಳಿದ ಬ್ರಹ್ಮನು ಭಗವಂತನಿಗೆ ನಮಸ್ಕರಿಸಿ ತನ್ನ ವಾಸಕ್ಕೆ ಇನ್ನಿತರರೊಂದಿಗೆ ಹಿಂತಿರುಗಿದನು.

ಭಗವಂತನು ದ್ವಾರಕೆಯ ಮೇಲೆ ಎರಗಲಿರುವ ಭೀಕರ ಪರಿಣಾಮಗಳನ್ನು ಅರಿತವನಾಗಿ ಯದು ಶ್ರೇಷ್ಠರನ್ನು ಉದ್ದೇಶಿಸಿ ಮಾತನಾಡಿದನು. ಅವನು ಬ್ರಾಹ್ಮಣರ ಶಾಪವನ್ನು ಸ್ಮರಿಸಿ ಹಿರಿಯರಿಗೆ ದ್ವಾರಕದಲ್ಲಿ ಉಳಿಯಬಾರದೆಂದು ತಿಳಿಸಿದನು. ಯದುಗಳು ಹೊರಡಲು ಸಿದ್ಧರಾಗಿ ಅಷ್ಟು ಹೊತ್ತಿಗಾಗಲೇ ತಮ್ಮ ರಥದ ಬಳಿ ಬಂದರು. ಇದನ್ನು ಕಂಡ ಹಾಗೂ ಭಗವಂತನ ಸಂದೇಶವನ್ನು ಕೇಳಿದ ಭಗವಂತನ ಪರಮ ಭಕ್ತನಾದ ಉದ್ಧವನು ಮುಂದಾಗಬಹುದಾದ ಘಟನೆಗಳನ್ನು ಅರಿತು ಕೈಮುಗಿದುಕೊಂಡು ಭಗವಂತನನ್ನು ಸಮೀಪಿಸಿದನು. ತಾನು ಕ್ಷಣ ಮಾತ್ರವೂ ಅವನನ್ನು ಬಿಟ್ಟಿರಲಾರೆ ಎಂಬುದಾಗಿ ಭಗವಂತನಿಗೆ ಹೇಳಿದನು. ಹೀಗೆ ವಿನಂತಿಸಿಕೊಂಡಾಗ ಭಗವಂತನು

ತಾನು ಬ್ರಹ್ಮನ ಕೋರಿಕೆಯ ಮೇರೆಗೆ ತನ್ನ ಭಾಗಶಃ ವ್ಯಕ್ತಿತ್ವದಿಂದ ಅವತರಿಸಿ ದೇವತೆಗಳ ಕಾರ್ಯವನ್ನು ಪೂರೈಸಿದ್ದು ಸ್ವರ್ಗಕ್ಕೆ ವಾಪಸ್ಸಾಗಲು ಬಯಸುತ್ತೇನೆ ಎಂಬುದಾಗಿ ಹೇಳಿದನು. ಯದುಕುಲವು ಶಾಪದಿಂದ ನಾಶವಾಗಿದ್ದು ಅದರ ಸಂಪೂರ್ಣ ನಿರ್ನಾಮವು ಪರಸ್ಪರ ಕಲಹಗಳಿಂದ ಸಂಭವಿಸಿದ್ದು ಏಳನೆಯ ದಿನ ಸಮುದ್ರವು ದ್ವಾರಕಾ ನಗರಿಯನ್ನು ಮುಳುಗಿಸುತ್ತದೆ ಎಂದನು. ಭಗವಂತನು ಉದ್ಧವನಿಗೆ ದ್ವಾರಕಾ ನಗರಿಯು ತನ್ನೆಲ್ಲ ಒಳಿತನ್ನೂ ಕಳೆದುಕೊಂಡು ಕಲಿಯು ಅದನ್ನು ಆಕ್ರಮಿಸಿಕೊಳ್ಳುತ್ತಾನೆ ಎಂದನು. ತನ್ನ ನಿರ್ಗಮನದ ನಂತರ ಭೂಮಿಯ ಮೇಲೆ ಉಳಿಯಬಾರದೆಂದು ಅವನು ಉದ್ಧವನಿಗೆ ಬುದ್ಧಿವಾದ ಹೇಳಿದನು. "ಏಕೆಂದರೆ ಕಬ್ಬಿಣ ಯುಗದಲ್ಲಿ ಮಾನವನು ಕೆಡುಕಿನ ವ್ಯಸನಿಯಾಗಿರುತ್ತಾನೆ". ಅವನೆಂದನು, ತಮ್ಮ ಬಂಧು ಬಾಂಧವರಿಗೆ ಪ್ರೀತಿಯನ್ನು ನೀಡುತ್ತಾ, ಎಲ್ಲವನ್ನೂ ತ್ಯಜಿಸಿ, ದೃಷ್ಟಿಯ ಸಮತೋಲನವನ್ನು ಕಾಯ್ದುಕೊಂಡು, ನನ್ನ ಮೇಲೆ ಸಂಪೂರ್ಣವಾಗಿ ಮನಸ್ಸಿಟ್ಟು ಜಗತ್ತಿನೆಲ್ಲೆಡೆ ಓಡಾಡುತ್ತಿರು."

ಶ್ರೀ ಕೃಷ್ಣನು ಉದ್ಧವನಿಗೆ ಮನಸ್ಸು, ಬುದ್ಧಿಗಳನ್ನು ಸ್ಥಿಮಿತದಲ್ಲಿ ಇಟ್ಟುಕೊಳ್ಳಬೇಕೆಂದೂ, "ನೀನು ನನ್ನಲ್ಲಿ ಉಳಿಯಬೇಕೆಂದೂ" ಉದ್ದೇಶಿಸಿದನು. ಅವನೆಂದನು : "ಬುದ್ಧಿಶಕ್ತಿ ಮತ್ತು ಸಾಕ್ಷಾತ್ಕಾರದಿಂದಾಗಿ ಎಲ್ಲ ಜೀವಿಗಳೊಂದಿಗೆ ನಿರ್ಧರಿತ ಉದ್ದೇಶಕ್ಕಾಗಿ ಗೆಳೆಯರಾಗಿರುವವರಿಗೆ ಹಾಗೂ ನಾನಲ್ಲದೆ ಜಗತ್ತೇ ನನ್ನ ಸ್ವರೂಪವೇ ಎಂದು ಭಾವಿಸಿರುವವರಿಗೆ ಯಾವ ದುಃಖವೂ ಬರುವುದಿಲ್ಲ".

ಈ ರೀತಿ ಆದೇಶಿಸಲ್ಪಟ್ಟ ಉದ್ಧವನು, ಸತ್ಯವನ್ನು ಅರಿಯಲು ಆಸೆಯುಳ್ಳವನಾಗಿ ಭಗವಂತನಿಗೆ ನಮಸ್ಕರಿಸಿ ವಿಮುಕ್ತಿಗಾಗಿ ತಾನು ಸನ್ಯಾಸವನ್ನು ಕೈಗೊಳ್ಳಬೇಕೇ ಅಥವಾ ಪರಿವ್ರಾಜಕನಾಗಬೇಕೇ ಎಂಬುದಾಗಿ ತಿಳಿಸುವಂತೆ ಅವನನ್ನು ಕೇಳಿದನು. ಉದ್ಧವನಿಗೆ ಲೌಕಿಕ ಜನರಿಗೆ ಪರಿತ್ಯಕ್ತತೆ ಕಷ್ಟಕರವಾದ್ದು ಎನ್ನಿಸಿತು. ತನಗೆ ಭೋದಿಸಲಾದದ್ದನ್ನು ವಿಧೇಯನಾಗಿ ಪಾಲಿಸುವ ಬಗ್ಗೆ ಸೂಚನೆಗಳನ್ನು ನೀಡಬೇಕೆಂದು ಅವನು ಬೇಡಿದನು

ಶ್ರೀ ಕೃಷ್ಣನು ಅವನಿಗೆ ಸ್ವಯಂ ತಿಳಿವಳಿಕೆಗಾಗಿ ಶ್ರಮಿಸಬೇಕೆಂದು ಇದಕ್ಕೆ ಕಾರಣ ಅದು ನೇರ ಗ್ರಹಿಕೆ ಹಾಗೂ ಜಿಜ್ಞಾಸೆಗಳ ಮೂಲಕ ಮುನ್ನಡೆಸುವುದು. "ಸಮಚಿತ್ತವನ್ನು ಹೊಂದಿ, ಜ್ಞಾನ ಹಾಗೂ ಯೋಗ ನಿಷ್ಣಾತರಾಗಿರುವವರು ಮಾನವ ಶರೀರದಲ್ಲಿ ಪೂರ್ಣವಾಗಿ ವ್ಯಕ್ತಗೊಂಡು ಎಲ್ಲ ಶಕ್ತಿಗಳನ್ನೂ ಪಡೆದಂಥ ರೂಪದಲ್ಲಿ ಕಾಣಬಲ್ಲರು."

(ಸಂಪೂರ್ಣ ವ್ಯಕ್ತಗೊಳ್ಳುವುದು - ಶ್ರುತಿಯ ಉಲ್ಲೇಖವೊಂದರಲ್ಲಿ ಪ್ರತಿಧ್ವನಿಸಿರುವುದು - "ಮಾನವ ಶರೀರದಲ್ಲಿ ಆತ್ಮನ್‌ನೇ ಅತ್ಯಂತ ವ್ಯಕ್ತಗೊಂಡವನು. ಅಲ್ಲಿ, ಅದು ಪ್ರಕಾಶಮಯತೆಯಿಂದ ಕೂಡಿದ್ದಾಗಿ ಸೂಕ್ತ ಮಾತುಗಳನ್ನಾಡಿ, ಅಂಗೀಕೃತ ವರ್ತನೆಯನ್ನು ಕಾಣುತ್ತೇವೆ; ಪ್ರಸ್ತುತ ಕರ್ತವ್ಯಗಳನ್ನು, ಸ್ವರ್ಗ ನರಕಗಳನ್ನು ತಿಳಿಯುತ್ತದೆ; ಈ ಅಶಾಶ್ವತ ಚೌಕಟ್ಟಿನ ಮೂಲಕ ಅಮರತ್ವವನ್ನು ಭಯಸುತ್ತವೆ; ಹೀಗೇ ಇದು ಕೊಡುಗೆಯನ್ನು ಪಡೆದಂಥದ್ದು. ಕೆಳಸ್ತರದ ಪ್ರಾಣಿಗಳು ಹಸಿವು ಹಾಗೂ ಬಾಯಾರಿಕೆಯನ್ನು ಮಾತ್ರ ಹೊಂದಿರುತ್ತದೆ).

ಭಗವಂತನು ತನಗೆ ಮಾನವ ಶರೀರವೇ ಅತ್ಯಂತ ಪ್ರಿಯವಾದದ್ದು ಎಂದು ಹೇಳಿದನು. ಇಂದ್ರಿಯಗಳನ್ನು ನಿಯಂತ್ರಿಸಿಕೊಂಡಿರುವವರು ಬುದ್ಧಿ ಇತ್ಯಾದಿಯಾಗಿ ತಾವು ಪಡೆದುಕೊಂಡಂಥ ಹಾಗೂ ಅವುಗಳ ಸೂಚನೆಯನ್ವಯದ ಜಿಜ್ಞಾಸೆಗಳ ಮೂಲಕ ಹೊಂದಿದ ಸದ್ಗುಣಗಳಿಂದ ತನ್ನನ್ನು ಹುಡುಕುತ್ತಾರೆ. (ಸದ್ಗುಣಗಳು, ಮುಂತಾದವು - ಈ ವಿಧಾನವನ್ನು ಅರ್ಥಪತ್ತಿಯೆಂದು ಕರೆಯಲಾಗಿದೆ. ಬುದ್ಧಿಶಕ್ತಿಯನ್ನು ಸ್ವಯಂ ಪ್ರಕಾಶತೆಯನ್ನು ಹೊಂದಿದಾಗ ಮಾತ್ರ ಸಕ್ರಿಯಗೊಳಿಸಲು ಸಾಧ್ಯವಾಗುತ್ತದೆ. ಇದೇ ಆತ್ಮನ್) (ಇಲ್ಲಿ ಆತ್ಮನ್ ಎಂಬ ಪದವು "ಉಸಿರಾಡುವುದು" ಎಂಬ ಅರ್ಥದಲ್ಲಿ ಬಳಸಲ್ಪಟ್ಟಿದೆ. ಇದು ಜೀವದ ಉಸಿರು. ಕ್ರಮೇಣ ಈ ಅರ್ಥವನ್ನು ಜೀವ, ಆತ್ಮ ಹಾಗೂ ವ್ಯಕ್ತಿಯ ಸ್ವಯಂ ಅಥವಾ ಅತ್ಯವಶ್ಯಕತೆಯನ್ನು ಸೂಚಿಸಲು ಬಳಸಲಾಗುತ್ತದೆ. ಶಂಕರಾಚಾರ್ಯರು ಆತ್ಮನ್‌ವೆಂಬ ಶಬ್ದವನ್ನು "ಪಡೆದುಕೊಳ್ಳುವುದು" ತಿನ್ನುವುದು ಅಥವಾ ಅನುಭವಿಸುವುದು ಇಲ್ಲವೇ ಪಸರಿಸುವುದು ಎಂಬ ಅರ್ಥದ ಮೂಲದಿಂದ ಬಳಸುತ್ತಾರೆ. ಆತ್ಮನ್‌ವು ಮಾನವ ಜೀವನದ ತತ್ವ, ಅವನನ್ನು ಸುತ್ತುವರಿದಿರುವ ಆತ್ಮನ್, ಅವನ ಉಸಿರು, ಪ್ರಾಣ, ಅವನ ಬುದ್ಧಿ ಮತ್ತು ಅವನ್ನೆಲ್ಲ ಮೀರಿದುದು. "ಅಜೋ ಭಗಂ" ಸಂಭವಿಸಿದಾಗ ಉಳಿಯುವುದು ಆತ್ಮನ್‌ವೊಂದೇ. ಜಗತ್ತಿನ ಮುನ್ನಡೆ ಹಾಗೂ ಚಟುವಟಿಕೆಯ ತಳಹದಿಯಲ್ಲಿ ಬ್ರಹ್ಮನ್ ಶಾಶ್ವತವಾಗಿ ಉಳಿದಿರುವಂತೆಯೇ ಆತ್ಮನ್ ವ್ಯಕ್ತಿಯ ಪ್ರಜ್ಞಾಪೂರ್ವಕ ಶಕ್ತಿಯ ಕೆಳಗಿರುವಂಥ ವಾಸ್ತವತೆ. - ಮಾನವನ ಆತ್ಮನ್‌ದ ತಳಹದಿ, ಚಿಂತನೆ ಹಾಗೂ ಸೆಣಸಾಟ ಈ ಹಂತದ ಕೆಳಗಡೆ ನಮ್ಮ ಜೀವನಕ್ಕೆ ಕೊನೆಯದಾದ ಒಂದು ಆಳವಿದೆ. ಆತ್ಮನ್ ಜೀವದ, ವ್ಯಕ್ತಿಯ ಅಹಂಮಿಕೆಯ ಅದ್ಭುತ ವಾಸ್ತವತೆ - "ದಿ ಪ್ರಿನ್ಸಿಪಲ್ಸ್ ಆಫ್ ಉಪನಿಷತ್ಸ್ "- ಎಸ್. ರಾಧಾಕೃಷ್ಣನ್ ಪುಟ 73 ಮತ್ತು 74)

ಬುದ್ಧಿ, ಇತ್ಯಾದಿ ಜ್ಞಾನದ ಉಪಕರಣಗಳಾಗಿದ್ದು ಅದನ್ನು ಬಳಸಲು ತಿಳಿವಳಿಕೆಯ ಮಾಧ್ಯಮವೊಂದರ ಅಗತ್ಯವಿದೆ. ಈ ಪರಿಷ್ಕಾರಗಳು ಕೇವಲ ನಾವು ಶ್ರುತಿಯಿಂದ ಆಲಿಸುವ ಆತ್ಮನನ್ನು ಕುರಿತಾದ ಅಭಿಪ್ರಾಯಗಳನ್ನು ಸ್ಪಷ್ಟಪಡಿಸುವುದಾಗಿದೆ ಎಂಬುದನ್ನು ನಾವು ತಿಳಿಯಬೇಕು.

ಯದು ಹಾಗೂ ಅವಧೂತನೊಬ್ಬನ ಮಧ್ಯೆ ನಡೆದ ಸಂವಾದ ಅತ್ಯಂತ ಆಸಕ್ತಿಯುತ ಹಾಗೂ ಪ್ರಸ್ತುತವಾದದ್ದು. ಯದುವು ಯಯಾತಿಯ ಮಗ ಹಾಗೂ ಚಂದ್ರ ವಂಶದ ಪ್ರಬಲ ದೊರೆ. ಅವಧೂತನು ಬಾಹ್ಯವಾಗಿ ಯಾವ ಚಿಹ್ನೆಯನ್ನು ಧರಿಸದೆ ಹಾಗೂ ಎಲ್ಲದರಲ್ಲಿಯೂ ಸಮಾನಭಾವವನ್ನು ಹೊಂದಿದವನಾದ್ದರಿಂದ ಜೀವನದ ಸಾಮಾನ್ಯ ಕರ್ತವ್ಯಗಳಿಂದ ಮೇಲಕ್ಕೆ ಎತ್ತಲ್ಪಟ್ಟ ವಿಮುಕ್ತ ಜೀವಿ.

ಯದುವು ಅವಧೂತನನ್ನು ಎಲ್ಲದರ ಬಗ್ಗೆ ವ್ಯಾಮೋಹವನ್ನು ತ್ಯಜಿಸಿ ಮಗುವಿನಂತೆ ನಿರ್ಭಯವಾಗಿ ಓಡಾಡುವುದು ಅವನಿಗೆ ಹೇಗೆ ಸಾಧ್ಯವಾಯಿತು ಎಂಬುದಾಗಿ ಕೇಳಿದನು. ಜನರು ಐಶ್ವರ್ಯ, ಆಸೆ, ಸಮೃದ್ಧಿ ಇದಕ್ಕೆ ಶ್ರಮಿಸುತ್ತಿರುವಾಗ ಅವಧೂತನು ಬುದ್ಧಿಶಾಲಿಯಾಗಿದ್ದರೂ ಮೂರ್ಖನಂತೆ ಅಲೆದಾಡುವುದೇಕೆ ಎಂಬುದಾಗಿ ರಾಜನು ಅವನನ್ನು ವಿಚಾರಿಸಿದನು. ಯದುವೆಂದನು: "ನೀನು ನಿನ್ನ ಸ್ವಯಂದಿಂದ ಮಾತ್ರ,

ಇಂದ್ರಿಯಗಳ ಸೋಂಕಿಲ್ಲದೆಯೇ, ಏಕಾಕಿ ಜೀವನವನ್ನು ನಡೆಸುತ್ತ ಆಹ್ಲಾದಕರವಾಗಿ ಇರುವುದು ಹೇಗೆ ಸಾಧ್ಯ ಎಂಬುದನ್ನು ದಯವಿಟ್ಟು ನಮಗೆ ತಿಳಿಸು."

ಅವಧೂತನು ಉತ್ತರಿಸಿ ತನಗೆ ಭೂಮಿ, ಆಕಾಶ, ನೀರು, ಬೆಂಕಿ, ಪಕ್ಷಿಗಳು ಹಾಗೂ ಪ್ರಾಣಿಗಳಂಥ ಇಪ್ಪತ್ನಾಲ್ಕು ಶಿಕ್ಷಕರಿದ್ದು ಅವರ ಮೂಲಕ ತಾನು ಪಾಠಗಳನ್ನು ಕಲಿತಿರುವೆನೆಂದು ಹೇಳಿದನು. ಭೂಮಿಯು ತನಗೆ ತಾಳ್ಮೆಯನ್ನು ಕಲಿಸಿದೆ. ಬೆಟ್ಟಗಳು ಸಸ್ಯ ಸಂಪತ್ತನ್ನು ದೊರೆಕಿಸಿಕೊಟ್ಟು ಇತರರಿಗೆ ಒಳಿತನ್ನು ಉಂಟು ಮಾಡುತ್ತವೆ. ವಾಯು, ಆಕಾಶ ಅವನಿಗೆ ಅನೇಕವನ್ನು ಕಲಿಸಿವೆ. ದೈಹಿಕ ಪೋಷಣೆಗೆ ಅಗತ್ಯವಾದವುಗಳನ್ನು ಮಾಡುವುದರಲ್ಲೇ ಮುನಿಯು ತೃಪ್ತಿ ಹೊಂದುತ್ತಾನೆಯೇ ಹೊರತು ಇಂದ್ರಿಯ ಸುಖದಿಂದಲ್ಲ. ಇದರಿಂದಾಗಿ ಜ್ಞಾನವು ನಾಶಗೊಳ್ಳದೆ ಬುದ್ಧಿ ಹಾಗೂ ಮಾತು ಚದುರಿ ಹೋಗುವುದಿಲ್ಲ. ಗಾಳಿಯು ತಾನು ಬೀಸುವೆಡೆಯಲ್ಲಿನ ಒಳ್ಳೆಯ ಹಾಗೂ ಕೆಟ್ಟ ವಾಸನೆಗಳಿಂದ ಭಾದಿತವಾಗುವುದಿಲ್ಲ. ಆಕಾಶವು ಅಗ್ನಿ, ಜಲ ಹಾಗೂ ಭೂಮಿಯಿಂದ ಸೋಕಿಸಲ್ಪಡದೆಯೇ ಉಳಿಯುತ್ತದೆ.

ಅವಧೂತನು, ಜನನ ಮರಣಗಳು ಶರೀರಕ್ಕೆ ಸಂಬಂಧಿಸಿದವೇ ಹೊರತು ಆತ್ಮಕ್ಕಲ್ಲ ಎಂದನು; ಯೋಗಿಯು ವಿಷಯ ವಸ್ತುಗಳನ್ನು ಇಂದ್ರಿಯ ಅವಯವಗಳ ಮೂಲಕ ಸ್ವೀಕರಿಸಿ ಅವನ್ನು ಸೂರ್ಯನಂತೆ ಹಿಂತಿರುಗಿಸುತ್ತಾನೆ. ಒಬ್ಬರು ಯಾರ ಬಗ್ಗೆಯಾಗಲಿ ಅತಿಯಾದ ವಿಶ್ವಾಸ ಅಥವಾ ಅತಿಯಾದ ಉದಾಸೀನತೆಯನ್ನು ಬೆಳೆಸಿಕೊಳ್ಳಕೂಡದು. ಯಾರೂ ತಮಗೆ ಅತ್ಯಂತ ಪ್ರಿಯವಾದದ್ದನ್ನು ಪಡೆದುಕೊಳ್ಳಕೂಡದು. ಏಕೆಂದರೆ ಆದರಿಂದಲೇ ಅವರಿಗೆ ದುಃಖವುಂಟಾಗುತ್ತದೆ. ಇಬ್ಬರು ಮಾತ್ರ ಧಾವಂತಗಳಿಂದ ಮುಕ್ತರಾಗಿರುತ್ತಾರೆ. ಅವರೆಂದರೆ ಮಕ್ಕಳು ಹಾಗೂ ಗುಣಾತೀತವಾದ ಭಗವಂತನನ್ನು ಅರಿತುಕೊಂಡಂಥ ಮಾನವನು.

ಪ್ರಕೃತಿಯಿಂದ ತಾನು ಕಲಿತಿದ್ದೇನು ಎಂಬುದನ್ನು ತಿಳಿಸಿದ ಅವಧೂತನು ತನ್ನದೇ ಶರೀರದಿಂದ ತಾನು ಕಲಿತದ್ದೇನು ಎಂಬುದನ್ನೂ ಹೇಳಿದನು. ಯಾವುದರ ಕಲ್ಯಾಣಕ್ಕಾಗಿ ಮನುಷ್ಯನು ಅನೇಕ ವಸ್ತುಗಳನ್ನು ಹೊಂದುತ್ತಾನೋ ಅಂಥ ಶರೀರವೇ ನಶಿಸಿಹೋಗುವಂಥಾದ್ದು. "ವಿವೇಕಿಯಾದವನು, ಅನೇಕ ಹುಟ್ಟುಗಳ ನಂತರ ಈ ಅತ್ಯಂತ ಅಪರೂಪ ಮಾನವ ಶರೀರವನ್ನು ಹೊಂದಿದವನು, ದುರ್ಬಲನಾಗಿದ್ದರೂ ಮನುಷ್ಯನ ಉನ್ನತ ಕಲ್ಯಾಣಕ್ಕೆ ನೆರವಾಗುವಂಥದ್ದು, ಮೃತ್ಯುವಿಗೆ ಸದಾ ಈಡಾಗುವಂಥ ಶರೀರವು ಬೀಳುವ ಮೊದಲು ಮಾನವನು ಶೀಘ್ರವಾಗಿ ಮುಕ್ತಿಗಾಗಿ ಶ್ರಮಿಸಬೇಕು!".

ಅವಧೂತನೆಂದನು : "ಹೀಗೆ ನನ್ನ ನಿರ್ಮಮಕಾರ ಮೇಲೆದ್ದು ಜ್ಞಾನೋದಯವನ್ನೇ ಬೆಳಕನ್ನಾಗಿಸಿಕೊಂಡು ನಾನು ಈ ಜಗತ್ತಿನಲ್ಲಿ ಸುತ್ತಾಡುತ್ತೇನೆ. ನನ್ನಲ್ಲೇ ನಾನು ಸ್ಥಾಪನೆಗೊಂಡು, ವ್ಯಾಮೋಹ ಹಾಗೂ ಅಹಂಮಿಕೆಯಿಂದ ಮುಕ್ತನಾಗಿದ್ದೇನೆ. ಒಬ್ಬ ಶಿಕ್ಷಕನಿಂದ ಪಡೆಯಬಹುದಾದ ತಿಳಿವಳಿಕೆ ಸ್ಥಿರವಾದದ್ದು ಅಲ್ಲ, ವಿಫಲವೂ ಅಲ್ಲ. ಬ್ರಹ್ಮನು ಅದ್ವಿತೀಯನಾದರೂ ವಿವಿಧ ರೀತಿಯಲ್ಲಿ ಮುನಿಗಳೆಲ್ಲರಿಂದಲೂ ಹಾಡಿಸಿ ಹೊಗಳಲ್ಪಟ್ಟಿದ್ದಾನೆ.

ಶ್ರೀ ಕೃಷ್ಣನು ಒಬ್ಬರು ತನ್ನಲ್ಲಿ ಆಶ್ರಯವನ್ನು ಪಡೆದುಕೊಳ್ಳಬೇಕೆಂದನು. ಧರ್ಮಗ್ರಂಥಗಳಲ್ಲಿ ಸೂಚಿಸಲಾಗಿರುವ ಕರ್ತವ್ಯಗಳನ್ನು ಪಾಲಿಸಬೇಕು. ವಿಚಲತೆಯನ್ನು ಮುಂದುವರಿಸುವಂಥ ಕ್ರಿಯೆಗಳನ್ನು ತ್ಯಜಿಸಬೇಕು. ಅವನು ಯಾವಾಗಲೂ 'ಯಮ'ಗಳಿಗೆ ಹೊಂದುಕೊಳ್ಳಬೇಕು. (ಅಹಿಂಸೆಯಂಥ ನೈತಿಕ ತತ್ವಗಳು) ಹಾಗೂ "ನಿಯಮ"ಗಳಿಗೆ (ಶುಚಿಯಂಥ ಸದ್ವರ್ತನೆಗಳಿಗೆ ಸಂಬಂಧಿಸಿದ ಉಪನಿಯಮಗಳು) ಕಟ್ಟಿಕೊಳ್ಳಬೇಕು. 'ಯಮ'ಗಳಿಂದಲೂ ಬಾಧಿಸಲ್ಪಡದೆ ಗುರುಗಳನ್ನು ಸೇವಿಸಿ ಅವನೊಂದಿಗೆ ಒಂದಾಗಬೇಕು. ಪ್ರವೃತ್ತಿಯೆನಿಸಿರುವ ಕಾಮ ಕರ್ಮಗಳನ್ನು ತ್ಯಜಿಸಬೇಕು.

ಒಬ್ಬರು ಜಂಭವನ್ನೂ ಪಡದೆ, ಈರ್ಷೆಯನ್ನೂ ಬೆಳೆಸಿಕೊಳ್ಳದೆ ತನಗೆ ನಿಷ್ಠರಾಗಿರಬೇಕು. ಎಲ್ಲ ಲೌಕಿಕ ವಸ್ತುಗಳಿಂದಲೂ ದೂರವಿರಬೇಕು. ಸ್ವಯಂಪ್ರಜ್ಞೆಯುಳ್ಳ ಸಾಕ್ಷಿದಾರನಾದ ಆತ್ಮನ್ ಸಾಂದ್ರ ಹಾಗೂ ಸೂಕ್ಷ್ಮ ಶರೀರಗಳಿಂದಲೂ ಭಿನ್ನನಾದವನು ಎಂಬುದಾಗಿ ಪರಮಾತ್ಮನು ತಿಳಿಸಿದನು.

ಉದ್ಧವನು ಭಗವಂತನನ್ನು ಮತ್ತೊಂದು ಪ್ರಶ್ನೆ ಕೇಳಿದನು. "ಎಲೈ ಒಡೆಯನೇ, ಜೀವವು ಎಲ್ಲಿಯವರೆಗೆ ಕೆಲಸ ಹಾಗೂ ಅದರ ಪರಿಣಾಮವಾಗಿ ಬರುವ ಸಂತಸ ಮುಂತಾದ, ದೇಹಕ್ಕೆ ಹೊಂದಿಕೊಂಡಂಥ ಗುಣಗಳೊಂದಿಗೆ ಬೆರೆತಿರುವುದೋ ಅಲ್ಲಿಯವರೆಗೆ ಅವುಗಳಿಂದ ಅವನು ಆವರಿಸಿ ಕೊಳ್ಳಲ್ಪಡದೆ ಇದ್ದರೆ ಅವನು ಅಪ್ರತನಾಗುವುದು ಹೇಗೆ? ವಿಮುಕ್ತಗೊಂಡ ಹಾಗೂ ಬದ್ಧರಾದ ಆತ್ಮಗಳು ಜೀವಿಸುವುದು ಹಾಗೂ ಅನುಭವಿಸುವುದು ಹೇಗೆ ? ಅವುಗಳನ್ನು ಗುರುತಿಸುವ ಬಗೆ ಎಂಥದು? ಅವು ಹೇಗೆ ತಿನ್ನುತ್ತವೆ ಹಾಗೂ ದೇಹದ ಕ್ರಿಯೆಗಳನ್ನು ಪೂರೈಸುತ್ತವೆ ? ಅವು ಹೇಗೆ ಮಲಗುತ್ತವೆ, ಕೂರುತ್ತವೆ ಅಥವಾ ಓಡಾಡುತ್ತವೆ? ಇದೇ ಆತ್ಮವು ಶಾಶ್ವತವಾಗಿ ಬಂಧಿಸಲ್ಪಟ್ಟು ಹಾಗೂ ಶಾಶ್ವತವಾಗಿ ವಿಮುಕ್ತವಾಗಿರುವುದೇ?

ಭಗವಂತನೆಂದನು : ಆತ್ಮವನ್ನು ನನ್ನ ಗುಣಗಳ (ಸತ್ವ, ರಜಸ್, ತಮಸ್ - ನನ್ನ ಪ್ರಕೃತಿಯನ್ನು ರೂಪಿಸುವುದು) ದೃಷ್ಟಿಯಿಂದ ವಿವರಿಸಲಾಗಿದೆಯಾದರೂ ವಾಸ್ತವದಲ್ಲಿ ಅದು ಹಾಗಲ್ಲ. ತ್ರಿಗುಣಗಳು ಸೃಷ್ಟಿಯಾಗಿದ್ದು ಮಾಯೆಯಿಂದ. ಆತ್ಮವು "ಬಂಧಿಯೂ" ಅಲ್ಲ. "ವಿಮುಕ್ತವೂ" ಅಲ್ಲ. ದುಃಖ, ತಿಳಿಗೇಡಿತನ, ಸಂತಸ ಹಾಗೂ ಸಂಕಷ್ಟ. ಅಲ್ಲದೆ ಶರೀರವೊಂದನ್ನು ಪಡೆಯುವುದು ಇವೆಲ್ಲವೂ ಮಾಯೆಯಿಂದ ಉಂಟಾದಂಥವು. ಕನಸು ಹೇಗೆ ಮನಸ್ಸಿನ ಕಲ್ಪನೆಯೋ ಹಾಗೆಯೇ ರೂಪಾಂತರ ಕೂಡಾ ಅಲ್ಲ. ಬುದ್ಧಿ ಹಾಗೂ ಮೌಢ್ಯವು ನನ್ನ ಶಕ್ತಿಗಳಾಗಿದ್ದು ಅವು ಜೀವಿಗಳ ವಿಮುಕ್ತಿ ಮತ್ತು ಬಂಧನಕ್ಕೆ ಕಾರಣಗಳು. ಅವು ಮಾಯೆ ಅಥವಾ ನನ್ನ ಶಾಶ್ವತ ಶಕ್ತಿಯಾಗಿದ್ದು, ಅದಿಯಿಲ್ಲದ್ದರಿಂದ ಪ್ರಮುಖವಾಗಿದ್ದು ನನ್ನ ಮಾಯೆಯಿಂದ ಸೃಷ್ಟಿಗೊಂಡಂಥವು.

ಭಗವಂತನು "ಬಂಧಿತ" ಹಾಗೂ "ವಿಮುಕ್ತ" ಆತ್ಮದ ಬಗ್ಗೆ ತದ್ವಿರುದ್ಧ ಗುಣಗಳನ್ನು ಹೊಂದಿಯೂ ಶರೀರವೆಂಬ ಒಂದೇ ಅವಾಸಸ್ಥಾನದಲ್ಲಿ ಜೀವಿಸಿರುವಂಥ ಆತ್ಮವನ್ನು ಕುರಿತು ವಿವರಿಸಿದನು. ಎರಡು ವಿಧದ ಪಕ್ಷಿಗಳು, ಒಂದೇ ರೀತಿಯಾಗಿ

ಕಾಣುತ್ತಿರುವಂಥ ಹಾಗೂ ಗೆಳೆತನವನ್ನು ಹೊಂದಿರುವಂಥವು ಆಕಸ್ಮಿಕವಾಗಿ ಒಂದೆಡೆ ಬಂದು ಮರವೊಂದರಲ್ಲಿ ಗೂಡನ್ನು ಕಟ್ಟುತ್ತವೆ. ಒಂದು, ಮರದ ಹಣ್ಣುಗಳನ್ನು ತಿನ್ನುತ್ತವೆ. ಇನ್ನೊಂದು, ಹಣ್ಣನ್ನು ತಿನ್ನದಿದ್ದರೂ ಹೆಚ್ಚು ಶಕ್ತಿಯುತವಾಗಿರುತ್ತದೆ. (ಫಲಗಳ ಅರ್ಥ ಶರೀರದಲ್ಲಿ ಒಬ್ಬರ ಕ್ರಿಯೆಗಳಿಂದ ಸಂಗ್ರಹಿಸಲಾದ ಪರಿಣಾಮಗಳು). ಫಲಗಳನ್ನು ತಿನ್ನದೇ ಇರುವುದು ಇನ್ನೊಂದರಷ್ಟೇ ವಿವೇಕಿ ಹಾಗೂ ತನ್ನನ್ನೆ ತಿಳಿದುಕೊಂಡಿರುವಂಥದ್ದು. ಆದರೆ ಹಣ್ಣುಗಳನ್ನು ತಿನ್ನುವ ಪಕ್ಷಿ ಹೀಗಿರುವುದಿಲ್ಲ. ಮೌಢ್ಯಕ್ಕೆ ಕಟ್ಟಿ ಹಾಕಲ್ಪಟ್ಟಿರುವುದು ಯಾವಾಗಲೂ ಬಂಧಿತವಾಗೇ ಇದ್ದು, ಬುದ್ಧಿಯಿಂದ ತುಂಬಿದಂಥ ಮತ್ತೊಂದು ಎಂದೆಂದಿಗೂ ಸ್ವತಂತ್ರವಾದ್ದು. ವಿವೇಕಿಗಳು, ಕನಸಿನಿಂದ ಎಚ್ಚತ್ತ ಮೇಲೆ, ದೇಹದಲ್ಲಿ ಇದ್ದರೂ, ದೇಹಸ್ಥರಲ್ಲ. ಆದರೆ ಮೂರ್ಖರು ದೇಹದಲ್ಲಿರದಿದ್ದರೂ, ದೇಹಸ್ಥರೆಂದು ತಿಳಿದುಕೊಂಡು, ಕನಸು ಕಾಣುತ್ತಾರೆ. ಆದರೆ ಶರೀರದಲ್ಲೇ ಅವಯವಗಳು ವಸ್ತುಗಳನ್ನು ಗುರುತಿಸಿದಾಗ ಅಥವಾ ಗುಣಗಳು ಗುಣಗಳನ್ನು ತಿಳಿದಾಗ ವಿವೇಕಿಯಾದವನು ತನ್ನನ್ನು ಅವುಗಳೊಂದಿಗೆ ಗುರುತಿಸಿಕೊಳ್ಳುವುದಿಲ್ಲ. ಅವುಗಳಿಂದ ಬಾಧಿತನಾಗುವುದಿಲ್ಲ.

## ಸಾತ್ವಿಕರ ಗುಣಗಳು

ಮುನಿಗಳ ಗುಣಗಳನ್ನು ವಿವರಿಸುತ್ತ ಭಗವಂತನು ಉದ್ಧವನಿಗೆ ಸಂತರು ಎಲ್ಲರಿಗೂ ಏಕರೀತಿಯಾಗಿದ್ದು, ಅಥವಾ ಕೆಡಕನ್ನು ಹೇಳಿದ ಯಾರನ್ನು ಹೊಗಳುವುದಾಗಲಿ ಅಥವಾ ತೆಗಳುವುದನ್ನಾಗಲಿ ಮಾಡಬಾರದೆಂದರು. "ವೇದಪಾರಂಗತರಾಗಿದ್ದರೂ, ಬ್ರಹ್ಮನ್‌ನ್ನು ತಿಳಿಯದಿದ್ದರೆ ಅವರ ಶ್ರಮ ವ್ಯರ್ಥ. ಕರುವನ್ನು ನೀಡದಂಥ ಹಸುವನ್ನು, ಚಾರಿತ್ರ್ಯ ಹೀನಳಾದ ಮಡದಿಯನ್ನು, ಮತ್ತೊಬ್ಬರ ವಶವಾಗಿರುವ ಶರೀರವನ್ನು, ದುಷ್ಟ ಮಗುವನ್ನು, ಅರ್ಹರಾದ ವ್ಯಕ್ತಿಗಳಿಗೆ ಸಂಪತ್ತನ್ನು ನೀಡದವನು, ನನ್ನ ಪ್ರಸ್ತಾಪವಿಲ್ಲದೆಯೇ ಮಾತನಾಡುವವನು, ಸಂಕಷ್ಟಗಳ ಸರಮಾಲೆಯನ್ನೇ ಅನುಭವಿಸುತ್ತಾನೆ".

ಉದ್ಧವನಿಗೆ ಪರಮಾತ್ಮನು ಹೇಳಿದನು: "ಎಲೈ ಉದ್ಧವನೇ, ನನ್ನ ಬಗೆಗಿನ ಕಥಾನಕಗಳನ್ನು, ಗಾಯನಗಳನ್ನು ಕೇಳುವುದರಿಂದ, ಜಗತ್ತಿಗೆ ಒಳಿತಾಗುತ್ತದೆ. ಜಗತ್ತು ಪರಿಶುದ್ಧಗೊಳ್ಳುತ್ತದೆ. ನನ್ನ ಕಾರ್ಯ ಮತ್ತು ಜೀವನವನ್ನು ಅನುಕರಿಸುತ್ತಾ, ನನ್ನನ್ನೇ ಆಶ್ರಯದಾತನನ್ನನಾಗಿಸಿಕೊಳ್ಳುತ್ತಾ, ಕರ್ತವ್ಯ, ಬಯಕೆ ಹಾಗೂ ಐಶ್ವರ್ಯವನ್ನು ನನಗಾಗಿ ಸಂಪಾದಿಸುತ್ತ ಇರುವ ಅವಿಚ್ಛಿನ್ನ ಶ್ರದ್ಧಾವಂತನು ನನ್ನ ಭಕ್ತನಾಗುತ್ತಾನೆ."

ಉದ್ಧವನು ಮುಂದೆ ಭಗವಂತನು ಯಾವ ಬಗೆಯ ಮುನಿಯನ್ನು ಅಪೇಕ್ಷಿಸುತ್ತಾನೆ ಹಾಗೂ ಮುನಿಗಳು ಸಲ್ಲಿಸುವ ಯಾವ ವಿಧವಾದ ಭಕ್ತಿಯು ಅವನಿಗೆ ಸ್ವೀಕಾರ್ಹವೆನ್ನಿಸುತ್ತವೆ ಎಂಬುದಾಗಿ ಕೇಳಿದನು. ಅದಕ್ಕೆ ಉತ್ತರವಾಗಿ ಭಗವಂತನು ಹೇಳಿದನು : "ಮುನಿಯೊಬ್ಬನು ಕರುಣಾಮಯನಾಗಿರಬೇಕು. ಜೀವ ಜಂತುಗಳ ಬಗ್ಗೆ ಸ್ನೇಹದಿಂದ ತಾಳ್ಮೆಯಿಂದಿದ್ದು ಸತ್ಯಸಂಧನಾಗಿರಬೇಕು. ಬಲಿಷ್ಠನಾಗಿರಬೇಕು. ಎಲ್ಲ ಜೀವಿಗಳಿಗೂ ಉಪಯುಕ್ತನಾಗಿರಬೇಕು. ಆಶೆಗಳಿಂದ ಲೇಪಿತನಾಗದೆ ಬುದ್ಧಿಶಾಲಿಯಾಗಿರಬೇಕು. ತನ್ನ ಅವಯವಗಳ ಬಗೆಗೆ ಅಧೀನವನ್ನು ಹೊಂದಿ, ಬಾಹ್ಯ ಚಟುವಟಿಕೆ ಹಾಗೂ ಸ್ವಾಧೀನತೆಯನ್ನು ಸ್ಥಾಪಿಸಿ

ಕೊಳ್ಳದೆಯೇ ಪರಿಶುದ್ಧನಾಗಿರಬೇಕು. ಸ್ಥಿರವಾದ ಮನಸ್ಸನ್ನು ಹೊಂದಿರಬೇಕು. ನಿಯಂತ್ರಿತ ಆಹಾರವನ್ನು ಸೇವಿಸಿ ನನ್ನಲ್ಲಿ ಆಶ್ರಯ ಪಡೆಯಬೇಕು. ಆರು ಬಗೆಯ ಕೆಡಕುಗಳ ಮೇಲೆ - ಹಸಿವು, ಬಾಯಾರಿಕೆ, ದುಃಖ, ತಿಳಿಗೇಡಿತನ, ದೌರ್ಬಲ್ಯ, ಮರಣ - ಹತೋಟಿಯನ್ನು ಹೊಂದಿರಬೇಕು. ಖ್ಯಾತಿಗಾಗಿ ಆಸೆ ಪಡದೆ ಇನ್ನಿತರರನ್ನು ಗೌರವಿಸಬೇಕು. ತಜ್ಞನಾಗಿರಬೇಕು. ಸ್ನೇಹಮಯನಾಗಿರಬೇಕು. ನಾನು ನೀಡಿದಂಥ ಔಪಚಾರಿಕ ಕರ್ತವ್ಯಗಳನ್ನೂ ಬಿಟ್ಟುಕೊಟ್ಟು ನನ್ನನ್ನು ಆರಾಧಿಸಬೇಕು. ಅಂಥವನೇ ಮುನಿಗಳಲ್ಲೆಲ್ಲ ಅತ್ಯುತ್ತಮನಾದವನು".

## ಭಕ್ತಿ

ಭಕ್ತಿಯನ್ನು ಕುರಿತು ಪ್ರಸ್ತಾಪಿಸುತ್ತಾ ಭಗವಂತನು : "ನಾನು ಕಾಲ ಹಾಗೂ ಸ್ಥಳಕ್ಕೆ ಅತೀತನು ಎಂಬುದನ್ನು ತಿಳಿದೋ ತಿಳಿಯದೆಯೋ, ನಾನು ಎಲ್ಲರ ಆತ್ಮ ಎಂಬುದನ್ನು, ಬುದ್ಧಿ, ಆಹ್ಲಾದತೆ ಎಂಬುದನ್ನು ತಿಳಿದೋ ತಿಳಿಯದೆಯೋ ತಮ್ಮೆಲ್ಲ ಶ್ರದ್ಧೆಯಿಂದ ನನ್ನನ್ನು ಪೂಜಿಸುವಂಥವರು ನನ್ನ ಭಕ್ತರಲ್ಲೆಲ್ಲ ಅತ್ಯುತ್ತಮರು."

ಭಗವಂತನು ಮುಂದೆ ಹೇಳಿದನು : "ನನ್ನನ್ನು ನೋಡುವುದು, ಸ್ಪರ್ಶಿಸುವುದು, ಸೇವಿಸುವುದು, ಕೊಂಡಾಡುವುದು, ವಂದಿಸುವುದು ಮತ್ತು ವೈಭವಗಳು ಹಾಗೂ ಲೀಲೆಗಳನ್ನು ಪಠಿಸುವುದು, ನನ್ನ ಬಗ್ಗೆ ಕಥಾನಕಗಳನ್ನು ಆಲಿಸುವುದು; ನನ್ನನ್ನು ಧ್ಯಾನಿಸುವುದು, ನನ್ನ ಸೇವೆಗೆ ಶರಣಾಗುವುದು, ನನ್ನ ಅವತಾರಗಳನ್ನು ನೆನೆಯುವುದು; ನನ್ನ ವಿಶೇಷ ದಿನಗಳನ್ನು ಆಚರಿಸುವುದು, ನನ್ನ ದೇವಾಲಯಗಳಲ್ಲಿ ಸಂಗೀತ ನೃತ್ಯಗಳ ಮೂಲಕ ಉತ್ಸವಗಳನ್ನು ನಡೆಸುವುದು; ಪವಿತ್ರ ಸ್ಥಳಗಳಿಗೆ ಯಾತ್ರೆ ಹೋಗುವುದು, ವೈದಿಕ ಹಾಗೂ ಇತರ ಧಾರ್ಮಿಕ ಗ್ರಂಥಗಳಲ್ಲಿ ಸೂಚಿಸಲಾಗಿರುವ ಕರ್ಮಗಳನ್ನು ನಡೆಸುವುದು, ನನ್ನ ಹೆಸರಿನಲ್ಲಿ ವಚನಗಳನ್ನು ಕೈಗೊಳ್ಳುವುದು; ನನ್ನ ಮೂರ್ತಿಗಳ ಸ್ಥಾಪನೆಗಳಿಗೆ ಕಾತುರತೆ ತೋರಿ ಶ್ರಮಿಸುವುದು, ನನ್ನ ಹೆಸರಿನಲ್ಲಿ ಉದ್ಯಾನವನಗಳು, ತೋಟಗಳು, ಕ್ರೀಡಾಂಗಣಗಳು, ಇತ್ಯಾದಿಯನ್ನು ನಿರ್ಮಿಸುವುದು; ಅವನ್ನು ವಂಚನೆಯಿಲ್ಲದೆ ನಿರ್ವಹಿಸುವುದು; ಖ್ಯಾತಿಯನ್ನು ಅಪೇಕ್ಷಿಸದಿರುವುದು, ಅಹಂಕಾರವನ್ನು ಬಿಡುವುದು, ತಮ್ಮ ಬಗ್ಗೆಯೇ ಹೇಳಿಕೊಳ್ಳದಿರುವುದು; ನಾನು ತೋರಿದ ಬೆಳಕನ್ನು ಸ್ವಾರ್ಥಕ್ಕಾಗಿ ಬಳಸಿಕೊಳ್ಳದಿರುವುದು; ಸಾಮಾನ್ಯವಾಗಿ ಎಲ್ಲರಿಗೂ ಅಗತ್ಯವಾದ ಹಾಗೂ ತಮಗೆ ಪ್ರಿಯವಾದದ್ದನ್ನು ನನಗೆ ಸಲ್ಲಿಸುವುದು.

ಭಗವಂತನು ಉದ್ಧವನನ್ನು ಅವನ ಸೇವಕ, ಸಹಚರಿ ಹಾಗೂ ಮಿತ್ರನೆಂದು ಪರಿಗಣಿಸಿದುವುದರಿಂದ ಅವನಿಗೆ ಒಂದು ಅದ್ಭುತ ರಹಸ್ಯವನ್ನು ತಿಳಿಸುವೆನೆಂದು ಹೇಳಿದನು. ಅವನೆಂದನು : ಯೋಗ, ತಾರತಮ್ಯ ಜ್ಞಾನ, ಕರುಣೆ, ವೇದಾಧ್ಯಯನ, ತ್ಯಾಗ, ಅಗ್ನಿಹೊತ್ರದಂಥ ವಿಧಿಗಳು, ಜನಸ್ತೋಮಕ್ಕೆ ಉಪಯುಕ್ತವಾದ ಕಾರ್ಯಗಳು, ದಾನ, ವಚನ, ರಹಸ್ಯ ಮಂತ್ರಗಳು, ಯಾತ್ರಾಸ್ಥಳಗಳ ಸಂದರ್ಶನ, ನೈತಿಕ ನಿಯಮಗಳು ಇವು ಯಾವೂ ನನ್ನನ್ನು ಬಂಧಿಸುವುದಿಲ್ಲ. ಬಲಿ, ಮಾಯ, ವಿಷಪರ್ವ, ವಿಭೀಷಣ, ಸುಗ್ರೀವ, ಹನುಮಾನ್ ಹಾಗೂ ಇತರರು ವೇದಗಳನ್ನು ಅಧ್ಯಯನ ಮಾಡಿರದೆ

ಆಧ್ಯಾತ್ಮಿಕ ಪುತ್ರನಾದ ಸನಕನು ತನ್ನ ತಂದೆಯನ್ನು ಯೋಗದ ಸೂಕ್ಷ್ಮತೆ ಹಾಗೂ ಅಂತಿಮ ಗುರಿಯ ಬಗ್ಗೆ ಕೇಳಿದನು. "ಎಲೈ ಒಡೆಯನೇ, ಮನಸ್ಸು ಇಂದ್ರಿಯ ವಿಷಯಗಳೊಂದಿಗೆ ಸೇರ್ಪಡೆಯಾಗಿದ್ದು ಮನಸ್ಸನ್ನು ಬಾಧಿಸುತ್ತದೆ. ಆದ್ದರಿಂದ ವಿಮುಕ್ತಿಯನ್ನು ಬಯಸುವವನು ಅವುಗಳಿಂದ ದೂರ ಸರಿಯಬೇಕಾಗುತ್ತದೆ. ಅವರು ಯಾವ ರೀತಿ ವರ್ತಿಸಬೇಕಾಗುತ್ತದೆ?". ಆದರೆ ಬ್ರಹ್ಮದೇವನಿಗೆ ಆ ಪ್ರಶ್ನೆಯ ಮೂಲಕ್ಕೆ ಹೋಗಲಾಗಲಿಲ್ಲ. ಅವನು ಶ್ರೀ ಕೃಷ್ಣನನ್ನು ಧ್ಯಾನಿಸಿದಾಗ ಅವನು ಹಂಸದ ರೂಪದಲ್ಲಿ ಬ್ರಹ್ಮನ ಮುಂದೆ ಕಾಣಿಸಿಕೊಂಡನು. (ಹಾಲನ್ನು ನೀರಿನಿಂದ ಬೇರ್ಪಡಿಸುವ ಗುಣವಿರುವ ಹಂಸ). ಬ್ರಹ್ಮನು ಹಂಸರೂಪಿಯಾದ ಪರಮಾತ್ಮನನ್ನು ಯಾರೆಂದು ಪ್ರಶ್ನಿಸಿದನು. ಆ ಸಂದರ್ಭದಲ್ಲಿ ತಾನು ಯಾರೆಂಬ ಪ್ರಶ್ನೆಗೆ ಉತ್ತರ ಕೊಡುತ್ತಾ ಅಲ್ಲಿ ಹೇಳಿದುದನ್ನು ಈಗ ಆಲಿಸಬೇಕೆಂದು ಭಗವಂತನು ಉದ್ಧವನಿಗೆ ಹೇಳಿದನು.

ತಾನು "ಯಾರೆಂಬ" ಪ್ರಶ್ನೆಯನ್ನು "ಆತ್ಮನ್"ಗೆ ಸಂಬಂಧಿಸಿ ಹಾಕಿದರೆ, ನಿಜಾಂಶವು ಅವಿಭಾಜ್ಯವಾದ್ದರಿಂದ ಅದಕ್ಕೆ ಉತ್ತರವಿಲ್ಲವೆಂದನು. ಶರೀರಗಳು ಪಂಚೇಂದ್ರಿಯಗಳಿಂದ ಉಂಟಾಗಿದ್ದು ಅದೇ ವಾಸ್ತವತೆಯಲ್ಲಿರುವುದರಿಂದ "ನೀನು ಯಾರು" ಎಂಬ ಪ್ರಶ್ನೆಯೇ ಅರ್ಥಹೀನವಾದ್ದು. ಇಂದ್ರಿಯ ವಿಷಯಗಳಿಗೆ ಹೊಂದಿಕೊಂಡಿರುವ ಮನಸ್ಸು ಹಾಗೂ ಬುದ್ಧಿ, ಅಹಂ ಮುಂತಾದ ಹೆಸರುಗಳಿಂದ ಕರೆಯಲ್ಪಟ್ಟಿರುವಂಥವು, ಜೀವವೆಂಬ ವಾಸ್ತವತೆಯಲ್ಲಿ ಉಳಿದರೆ, ಆಗ ಜೀವ ಹಾಗೂ ಇಂದ್ರಿಯ ವಿಷಯಗಳ ಸಂಪರ್ಕದ ನಿರ್ನಾಮವಾಗಲಾರದು. ಆದರೆ ಜೀವವನ್ನು ಶಾಶ್ವತವಾಗಿ ಬ್ರಹ್ಮನ್‌ನೊಂದಿಗೆ ಗುರುತಿಸಲ್ಪಟ್ಟು, ಇಂದ್ರಿಯ ವಿಷಯಗಳೊಂದಿಗಿನ ಅವನ ಸಂಬಂಧವು ಮನಸ್ಸನ್ನು ಅದರ ಮೇಲೆ ಹೇರಿದ್ದರಿಂದ ಉಂಟಾದ್ದು. ಆದ್ದರಿಂದ ಒಬ್ಬನನ್ನು ಬ್ರಹ್ಮನ್‌ನೆಂದು ಪರಿಗಣಿಸಿ, ಇಂದ್ರಿಯ ವಿಷಯಗಳ ಅವಾಸ್ತವತೆಯನ್ನು ಪ್ರತಿಬಿಂಬಿಸುತ್ತ ಆದರಿಂದ ದೂರ ಸರಿದು ಪರಮಾತ್ಮನನ್ನು ಪೂಜಿಸಬೇಕು. ಹೀಗಾಗಿ ಒಬ್ಬರು ಅವಿಚ್ಛಿನ್ನ ಆತ್ಮದಲ್ಲಿ ತನ್ನ ನಿಜವಾದ ಸ್ವಭಾವದೊಂದಿಗೆ ಉಳಿಯಬಹುದು.

ಬ್ರಹ್ಮ ಹಾಗೂ ಇತರ ಮುನಿಗಳಿಗೆ ಭಗವಂತನು ಹೇಳಿದನು : "ನಾನು ನಿನಗೆ ಸಾಂಖ್ಯಾ ಹಾಗೂ ಯೋಗದ ಆಂತರಿಕ ಸತ್ಯವನ್ನು ಕುರಿತು ಹೇಳಿದ್ದೇನೆ. ನಾನು ನಿನಗೆ ಧರ್ಮದ ಬಗ್ಗೆ ಬೆಳಕನ್ನು ಚೆಲ್ಲಲು ಬಂದಿರುವ ವಿಷ್ಣುವು. ನಾನು ಯೋಗ ಮತ್ತು ಸಾಂಖ್ಯದ ಆಚರಣೆಯಲ್ಲಿನ ಸತ್ಯ ಹಾಗೂ ತೇಜಸ್ಸು ಮತ್ತು ಸಮೃದ್ಧಿಯ, ವೈಭವ ಹಾಗೂ ಸ್ವಯಂ ನಿಯಂತ್ರಣದ ಉನ್ನತ ಗುರಿಯು. ಸಮಾನ ದೃಷ್ಟಿ, ನಿರ್ವ್ಯಾಮೋಹ, ಇತ್ಯಾದಿ ಶಾಶ್ವತ ಗುಣಗಳೆಲ್ಲವೂ, ನನ್ನಲ್ಲಿ ಬಂದು ಸೇರಿಕೊಳ್ಳುತ್ತವೆ. ಈ ರೀತಿಯಾಗಿ ಹೇಳಿ ಸನಕಾದಿ ಮುನಿಗಳ ಸಂದೇಹವನ್ನು ನಿವಾರಿಸಿದನು.

ಉದ್ಧವನು ಭಗವಂತನಿಗೆ ಮುಂದಿನ ಪ್ರಶ್ನೆಯನ್ನು ನೀಡಿದನು: "ಎಲೈ ಶ್ರೀ ಕೃಷ್ಣನೇ, ಬ್ರಹ್ಮನ್ ಬೋಧಕರು ಒಳಿತನ್ನೂ ಸಾಧಿಸುವ ವಿವಿಧ ವಿಧಾನಗಳನ್ನು ಕುರಿತು ಮಾತನಾಡುತ್ತಾರೆ. ಅವೆಲ್ಲವೂ ಸಮಾನ ರೀತಿಯಲ್ಲಿ ಮುಖ್ಯವಾದವೇ ಅಥವಾ

ಅವುಗಳಲ್ಲೆಲ್ಲ ಮುಖ್ಯವಾದದ್ದೇ ಒಂದು ಎಂಬುದಿದೆಯೇ?". ಭಗವಂತನ ಭಕ್ತಿಯು ನೇರವಾಗಿ ಸಾಕ್ಷಾತ್ಕಾರವನ್ನು ಉಂಟು ಮಾಡುವುದರಿಂದ ಅದೇ ಅತ್ಯುನ್ನತವಾದದ್ದೆಂದೂ, ಇನ್ನಿತರ ವಿಧಾನಗಳು ಅದಕ್ಕೆ ಹೋಲಿಸಿದಂತೆ ಕಡಿಮೆ ಪ್ರಾಮುಖ್ಯತೆಯನ್ನು ಪಡೆದಿರುವಂಥವು ಎಂಬುದಾಗಿ ಹೇಳಿದನು. ವೇದಗಳು ಭಗವದ್ ವಾಕ್ಯಗಳಾಗಿದ್ದು ಜಗತ್ತಿನ ನಿರ್ನಾಮದ ಸಂದರ್ಭದಲ್ಲಿ ಕಾಲದಿಂದ ವಿನಾಶ ಹೊಂದಿದಂಥವು. ಭಗವಂತನು ಅವನ್ನು ಪ್ರಪ್ರಥಮವಾಗಿ ಬ್ರಹ್ಮನಿಗೆ ಭೋಧಿಸಿದನು. ಅವುಗಳಲ್ಲಿ ಭಕ್ತಿಯನ್ನು ನೆಲೆಸಿ ಅವು ಮನಸ್ಸನ್ನು ಭಗವಂತನೆಡೆಗೆ ವಲಿಸಿತು. ಬ್ರಹ್ಮನು ಅದನ್ನು ಮನುವಿಗೆ ಘೋಷಿಸಿ ಅವನಿಂದ ಮುನಿಗಳಿಗೆ ಹಾಗೂ ಅವರಿಂದ ಇತರರಿಗೆ ಬೋಧಿಸಲಾಯಿತು. ಸ್ವಭಾವಗಳಲ್ಲಿನ ಭಿನ್ನತೆಯಿಂದಾಗಿ ಜನರು ತಮ್ಮ ಭಾವನೆಗಳಲ್ಲಿ ಪ್ರತ್ಯೇಕರಾಗಿದ್ದಾರೆ. ಜನರು ಭಗವಂತನ ಮಾಯೆಗೆ ಸಿಲುಕಿ ವಿವಿಧ ವಿಷಯಗಳನ್ನು ಅತ್ಯುನ್ನತ ಒಳಿತಿನ ಮಾರ್ಗವೆಂದು ತಮ್ಮ ವೃತ್ತಿ ಹಾಗೂ ಅಭಿರುಚಿಗೆ ಅನುಗುಣವಾಗಿ ತಿಳಿಸಿದರು. ಗುರಿಗೆ ಸಾಧನವಾಗಿ ಕೆಲವರು ಕರ್ತವ್ಯವನ್ನು ಸೂಚಿಸಿದರು. ಕರ್ತವ್ಯದಲ್ಲಿ ಮೀಮಾಂಸಕರು, ಅಲಂಕಾರಿಕರು ಕೀರ್ತಿಯನ್ನು, ವಾತ್ಸ್ಯಾಯನನು ಕಾಮವನ್ನು ಎತ್ತಿ ಹಿಡಿದಿದ್ದಾರೆ. ರಾಜಕಾರಣಿಗಳು ವೈಭವವನ್ನು ಎತ್ತಿ ಹಿಡಿದಿದ್ದು ಇನ್ನಿತರರು ಖ್ಯಾತಿ, ಆತ್ಮಸಂತೃಪ್ತಿ, ಸತ್ಯ, ಇಂದ್ರಿಯ ಹಾಗೂ ಮನಸ್ಸಿನ ನಿಯಂತ್ರಣವನ್ನು ಸೂಚಿಸಿದ್ದಾರೆ. ಕೆಲವರು ವೈಭವ, ಕೊಡುಗೆ, ಆಹಾರವನ್ನು, ಇನ್ನೂ ಕೆಲವರು ತ್ಯಾಗ, ಸರಳತೆ, ದಾನ, ವಚನಗಳು ಅಥವಾ ನೈತಿಕ ನಿಯಮಗಳನ್ನು ಎತ್ತಿ ಹಿಡಿದಿದ್ದಾರೆ.

ಭಗವಂತನೆಂದನು: "ಎಲೈ ಉದ್ಧವನೇ, ಯೋಗ, ಬುದ್ಧಿಶಕ್ತಿ, ಕರುಣೆ, ಸರಳತೆ ಅಥವಾ ತ್ಯಾಗ ಇವ್ಯಾವುದೂ ಭಕ್ತಿಯಷ್ಟು ನನ್ನನ್ನು ಸೆರೆ ಹಿಡಿಯಲಾರದು. ಬ್ರಹ್ಮ ಮಹೇಶ್ವರ, ಬಲರಾಮ, ಲಕ್ಷ್ಮಿ ಅಥವಾ ನನ್ನದೇ ರೂಪವು ನನಗೆ ನಿನ್ನಂಥ ಭಕ್ತರಷ್ಟು ಪ್ರಿಯವಲ್ಲ."

ಉದ್ಧವನು ಮುಂದಿನ ಪ್ರಶ್ನೆಯನ್ನು ಕೇಳಿದನು: "ಸಾಕ್ಷಾತ್ಕಾರವನ್ನು ಹಂಬಲಿಸುತ್ತಿರುವ ವ್ಯಕ್ತಿಯೊಬ್ಬನು ಹೇಗೆ ಹಾಗೂ ಯಾವ ರೀತಿಯಾಗಿ, ವ್ಯಕ್ತಿಗತವಾಗಿ ಇಲ್ಲವೇ ನಿರ್ವಿಕಾರವಾಗಿ ನಿನ್ನನ್ನು ಧ್ಯಾನಿಸಬೇಕು?" ಭಗವಂತನು ಉತ್ತರಿಸಿದನು : ಸಮಮಟ್ಟದ ಆಸನದ ಮೇಲೆ ಕೂತು (ಭಗವಂತನು ಯಾವ ಭಂಗಿಯನ್ನೂ ಸೂಚಿಸುವುದಿಲ್ಲ. ಪತಂಜಲಿಗೆ ಅನುಗುಣವಾಗಿಯೂ ಭಂಗಿಯು ಕೇವಲ ಸ್ಥಿರವಾಗಿ ಆನಂದದಾಯಕ ವಾಗಿರಬೇಕು). ಕೈಗಳನ್ನು ತೊಡೆಯ ಮೇಲಿಟ್ಟು ಕೊಂಡು, ದೃಷ್ಟಿಯನ್ನು ಮೂಗಿನ ತುದಿಯಲ್ಲಿ ಕೇಂದ್ರೀಕರಿಸಿ ಒಬ್ಬರು ಪ್ರಾಣದ ಮಾರ್ಗವನ್ನು ಉಚ್ಛಾಸ ನಿಶ್ವಾಸಗಳ ಮೂಲಕ ಸುಗಮವಾಗಿಸಿಕೊಳ್ಳಬೇಕು. (ನಾಡಿಗಳು ಅಥವಾ ನರಗಳು, ಮುಖ್ಯ ಪ್ರಾಣವು, ಶರೀರದ ಎಲ್ಲ ಚಲನೆಗಳಿಗೂ ಮೂಲವಾದದ್ದು). ಇದು ಪ್ರಾಣಾಯಾಮ ಎಂಬ ಅಕ್ಷರವನ್ನು ಪ್ರಾಣಾಯಾಮದ ಮೂಲಕ ಸೇರಿಸಿ ಹೃದಯಕ್ಕೆ ಎತ್ತರಿಸಿಕೊಳ್ಳಬೇಕು. 'ಓಂ' ಎಂಬುದು ಗಂಟಾನಾದದಂತೆ ಇರಬೇಕಾಗಿದ್ದು ತಾವರೆಯ ದಂಟಿನೊಳಗೆ

ಸರಿದಾಡುವ ದಾರದಂತಿರಬೇಕು. ದಿನವೂ ಇದನ್ನು, ಮೂರು ಬಾರಿ ಹತ್ತು ಸಲ ಮಾಡಬೇಕು. ತಿಂಗಳೊಳಗಾಗಿ ಪ್ರಾಣವನ್ನು ಹತೋಟಿಗೆ ತಂದುಕೊಳ್ಳಬೇಕು.

ಭಕ್ತನೊಬ್ಬನು ಭಗವಂತನ ಶರೀರದ ಮೇಲೆ ಮನಸ್ಸನ್ನು ಕೇಂದ್ರೀಕರಿಸಿ ಅವನ ಮುಗುಳ್ನಗೆಯನ್ನು ಹೊರತು ಮತ್ತಾವುದನ್ನೂ ಕಲ್ಪಿಸಿಕೊಳ್ಳಕೂಡದೆಂದು ಭಗವಂತನು ಹೇಳಿದನು: "ತನ್ನ ಇಂದ್ರಿಯಗಳು ಹಾಗೂ ಪ್ರಾಣವನ್ನು ನಿಯಂತ್ರಿಸಿಕೊಂಡು, ನನ್ನ ಮೇಲೆ ಮನಸ್ಸನ್ನು ಕೇಂದ್ರೀಕರಿಸುವ ಯೋಗಿಯು ವಿವಿಧ ಶಕ್ತಿಗಳನ್ನು ಪಡೆಯುತ್ತಾನೆ".

ಉದ್ಧವನು ಯಾವುದೇ ಒಂದು ನಿರ್ದಿಷ್ಟ ಮನಸ್ಸಿನ ಕೇಂದ್ರೀಕರಣದ ಮೂಲಕ ಯಾವ ಬಗೆಯ ಶಕ್ತಿಯು ಒದಗುತ್ತದೆ ಎಂಬುದನ್ನು ತಿಳಿದುಕೊಳ್ಳಲು ಬಯಸಿದನು. "ಈ ಶಕ್ತಿಗಳು ಎಷ್ಟು ಬಗೆಯವು? ಅವುಗಳನ್ನು ಯೋಗಿಗಳಿಗೆ ಇತ್ತಿರುವವನು ನೀನೇ" ಎಂದು ಉದ್ಧವನೆಂದನು. ಭಗವಂತನು ಮನಸ್ಸನ್ನು ಕೇಂದ್ರೀಕರಿಸುವುದರಲ್ಲಿ ಹಾಗೂ ಯೋಗದಲ್ಲಿ ನಿಪುಣರಾಗಿರುವವರು ಹದಿನೆಂಟು ಶಕ್ತಿಗಳನ್ನು ಸಾಧಿಸಿಕೊಳ್ಳಬಹುದೆಂದನು. ಅವುಗಳಲ್ಲಿ ಎಂಟು ಭಗವಂತನಿಗೆ ಸಂಬಂಧಿಸಿದ್ದು ಹತ್ತು ಸತ್ವದ ಪರಿಶುದ್ಧತೆಯ ಮೂಲಕ ಉಂಟಾದ್ದು. (ಪ್ರಕಾಶಮಯತೆಗೆ ಕೊಂಡೊಯ್ಯುವಂಥ ಮನಸ್ಸಿನ ಗುಣ). ಅವೆಂದರೆ ಸೂಕ್ಷತ್ವ, ವಿಪುಲತೆ, ಶರೀರದ ಹಗುರತೆ, ಸಾಧನೆ, ಪ್ರಕಮ್ಯ (ಕೇಳಿದ ಹಾಗೂ ಆಲಿಸಿದ ಎಲ್ಲವುಗಳಿಂದ ಸಂತೋಷವನ್ನು ಪಡೆಯುವದು). ಆ ಇಂದ್ರಿಯ ವಿಷಯಗಳ ಬಗ್ಗೆ ನಿರ್ವ್ಯಾಮೋಹ ಹಾಗೂ ಯಾವುದೇ ಹಾಗೂ ಎಲ್ಲ ಬಯಕೆಯನ್ನೂ ಜೀರ್ಣಿಸಿಕೊಳ್ಳುವುದು (ಈ ಶಕ್ತಿಗಳು ಭಗವಂತನಿಗೆ ಸಂಬಂಧಪಟ್ಟವು). ಈ ಶಕ್ತಿಗಳು ಸ್ವಾಭಾವಿಕವಾಗಿಯೇ ಭಗವಂತನಲ್ಲಿ ಅವಿಚ್ಛಿನ್ನ ಪ್ರಮಾಣದಲ್ಲಿದ್ದು ಅವನಿಂದ ಯೋಗಿಗಳಿಗೆ ವಿವಿಧ ಪ್ರಮಾಣಗಳಲ್ಲಿ ನೀಡಲ್ಪಟ್ಟಿವೆ. ಇನ್ನಿತರ ಶಕ್ತಿಗಳೆಂದರೆ, ಹಸಿವು, ಬಾಯಾರಿಕೆ, ಶ್ರವಣ, ದೃಷ್ಟಿ, ಮನಸ್ಸಿನ ಚಂಚಲತೆ ಇವುಗಳಿಂದ ವಿಚಲಿತವಾಗದಿರುವುದು, ಇಚ್ಛೆಗೆ ಅನುಸಾರವಾಗಿ ಆಕಾರವನ್ನು ತಳೆಯುವುದು, ಯಾರದೇ ಶರೀರವನ್ನು ಪ್ರವೇಶಿಸುವುದು; ಇಚ್ಛಾಮರಣಿಯಾಗುವುದು; ದೇವತೆಗಳ ಪುನರ್ಸೃಷ್ಟಿಯಲ್ಲಿ ಭಾಗಿಯಾಗುವುದು; ಬಯಸಿದ್ದನ್ನು ಪಡೆದುಕೊಳ್ಳುವುದು; ಒಬ್ಬರ ಆಜ್ಞೆಯನ್ನು ಎಲ್ಲೆಡೆ ತಪ್ಪದೆ ಪಾಲಿಸುವಂತೆ ಮಾಡುವುದು; ಭೂತ ವರ್ತಮಾನ ಹಾಗೂ ಭವಿಷ್ಯತ್ತಿನ ಬಗ್ಗೆ ಜ್ಞಾನವನ್ನು ಹೊಂದುವುದು; ದ್ವಂದ್ವಗಳಿಂದ ಭಾಧಿತರಾಗದಿರುವುದು, ಇನ್ನಿತರರ ಆಲೋಚನೆಗಳನ್ನು ಅರಿಯುವುದು; ಅಗ್ನಿ, ಸೂರ್ಯ, ನೀರು, ವಿಷ, ಮುಂತಾದವುಗಳ ಪ್ರಭಾವವನ್ನು ಪ್ರತಿರೋಧಿಸುವುದು ಹಾಗೂ ಯಾರಿಂದಲೂ ಹಿಮ್ಮೆಟ್ಟಿಸಲ್ಪಡದಿರುವುದು.

## ಪರಮಾತ್ಮನು

ಭಗವಂತನು ಯೋಗದಲ್ಲಿ ಮನಸ್ಸನ್ನು ಕೇಂದ್ರೀಕರಿಸುವುದು ಹಾಗೂ ವಿವಿಧ ಶಕ್ತಿಗಳನ್ನು ಸಾಧಿಸಿಕೊಳ್ಳುವುದು ಇವನ್ನು ಕುರಿತಂತೆ ವಿವರಗಳನ್ನು ನೀಡಿದನು. ಅವನೆಂದನು: "ನಾನು ಶಕ್ತಿಗಳ ಒಡೆಯ, ಏಕೆಂದರೆ ನಾನು ಅವುಗಳ ಕಾರಣಕರ್ತ ಹಾಗೂ ನಡೆಸುವವನು. ನಾನು ಯೋಗಗಳಿಗೆ, ಜ್ಞಾನ, ಧರ್ಮ ಮತ್ತು "ಬ್ರಹ್ಮನ್" ಬೋಧಿಸು

ವವರಿಗೆ ಒಡೆಯ. ನಾನು ಜೀವಜಂತುಗಳಿಗೆ ಚೇತನವಾದ್ದರಿಂದ ನಾನು ಅವುಗಳ ಆತ್ಮ. ಯಾವುದರಿಂದಲೂ ಆವೃತನಾಗದ ನಾನು ಅವುಗಳಿಂದ ಹೊರಗಡೆಯೇ ಇದ್ದೇನೆ. ಧರ್ಮಗಳ ಹಾಗೂ ಎಲ್ಲ ಜೀವಜಂತುಗಳ ಒಳಗೆ ಮತ್ತು ಹೊರಗೆ ನಾನಿದ್ದೇನೆ.

ಉದ್ಧವನು ಶ್ರೀ ಕೃಷ್ಣ ಪರಮಾತ್ಮನನ್ನು, ಪರಿಪೂರ್ಣತೆಯನ್ನು ಸಾಧಿಸಲು ಹಿರಿಯ ಋಷಿಗಳು ಏನನ್ನು ಪೂಜಿಸುತ್ತಾರೆ ಎಂದು ಕೇಳಿದನು. ಅವನು ಭಗವಂತನು ಭೂಮಿ, ಸ್ವರ್ಗ, ಇತರ ವಲಯಗಳಲ್ಲಿ ತಾಳುವ ವಿವಿಧ ಅವತಾರಗಳನ್ನು ತಿಳಿಯಲು ಬಯಸಿದನು. ಶ್ರೀ ಕೃಷ್ಣ ಪರಮಾತ್ಮನೆಂದನು : "ನಾನು ಜೀವಜಂತುಗಳ ಆತ್ಮ ಅವರ ಮಿತ್ರ ಹಾಗೂ ಒಡೆಯ; ನಾನು ಎಲ್ಲದರೊಳಗೂ ಇದ್ದೇನೆ. ಅವುಗಳ ಹುಟ್ಟಿಗೆ, ಬದುಕಿಗೆ ಹಾಗೂ ಸಾವಿಗೆ ಕಾರಣನು. ಸದ್ಗುಣಗಳಲ್ಲಿ ನಾನು ಸಮಾನಭಾವನು. ವಿಶೇಷಣಗಳನ್ನು ಹೊಂದಿರುವವರಿಗೆ ನಾನು ಮೂಲಭೂತ ವಿಶೇಷಗುಣ. ವಿಸ್ತೃತ ವಿವರಗಳಿಗೆ ಸಂಬಂಧಿಸಿದಂತೆ ಬುದ್ಧಿಶಕ್ತಿ. ಎಲ್ಲ ಸೂಕ್ಷ್ಮ ವಿಷಯಗಳಲ್ಲಿ ನಾನು ಆತ್ಮ. ಹತ್ತಿಕ್ಕಲು ಕಷ್ಟಕರವಾದ ವಿಷಯಗಳಲ್ಲಿ ನಾನೇ ಬುದ್ಧಿ. ವೇದಗಳ ವಿಚಾರದಲ್ಲಿ ನಾನೇ ಬ್ರಹ್ಮನ್ ಹಾಗೂ ಮಂತ್ರಗಳಲ್ಲಿ ಓಮ್ ಎಂಬುದನ್ನು ಒಳಗೊಂಡು ಓಂ. ಅಕ್ಷರಗಳಲ್ಲಿ ನಾನು ಮೊದಲಕ್ಷರವಾದ 'ಅ' ಹಾಗೂ ತ್ರಿಪಾದಿಯಾದ ಗಾಯತ್ರಿ. ದೇವರುಗಳಲ್ಲಿ ನಾನು ಇಂದ್ರ. ವಸುಗಳಲ್ಲಿ ಅಗ್ನಿ. ಆದಿತ್ಯರಲ್ಲಿ ನಾನು ವಿಷ್ಣು. ರುದ್ರರಲ್ಲಿ ನೀಲಲೋಹಿತ (ಶಿವನ ಒಂದು ನಾಮಾಂಕಿತ). ಮಹರ್ಷಿಗಳಲ್ಲಿ ನಾನು ಭೃಗು ಹಾಗೂ ರಾಜರ್ಷಿಗಳಲ್ಲಿ ಮನು. ದೇವಋಷಿಗಳಲ್ಲಿ ನಾನು ನಾರದ. ಗೋವುಗಳಲ್ಲಿ ಕಾಮಧೇನು. ನಾನು ಸಿದ್ಧರಲ್ಲಿ ಕಪಿಲನು. ಪಕ್ಷಿಗಳಲ್ಲಿ ಗರುಡ. ಪಿತೃಗಳಲ್ಲಿ ದಕ್ಷ. ರಾಕ್ಷಸರಲ್ಲಿ ನಾನು ಪ್ರಹ್ಲಾದ. ನಕ್ಷತ್ರಗಳಲ್ಲಿ ಚಂದ್ರ. ಯಕ್ಷರಲ್ಲಿ ಕುಬೇರ. (ಇದು ಭಗವದ್ಗೀತೆಯಲ್ಲೂ ಇದೆ)

ಭಗವಂತನು ಮುಂದುವರಿದು ಹೇಳಿದನು : "ನಾನು ಆನೆಗಳಲ್ಲೆಲ್ಲ ಐರಾವತ, ನೀರನ್ನೆಳೆಯುವವರಲ್ಲಿ ವರುಣನು, ಶಾಖವನ್ನುಂಟು ಮಾಡುವ ಹಾಗೂ ಹೊಳೆಯುವ ವಸ್ತುಗಳಲ್ಲಿ ಸೂರ್ಯನು. ಅಶ್ವಗಳಲ್ಲಿ ನಾನು ಉಚ್ಚೈಶ್ರವಸ್. ಲೋಹಗಳಲ್ಲಿ ಸುವರ್ಣ, ನಿಯಂತ್ರಕರಲ್ಲಿ ನಾನು ಮೃತ್ಯು. ಸರ್ಪಗಳಲ್ಲಿ ವಾಸುಕಿ. ನಾಗರುಗಳ ಮಧ್ಯೆ ನಾನು ಅನಂತ. ಮೃಗಗಳಲ್ಲಿ ಕೇಸರಿ. ಜೀವನದ ವಿವಿಧ ಸ್ತರಗಳಲ್ಲಿ ನಾನು ನಾಲ್ಕನೆಯವನು. ಜಾತಿಗಳಲ್ಲಿ ಮೊದಲನೆಯವನು ಅಥವಾ ಬ್ರಾಹ್ಮಣನು, ನದಿಗಳಲ್ಲಿ ಗಂಗೆ, ಜಲಾಶಯಗಳಲ್ಲಿ ಸಾಗರ, ಆಯುಧಗಳಲ್ಲಿ ನಾನು ಬಿಲ್ಲು. ಬಿಲ್ಲುಗಾರರಲ್ಲಿ ಶಿವನು. ವಾಸಸ್ಥಾನಗಳಲ್ಲಿ ಮೇರು ಪರ್ವತ. ದುರ್ಗಮ ಸ್ಥಳಗಳಲ್ಲಿ ನಾನು ಹಿಮಾಲಯ, ವೃಕ್ಷಗಳಲ್ಲಿ ಅಶ್ವತ್ಥನು. ಪುರೋಹಿತರಲ್ಲಿ ನಾನು ವಸಿಷ್ಠ, ವಿದ್ವಾಂಸರಲ್ಲಿ ಬೃಹಸ್ಪತಿ, ಸೇನಾಧಿಪತಿಗಳಲ್ಲಿ ನಾನು ಸ್ಕಂದ. ಹಾಗೂ ಪ್ರತಿಪಾದಕರಲ್ಲಿ ಬ್ರಹ್ಮ ಯಾಗಾದಿಗಳಲ್ಲಿ ನಾನು ವೇದಾಧ್ಯಯನ ಹಾಗೂ ವ್ರತಗಳಲ್ಲಿ ಅಹಿಂಸಾವ್ರತ. ಪರಿಶುದ್ಧಗೊಳಿಸುವ ವಿಧಾನಗಳಲ್ಲಿ ನಾನು ವಾಯು, ಅಗ್ನಿ, ಸೂರ್ಯ, ವಾಕ್ ಮತ್ತು ಆತ್ಮ (ವಿಶೇಷವಾಗಿ ರುವಂಥವು). ಯೋಗಗಳಲ್ಲಿ ನಾನು ಮನಸ್ಸಿನ ಮೇಲೇ ಪರಿಪೂರ್ಣ ನಿಯಂತ್ರಣವನ್ನಿ ರಿಸಿಕೊಂಡಿದ್ದು ವಿಜಯಕ್ಕಾಗಿ ಹಂಬಲಿಸುವವನಲ್ಲಿ ನಾನು ಸೂತ್ರ, ಎಲ್ಲ ಜಾಣ್ಮೆಗಳಲ್ಲಿ

ನಾನು ತಾರತಮ್ಯನು. ತರ್ಕಗಳಲ್ಲಿ ನಾನು ಸಂಶಯ, ಸ್ತ್ರೀಯರ ಮಧ್ಯೆ ನಾನು ಶತರೂಪ, ಮಾನವರ ಮಧ್ಯೆ ಮನು. ಯೋಗಿಗಳ ಮಧ್ಯೆ ನಾರಾಯಣನು, ಬ್ರಹ್ಮಚಾರಿಗಳಲ್ಲಿ ಸನತ್ಕುಮಾರ. ಧರ್ಮಗಳಲ್ಲಿ ನಾನು ಯತಿ. ಒಳತಿನ ಸಂಪನ್ಮೂಲಗಳಲ್ಲಿ ನಾನು ಶೋಧಕನು. ರಹಸ್ಯಗಳಲ್ಲಿ ನಾನು ಮಧುರ ಮಾತು. ನಿಶ್ಯಬ್ಧ ಹಾಗೂ ಜೋಡಿಗಳಲ್ಲಿ ನಾನು ಬ್ರಹ್ಮ (ತನ್ನ ಶರೀರವನ್ನು ಎರಡು ವಿಭಾಗವನ್ನಾಗಿಸಿಕೊಂಡ ಬ್ರಹ್ಮನು ಮೊದಲ ಜೋಡಿಯನ್ನು ಮನು ಮತ್ತು ಶತರೂಪರಾಗಿ ಸೃಷ್ಟಿಸಿದನು). ಋತುಗಳಲ್ಲಿ ವಸಂತ, ಮಾಸಗಳಲ್ಲಿ ನಾನು ಅಗ್ರಹಾಯನ (ನವೆಂಬರ್ ಮಧ್ಯಭಾಗದಿಂದ ಡಿಸೆಂಬರ್ ಮಧ್ಯದವರೆಗೆ) ಹಾಗೂ ನಕ್ಷತ್ರಗಳಲ್ಲಿ ನಾನು ಅಭಿಜಿತ್ (ಉತ್ತರಾಷಾಢದ ಕೊನೆಯ ತ್ರೈಮಾಸಿಕದಲ್ಲಿ).

ಭಗವಂತನು ಮುಂದೆ ಹೇಳಿದನು: "ಯುಗಗಳಲ್ಲಿ ನಾನು ಸತ್ಯಯುಗ ಮತ್ತು ನಿಶ್ಚಲ ಮನಸ್ಸಿನವರಲ್ಲಿ ನಾನು ದೇವಲ ಮತ್ತು ವೇದಗಳನ್ನು ವಿಂಗಡಿಸುವವರಲ್ಲಿ ನಾನು ದ್ವೈಪಾಯನ. ವಿವೇಕಿಗಳಲ್ಲಿ ಸ್ವಾವಲಂಬಿಯಾದ ಶುಕ್ರ. ಒಡೆಯರಲ್ಲಿ ವಾಸುದೇವ. ಭಕ್ತಾದಿಗಳಲ್ಲಿ ನಾನು ನೀನೇ, ಅಂದರೆ ಉದ್ಧವನು. ಕಿಂಪುರುಷರಲ್ಲಿ ನಾನು ಹನುಮಂತ. ವಿದ್ಯಾಧರರಲ್ಲಿ ಸುದರ್ಶನ. ಮಣಿಗಳಲ್ಲಿ ನಾನು ನೀಲಮಣಿ. ರತ್ನಗಳಲ್ಲಿ ನಾನು ಪದ್ಮರಾಗ. ಸೌಂದರ್ಯದಲ್ಲಿ ಕಮಲದ ಮೊಗ್ಗು. ಗರಿಕೆಗಳಲ್ಲಿ ನಾನು ಕುಶ. ಹವಿಸ್ಸುಗಳಲ್ಲಿ ನಾನು ಗೋವಿನ ಹಾಲಿನಿಂದ ಕಡೆದ ನವನೀತ. ಶಕ್ತಿವಂತರಲ್ಲಿ ಅದೃಷ್ಟ. ವಂಚನೆಗಾರರಲ್ಲಿ ಮೋಸ. ಶ್ರಮಿಕರಲ್ಲಿ ನಾನು ಸೈರಣೆ. ಸ್ಥಿರಮನಸ್ಸಿನವರಲ್ಲಿ ಸಮತೋಲನ. ಬಲಿಷ್ಠರಲ್ಲಿ ಶಕ್ತಿ. ಭಕ್ತಾದಿಗಳಲ್ಲಿ ಸೇವೆ. ಭಕ್ತರು ಆರಾಧಿಸುವ ಒಂಬತ್ತು ಆಕಾರಗಳಲ್ಲಿ ನಾನು ಮೊದಲ ಆಕೃತಿ, ವಾಸುದೇವ. ಗಂಧರ್ವರು ಹಾಗೂ ಅಪ್ಸರೆಯರಲ್ಲಿ ನಾನು ಕ್ರಮವಾಗಿ ವಿಶ್ವವಸು ಹಾಗೂ ಪೂರ್ವಚಿತ್ತಿ. ನಾನು ಪರ್ವತಗಳಲ್ಲಿ ಸ್ಥಿರತೆ. ನಾನು ನೀರಿನಲ್ಲಿ ಮಾಧುರ್ಯ. ಪ್ರಕಾಶಮಯವಾದವುಗಳಲ್ಲಿ ಸೂರ್ಯ. ನಾನು ಸೂರ್ಯ, ಚಂದ್ರ ಮತ್ತು ನಕ್ಷತ್ರಗಳಲ್ಲಿ ಹೊಳಪು ಹಾಗೂ ಹವೆಯಲ್ಲಿ ಸೂಕ್ಷ್ಮನಾದ. ಬ್ರಾಹ್ಮಣರ ಆರಾಧಕರಲ್ಲಿ ನಾನು ಬಲಿ ಚಕ್ರವರ್ತಿ. ವೀರರಲ್ಲಿ ಅರ್ಜುನ, ನಾನು ಸ್ಪಷ್ಟವಾಗಿ ಎಲ್ಲ ಜೀವಿಗಳ ಹುಟ್ಟು, ಮುನ್ನಡೆ ಹಾಗೂ ನಿರ್ನಾಮ. ನಾನು ಚಲನೆ, ವಾಕ್, ಅಸ್ವೀಕಾರ, ಸ್ವೀಕಾರ, ಅನುಭೋಗ, ಸ್ಪರ್ಶ, ನೋಟ, ರುಚಿ, ಆಲಿಸುವಿಕೆ ಹಾಗೂ ಅಂಗಗಳ ಸುವಾಸನೆ. ನಾನು ಅವರ ಕ್ರಿಯೆಗಳನ್ನು ಸೃಷ್ಟಿಸುತ್ತೇನೆ. ಭೂಮಿ, ವಾಯು, ಮೇಘ, ಜಲ, ಬೆಳಕು, ಆವಿ ಮತ್ತು ವಿಶ್ವದ ಬುದ್ಧಿಶಕ್ತಿಯನ್ನು,ಪ್ರಕೃತಿಯ ಹದಿನಾರು ಸಾಕಾರ ರೂಪಗಳನ್ನು, ಪುರುಷ ಮತ್ತು ಪ್ರಕೃತಿ, ಸತ್ತ್ವ, ರಜಸ್ ಮತ್ತು ತಮಸ್, ಬ್ರಹ್ಮದೇವ ಇವೆಲ್ಲವೂ ನಾನೇ. ನಾನು ಅವರ ಗಣಕ. ಅವರ ಜ್ಞಾನ ಮತ್ತು ಸತ್ವದ ಸಾಕ್ಷಾತ್ಕಾರ. ಭಗವಂತ ಮತ್ತು ಜೀವನೆಂಬ ತನ್ನ ಎರಡು ವಿವಿಧ ರೂಪಗಳಲ್ಲಿ ಇರುವವನು. ಅವನಿಲ್ಲದೆಯೇ ಇಲ್ಲಿಯವರೆಗೂ ಯಾವುದೂ ಅಸ್ತಿತ್ವದಲ್ಲಿಲ್ಲ ಎಂದು ಭಗವಂತನು ಹೇಳಿದನು.

ಅವನು ಕಾಲಕ್ರಮದಲ್ಲಿ ಪ್ರಾಥಮಿಕ ಮೂಲಾಂಶಗಳಲ್ಲಿನ ಅಣುಗಳನ್ನು ಎಣಿಸ ಬಹುದೇ ಹೊರತು ಅವನ ಅವತಾರಗಳನ್ನಲ್ಲ. ಏಕೆಂದರೆ ಕೋಟ್ಯಾಂತರ ಜಗತ್ತುಗಳನ್ನು

ಸೃಷ್ಟಿಸುತ್ತಿರುವವನು ಅವನೇ. ಭಗವಂತನ ಶಕ್ತಿ, ಸೌಂದರ್ಯ, ಖ್ಯಾತಿ, ಸಮೃದ್ಧಿ, ಮನ್ನಣೆ, ತ್ಯಾಗ, ಅಂಗೀಕಾರ, ಅದೃಷ್ಟ, ಶಕ್ತಿ, ಸ್ಥೈರ್ಯ ಅಥವಾ ಜ್ಞಾನವೆಲ್ಲಿವೆಯೋ ಅಲ್ಲೆಲ್ಲ ಅವತರಿಸುತ್ತಾನೆ.

ಶ್ರೀ ಕೃಷ್ಣ ಪರಮಾತ್ಮನೆಂದನು: "ನನ್ನ ಈ ಅವತಾರಗಳೆಲ್ಲವನ್ನು ನಾನು ಸಂಗ್ರಹ ರೂಪದಲ್ಲಿ ವಿವರಿಸಿದ್ದೇನೆ. ಅವು ಮನಸ್ಸಿನಲ್ಲಿ ರೂಪುಗೊಂಡಂಥವು ಹೇಗೋ ಹಾಗೆಯೇ ಮಾತಿನಲ್ಲಿ ವ್ಯಕ್ತವಾಗಿವೆ. ಆದ್ದರಿಂದ ನನಗೆ ಸಂಪೂರ್ಣವಾಗಿ ಹೊಂದಿಕೊಂಡಂಥವ ನಾಗು. ಒಬ್ಬರು ಮಾತು, ಮನಸ್ಸು ಮತ್ತು ಪ್ರಾಣಗಳನ್ನು ಭಕ್ತಿಯಿಂದೊಡಗೂಡಿದ ಬುದ್ಧಿಯ ಮೂಲಕ ನನ್ನನ್ನು ನಿಯಂತ್ರಿಸಬೇಕು. ಆಗ ಅವರು ಗುರಿಯನ್ನು ಸಾಧಿಸುತ್ತಾರೆ.

ಒಬ್ಬರು ಪರಮಾತ್ಮನ ಬಗ್ಗೆ ಭಕ್ತಿಯನ್ನು ಬೆಳೆಸಿಕೊಳ್ಳಬಹುದಾದ ಧರ್ಮ ಯಾವುದೆಂಬುದನ್ನು ಉದ್ಧವನು ತಿಳಿಯಬಯಸಿದನು. ಕಾಲಾನುಕ್ರಮದಲ್ಲಿ ಹಂಸದ ರೂಪದಲ್ಲಿ ಅವನು ಬೋಧಿಸಿದ ಧರ್ಮವೂ ಸಹ ಅಸ್ತಿತ್ವವನ್ನು ಕಳೆದುಕೊಂಡಿದೆ. ಆದ್ದರಿಂದ ಉದ್ಧವನು ನಿನ್ನಲ್ಲಿ ಭಕ್ತಿಯನ್ನು ನಿಲ್ಲಿಸಿಕೊಳ್ಳುವಂಥ ಧರ್ಮ ಯಾವುದು ಹಾಗೂ ಅದನ್ನು ಹೇಗೆ ಅಳವಡಿಸಿಕೊಳ್ಳಬೇಕು ಎಂಬುದನ್ನು ಭಗವಂತನು ತಿಳಿಸಬೇಕೆಂದನು. ಪರಮಾತ್ಮನು ಅದಕ್ಕೆ ಆದಿಯಲ್ಲಿ, ಅಂದರೆ ಕೃತ ಮತ್ತು ಸತ್ಯಯುಗದಲ್ಲಿ ಮಾನವರು ಹಂಸವೆಂಬ ಒಂದೇ ಜಾತಿಯನ್ನು ಹೊಂದಿದ್ದರು. "ಜನರು ತಮ್ಮ ಹುಟ್ಟಿನಿಂದಲೇ ತಮ್ಮ ಬಯಕೆಗಳ ಪೂರೈಕೆಯನ್ನು ಕಂಡುಕೊಳ್ಳುತ್ತಿದ್ದುದರಿಂದ ಆ ಯುಗವನ್ನು ಕೃತ (ಸಾಧನೆ) ಎಂದು ಕರೆಯಲಾಗುತ್ತಿತ್ತು". ಆ ಸಮಯದಲ್ಲಿ 'ಓಂ' ಎಂಬುದು ವೇದವಾಗಿದ್ದು ಭಗವಂತನು ಧರ್ಮವನ್ನು ಪ್ರತಿನಿಧಿಸುವ ಹೋರಿಯಾಗಿದ್ದನು. ಪರಿಶುದ್ಧರಾಗಿ ಧ್ಯಾನಮಗ್ನರಾಗಿದ್ದ ಆ ಯುಗದ ಜನರು ಅವನನ್ನೇ ಪ್ರತಿಬಿಂಬಿಸುತ್ತಿದ್ದರು. ತ್ರೇತಾಯುಗದ ಪ್ರಾರಂಭದಲ್ಲಿ ಪ್ರಾಣದ ಮೂಲಕ ವೇದ ವ್ಯಾಸರು ಭಗವಂತನ ಹೃದಯದಲ್ಲಿ ಕಾಣಿಸಿಕೊಂಡರು. ಅವುಗಳನ್ನು ಅವನು ಮೂರು ವಿಧವಾದ ವಿಶೇಷಣಗಳನ್ನು ಅಂದರೆ - ಹೋತ, ಅಧ್ವೈರ್ಯ ಮತ್ತು ಉದ್ಗತವೆಂಬ - ವೈದಿಕ ಧರ್ಮಕ್ಕೆ ಸಂಬಂಧಿಸಿದಂತೆ ವಿವಿಧ ಕ್ರಿಯೆಗಳನ್ನು ನಡೆಸುವಂಥವಾದನು.

ವಿರಾಟ - ಅಂದರೆ ಭಗವಂತನ ವ್ಯಕ್ತಗೊಂಡ ಶರೀರದಿಂದ ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು ಮತ್ತು ಶೂದ್ರರು, ಬಾಯಿ, ಬಾಹುಗಳು, ತೊಡೆಗಳು ಮತ್ತು ಪಾದಗಳಿಂದ ಚಿಮ್ಮಿದರು. ಜೀವನವು (ದಾನವನ್ನೇ ಮುಖ್ಯ ಗುಣವಾಗಿ ಹೊಂದಿದ್ದ) ಅವನ ಹೃದಯದಿಂದ, ವಾನಪ್ರಸ್ಥಾಶ್ರಮವು ಅವನ ವಕ್ಷಸ್ಥಲದಿಂದ ಹಾಗೂ ಸನ್ಯಾಸವು ಅವನ ಶಿರದಿಂದ ಉದ್ಭವಗೊಂಡವು.

ವಿವಿಧ ಜಾತಿಗಳು ಹಾಗೂ ಮಾನವರ ಮಧ್ಯದಲ್ಲಿನ ಜೀವನಸ್ತರಗಳು ವಿರಾಟನ ಶರೀರದಲ್ಲಿನ ಸ್ಥಳಗಳ ಮೂಲದಿಂದ ಹುಟ್ಟಿದವುಗಳಾಗಿದ್ದು ಕೆಳಸ್ತರಗಳು ಕೆಳಪ್ರವೃತ್ತಿಗಳನ್ನು ಹಾಗೂ ಶ್ರೇಷ್ಠವಾದವುಗಳು ಶ್ರೇಷ್ಠತರ ಸ್ಥಾನಗಳನ್ನು ಒದಗಿಸಿದವು.

ಬ್ರಾಹ್ಮಣರ ಪ್ರವೃತ್ತಿಗಳೆಂದರೆ: "ಮನಸ್ಸು ಮತ್ತು ಬುದ್ಧಿಯ ಮೇಲೆ ಸ್ಥಿಮಿತ, ಧ್ಯಾನಮಗ್ನತೆ, ಶುಚಿ, ಸಂತೃಪ್ತಿ, ತಾಳ್ಮೆ, ನೇರನುಡಿ, ಪರಮಾತ್ಮನ ಬಗ್ಗೆ ಭಕ್ತಿ, ದಯೆ ಮತ್ತು ಸತ್ಯಸಂಧತೆ; ಕ್ಷತ್ರಿಯರ ಗುಣಗಳೆಂದರೆ: ಕುಗ್ಗದ ಉತ್ಸಾಹ, ಶಕ್ತಿ, ತಾಳ್ಮೆ, ಶೌರ್ಯ, ಸ್ಥೈರ್ಯ, ಉದಾರತೆ, ಸ್ಥಿರತೆ, ಬ್ರಾಹ್ಮಣರು ಹಾಗೂ ದೈವದ ಬಗ್ಗೆ ಗೌರವ; ವೈಶ್ಯರ ಗುಣಗಳೆಂದರೆ: ದೈವಭಕ್ತಿ, ದೈನ್ಯತೆ, ವಿನಯ, ಬ್ರಾಹ್ಮಣರ ಸೇವೆ, ಸಂಪತ್ತಿನ ಗಳಿಕೆಯ ಆಸೆ; ಶೂದ್ರರ ಗುಣಗಳೆಂದರೆ: ಬ್ರಾಹ್ಮಣರು, ಹಸುಗಳು ಮತ್ತು ದೈವವನ್ನು ನಿಸ್ಪೃಹತೆಯಿಂದ ಸೇವಿಸುವುದು ಹಾಗೂ ಪಡೆದಷ್ಟನ್ನೇ ಸಂತೃಪ್ತಿಯಿಂದ ಸ್ವೀಕರಿಸುವುದು.

ಎಲ್ಲ ಜಾತಿಗಳಿಗೂ ಅನ್ವಯವಾಗುವ ಕರ್ತವ್ಯಗಳೆಂದರೆ : ಅಹಿಂಸೆ, ಸತ್ಯಸಂಧತೆ, ಕಳವು ಮಾಡದಿರುವುದು, ಕಾಮ ಕ್ರೋಧ ಮತ್ತು ದುರಾಸೆಯಿಂದ ಮುಕ್ತಿ ಹಾಗೂ ಎಲ್ಲ ಜೀವಿಗಳಿಗೂ ಒಪ್ಪಿಗೆಯಾಗುವಂಥ ಹಾಗೂ ಒಳಿತಾಗುವಂಥಹುದನ್ನು ಮಾಡುವ ಪ್ರಯತ್ನ.

ಪ್ರಾಚೀನ ಹಾಗೂ ಪರಿಶುದ್ಧ ಜ್ಞಾನವು ನಿರ್ಮಮಕಾರ ಹಾಗೂ ಅರಿಯುವಿಕೆಯೊಂದಿಗೆ ಹೇಗೆ ಸ್ಥಿರವಾಗುತ್ತದೆ ಎಂಬುದನ್ನು ತಿಳಿಸಿಕೊಡುವಂತೆ ಉದ್ಧವನು ಭಗವಂತನನ್ನು ಕೋರಿದನು. ಉನ್ನತ ಮುನಿಗಳು ಮತ್ತು ಬ್ರಾಹ್ಮಣರೂ ಸಹ ಬಯಸಿದಂಥ ಪರಮಾತ್ಮನನ್ನು ಕುರಿತ ಕ್ರಮಬದ್ಧ ಭಕ್ತಿಯ ಬಗ್ಗೆಯೂ ಉದ್ಧವನು ತಿಳಿದುಕೊಳ್ಳಲು ಬಯಸಿದನು. ಮಹಾಭಾರತ ಯುದ್ಧದ ನಂತರ ಯುದಿಷ್ಠಿರನೂ ಭೀಷ್ಮನನ್ನು ಇಂಥದ್ದೇ ಪ್ರಶ್ನೆಯನ್ನು ಕೇಳಿದ್ದನೆಂಬುದಾಗಿ ಭಗವಂತನು ಉತ್ತರಿಸಿದನು. ಭಗವಂತನೆಂದನು ಜ್ಞಾನ, ನಿರ್ಮಮಕಾರ, ಅರಿವು, ನಂಬಿಕೆ ಮತ್ತು ಭಕ್ತಿಯಿಂದ ಒಡಗೂಡಿದ ಧರ್ಮವನ್ನು ಕುರಿತು ಹೇಳುತ್ತೇನೆ ಕೇಳು".

ಇಪ್ಪತೆಂಟು ತತ್ತ್ವಗಳು (ಪ್ರಕೃತಿ, ಪುರುಷ, ಮಹತ್, ಅಹಂಕಾರ ಮತ್ತು ಐದು ತನ್ಮಾತ್ರಗಳು, ಐದು ಕ್ರರ್ಮೇಂದ್ರಿಯಗಳು, ಐದು ಜ್ಞಾನೇಂದ್ರೀಯಗಳು ಮತ್ತು ಮನಸ್ಸು, ಪಂಚ ಮಹಾಭೂತಗಳು, ಸತ್ತ್ವ, ರಜಸ್ ಮತ್ತು ತಮಸ) ಅನುಗತವಾಗಿದೆಯೆಂದು ಯಾವುದು ನಿರ್ಣಯಿಸುತ್ತದೆಯೋ, ಅದೇ ಜ್ಞಾನ. ಬದಲಾಗುತ್ತಿರುವ ಜಗತ್ತಿನಲ್ಲಿ "ಬ್ರಹ್ಮನ್" ಒಬ್ಬನೇ ಶಾಶ್ವತ ಎಂದು ತಿಳಿಯುವುದು ಜ್ಞಾನ.

ಉದ್ಧವನು ಭಗವಂತನನ್ನು 'ಯಮ' (ವಿಶ್ವ ನೈತಿಕ ದೃಷ್ಟಿ) ಮತ್ತು 'ನಿಯಮ' (ನಿರ್ದಿಷ್ಟ ನೈತಿಕ ನೋಟ) ವಿಧಗಳ ಬಗ್ಗೆ ಕೇಳಿದನು ಹಾಗೂ ಅವನ್ನು ತಿಳಿದುಕೊಳ್ಳಲು ಬಯಸಿದನು : "ಪ್ರಶಾಂತತೆ, ಸ್ವಯಂನಿಯಂತ್ರಣ, ಶೌರ್ಯ, ತಾಳ್ಮೆ ದಾನ, ತಪಸ್ಸು, ನಿಸ್ಪೃಹತೆ, ಸತ್ಯಸಂಧತೆ, ತ್ಯಾಗ, ಅರ್ಹ ಐಶ್ವರ್ಯ ಸಂಪಾದನೆ, ಮನುಷ್ಯ ಶಕ್ತಿ, ಅದೃಷ್ಟ, ಲಾಭ, ಪಾಂಡಿತ್ಯ, ಸಂಕೋಚ, ಅತ್ಯುನ್ನತ ಸೌಂದರ್ಯ, ಹರ್ಷ, ಸಂಕಷ್ಟ ಇವುಗಳೆಂದರೇನು?" "ಪಂಡಿತನಾದವನು ಯಾರು, ಮೂರ್ಖನ್ಯಾರು, ಮಾರ್ಗವ್ಯಾವುದು, ಹಾಗೂ ಅದನ್ನು ಬದಲಾಯಿಸುವುದು ಹೇಗೆ? ಸ್ವರ್ಗನರಕಗಳೆಂದರೇನು,

ಗೆಳೆಯ ಹಾಗೂ ಗೃಹವೆಂಬುದು ಯಾವುದು, ಯಾರು ಶ್ರೀಮಂತರು, ಯಾರು ಬಡವರು, ಯಾರು ಸೇವಕರು, ಯಾರು ಒಡೆಯರು?" ಉದ್ಧವನು ಈ ಪ್ರಶ್ನೆಗಳಿಗೆ ಹಾಗೂ ಅವುಗಳಿಗೆ ತದ್ವಿರುದ್ಧವಾದ ಅಂಶಗಳ ಬಗ್ಗೆಯೂ ಉತ್ತರಗಳನ್ನೂ ಪಡೆಯಲು ಬಯಸಿದನು.

ಅದಕ್ಕೆ ಶ್ರೀ ಕೃಷ್ಣ ಪರಮಾತ್ಮನು ಹನ್ನೆರಡು ಸದ್ಗುಣಗಳು ಯಮ ನಿಯಮಗಳನ್ನು ರೂಪಿಸುತ್ತವೆ ಎಂದನು. ಅವುಗಳೆಂದರೆ ಹಾನಿ ಮಾಡದಿರುವುದು, ಸತ್ಯಸಂಧತೆ, ಕಳವು ಮಾಡದಿರುವುದು, ವ್ಯಾಮೋಹವನ್ನು ತ್ಯಜಿಸುವುದು, ಐಶ್ವರ್ಯವನ್ನು ಸಂಗ್ರಹಿಸ ದಿರುವುದು, ಭಗವಂತನಲ್ಲಿ ನಂಬಿಕೆ, ಸಚ್ಚಾರಿತ್ರ್ಯ, ಮೌನ, ತಾಳ್ಮೆ, ಕ್ಷಮಾಗುಣ, ಭಯರಾಹಿತ್ಯತೆ. ನಿಯಮದ ಕೆಳಗೆ : ಮನಸ್ಸಿನ ಪರಿಶುದ್ಧತೆ, ಶರೀರದ ಪರಿಶುದ್ಧತೆ, ಭಗವಂತನ ಸತತ ನಾಮಸ್ಮರಣೆ, ಸರಳತೆ, ಪವಿತ್ರಾಗ್ನಿಗೆ ಹವಿಸ್ಸಿನ ಸಮರ್ಪಣೆ, ಅತಿಥಿ ಸತ್ಕಾರ, ಭಜನೆ, ಪವಿತ್ರ ಸ್ಥಳಗಳ ಸಂದರ್ಶನ, ಇತರರ ಒಳಿತಿಗಾಗಿ ಕಾರ್ಯ ಸಂತೃಪ್ತಿ, ಆಚಾರ್ಯರ ಸೇವೆ ಇವು ಸೇರಿವೆ. ಭಗವಂತನ ಬಗೆಗಿನ ಭಕ್ತಿಗೆ ಮನಸ್ಸನ್ನು ಸತತವಾಗಿ ಪ್ರಶಾಂತವಾಗಿ ಇರಿಸಿಕೊಳ್ಳುವುದು ಅಗತ್ಯ. ಸ್ವಯಂ ನಿಯಂತ್ರಣ, ಇಂದ್ರಿಯಗಳ ನಿಯಂತ್ರಣ, ಸ್ಥೈರ್ಯದಿಂದ ದುಃಖವನ್ನು ಎದುರಿಸುವುದು, ನಾಲಿಗೆ ಮತ್ತು ಲೈಂಗಿಕ ಅಮಿಷಗಳ ಬಗ್ಗೆ ಸಂಪೂರ್ಣ ನಿಯಂತ್ರಣ.

ಅತ್ಯುನ್ನತ ಉದಾರತೆಯೆಂದರೆ ಜೀವಿಗಳ ಮೇಲೆ ಹಿಂಸೆಯನ್ನು ಎಸಗುವ ಆಲೋಚನೆಯನ್ನು ಬಿಡುವುದು. ತಪಸ್ಸು, ಆಸೆಗಳನ್ನು ಬಿಟ್ಟುಕೊಡುವಂಥಾದ್ದು. ಶೌರ್ಯವು ಒಬ್ಬರ ಸ್ವಭಾವವನ್ನು ಜಯಿಸುವುದು. ನಿಸ್ಪೃಹತೆ ಎನ್ನುವುದು ಪ್ರತಿಯೊಂ ದನ್ನು ಸಮಾನ ದೃಷ್ಟಿಯಿಂದ ನೋಡುವುದು. ಸತ್ಯಸಂಧತೆಯು ಮುನಿಗಳು ಕೊಂಡಾ ಡುವ ನಿಜವಾದ ಹಾಗೂ ಅಂಗೀಕೃತ ಮಾತು. ಪರಿಶುದ್ಧತೆ ಎನ್ನುವುದು ಕಾರ್ಯಗಳ ಬಗ್ಗೆ ನಿರ್ವ್ಯಾಮೋಹ. ಧರ್ಮವೆನ್ನುವುದು ಜನರು ಹೊಂದಬಹುದಾದ ಸಂಪತ್ತು. ಪರಮಾತ್ಮನೆಂದರೆ ಯಜ್ಞ. ಜ್ಞಾನಬೋಧನೆಯು ಧಾರ್ಮಿಕ ವೇತನ, ಅತ್ಯುನ್ನತ ಶಕ್ತಿಯೆನ್ನುವುದು ಪ್ರಾಣದ ನಿಯಂತ್ರಣ. ಅದೃಷ್ಟವೆನ್ನುವುದು ನನ್ನ ದೈವಿಕ ಸ್ಥಿತಿ. ಅತ್ಯುತ್ತಮ ಲಾಭವು ನನ್ನ ಬಗೆಗಿನ ಭಕ್ತಿ. ಕಲಿಕೆಯೆನ್ನುವುದು ಆತ್ಮದಲ್ಲಿನ ದ್ವಿಗುಣ ಗೊಳ್ಳುವಿಕೆ, ಆಲೋಚನೆಯನ್ನು ನಾಶಪಡಿಸುವುದು. ನಾಚಿಕೆಯನ್ನುವುದು ಹೇಯ ಕೃತ್ಯಗಳ ಬಗ್ಗೆ ಅಸಡ್ಡೆ. ಸೌಂದರ್ಯವು ಸ್ವಾತಂತ್ರ್ಯ ಮನೋಭಾವದಂಥ ಗುಣಗಳನ್ನು ಹೊಂದಿರುತ್ತದೆ. ಸಂತಸ ಎನ್ನುವುದು ಸಂತೋಷ ಹಾಗೂ ನೋವಿಗೆ ಅತೀತನಾಗಿರು ವುದು. ಸಂಕಷ್ಟ ಎನ್ನುವುದು ಇಂದ್ರಿಯ ಆನಂದಕ್ಕಾಗಿ ಕಳವಳಿಸುವುದು. ಪಾರಂಗತನೆಂ ಬುವನು ಬಂಧನ ಹಾಗೂ ವಿಮೋಚನೆಯ ಮಧ್ಯದಲ್ಲಿನ ವ್ಯತ್ಯಾಸವನ್ನು ತಿಳಿಯುವಂ ಥವನು. ಮೂರ್ಖನೆನ್ನುವವನು ತನ್ನನ್ನೇ ದೇಹದೊಂದಿಗೆ ಗುರುತಿಸಿಕೊಳ್ಳುವವನು. ಸರಿಯಾದ ಮಾರ್ಗವೆಂದರೆ ನನ್ನೆಡೆಗೆ ತರುವಂಥ ಮಾರ್ಗ. ತಪ್ಪು ಹಾದಿಯೆನ್ನುವುದು ಮನಸ್ಸಿನಲ್ಲಿ ಗೊಂದಲವನ್ನು ಉಂಟು ಮಾಡುವಂಥದ್ದು. ಸ್ವರ್ಗವೆನ್ನುವುದು ಮನಸ್ಸಿನ ಸತ್ತ್ವವನ್ನು ಏರಿಸುವಿಕೆ. ನರಕವೆನ್ನುವುದು ಮನಸ್ಸಿನಲ್ಲಿ ತಮಸ್‌ನ್ನು ಏರಿಸುವುದು.

ಬಂಧುವೆಂದರೆ ಗುರು. ಗುರವೆಂದರೆ ನಾನೇ. ಸದ್ಗುಣಗಳನ್ನು ಹೊಂದಿರುವವನೇ ಶ್ರೀಮಂತನು. ಅತೃಪ್ತನಾದವನೇ ಬಡವನು. ಇಂದ್ರಿಯಗಳಿಗೆ ಒಡೆಯನಾಗದವನು ಹೇಯನಾದವನು. ಅವುಗಳಿಗೆ ಕಚ್ಚಿಕೊಳ್ಳದಿರುವವನು ಪ್ರಭು.

ಉದ್ಧವನು ಮುಂದೆ ಹೇಳಿದನು. ವೇದಗಳು ಅವನ ಕಟ್ಟಳೆಗಳಾಗಿದ್ದು ಅವು ಸೂಚನೆಗಳನ್ನು, ನಿರ್ಬಂಧನೆಗಳನ್ನು, ಜಾತಿಗಳ ಕೆಲಸ ಹಾಗೂ ವ್ಯವಸ್ಥೆಗಳನ್ನು, ಅನುಲೋಮ ಹಾಗೂ ಪ್ರತಿಲೋಮಗಳನ್ನು ಹಾಗೂ ಇವು ಹೇಗೆ ಒಬ್ಬರ ಜೀವನಕ್ಕೆ ಅಗತ್ಯವೆಂಬುದನ್ನು ತಿಳಿಸುತ್ತವೆ. ಇವು ಉದ್ಧವನ ಮನಸ್ಸಿನಲ್ಲಿ ಗೊಂದಲಗಳನ್ನು ಉಂಟು ಮಾಡಿವೆ. ಇವನ್ನು ವಿವರಿಸುವಂತೆ ಅವನು ಭಗವಂತನನ್ನು ಬೇಡಿದನು. ಭಗವಂತನೆಂದನು : " ಮನುಷ್ಯರ ವಿಮೋಚನೆಗಾಗಿ ನಾನು ಮೂರು ಯೋಗಗಳನ್ನು ಜ್ಞಾನ, ಕರ್ಮ ಮತ್ತು ಭಕ್ತಿ - ಇವನ್ನು ಸೂಚಿಸಿದ್ದೇನೆ. ಇವುಗಳಾಚೆಗೆ ಯಾವುದೇ ವಿಧಾನವಿಲ್ಲ. ಇವುಗಳಲ್ಲಿ ಜ್ಞಾನಮಾರ್ಗ ಕರ್ಮದಿಂದ ಬೇಸತ್ತವರಿಗೆ; ಅದರಿಂದ ಬೇಸರವಾಗದೆ ಅವರ ಫಲಗಳಿಗೆ ಆಸೆ ಪಡುವವರಿಗೆ ಇರುವುದು ಕರ್ಮಮಾರ್ಗ. ಆದರೆ ಮಾನವನು ಹೇಗೋ ನನ್ನ ಬಗೆಗಿನ ಕಥಾನಕಗಳಲ್ಲಿ ಆಸಕ್ತಿ ಹೊಂದಿದವನಾಗಿದ್ದು ಜಿಗುಪ್ಸೆಯನ್ನು ಹೊಂದದೆ, ಕರ್ಮಕ್ಕೂ ಅಂಟಿಕೊಂಡಿರದೆ ಇದ್ದು ಅಂಥವರಿಗೆ ಭಕ್ತಿ ಮಾರ್ಗವೇ ಯಶಸ್ಸನ್ನು ತಂದುಕೊಡುವಂಥಾದ್ದು.

ಯೋಗಿಯು ತನ್ನ ಇಂದ್ರಿಯಗಳನ್ನು ನಿಯಂತ್ರಿಸಕೊಂಡು, ಆತ್ಮನ್‌ನ್ನು ಧ್ಯಾನಿಸುವುದರ ಮೂಲಕ ಚಿತ್ತಶುದ್ಧಿಯನ್ನು ಸಾಧಿಸಬೇಕು. ಇದು ಅತ್ಯುನ್ನತ ಯೋಗ. ಯೋಗ ಮಾರ್ಗದಿಂದಾಗಲಿ, ಜ್ಞಾನ ಮಾರ್ಗದಿಂದಾಗಲಿ ಅಥವಾ ಅರ್ಚನೆಯಿಂದಾಗಲಿ ಮನಸ್ಸು ಯಾವಾಗಲೂ ಪರಮಾತ್ಮನನ್ನು ಸ್ಮರಿಸುತ್ತಿರಬೇಕು.

ತನ್ನ ವಲಯದಲ್ಲಿನ ಕರ್ತವ್ಯಗಳಿಗೆ ಬದ್ಧನಾಗಿರುವುದನ್ನು ಒಳಿತೆನ್ನಲಾಗಿದೆ. ತಮ್ಮ ಗುಣಾವಗುಣಗಳನ್ನು ಹೇಳಿಕೊಳ್ಳುವುದರಿಂದ ಕ್ರಿಯೆಗಳ ಬಗ್ಗೆ ಒಂದು ವಿಧವಾದ ನಿರ್ಬಂಧನೆಯುಂಟಾಗಿ ಅವುಗಳ ಬಗೆಗಿನ ವ್ಯಾಮೋಹವನ್ನು ತೆಗೆದು ಹಾಕುವುದಕ್ಕೆ ಸಂಬಂಧವಿಟ್ಟಂತೆ ಅಪರಿಶುದ್ಧನಾಗುತ್ತಾನೆ. (ಹೀಗೆ ಮಾಡುವಾಗ ಕೆಲವನ್ನು ಅನುಭವಿಸುವುದು ಹಾಗೂ ಕೆಲವನ್ನು ನಿರ್ಬಂಧಿಸುವುದು ಎಂದು ಅರ್ಥವಾಗುತ್ತದೆ. ಕಾರ್ಯವೆಸುಗುವ ಬಗ್ಗೆ ಮಾನವನ ಸಹಜ ಪ್ರವೃತ್ತಿಯು ಎಲ್ಲ ಕಿಡಿಗೇಡಿತನಕ್ಕೂ ಮೂಲವಾಗಿದ್ದು ಅದನ್ನು ಕಾಲಕ್ರಮೇಣ ನಿಯಂತ್ರಿಸಿಕೊಳ್ಳಬಹುದು). ಜ್ಞಾನಾರ್ಜನೆ ಅಥವಾ ನಿರ್ಮಮಕಾರವನ್ನು, ನನ್ನಲ್ಲಿ ತನ್ನ ಮನಸ್ಸನ್ನು ಇಟ್ಟ ಯೋಗಿಯು ಅಪರೂಪಕ್ಕೊಮ್ಮೆ ಬಳಸುತ್ತಾನೆ.

ಕಾರ್ಯಗಳು, ವಿಧಿಗಳು, ಜ್ಞಾನ, ನಿರ್ಮಮಕಾರ, ಯೋಗ ಅಥವಾ ದಾನ ಇಲ್ಲವೇ ಯಾವುದೇ ಒಳಿತಿನ ವಿಧಾನದ ಮೂಲಕ ಪಡೆದುಕೊಂಡಥದ್ದು. ನನ್ನ ಭಕ್ತನು ನನ್ನ ಮೇಲಿನ ಭಕ್ತಿಯ ಮೂಲಕ ಅದನ್ನು ಸುಲಭವಾಗಿ ಸಾಧಿಸುತ್ತಾನೆ. ಅದು ಸ್ವರ್ಗದಲ್ಲೇ ಆಗಿರಬಹುದು ಅಥವಾ ವಿಮೋಚನೆಯಲ್ಲಿ ಇಲ್ಲವೇ ನನ್ನ ಆವಾಸಸ್ಥಾನದಲ್ಲಿ ಅವನ ಇಚ್ಛೆಗೆ ಅನುಗುಣವಾಗಿರಬಹುದು. ನನ್ನ ಮೇಲೆ ಮನಸ್ಸಿಟ್ಟಿರುವ ಮುನಿಸದೃಶರು ಎಂದೂ ಸ್ವಾತಂತ್ರ್ಯವನ್ನು ಬಯಸುವುದಿಲ್ಲ. ಯಾವ ಆಸೆಯೂ ಇಲ್ಲದ

ವನು ನನ್ನ ಮೇಲಿನ ಭಕ್ತಿಯನ್ನು ಹೊರತು ಮತ್ತೇನನ್ನೂ ಬಯಸುವುದಿಲ್ಲ. ನನ್ನ ಮೇಲೆ ಭಕ್ತಿಯನ್ನು ಇಟ್ಟಿರುವವರಿಗೆ ಯಾವುದೂ ಬಾಧಿಸುವುದಿಲ್ಲ".

ನಾನು ಬೋಧಿಸಿದ ಭಕ್ತಿ, ಜ್ಞಾನ, ಕರ್ಮವನ್ನೂ ಬಿಟ್ಟು ತಮ್ಮ ಅವಯವಗಳ ಮೂಲಕ ತಮ್ಮ ಸಣ್ಣಪುಟ್ಟ ಹಂಬಲಗಳನ್ನು ತೀರಿಸಿಕೊಳ್ಳುವವರು ಜನನದಿಂದ ಮೃತ್ಯುವಿಗೆ ಸಾಗುತ್ತಾರೆ.

ಭಗವಂತನು ಮುಂದುವರಿದು ಭೂಮಿ, ನೀರು, ಅಗ್ನಿ ಹಾಗೂ ಆಕಾಶ, ಬ್ರಹ್ಮನಿಂದ ಹಿಡಿದು ವೃಕ್ಷದವರೆಗೆ ಎಲ್ಲಕ್ಕೂ ಇಂಥ ಸಾಮಾನ್ಯ ಅಂಶಗಳೆಂದನು. ದೇಹಗಳು ಒಂದೇ ರೀತಿಯಾಗಿದ್ದರೂ, ವೇದಗಳು ಅವರ ಒಳಿತಿಗಾಗಿಯೇ ವಿವಿಧ ಹೆಸರುಗಳನ್ನು ನೀಡಿವೆ. ಬ್ರಾಹ್ಮಣರಿಗೆ ಭಕ್ತಿ ಎಲ್ಲಿ ಸಲ್ಲುವುದಿಲ್ಲವೋ, ಎಲ್ಲಿ ಚುಕ್ಕಿಯುಳ್ಳ ಜಿಂಕೆಗಳಲ್ಲಿವೋ ಅಂಥ ಸ್ಥಳಗಳನ್ನು ಅಪರಿಶುದ್ಧವೆನ್ನಲಾಗಿದೆ. ಅಗತ್ಯ ಸಾಮಗ್ರಿಗಳ ವಿಪುಲತೆ ಹಾಗೂ ತನ್ನದೇ ಆದ ಆಂತರಿಕ ಶಕ್ತಿಗಳ ಮೂಲಕ ಒಂದು ನಿರ್ದಿಷ್ಟ ಕಾರ್ಯಕ್ಕೆ ಅನುವಾಗಿರುವುದೋ ಅದೇ ಪ್ರಶಸ್ತ ಸ್ಥಳ. ಇದಕ್ಕೆ ತದ್ವಿರುದ್ಧವಾದದ್ದು ಅನರ್ಹ. ಒಂದು ವಸ್ತುವಿನ ಶುದ್ಧತೆ ಹಾಗೂ ಅಪರಿಶುದ್ಧತೆಯು, ಅರ್ಹವ್ಯಕ್ತಿಗಳ ಹೇಳಿಕೆ, ನಿರ್ದಿಷ್ಟ ಕ್ರಿಯೆಗಳು, ಕಾಲಾವಧಿ, ಹಿರಿಮೆ ಅಥವಾ ಸಣ್ಣತನ, ಶಕ್ತಿ ಅಥವಾ ದೌರ್ಬಲ್ಯ, ಜ್ಞಾನ ಮತ್ತು ತಿಳಿವಳಿಕೆ, ಇವುಗಳಿಂದ ನಿರ್ಧರಿಸಲ್ಪಡುತ್ತವೆ. ಅವು ಸ್ಥಳ ಹಾಗೂ ಸಂದರ್ಭಕ್ಕೆ ಅನುಗುಣವಾಗಿ ವ್ಯಕ್ತಿಗೆ ಅಪಖ್ಯಾತಿಯನ್ನು ತಂದೀಯುತ್ತವೆ.

ಅರ್ಘ್ಯ, ದಾನ, ವಿಧಿಗಳು, ಆಚರಣೆಗಳು ಮುಂತಾದ ಜೀವನದ ವಿವಿಧ ಹಂತ ಹಾಗೂ ಸಾಮರ್ಥ್ಯಕ್ಕೆ ಅನುಗುಣವಾಗಿ ಹಾಗೂ ನನ್ನನ್ನು ಸ್ಮರಿಸಿಕೊಂಡು ಮಾಡಿದಾಗ ವ್ಯಕ್ತಿಯು ಶುದ್ಧೀಕರಿಸುತ್ತಾನೆ. ಮಂತ್ರದಲ್ಲಿ ಅಡಗಿರುವ ಅರ್ಥವನ್ನು ಅರಿವಾಗಿಸಿಕೊಳ್ಳುವುದರಿಂದಲೇ ಅದನ್ನು ನನಗೆ ಸಲ್ಲಿಸಲಾಗಿದೆ ಎಂಬುದು ಅರಿವಾಗ ಬೇಕು ಹಾಗೆ ಅರ್ಥಮಾಡಿಕೊಳ್ಳಲಾಗದಿದ್ದರೆ ಅದು ಅಪರಿಶುದ್ಧವಾಗುತ್ತವೆ. ಇದನ್ನು ಬಿಟ್ಟುಕೊಟ್ಟಾಗ ಅದರಿಂದ ಮುಕ್ತನಾಗುತ್ತಾನೆ. ಇದು ಮನುಷ್ಯರನ್ನು ಒಳಿತಿನತ್ತ ನಡೆಸುವ ಹಾಗೂ ಅವರ ಬೇಗುದಿ, ತಿಳಿಗೇಡಿತನ ಹಾಗೂ ಭೀತಿಯನ್ನು ಹೋಗಲಾಡಿಸುವ ಸದ್ವರ್ತನೆ. ಇಂದ್ರಿಯ ವಸ್ತುಗಳಿಗೆ ಬೆಲೆ ಕಟ್ಟುವ ಮೂಲಕ ಒಬ್ಬನು ಅದರ ಬಗ್ಗೆ ವ್ಯಾಮೋಹವನ್ನು ತಳೆಯುತ್ತಾನೆ. ವ್ಯಾಮೋಹದಿಂದ ಅವುಗಳ ಬಗ್ಗೆ ಆಸೆ ಹುಟ್ಟುತ್ತದೆ; ಆಸೆಯು ಜನರ ಮಧ್ಯೆ ಕಲಹವನ್ನು ಏರ್ಪಡಿಸುತ್ತದೆ. ಕದನದಿಂದ ಕ್ರೋಧವುಂಟಾಗಿ, ಅದು ತಿಳಿಗೇಡಿತನಕ್ಕೆ ಎಡೆ ಮಾಡಿಕೊಡುತ್ತದೆ. ತಿಳಿಗೇಡಿತನ ಶೀಘ್ರವಾಗಿ ಸರಿ ತಪ್ಪುಗಳ ಬಗ್ಗೆ ಇದ್ದ ಪ್ರಜ್ಞೆಗೂ ಮೇಲೆದ್ದು ನಿಲ್ಲುತ್ತದೆ. ಮನುಷ್ಯನೊಬ್ಬ ಈ ಪ್ರಜ್ಞೆಯನ್ನು ಕಳೆದುಕೊಂಡನಾದರೆ ಅವನು ಶೂನ್ಯವಾಗಿ ಅವನ ಜೀವನ ವ್ಯರ್ಥವಾಗುತ್ತದೆ. ಜನರು ತಮ್ಮ ಜನನ ಕಾಲದಿಂದಲೇ ಇಂದ್ರಿಯ ವಿಷಯಗಳಿಗೆ,ತಮ್ಮ ಭೌತಿಕ ಕ್ಷೇಮಕ್ಕೆ ಸಂಬಂಧಿಸಿದವುಗಳಿಗೆ, ಬಂಧುಗಳಿಗೆ ವ್ಯಾಮೋಹವನ್ನು ತೋರಿರುತ್ತಾರಾದರೂ ಇವರೆಲ್ಲರೂ ಅವರಿಗೆ ಅಪಾಯಕಾರಿ. ಆಸೆಗಳಿಗೆ ಹಂಬಲಿಸುತ್ತಿರುವವರು, ಮನೋಭಾವ ಹಾಗೂ ದುರಾಸೆಯುಳ್ಳವರು, ಪುಷ್ಪಗಳನ್ನು ಫಲಗಳೆಂದು ತಪ್ಪಾಗಿ

ತಿಳಿಯುವವರು, ಅಗ್ನಿಯ ನೆರವಿನಿಂದ ನಡೆಸಲಾದ ಕಾರ್ಯಗಳ ಬಗ್ಗೆ ಭ್ರಮಾತೀತರಾಗಿ ಅವು ಅವರನ್ನು ಹೊಗೆಯ ಹಾದಿಗೆ ಕರೆದೊಯ್ಯುತ್ತವೆ - ಹಾಗೂ ಅವರು ತಮ್ಮ ಬಗೆಗಿನ ಸತ್ಯವನ್ನು ಎಂದೂ ಅರಿಯುವುದಿಲ್ಲ.

ನಾನು ಅವರ ಹೃದಯಗಳಲ್ಲಿ ವಾಸವಾಗಿದ್ದು ವಿಶ್ವ ಸೃಷ್ಟಿಗೆ ಕಾರಣನಾಗಿದ್ದರೂ ಅವರು ನನ್ನನ್ನು ಅರಿವಾಗಿಸಿಕೊಳ್ಳದಿರುವುದಕ್ಕೆ ಕಾರಣ ಅವರ ಕೇವಲ ವಿಧಿಗಳ ವಿಚಾರಗಳನ್ನು ಮಾತನಾಡಿ ತಮ್ಮ ಇಂದ್ರಿಯಗಳನ್ನು ತೃಪ್ತಿಪಡಿಸಿಕೊಳ್ಳಲು ಮಂಜಿನಿಂದ ಕುರುಡಾದ ವ್ಯಕ್ತಿಗಳಂತೆ ವರ್ತಿಸುತ್ತಾರೆ. ಬಲಿಗಳನ್ನು ಕೊಡುವ ಮೂಲಕ ಭಗವಂತ ನನ್ನು ಪೂಜಿಸಿದರೆ ತಾವು ಸ್ವರ್ಗಸುಖವನ್ನು ಅನುಭವಿಸಬಹುದೆಂದು ಮತ್ತೆ ಉತ್ತಮ ಶ್ರೀಮಂತ ಕುಟುಂಬಗಳಲ್ಲಿ ಜನಿಸಬಹುದೆಂದು ಅವರು ಭಾವಿಸುತ್ತಾರೆ. ತಮ್ಮ ಹರ್ಷ ಕ್ಕಾಗಿ ಪ್ರಾಣಿಗಳನ್ನು ಬಲಿಕೊಡುವುದು ಖಡ್ಡಾಯವಲ್ಲ ಎಂಬುದನ್ನು ಅವರು ಅರಿಯು ವುದೇ ಇಲ್ಲ.

ಶ್ರೀ ಕೃಷ್ಣನು ಉದ್ಧವನಿಗೆ ಆಚಾರವಿಧಿಗಳು, ಬ್ರಹ್ಮನ್ ಹಾಗೂ ದೇವರುಗಳು ಇವುಗಳಿಗೆ ಸಂಬಂಧಿಸಿದ ಮೂರು ವಿಭಾಗಗಳನ್ನು ಒಳಗೊಂಡ ವೇದಗಳು, ಹಾಗೂ ಬ್ರಹ್ಮನ್‌ನ್ನು ಕುರಿತದ್ದಾದಗಿದೆ ಎಂದು ತಿಳಿಸಿದನು. ಆದರೆ ಮಂತ್ರಗಳು ಪರೋಕ್ಷವಾಗಿ ಸತ್ಯವನ್ನು ತಿಳಿಸುವವು. ನಾನು ಬಯಸುವುದು ಇಂಥ ಪರೋಕ್ಷ ಗುಣವನ್ನೇ. ಅವಿಚ್ಛಿನ್ನ ಬ್ರಹ್ಮನ್, ಭಗವಂತನಿಗೆ ಬಲ ಪಡೆದು ಅನಿಯಮಿತ ಶಕ್ತಿಯನ್ನು ಹೊಂದಿರುತ್ತಾನೆ.

ಭಗವಂತನು ಹೇಳಿದನು. : "ಜಗತ್ತಿನ ಪ್ರಾಣವಾದ ಹಿರಣ್ಯಗರ್ಭ ದೇವನು, ಅಂದರೆ ಯಾರ ರೂಪವೇ ವೇದಗಳಾಗಿವೆಯೋ ಅವನು ತನ್ನ ಹೃದಯದಾಳದಿಂದ, ಇಡೀ ಅಕ್ಷರಮಾಲೆಯನ್ನೇ ಹಾದು ಹೋಗುವ ಬುದ್ಧಿಯಿಂದ 'ಓಂ' ಎಂಬ ಸೂಕ್ಷ್ಮ ಶಬ್ದವನ್ನು ವೇದಗಳೆಂದು ಕರೆಯಲಾದ ಪದಸಮೂಹಕ್ಕೆ ಬಳಸಿಕೊಳ್ಳುತ್ತಾನೆ. ವೇದಗಳಲ್ಲಿ ಅಡಗಿರುವುದೇನು, ಅವು ಏನನ್ನು ಅಭಿವ್ಯಕ್ತಿಗೊಳಿಸುತ್ತವೆ ಹಾಗೂ ತಾತ್ಕಾಲಿಕವಾಗಿ ಅವು ಏನನ್ನು ಸೂಚಿಸುತ್ತವೆ ಎಂಬುದನ್ನು ತಿಳಿದವನು ನಾನೊಬ್ಬನೇ. ವೇದಗಳು ನನ್ನನ್ನು ಪುರುಷನೆಂದು ಸಂಭೋದಿಸುತ್ತವೆ. ಇವುಗಳ ರಹಸ್ಯ ನನ್ನನ್ನು ಬಿಟ್ಟರೆ ಇನ್ನೂ ಯಾರಿಗೂ ತಿಳಿಯದು.

ಉದ್ಧವನು ಪ್ರಕೃತಿ ಹಾಗೂ ಪುರುಷದ್ವಂದ್ವವು ಪರಸ್ಪರ ಭಿನ್ನವಾದವು ಎಂಬುದಾಗಿ ಹೇಳಿ ಇದು ಅವುಗಳ ಸ್ವಭಾವದಲ್ಲೇ ಇದ್ದರೂ ಅವು ಪ್ರತ್ಯೇಕವಾಗಿ ಎಂದೂ ಕಾಣಿಸದಿರುವುದರಿಂದ ಹಾಗೆಂದು ಅವುಗಳನ್ನು ಭಾವಿಸುವುದೇ ಇಲ್ಲ ಎಂದು ಹೇಳಿದನು. ಆತ್ಮನ್‌ನ್ನು ಪ್ರಕೃತಿಯಲ್ಲೂ, ಪ್ರಕೃತಿಯಲ್ಲಿ ಆತ್ಮನ್‌ನ್ನೂ ಕಾಣಲಾಗಿವೆ. ಉದ್ಧವನು ಈ ಸಂಶಯವನ್ನು ನಿವಾರಿಸಿಕೊಳ್ಳಲು ಬಯಸಿದನು. ಭಗವಂತನು ಪ್ರಕೃತಿ ಹಾಗೂ ಪುರುಷರ ಪರಸ್ಪರ ವಿಭಿನ್ನರು ಎಂಬುದಾಗಿ ಸ್ಪಷ್ಟೀಕರಿಸಿದನು. ಗುಣಗಳ ಗೊಂದಲದಿಂದಾಗಿ ಈ ವಿಶ್ವವು ಹುಟ್ಟಿಕೊಂಡಿರುವುದರಿಂದ ಈ ವಿಶ್ವವು ಬದಲಾವಣೆಗಳಿಗೆ ತೆರೆದುಕೊಂಡಿರುತ್ತದೆ ಎಂದನು. ಅವನೆಂದನು : "ಗುಣಗಳಿಂದ ಒಡಗೂಡಿ ನನ್ನ

ಪರಿಶೀಲನೆಗೆ ಅತೀತವಾದ ಶಕ್ತಿಯು ಈ ಗುಣಗಳ ಮೂಲಕ ಅಸಂಖ್ಯಾತ ತಿದ್ದುಪಡಿಗಳನ್ನು ತೆರೆದುಕೊಂಡಿದ್ದರೂ ಜಗತ್ತು, ಸಾಮಾನ್ಯ ಅರ್ಥದಲ್ಲಿ ಹೇಳಬೇಕಾದರೆ ಮೂರು ಕರ್ಮಗಳನ್ನು ಹೊಂದಿದೆ - ಅವೆಂದರೆ ಶರೀರಕ್ಕೆ ಸಂಬಂದಿಸಿದ್ದು, ದೇವರುಗಳಿಗೆ ಸಂಬಂಧಿಸಿದ್ದು ಹಾಗೂ ಜೀವಜಂತುಗಳಿಗೆ ಸಂಬಂಧಿಸಿದ್ದು. ಕಣ್ಣು, ಆಕಾರ ಹಾಗೂ ಕಣ್ಣುಗುಡ್ಡೆಯನ್ನು ತೂರಿ ಹೋಗುವ ಸೂರ್ಯಕಿರಣಗಳು - ಇವು ತಾವು ವ್ಯಕ್ತಗೊಳ್ಳುವುದಕ್ಕೆ ಪರಸ್ಪರ ಅವಲಂಬಿತವಾಗಿರುತ್ತವೆ; ಆದರೆ ಅಂತರಿಕ್ಷದಲ್ಲಿರುವ ಸೂರ್ಯನು ಸ್ವತಂತ್ರನಾಗಿರುತ್ತಾನೆ. ಏಕೆಂದರೆ ಇವಕ್ಕೆಲ್ಲ ಆತ್ಮನ್ ಪ್ರಮುಖ ಕಾರಣನು. ಇವುಗಳಿಂದಲೂ ವಿಭಿನ್ನನಾದವನು ಸ್ವಯಂಪ್ರಕಾಶತೆಯಿಂದ ಪರಸ್ಪರ ವ್ಯಕ್ತಗೊಳ್ಳಲು ಅನುವಾಗುವಂಥ ಎಲ್ಲವಕ್ಕೂ ಬೆಳಕನ್ನೂ ನೀಡುವಂಥವನು. ಭಗವಂತನಿಂದ ಗುಣಗಳ ಸಮತೋಲವನ್ನು ಕದಡುವ ಭಗವಂತನು ಇಂಥ ಮಾರ್ಪಾಟುಗಳಿಗೆ ಕಾರಣನು. ಈ ಗುಣಗಳನ್ನು ಮಹತ್‌ನಿಂದ ಉತ್ಪಾದಿಸಲಾಗಿದೆ. ಮಹತ್ ಪ್ರಕೃತಿಯನ್ನು ಕಾರಣವಾಗಿ ಹೊಂದಿದೆ ಹಾಗೂ ಅಹಂ ಎಂಬ ಹೆಸರನ್ನು ಪಡೆದಿವೆ. ಇದು ವೈಚಾರಿಕ, ತಾಮಸ ಹಾಗೂ ಇಂದ್ರಿಯ ಎಂಬು ಮೂರು ಗುಣಗಳನ್ನು ಹೊಂದಿದ್ದು ಮೌಢ್ಯದ ಗುಣವನ್ನು ಹೊಂದಿದ್ದಾಗಿದ್ದು ಸಂಶಯಕ್ಕೆ ಕಾರಣವು. (ಸತ್ವ, ರಜಸ್ಸು, ಹಾಗೂ ತಮಸ್ ನಂಥಹುದೇ ಆದ ವೈಕಾರಿಕಾ ಮುಂತಾದವು ಅಧಿದೈವ, ಆದಿಭೂತ ಹಾಗೂ ಅಧ್ಯಾತ್ಮದ ವಿಭಾಗಗಳನ್ನು ಪ್ರತಿನಿಧಿಸುತ್ತವೆ) ಆತ್ಮನ್‌ನೆಂಬುದು ಇದೆಯೋ ಇಲ್ಲವೋ ಎಂಬುದು ದೃಷ್ಟಿಕೋನ ಗಳಲ್ಲಿರುವ ವ್ಯತ್ಯಾಸಗಳನ್ನು ಅವಲಂಬಿಸಿದ್ದು ಇದಕ್ಕೆ ಕಾರಣ ಆತ್ಮನ್‌ನ್ನು ಗ್ರಹಿಸದಿರುವುದು.

ಭಗವಂತನಿಗೆ ವಿರುದ್ಧವಾದ ಜನರು ತಮ್ಮದೇ ಕ್ರಿಯೆಗಳ ಮೂಲಕ ಉನ್ನತ ಅಥವಾ ಹೀನ ಶರೀರಗಳನ್ನು ಪಡೆಯುತ್ತಾರೆ ಹಾಗೂ ಬಿಟ್ಟುಕೊಡುತ್ತಾರೆ ಎಂಬುದನ್ನು ಉದ್ಧವನು ಭಗವಂತನಿಂದ ತಿಳಿಯಲು ಬಯಸಿದನು. ಅದಕ್ಕೆ ಭಗವಂತನು ಪೂರ್ವಜನ್ಮ ಕರ್ಮದಿಂದ ಹೊಯ್ದಾಡುತ್ತ ಮನುಷ್ಯನ ಮನಸ್ಸು, ಪಂಚೇಂದ್ರಿಯಗಳಿಂದ ಒಡಗೂಡಿ ಒಂದು ವಲಯದಿಂದ ಮತ್ತೊಂದಕ್ಕೆ ಹೋಗುತ್ತದೆ ಎಂಬುದಾಗಿ ಹೇಳಿದನು. ಅದರಿಂದ ಬೇರೆಯಾದ ಆತ್ಮನ್ ಅದನ್ನು ಅನುಸರಿಸುತ್ತದೆ. ಅವನೆಂದನು: "ಅನುಭವಿಸಿದ ಹಾಗೂ ಅವುಗಳನ್ನು ಕೇಳಿದ ಇಂದ್ರಿಯ ವಿಷಯಗಳಲ್ಲಿ ವಾಸವಾಗಿರುವ ಮನಸ್ಸು ಪೂರ್ವ ಕರ್ಮಗಳಿಂದ ಹೊಯ್ದಾಡುತ್ತ ಪೂರ್ವಕರ್ಮದ ಬಗ್ಗೆ ನಿದ್ರಿಸುತ್ತಿರುವವರಿಗೆ ಸಂಬಂಧಿಸಿ ದಂತೆ ಎದ್ದು ನಿಲ್ಲುತ್ತವೆ. ಇದಾದ ನಂತರ ಸ್ಮರಣೆ ಮರೆಯಾಗುತ್ತವೆ. ಒಂದು ನಿರ್ದಿಷ್ಟ ಇಂದ್ರಿಯ ವಿಷಯಗಳಲ್ಲಿ ಮುಳುಗಿ ಹೋಗುವ ಮನುಷ್ಯನು ಹಳೆಯದನ್ನು ಈಗ ಸ್ಮರಿಸಿಕೊಳ್ಳಲಾರ. ತನ್ನನ್ನು ತಾನೇ ಮರೆಯುವಂಥ ಮನುಷ್ಯನ ಈ ಪ್ರವೃತ್ತಿ, ಯಾವುದೇ ಕಾರಣದಿಂದಾಗಿ, ಮೃತ್ಯುವಿನಲ್ಲಿ ಅಂತ್ಯವಾಗುತ್ತದೆ. ಮನುಷ್ಯನೊಬ್ಬನಿಂದ ಒಂದು ನಿರ್ದಿಷ್ಟ ಶರೀರದ ಸಂಪೂರ್ಣ ಸ್ವೀಕಾರಕ್ಕೆ ಅವನ ಹುಟ್ಟು ಎಂಬುದಾಗಿ ಕರೆಯಲಾಗುತ್ತದೆ. ಇದು ಕನಸು, ಕಲ್ಪನೆಗಳಂತೆಯೇ. ಇದೇ ರೀತಿಯಾಗಿ ಅವನು ಇನ್ನು ಹಳೆಯ ಕನಸು ಹಾಗೂ ಕಲ್ಪನೆಯನ್ನು ಸ್ಮರಿಸಿಕೊಳ್ಳಲಾರ. ಮನುಷ್ಯನೊಬ್ಬನು ಕನಸಿನಲ್ಲಿ ಅದ್ಭುತ ಶರೀರಗಳನ್ನು ಸೃಷ್ಟಿಸುವಂತೆಯೇ, ಮೂರು ಗುಣಗಳ ಈ ವಿಭಾಗವು, ಮನಸ್ಸಿನಿಂದ

ಸೃಷ್ಟಿಸಲ್ಪಟ್ಟಂಥದ್ದು, ಆತ್ಮನ್‌ನಾಗಿ ತೋರಿ, ಆಂತರ್ಯ ಹಾಗೂ ಬಾಹ್ಯವೆಂಬ ವಿಭಾಗಕ್ಕೆ ಕಾರಣವಾಗುತ್ತದೆ. ಕಾಲದ ಗತಿಯಿಂದಾಗಿ ಜೀವಜಂತುಗಳು ಸತತವಾಗಿ ಹುಟ್ಟುತ್ತಾ, ಸಾಯುತ್ತಾ ಇರುತ್ತವೆ. ಅದರ ಸೂಕ್ಷ್ಮತೆಯಿಂದಾಗಿ ಅದನ್ನು ಗಮನಿಸಿರುವವರಿಲ್ಲ. ತನ್ನ ಕೆಲಸಗಳ ಕಾರಣದಿಂದಾಗಿಯೇ ಮನುಷ್ಯನೊಬ್ಬ ಹುಟ್ಟು ಸಾವುಗಳಿಗೆ ಉಪಕರಣವಾಗುವುದಿಲ್ಲ. ಇದು ತಪ್ಪು. ಅವನು ಅಮರನು. ಮರದಿಂದ ಹುಟ್ಟಿದ್ದ ಅಗ್ನಿಯನ್ನು ಇಲ್ಲಿ ಉದಾಹರಿಸಬಹುದು. (ಶರೀರವು ಸಾಯುವುದೇ ಹೊರತು ಆತ್ಮವಲ್ಲ). ಗುಣದೊಂದಿಗೆ ಹೊಂದಿರುವ ವ್ಯಾಮೋಹದ ಮೂಲಕ ಜೀವನು ಉನ್ನತ ಅಥವಾ ಕೀಳಾದ ಕಾಲ್ಪನಿಕ ಸ್ಥಿತಿಗಳನ್ನು ತಾಳುತ್ತಾನೆ. ಆದರೆ ಅವರು ಸೇರಿರುವುದು ಮತ್ತ್ಯಾವುದೋ ಬೇರೆಯ ಸ್ಥಿತಿಗೆ. ಕೆಲವರು ಅಪರೂಪ ಪರಿಸ್ಥಿತಿಗಳಲ್ಲಿ ಇವನ್ನು ಬಿಟ್ಟುಕೊಟ್ಟು ಅಂಥವರು ಸಾವೊಂದರ ಹುಟ್ಟು ಹಾಗೂ ಸಾವನ್ನು ಅದರ ಬೀಜದ ಹಾಗೂ ಅಂತಿಮ ಪರಿವರ್ತನೆಯ ಹಂತಗಳಲ್ಲಿ ಕಂಡು, ನೋಟಕನು ಸಸ್ಯದಿಂದ ಬೇರೆ ಎಂಬುದನ್ನು ತಿಳಿಯುತ್ತಾರೆ. ಇದರಂತೆಯೇ ದೇಹವನ್ನು ಅದರಿಂದ ಬೇರೆಯಾಗಿ ನಿಂತು ನೋಡುವುದು. ಮೌಢ್ಯತೆಯನ್ನು ಹೊಂದಿರುವವನು ಆತ್ಮನ್‌ನನ್ನು ಸರಿಯಾಗಿ ಪ್ರಕೃತಿಯಿಂದ ಬೇರ್ಪಡಿಸಲು ಸೋತು ಇಂದ್ರಿಯಗಳಿಂದ ಗೊಂದಲಗೊಂಡು ಜನನದಿಂದ ಮರಣಕ್ಕೆ ಸಾಗುತ್ತಾನೆ. ತನ್ನ ಪೂರ್ವ ಕರ್ಮಗಳಿಂದ ಹೊಯ್ದಾಡಿ ಸತ್ತ್ವದೊಂದಿಗಿನ ತನ್ನ ಸಂಪರ್ಕದ ಪ್ರಭಾವದಿಂದಾಗಿ ಒಬ್ಬನು ಮುನಿ ಅಥವಾ ದೇವರಾಗುತ್ತಾನೆ; ರಜಸ್‌ನ ಪ್ರಭಾವಕ್ಕೆ ಸಿಲುಕಿದವನು ಅಸುರ ಅಥವಾ ಮನುಷ್ಯನಾಗುತ್ತಾನೆ; ತಮಸ್‌ಗೆ ಸಿಲುಕಿದವನು ಒಂದು ಪ್ರೇತ ಅಥವಾ ಮೃಗವಾಗುತ್ತಾನೆ. ಕಲ್ಪನೆ ಹಾಗೂ ಕನಸುಗಳು ಅವಾಸ್ತವವಾದವು. ಎಲೈ ಉದ್ಧವನೇ, ಹೊರ ಹೋಗುವ ಅವಯವಗಳ ಮೂಲಕ ಇಂದ್ರಿಯ ವಿಷಯಗಳನ್ನು ಅನುಭವಿಸುವುದು ನಿಲ್ಲದು. ಕೆಟ್ಟ ಜನರಿಂದ ಬೈಗುಳಕ್ಕೆ ಅವಹೇಳನಕ್ಕೆ ಒಳಗಾದರೂ, ತನ್ನ ಹಿತರಕ್ಷಣೆಯನ್ನು ಬಯಸುವವನು ತನ್ನ ಪ್ರಯತ್ನದಿಂದಲೇ ಹೊರಬರಬೇಕು. (ಭಗವದ್ಗೀತೆ ೬.೫) - ಒಬ್ಬನು ತನ್ನ ವಿಮೋಚನೆಯನ್ನು ತಾನೇ ಉಂಟು ಮಾಡಿಕೊಳ್ಳಬೇಕು. ಅದು ಸ್ವತಂತ್ರ ಇಚ್ಛೆಯ ತತ್ತ್ವದ ವಿವರಣೆ. ಪ್ರತಿಯೊಬ್ಬನೂ ತನ್ನದೇ ಆದ ವಿಮೋಚನೆಯನ್ನು ಪಡೆದುಕೊಂಡು, ಪ್ರಕೃತಿಯು ಎಷ್ಟೇ ಶಕ್ತಿಶಾಲಿಯಾಗಿರಲಿ, ಅದನ್ನು ಜಯಿಸಿ ತನ್ನನ್ನು ಸುಧಾರಿಸಿಕೊಳ್ಳುವುದು ಅವನ ಕೈಲಿದೆ.

ಭಗವಂತನಿಂದ ಬೋಧಿಸಲ್ಪಟ್ಟ ಧರ್ಮವನ್ನು ಆಚರಿಸಿದವನ ಹೊರತು ಮಿಕ್ಕ ಪ್ರಾಜ್ಞರಿಗೆ ಕೆಟ್ಟ ಜನರು ಮಾಡಿದ ಅವಹೇಳನಗಳನ್ನು ತಡೆದುಕೊಳ್ಳುವುದು ಕಷ್ಟಕರವಾದದ್ದರಿಂದ ಅಂಥ ಧರ್ಮವನ್ನು ತನಗೆ ಬೋಧಿಸಬೇಕೆಂದು ಉದ್ಧವನು ಕೇಳಿದನು. ಕೆಡುಕರ ಬೈಗುಳ ತನ್ನ ಮನಸ್ಸನ್ನು ತಾಕದಿರುವಂತೆ ಮನಸ್ಸನ್ನು ನಿಯಂತ್ರಿಸಿಕೊಳ್ಳುವುದು ಜಗತ್ತಿನ ಯಾವ ಮುನಿಗೂ ಸಾಧ್ಯವಿಲ್ಲವೆಂದು ಭಗವಂತನು ಹೇಳಿದನು. ಬೈಗುಳ ಬಾಣಗಳಿಗಿಂತಲೂ ಹೆಚ್ಚು ಘಾಸಿಯನ್ನುಂಟು ಮಾಡುತ್ತವೆ.

ಭಗವಂತನು ಐಶ್ವರ್ಯವಿದ್ದರೂ ಜಿಪುಣನಾಗಿದ್ದ ಬ್ರಾಹ್ಮಣನೊಬ್ಬನ ಕಥೆಯನ್ನು ಹೇಳಿದನು. ಅವನು ದುರಾಸೆಯುಳ್ಳವನು, ಹಣದ ಪಿಪಾಸು ಹಾಗೂ ಕೋಪಾವಿಷ್ಟ.

ಅವನೆಂದೂ ತನ್ನ ಬಂಧುಮಿತ್ರರನ್ನು ಒಳ್ಳೆಯ ಮಾತುಗಳಿಂದ ಸ್ವಾಗತಿಸುತ್ತಿರಲಿಲ್ಲವಾದ್ದರಿಂದ ಯಾರೂ ಅವನನ್ನು ಇಷ್ಟ ಪಡುತ್ತಿರಲಿಲ್ಲ. ಬ್ರಾಹ್ಮಣನು ತನ್ನೆಲ್ಲ ಸಂಪತ್ತನ್ನೂ ಕಳೆದುಕೊಂಡಾಗ ಅವನ ಬಂಧುಗಳು ಅವನನ್ನು ಅನಾದರಿಸಿದರು. ಬ್ರಾಹ್ಮಣನು ಕಳವಳಿಸಿದನು : "ನಾನು ಶ್ರೀಮಂತಿಕೆಯನ್ನು ಅರಸುವ ಈ ಹುಚ್ಚಾಟದಲ್ಲಿ ನನ್ನ ದೇಹವನ್ನು ವ್ಯರ್ಥವಾಗಿ ಹಿಂಸಿಸಿದೆ. ಗುಣವನ್ನು ಹಾಗೂ ಸೂಕ್ತರೀತಿಯಲ್ಲಿ ನನ್ನ ಆಸೆಗಳನ್ನು ಪೂರೈಸಿಕೊಳ್ಳುವ ಅವಕಾಶವನ್ನು ಕಳೆದುಕೊಂಡೆ".

ಜಿಪುಣರಿಗೆ ಐಶ್ವರ್ಯ ತೃಪ್ತಿಯನ್ನು ತಂದುಕೊಡುವುದು ವಿರಳ ಎಂಬುದಾಗಿ ಭಗವಂತನು ಹೇಳಿದನು. ಅವರು ಜೀವಿತವಾಗಿದ್ದಾಗ ಅದು ಅವರ ಆತ್ಮವನ್ನು ಘಾಸಿಗೊಳಿಸಿ ಸತ್ತ ನಂತರ ನರಕಕ್ಕೆ ದಾರಿ ಮಾಡಿಕೊಡುತ್ತದೆ. ಕೇವಲ ಅಲ್ಪ ಜಿಪುಣತನವೂ ಪ್ರತಿಷ್ಠಿತ ಮನುಷ್ಯನೊಬ್ಬನನ್ನು ನಾಶಗೊಳಿಸಲು ಸಾಧ್ಯ. ಇದನ್ನರಿತೇ ಆವಂತಿಯ ಬ್ರಾಹ್ಮಣನು ಸನ್ಯಾಸಿಯಾದನು. ಅವನನ್ನು ಹೀನಾಯ ಮಾಡಲಾಯಿತು. ಅನುಮಾನಿಸಲಾಯಿತು ಹಾಗೂ ಬೇರೆ ಬೇರೆ ಜನರು ಬೇರೆ ಬೇರೆ ರೀತಿಗಳಲ್ಲಿ ಅವನನ್ನು ಬೈದರು. ಆದರೆ ಅವನು ತಾನು ಹಿಡಿದ ಮಾರ್ಗದಿಂದ ದೂರ ಸರಿಯಲಿಲ್ಲ. ಬ್ರಾಹ್ಮಣನೆಂದನು : "ನನ್ನ ಈ ಶರೀರವು ನನ್ನ ಸಂತಸ ಅಥವಾ ನೋವಿಗೆ ಇರದಂಥ ಆತ್ಮ ದೇವರುಗಳು, ಗ್ರಹಗಳು, ಕಾರ್ಯ , ಕಾಲ ಇವುಗಳಿಗೆ ಕಾರಣವಲ್ಲ". ಸಂತಸ ಹಾಗೂ ದುಃಖಕ್ಕೆ ಕಾರಣ, ಶ್ರುತಿಗಳು ತಿಳಿಸುವಂತೆ, ಈ ಮನಸ್ಸೇ. ಅದು ಸಂಸಾರ ಚಕ್ರವನ್ನು ಚಲನೆಗೊಳಿಸುತ್ತದೆ. ಮನಸ್ಸು ಆಸೆ ಹಾಗೂ ಇಂಥವನ್ನು ಹುಟ್ಟಿಸುತ್ತದೆ. ಆನಂತರ ಸಾತ್ವಿಕ, ರಾಜಸಿಕ ಹಾಗೂ ತಾಮಸಿಕದಂಥ ಕಾರ್ಯವೈವಿಧ್ಯತೆಗಳು ಮುಂದುವರೆಯುತ್ತವೆ. ಅವುಗಳಿಗೆ ಅನುಗುಣವಾಗಿ ಜನನವು ಸಂಭವಿಸುತ್ತದೆ. ಒಳ್ಳೆಯ ಕೆಲಸಗಳು ದೈವಸ್ವರೂಪ ಶರೀರವನ್ನು , ಕೆಟ್ಟ ಕೆಲಸಗಳು ಮೃಗಗಳ (ಅಥವಾ ನಿಶ್ಚಲ) ಶರೀರಗಳನ್ನೂ ಹಾಗೂ ಒಳಿತು ಕೆಡಕುಗಳೆರಡೂ ಮಿಶ್ರಣವಾಗಿರುವ ಮಾನವ ಶರೀರವನ್ನೂ ಉಂಟು ಮಾಡುತ್ತವೆ.

ಭಗವಂತನೆಂದನು : ಇತರ ದೇವರುಗಳು ಇಂದ್ರಿಯಗಳೆಂದು ಅರ್ಥವಾಗಬಹುದು ಮನಸ್ಸಿನ ಹೊಯ್ದಾಟಕ್ಕೆ ಸಿಕ್ಕು ಬೀಳಬಹುದು. ಆದರೆ ಮನಸ್ಸು ಮಾತ್ರ ಯಾವ ಹೊಯ್ದಟಕ್ಕೂ ಸಿಕ್ಕಿ ಬೀಳುವುದಿಲ್ಲ. ಮೂರ್ಖರು ದೇಹವನ್ನು "ನಾನು" ಮತ್ತು "ನನ್ನದು" ಎಂಬುದಾಗಿ ತಪ್ಪಾಗಿ ಆಲೋಚಿಸುತ್ತಾರೆ. ಯಾರು ನಾನಿಲ್ಲಿದ್ದೇನೆ ಆದರೆ ಈ ಇನ್ನೊಬ್ಬನು ಬೇರೆಯವನು ಎಂಬುದಾಗಿ ಬಗೆಯುತ್ತಾರೋ ಅವರು ಮೌಢ್ಯದ ಕಾನನದಲ್ಲಿ ಅಲೆದಾಡುತ್ತಾರೆ. ಶರೀರವು ನೋವು ನಲಿವುಗಳಿಗೆ ಕಾರಣವಾಗಿದ್ದರೆ, ಆತ್ಮನ್‌ಗೂ ಅವಕ್ಕೂ ಯಾವ ಸಂಬಂಧವೂ ಇಲ್ಲ. ಏಕೆಂದರೆ ಐಹಿಕ ಸ್ವಭಾವವನ್ನು ಹೊಂದಿರುವಂಥ ಸಾಂದ್ರ ಹಾಗೂ ಸೂಕ್ಷ್ಮಶರೀರಗಳಿಗೆ ಮಾತ್ರ ಅಂಥ ಸಂಬಂಧ. ಒಬ್ಬರು ತಮ್ಮ ಹಲ್ಲಿನಿಂದ ತಮ್ಮ ನಾಲಿಗೆಯನ್ನೇನಾದರೂ ಕಚ್ಚಿಕೊಂಡರೆ ನೋವುಂಟಾದದಕ್ಕೆ ಯಾರನ್ನು ಬೈದುಕೊಳ್ಳಬೇಕು? ಈ ನೋವಿಗೆ ದೇವರುಗಳ ಕಾರಣವಾದರೆ ಆತ್ಮನ್ ಇವೆರಡರೊಂದಿಗೂ ಸಂಬಂಧವನ್ನೂ ಹೊಂದಿಲ್ಲ. ಒಬ್ಬನ ಒಂದು ಅವಯವ

ಮತ್ತೊಂದಕ್ಕೆ ಯಾವುದನ್ನು ಬೈದುಕೊಳ್ಳಬೇಕು : ಆತ್ಮನ್ ನೋವು ನಲಿವುಗಳಿಗೆ ಕಾರಣನಾಗಿದ್ದರೆ ಯಾವುದೂ ಬಾಹ್ಯ ಮಧ್ಯವರ್ತಿಯ ಮೂಲಕ ಸಂಭವಿಸಲಾರದು. ನೋವು ನಲಿವುಗಳು ತಾವಾಗಿಯೇ ಉಂಟಾದವು. ಆದ್ದರಿಂದ ಕೋಪಗೊಳ್ಳಬೇಕಾದದ್ದು ಯಾವುದರ ಬಗೆ ? ಗ್ರಹಗಳು ಶರೀರದ ಮೇಲೆ ಮಾತ್ರ ಪ್ರಭಾವ ಬೀರುತ್ತವೆ. ಆತ್ಮನ್ ಗ್ರಹ ಹಾಗೂ ಶರೀರವೆರಡರಿಂದಲೂ ಭಿನ್ನವಾದದ್ದು. ಕೆಲಸವೇ ಆಗಲಿ, ಕಾಲವೇ ಆಗಲಿ, ನೋವು ನಲಿವುಗಳು ತಾವಾಗಿಯೇ ಉಂಟುಮಾಡುವುದರಲ್ಲಿ, ಆತ್ಮನ್‌ಕ್ಕೆ ಯಾವ ರೀತಿಯ ಬಾಧೆಯೂ ಉಂಟಾಗುವುದಿಲ್ಲ. ಏಕೆಂದರೆ ಆತ್ಮನ್ ಪ್ರಕೃತಿಗೂ ಅತೀತವಾಗಿದ್ದು ಯಾವುದರಿಂದಲೂ ಪ್ರಭಾವಿತಗೊಳ್ಳುವುದಿಲ್ಲ. ಸಾಕ್ಷಾತ್ಕಾರಗೊಂಡ ಮನಸ್ಸು ಐಹಿಕ ಜಗತ್ತಿಗೆ ಎಂದೂ ಹೆದರುವುದಿಲ್ಲ. ಎಲೈ ಉದ್ಧವನೇ, ಮಿತ್ರರು, ತಟಸ್ಥರು ಹಾಗೂ ಶತ್ರುಗಳು ಮನುಷ್ಯನೊಬ್ಬನಿಗೆ ನೋವು ನಲಿವುಗಳನ್ನು ನೀಡುವಂಥವರು ಒಬ್ಬನು ತನ್ನ ಮೌಢ್ಯದಿಂದ ಸೃಷ್ಟಿಸಿಕೊಂಡ ಕಲ್ಪನೆ. ಆದ್ದರಿಂದ ನನ್ನ ಮೇಲೆ ಕೇಂದ್ರೀಕರಿಸಿದ ಬುದ್ಧಿಯಿಂದ ಮನಸ್ಸನ್ನು ನಿಯಂತ್ರಿಸಿಕೊ. ಇದೇ ಯೋಗದ ರಹಸ್ಯ .

ಶ್ರೀ ಕೃಷ್ಣ ಪರಮಾತ್ಮನು ಸಾಂಖ್ಯಾ ಯೋಗವನ್ನು ವಿವರಿಸಿದನು. ಪ್ರಳಯ ಕಾಲದಲ್ಲಿ ಅಥವಾ ಜಗತ್ತಿನ ನಿರ್ನಾಮದ ಸಂದರ್ಭದಲ್ಲಿ ವಿಶ್ವವು ಒಂದಾಗಿ ಸಮಗ್ರ ವಾಗಿರುತ್ತದೆ. ಸತ್ಯಯುಗದಲ್ಲೂ ಹೀಗೆಯೇ ಇದ್ದಿತು. ಅಪರಿಪೂರ್ಣವಾದ ಹಾಗೂ ಸಮಗ್ರ ಅಸ್ತಿತ್ವವಾದ ಬ್ರಹ್ಮನ್, ಮನಸ್ಸು ಹಾಗೂ ಮಾತುಗಳಿಗೆ ಅತೀತನಾದವನು ವಿಭಜನೆಗೊಂಡನು. ಅವೇ ಪ್ರಕೃತಿ ಮತ್ತು ಪುರುಷ. ಅವುಗಳಿಂದ ಹುಟ್ಟಿದಂಥದ್ದು ಮಹತ್‌ನಿಂದ ಒಟ್ಟುಗೂಡಿಸಲ್ಪಟಟ್ಟಂಥ ಸೂತ್ರ. ಸೂತ್ರವು ಕ್ರಿಯಾಶೀಲತೆಯೆನ್ನಲಾಗಿ, ಮಹತ್ ಬುದ್ಧಿಯನ್ನೆಲಾಗಿದ್ದರೂ ಅವು ಒಂದೇ ತತ್ವವನ್ನು ಮೂಲವನ್ನಾಗಿ ಹೊಂದಿರುವಂಥವು. ಇದರ ಪರಿವರ್ತನೆಯಿಂದಾಗಿ ಹುಟ್ಟಿದ ಅಹಂ ಎಲ್ಲವನ್ನೂ ಮುಳುಗಿಸಿತು. ಭಗವಂತನೆಂದನು : ಅಹಂ ಎನ್ನುವದು ಮೂರು ಪದರದವು - ಸತ್ವ, ರಜಸ್ ಮತ್ತು ತಮಸ್. ಇದು ಮನಸ್ಸಿಗೆ, ಅವಯವಗಳಿಗೆ ಹಾಗೂ ದ್ರವ್ಯಗಳ ಸೂಕ್ಷ್ಮ ಕಣಗಳಿಗೆ ಕಾರಣ. ಅದು ಉಭಯ ಗ್ರಂಥಿಯಾಗಿದೆ ತಮಸ್ಸಿನಿಂದ ಉಂಟಾದದ್ದು ಪಂಚಭೂತಗಳು; ರಜಸನಿಂದ ಅವಯವಗಳು ಹಾಗೂ ಸತ್ವದಿಂದ ಹನ್ನೊಂದು ದೇವರುಗಳು ಹಾಗೂ ಮನಸ್ಸು ಹುಟ್ಟಿದವು (ಹನ್ನೊಂದು ದೇವರುಗಳೆಂದರೆ : ದಿಕ್ ವಾಯು, ಸೂರ್ಯ, ವರುಣ, ಇಬ್ಬರು ಅಶ್ವಿನಿಯರು, ಅಗ್ನಿ, ಇಂದ್ರ, ಉಪ್ರೇಂದ್ರ, ಮಿತ್ರ ಹಾಗೂ ಚಂದ್ರ.) ನನ್ನಿಂದ ನಿರ್ದೇಶಿಸಲ್ಪಟ್ಟಂತೆ ಇವೆಲ್ಲವೂ ಒಟ್ಟಿಗೆ ಕ್ರಿಯೆಗೈಯುತ್ತಾ ಗೋಳಾಕಾರದ ಒಂದು ಸೃಷ್ಟಿಯನ್ನು, ನನ್ನ ವಾಸಸ್ಥಾನವನ್ನು ತಯಾರಿಸಿದವು. ಆ ಗೋಳದೊಳಗಿನ ನೀರಿನಲ್ಲಿ ನಾನು ವಾಸವಾಗಿ ನನ್ನಿಂದ ಜಗತ್ತನ್ನು ಪ್ರತಿನಿಧಿಸುವ ಒಂದು ತಾವರೆಯು ಹುಟ್ಟಿ ಅದರಿಂದ ಬ್ರಹ್ಮನು ಬಂದ. ಅನಂತರ ಮೂರು ವಲಯಗಳು - ಭುರ್, ಭೂವರ್ ಹಾಗೂ ಸ್ವಹ ಬಂದವು. ಸ್ವರವು ದೇವತೆಗಳ, ಭುವರ್ ಚೇತನಗಳ, ಆವಾಸಸ್ಥಾನಗಳಾದವು. ಭೂಮಿಯು ಮಾನವರ ಹಾಗೂ ಇತರ

ಜೀವಿಗಳಿಗೆ ಮೀಸಲಾಯಿತು. ಸ್ವಹಕಿಂತಲೂ ಹೊರಗಿನ ವಲಯಗಳು ಸಿದ್ಧರ ಜಗತ್ತಾಯಿತು. ಭೂಮಿಯ ಕೆಳಗಿನವಲಯ ಅಸುರರಿಗೆ ಹಾಗೂ ನಾಗರಿಗೆ ಮೀಸಲಾಯಿತು. ಯೋಗ, ಸನ್ಯಾಸ ಹಾಗೂ ತ್ಯಾಗ, ಮಹಾರ್, ಜನ, ತಪನ್ ಮತ್ತು ಸತ್ಯದಂಥ ಪರಿಶುದ್ಧ ವಲಯಗಳಿಗೆ ಕೊಂಡೊಯ್ದು ಭಕ್ತಿಯೋಗವು ಮಾತ್ರ ನನ್ನ ವಾಸಸ್ಥಾನಕೆ ಕರೆತರುತ್ತದೆ. ಕಾಲ ಹಾಗೂ ಎಲ್ಲವನ್ನೂ ನಡೆಸುವ ನನ್ನಿಂದಾಗಿ ವಿವಿಧ ಕರ್ಮಗಳನ್ನು ಒಳಗೊಂಡ ಈ ಜಗತ್ತು ಮೇಲೆದ್ದು ಗುಣಗಳ ಸಾಗರದಲ್ಲಿ ಮುಳುಗುತ್ತದೆ. ಅಸ್ತಿತ್ವಕ್ಕೆ ಬಂದವೆಲ್ಲವೂ ಪುರುಷ ಹಾಗೂ ಪ್ರಕೃತಿಯೆಂಬ ಎರಡು ತತ್ವಗಳಲ್ಲಿ ಪಾಲ್ಗೊಳ್ಳುತ್ತವೆ. ವ್ಯಕ್ತಗೊಂಡ ಜಗತ್ತಿಗೆ ಐಹಿಕ ಕಾರಣವಾದ ಪ್ರಕೃತಿಯು, ಅದರ ತಳಹದಿಯಲ್ಲಿರುವ ಹಾಗೂ ತನ್ನ ವ್ಯಕ್ತಗೊಳ್ಳುವಿಕೆಗೆ ಕಾರಣವಾದ ಕಾಲವು ಪುರುಷ. ಇವೆಲ್ಲದರೊಳಗಿರುವವನು ನಾನು ಬ್ರಹ್ಮನ್. ಜಗತ್ತು ನನ್ನಿಂದ ಆವೃತವಾಗಿದ್ದು ಅಸಂಖ್ಯಾತ ಜೀವಿಗಳ ಹುಟ್ಟು ಸಾವಿಗೆ ಕಾರಣವಾಗುತ್ತದೆ. ಈ ವಲಯಗಳೊಂದಿಗೆ ಅದಿದ್ದು ನಿರ್ನಾಮದ ಸ್ಥಿತಿಗೆ ಸಿದ್ಧವಾಗಿರುತ್ತದೆ. ಹೀಗೆ ಪ್ರಾಣಿಗಳ ಶರೀರಗಳು ಆಹಾರದಲ್ಲಿ ಕರಗಿ, ಆಹಾರವು ಬೀಜವಾಗಿ, ಬೀಜಗಳು ಭೂಮಿಯೊಳಗೆ ಸೇರಿ ಭೂಮಿಯ ವಾಸನೆಯಲ್ಲಿ ಸೇರುತ್ತದೆ. ವಾಸನೆ ನೀರಿನಲ್ಲಿ ಕರಗುತ್ತದೆ. ನೀರು ತನ್ನದೇ ಸತ್ವದಿಂದ ಅಗ್ನಿಗೆ ಸೇರಿಹೋಗಿ ಅಗ್ನಿಯು ಬಣ್ಣದೊಳಗೆ ಬೆಳೆಯುತ್ತದೆ. ಬಣ್ಣವು ಗಾಳಿಗೆ ಸೇರುತ್ತವೆ. ಗಾಳಿಯು ಸ್ಪರ್ಶದೊಳಗೆ ನೆರೆಯುತ್ತದೆ. ಸ್ಪರ್ಶ ಹವೆಯಲ್ಲಿ, ಹವೆ ಶಬ್ಧದ ಕಣಗಳಲ್ಲಿ ಸೇರಿ ಹೋಗುತ್ತವೆ. ಅವಯವಗಳನ್ನು ತಮ್ಮ ಸಮರ್ಥ ಕಾರಣಗಳಲ್ಲಿ, ದೇವರುಗಳಲ್ಲಿ ಕರಗಿಸಲಾಗುತ್ತದೆ. ದೇವರುಗಳು ಮನಸ್ಸಿನಲ್ಲಿ ಕರಗಿ, ಇದು ಎಲ್ಲವನ್ನೂ ಆಳುವಂಥದ್ದು ಹಾಗೂ ಮನಸ್ಸನ್ನು ಅಹಂಮಿಕೆಯಲ್ಲಿ ಮುಳುಗಿಸುವಂಥದ್ದು. ಶಬ್ದವನ್ನು ತಾಮಸದಲ್ಲಿ ಕರಗಿಸಲಾಗಿ ಎಲ್ಲ ಅಹಂಮಿಕೆಗಳನ್ನೂ ವಿಶ್ವದ ಬುದ್ಧಿಶಕ್ತಿಯಲ್ಲಿ ಬೆರೆಸಲಾಗುತ್ತವೆ. ಹೀಗೆ ಇದು ಎಲ್ಲ ಒಳ್ಳೆಯ ಗುಣಗಳನ್ನು ಹೊಂದಿದ್ದು ತನ್ನದೇ ಕಾರಣಗಳಲ್ಲಿ ಗುಣಗಳಲ್ಲಿ ಕರಗಿ, ಗುಣಗಳು ಪ್ರಕೃತಿಯಲ್ಲಿ ಹಾಗೂ ಮತ್ತೆ ಶಾಶ್ವತ ಕಾಲದಲ್ಲಿ ಸೇರಿ ಹೋಗುತ್ತವೆ. ಕಾಲವು, ಹುಟ್ಟಿಲ್ಲದ ಆತ್ಮನ್‌ನಾದ ನನ್ನಲ್ಲಿ ಸೇರಿಹೋಗುತ್ತವೆ. ಎಲೈ ಉದ್ಧವನೇ, ನಾನು ಸಂಖ್ಯಾ ಯೋಗವನ್ನು ನೇರವಾಗಿ ಹಾಗೂ ಹಿಂದುಮುಂದಾಗಿ ವಿವರಿಸಿದ್ದೇನೆ.

ಉದ್ಧವನು ಭಗವಂತನಿಂದ ವಿವಿಧಿ ಆಚರಣೆಗಳ ಮೂಲಕ ಅವನನ್ನು ಆರಾಧಿಸುವ ವಿಧಾನ ಹಾಗೂ ಯಾವುದರಿಂದ ಪೂಜಿಸಲ್ಪಡಬೇಕು ಎಂಬುದನ್ನು ತಿಳಿದುಕೊಳ್ಳಲು ಬಯಸಿದನು. ಕರ್ಮದ ಬಂಧನಗಳನ್ನು ಕಳೆದುಕೊಳ್ಳಲು ಅವಶ್ಯಕವಾದ ವಿಧಾನಗಳನ್ನು ಅವನು ತಿಳಿದುಕೊಳ್ಳಲು ಬಯಸಿದನು. ಭಗವಂತನೆಂದನು : ನನ್ನನ್ನು ಆರಾಧಿಸಲು ಮೂರು ವಿಧಾನಗಳನ್ನು, ವೈದಿಕ, ತಾಂತ್ರಿಕ ಹಾಗೂ ಇವರೆಡರ ಮಿಶ್ರಣವಾದವನ್ನು ಬಳಸಬಹುದು. ನನ್ನನ್ನು ಮುದಗೊಳಿಸುವ ಈ ಮೂರರಲ್ಲಿ ಯಾವುದಾದರೂ ಸರಿ. ಯಾರೇ ಆಗಲಿ ಒಂದು ನಿರ್ದಿಷ್ಟ ವೇದದ ಸೂತ್ರಗಳಿಗೆ ಅನುಗುಣವಾಗಿ ನನ್ನನ್ನು ಆರಾಧಿಸಬಹುದು. ಆರಾಧನೆ ನಿಷ್ಠವಾಗಿರಬೇಕು. ಭಕ್ತಿಯಿಂದ ಕೂಡಿರಬೇಕು. ಕೊಡುಗೆಗಳ ಮೂಲಕ ನಡೆಯಬೇಕು. ಮೂರ್ತಿ ಅಥವಾ ಯಜ್ಞ ಭೂಮಿ ಅಥವಾ ಸೂರ್ಯ ಅಥವಾ ನೀರು ಅಥವಾ ತನ್ನದೇ ಹೃದಯದ ಮೂಲಕ

ನಡೆಯಬೇಕು. ಒಬ್ಬನು ತನ್ನ ಹಲ್ಲನ್ನು ಉಜ್ಜಿಕೊಂಡು ತನ್ನ ಶರೀರವನ್ನು ಶುಚಿಗೊಳಿಸಿಕೊಳ್ಳಲು ಸ್ನಾನ ಮಾಡಬೇಕು. ಅದು ಮಂತ್ರಗಳೊಂದಿಗೆ ನಡೆಯಬೇಕು. ವೇದಸೂತ್ರಗಳಿಗೆ ಅನುಗುಣವಾಗಿರಬೇಕು. ಕರ್ಮವನ್ನು ಹೋಗಲಾಡಿಸುವಂಥ ನನ್ನ ಆರಾಧನೆಯನ್ನು ಸರಿಯಾದ ನಿಶ್ಚಲತೆಯಿಂದ ನಡೆಸಬೇಕು.

ಮೂರ್ತಿಗಳು ಎಂಟು ವಿಧದವು ಎಂಬುದಾಗಿ ಭಗವಂತನು ಹೇಳಿದನು - ಕಲ್ಲು, ಮರ, ಚಿನ್ನ ಇತ್ಯಾದಿ, ಜೇಡಿಮಣ್ಣು, ಮಣ್ಣು ಹಾಗೂ ಆಭರಣ ಅಲ್ಲದೆ ಬಣ್ಣ ಹಚ್ಚಲ್ಪಟ್ಟ ಹಾಗೂ ಮಾನಸಿಕವಾಗಿ ರೂಪುಗೊಂಡದ್ದು. ದೇವಾಲಯಗಳಲ್ಲಿರುವ ವಿಗ್ರಹಗಳನ್ನು ಜಂಗಮವಾಗಿರುವುದು ಅಥವಾ ಸ್ಥಿರವಾಗಿರುವುದು ಎಂದು ಎರಡು ವರ್ಗಗಳನ್ನಾಗಿಸಬಹುದು. ಸ್ಥಿರವಾದದ್ದನ್ನು ಪೂಜಿಸುವಾಗ ಸ್ವಾಗತ ಅಥವಾ ಆಹ್ವಾನದ ಅಗತ್ಯವಿಲ್ಲ (ಏಕೆಂದರೆ ಅದನ್ನು ಪ್ರತಿಷ್ಠಾಪಿಸುವ ಸಂದರ್ಭದಲ್ಲೇ ಅವುಗಳಲ್ಲಿ ಸ್ಥಿರವಾಗಿ ವಾಸಿಸುವಂತೆ ಪರಮಾತ್ಮನನ್ನು ಪ್ರಾರ್ಥಿಸಿರಲಾಗುತ್ತದೆ). ಸ್ಥಳಾಂತರಿಸಬಹುದಾದ ಮೂರ್ತಿಗಳ ವಿಚಾರದಲ್ಲಿ ಇದು ಖಡ್ಡಾಯವಿರದಿದ್ದು ಯಜ್ಞ ಭೂಮಿಯಲ್ಲಿ ಮಾತ್ರ ಇದು ಖಡ್ಡಾಯವಾದ್ದು. ಮಣ್ಣಿನ ಮೂರ್ತಿಗಳನ್ನುಳಿದು ಮಿಕ್ಕವನ್ನು ಮೀಯಿಸಬೇಕು. ಭಗವಂತನೆಂದನು : ಎಲೈ ಉದ್ಧವನೇ, ಮೂರ್ತಿ ರೂಪದಲ್ಲಿ ಮಾತ್ರ ನನಗೆ ಸ್ನಾನ ಅಲಂಕರಣ ಇವು ಅತ್ಯಂತ ಪ್ರಿಯವಾದವು. ಸೂರ್ಯನ ಆರಾಧನೆಯಲ್ಲಿ ಪ್ರಾರ್ಥನೆಯು ನನಗೆ ಅತ್ಯಂತ ಪ್ರಿಯವಾದವು. ನನ್ನ ಭಕ್ತನು ಕೇವಲ ನೀರನ್ನು ನೀಡಿದರೂ ನನಗೆ ಪ್ರಿಯವೇ. ಧೂಪದೀಪಾದಿಗಳು, ಫಲಪುಷ್ಪಗಳು, ನೇವೇದ್ಯಗಳು ನನಗೆ ಬೇಕಿಲ್ಲ. ಭಕ್ತರಲ್ಲದವರು ಇವನ್ನು ರಾಸಿರಾಸಿಯಾಗಿ ನೀಡಿದರೂ ನನ್ನನ್ನು ಸಂತೋಷಗೊಳಿಸಲಾರದು.

ಪೂಜೆಗೆ ಬೇಕಾದ ಸಾಮಗ್ರಿಗಳನ್ನು ಶೇಖರಿಸಿಕೊಡು. ತನ್ನನ್ನೇ ಶುಚಿಗೊಳಿಸಿಕೊಂಡ ನಂತರ ಅವನು ಕುಶ ಗರಿಕೆಯಲ್ಲಿ ಮಾಡಿದ ಆಸನದ ಮೇಲೆ, ಪೂರ್ವ ಅಥವಾ ಉತ್ತರಕ್ಕೆ ಮುಖ ಮಾಡಿ ಕೂತು ಪೂಜಿಸಬೇಕು. ಸ್ಥಿರವಾದ ಮೂರ್ತಿಯ ವಿಚಾರದಲ್ಲೂ ಇದೇ ಅನ್ವಯ. ತನ್ನ ದೇಹದೊಳಗೆ ದೇವರುಗಳನ್ನು ಗುರುತಿಸಿಕೊಂಡ ನಂತರ ಅವನು ಮುಖ್ಯ ಮಂತ್ರವನ್ನು ನನ್ನ ಮೂರ್ತಿಯಲ್ಲಿಟ್ಟು ಅದನ್ನು ತನ್ನ ಹಸ್ತದಿಂದ ಪವಿತ್ರಗೊಳಿಸಬೇಕು. ಅವನು ಪವಿತ್ರ ನೀರನ್ನು ತುಂಬಿಸುವಂಥ ಪಾತ್ರೆಯನ್ನು ಶುಚಿಗೊಳಿಸಬೇಕು. ಪೂಜೆಗೊಳಗಾಗುವ ಸ್ಥಳದ ಮೇಲೆ ಅವನು ನೀರನ್ನು ಪ್ರೋಕ್ಷಿಸಬೇಕು. ತನ್ನ ಮೇಲೂ ಪ್ರೋಕ್ಷಣೆ ಮಾಡಿಕೊಳ್ಳಬೇಕು. ಆ ನೀರಿನ ಸ್ವಲ್ಪ ಭಾಗವನ್ನು ಮೂರು ಪಾತ್ರೆಗಳಲ್ಲಿ ತುಂಬಿಸಬೇಕು. ಆ ನೀರಿನಿಂದ ಪಾದಪೂಜೆ ಮಾಡಬೇಕು. ಸಾಂಕೇತಿಕವಾಗಿ ಮಂತ್ರಗಳ ಮೂಲಕ ಬಾಯನ್ನು ತೊಳೆದುಕೊಳ್ಳಬೇಕು. ಹೃದಯಕ್ಕೆ ನಮಃ, ಶಿರಕ್ಕೆ ಸ್ವಾಹಾ, ಹಾಗೂ ಶಿರದ ಮೇಲಿನ ತಲೆಗೆ ವಕ್ಷತ್. ಎಲ್ಲಕ್ಕೂ ಅನ್ವಯಿಸುವುದು ಗಾಯತ್ರಿ. ಭಕ್ತನು ನನ್ನನ್ನು ನಾರಾಯಣನಾಗಿ ನನ್ನ ಸೂಕ್ಷ್ಮ ಹಾಗೂ ಉನ್ನತ ಆಕೃತಿಯನ್ನು ಕುರಿತು ಧ್ಯಾನಿಸಬೇಕು. ಅನಂತರ ನನ್ನ ಆಯುಧಗಳು (ಪಾಂಚಜನ್ಯ, ದೊಣ್ಣೆ, ಕತ್ತಿ, ಬಿಲ್ಲುಬಾಣಗಳು, ನೇಗಿಲು, ಕೌಸ್ತುಭ ಆಭರಣ ಮಾಲೆ ಹಾಗೂ ಶ್ರೀವತ್ಸವೆಂದು ಕರೆಯಲಾದ ವಕ್ಷಸ್ಥಲದ ಮೇಲಿನ ಕೂದಲು) ಪೂಜೆಗೊಳ್ಳಬೇಕು.

ಅವನು ನನಗೆ ಮುಖ ಮಾಡಿಕೊಂಡಿರುವ ನಂದ, ಸುನಂದ ಹಾಗೂ ಇತರರನ್ನು ಪೂಜಿಸಬೇಕು. ಅವನು ನನಗೆ ಚಂದನ, ಕರ್ಪೂರ, ಅರಶಿನ ಇವನ್ನು ಮಂತ್ರಗಳೊಂದಿಗೆ ಅರ್ಪಿಸಬೇಕು. ಈ ಸಂದರ್ಭದಲ್ಲಿ ಸ್ವರ್ಣಘರ್ಮವೆಂಬ ವೈದಿಕ ಶ್ಲೋಕ, ಮಹಾಪುರುಷದ ಒಂದು ಪದ್ಯ, ಪುರುಷ ಸೂಕ್ತ, ರಜನ ಎಂದು ಹೆಸರಾದ ಸಮಸ್ ಇವನ್ನು ಪಠಿಸಬೇಕು. ನನ್ನ ಮೂರ್ತಿಯನ್ನು ಪುಷ್ಪ ಆಭರಣಗಳಿಂದ ಅಲಂಕರಿಸಬೇಕು. ನನಗೆ ಕಬ್ಬಿನ ರಸದಿಂದ ಮಾಡಿದ ಪದಾರ್ಥಗಳು, ಹಾಲಿನ ಅನ್ನ, ತುಪ್ಪ, ವಿವಿಧ ಬಗೆಯ ಸಿಹಿ ತಿನಿಸುಗಳು, ಮೊಸರು ಹಾಗೂ ತರಕಾರಿ ಖಾದ್ಯಗಳು ಪ್ರಿಯವಾದವು. ಅವನು ನನ್ನನ್ನು ಪುರುಷ ಸೂಕ್ತದ ಮೂಲಕ ಧ್ಯಾನಿಸಬೇಕು. ಅನಂತರ ಅವನು ನನಗೆ ಪ್ರಮಾಣಗಳನ್ನು ಸಲ್ಲಿಸಬೇಕು. ಆಗ ಅವನು ನನ್ನನ್ನು ಹೊಂದುತ್ತಾನೆ. ಈ ವಿಧವಾಗಿ ನನ್ನನ್ನು ಆರಾಧಿಸುವವರಿಗೆಲ್ಲ ನಾನು ಸಿಗುತ್ತೇನೆ.

ಕರ್ಮ ಬಂಧನಗಳನ್ನು ಕುರಿತ ಪ್ರಶ್ನೆಗೆ ಉತ್ತರಿಸುತ್ತ ಭಗವಂತನೆಂದನು : ಮತ್ತೊಬ್ಬರ ಸ್ವಭಾವವನ್ನು ಹಾಗೂ ಕಾರ್ಯಗಳನ್ನು ಹೊಗಳುವವನು ಅಥವಾ ತೆಗಳುವವನು ಶೀಘ್ರವಾಗಿ ತನ್ನ ಒಳಿತಿನಿಂದ ಕಳಚಿಕೊಳ್ಳುತ್ತಾನೆ. ಇದಕ್ಕೆ ಕಾರಣ ಅವನು ಅವಾಸ್ತವವಾದುದರ ಮೇಲೆ ತನ್ನ ಮನಸ್ಸನ್ನು ಇಟ್ಟಿರುವುದು. ನಿದ್ರೆಯಲ್ಲಿ ರಜಸನ ಪ್ರಭಾವ ಹೆಚ್ಚಾಗಿರುತ್ತದೆ. ತನ್ನ ಬಾಹ್ಯ ಪ್ರಜ್ಞೆಯನ್ನು ಕಳೆದುಕೊಂಡ ಜೀವವು ಭ್ರಮೆಯ ಕನಸುಗಳನ್ನು ಅಥವಾ ಮರಣದಂಥ ನಿದ್ರೆಯನ್ನು ಅನುಭವಿಸುತ್ತದೆ. ಒಂದು ಪ್ರತಿಬಿಂಬ, ರಜಸ್ ಅಹಂಕಾರದಿಂದ, ಇಂದ್ರಿಯಗಳು ನಿದ್ರೆಯಿಂದ ಆಕ್ರಾಂತವಾದಾಗ ಜೀವವು ಮಾಯಾರೂಪವಾದ ಸ್ವಪ್ನವನ್ನು ಕಾಣುವುದು. ಪ್ರತಿಧ್ವನಿ, ಭ್ರಮೆಯ ಕಾಣ್ಕೆ, ಅವಾಸ್ತವವಾಗಿದ್ದರೂ ಯಾವುದಾದರೂ ಪರಿಣಾಮವನ್ನು ಉಂಟು ಮಾಡುತ್ತವೆ; ಭಗವಂತನು, ಆತ್ಮನ್, ಈ ಜಗತ್ತನ್ನು ಪ್ರಕಟಿಸಿ ತಾನೇ ಅದರ ಮೂಲಕ ಪ್ರಕಟ ಗೊಳ್ಳುತ್ತಾನೆ. ಅದನ್ನು ಸಲಹುತ್ತಾನೆ, ಸಲಹಲ್ಪಡುತ್ತಾನೆ, ನಿರ್ನಾಮಗೊಳಿಸುತ್ತಾನೆ, ನಿರ್ನಾಮಗೊಳ್ಳುತ್ತದೆ. ಭಗವಂತನೆಂದನು: ಅನಂತರ ಆತ್ಮನ್‌ನಲ್ಲದೆ, ಮತ್ತೇನನ್ನೂ ತೋರಿಸಲಾಗದು. ಆತ್ಮನ್‌ನ ಮೂರು ವಿಧಗಳು ಆಧಾರ ರಹಿತವಾದದ್ದು, ಗುಣಗಳನ್ನೊಳಗೊಂಡ ಮೂರು ವಿಭಾಗಗಳು ಮಾಯೆಯ ಪರಿಣಾಮ. ಇದನ್ನು ಅರಿತವನು ಯಾರನ್ನೂ ದೂಷಿಸುವುದಿಲ್ಲ ಅಥವಾ ಪ್ರಕಟಿಸುವುದಿಲ್ಲ. ಅವನು ಜಗತ್ತಿನಲ್ಲಿ ಎಲ್ಲರನ್ನೂ ಬೆಳಗುವ ಸೂರ್ಯನಂತೆ ಸಂಚರಿಸುತ್ತಾನೆ. ಆದಿ ಅಂತ್ಯವಿರುವುದೆಲ್ಲವೂ ಅವಾಸ್ತವವಾಗಿದ್ದು, ಒಬ್ಬರು ನಿರ್ವ್ಯಾಮೋಹವನ್ನು ಬೆಳೆಸಿಕೊಳ್ಳಬೇಕು.

ಉದ್ಧವನು ಭಗವಂತನಿಗೆ ಆತ್ಮನ್‌ಗೂ ಅಥವಾ ಶರೀರಕ್ಕೂ ಆ ಅಸ್ತಿತ್ವವು ಅಸಾಧ್ಯ. ಯಾಕೆಂದರೆ ಅವು ವಿಷಯ ಹಾಗೂ ವಸ್ತು. ಪ್ರಕಾಶಮಯವಾದ ಒಂದು ಹಾಗೂ ಯಾವುದೇ ಪ್ರಕಾಶವನ್ನು ಹೊಂದಿರುವಂಥದ್ದು ಮತ್ತೊಂದು.ಆತ್ಮನ್ ಬದಲಾವಣೆ ರಹಿತ, ಅತಿಶಯ, ಪರಿಶುದ್ಧ, ಸ್ವಯಂಪ್ರಕಾಶ. ಹೀಗಾದ್ದಾಗ ಇವುಗಳಲ್ಲಿ ಯಾವುದಕ್ಕೆ ಅಸ್ತಿತ್ವವಿದೆ? ಭಗವಂತನು ಉತ್ತರಿಸಿದನು: ಎಲ್ಲಿಯವರೆಗೆ ಆತ್ಮನ್, ಶರೀರ, ಅವಯವಗಳು, ಪ್ರಾಣಗಳು ಹಾಗೂ ಅವಾಸ್ತವವಾದರೂ ಅಸ್ತಿತ್ವಕ್ಕೆ ಸಂಬಂಧಿಸಿರುವುದೋ ಅದು ಆಗ ತಾರತಮ್ಯ ಜ್ಞಾನವಿಲ್ಲದವನಿಗೆ ವಾಸ್ತವವಾಗಿ

ಕಾಣುತ್ತದೆ. ಜಗತ್ತು ಅವಾಸ್ತವವಾದರೂ, ಇಂದ್ರಿಯಗಳು ಕನಸುಗಳಲ್ಲಿ ತೊಂದರೆಗಳನ್ನು ಅನುಭವಿಸುತ್ತವೆ ಎಂದು ಭಾವಿಸುವಂತೆಯೇ, ಅಸ್ತಿತ್ವವನ್ನು ಕಳೆದುಕೊಳ್ಳುವುದಿಲ್ಲ. ದುಃಖ, ಸಂತೋಷ, ಭಯ, ದುರಾಸೆ, ತಿಳಿಗೇಡಿತನ, ಆಸೆ ಅಲ್ಲದೆ ಹುಟ್ಟು ಸಾವುಗಳನ್ನೂ ಅಹಂಮಿಕೆಗೆ ಸಂಬಂಧಿಸಿದಂತೆ ಆಚರಿಸಲಾಗುತ್ತಾದೆಯೇ ಹೊರತು, ಆತ್ಮನ್‌ಗೆ ಸಂಬಂಧಿಸಿದಂತಿಲ್ಲ.

ಭಗವಂತನು ಉದ್ಧವನಿಗೆ ತನಗೆ ಸಂಬಂಧಿಸಿದಂಥ ಕೆಲವು ಅತ್ಯುತ್ತಮ ಧಾರ್ಮಿಕ ರೂಪಗಳನ್ನು ತಿಳಿಸಿ ಅವನ್ನೂ ಆಚರಿಸುವುದರ ಮೂಲಕ ಅವನು ಅಭೇದ್ಯ ಮೃತ್ಯುವನ್ನು ಜಯಿಸಬಹುದೆಂದನು. ಒಬ್ಬರು ಭಗವಂತನಲ್ಲಿ ಮನಸ್ಸಿಡಬೇಕು. ಅವನಿಗೆ ಸಂಬಂಧಿಸಿದ ಧರ್ಮದಲ್ಲಿ ಕೆಲಸ ಮಾಡಬೇಕು. ಅವನಿಗಾಗಿಯೇ ಶಾಂತಿಯಿಂದ ಕಾರ್ಯವೆಸಗಬೇಕು. ಅವನ ಭಕ್ತರನ್ನು ಅನುಕರಿಸಬೇಕು, ಆಲೋಚನೆ, ಮಾತು, ಕೃತಿಯಲ್ಲಿ ಅವನನ್ನೇ ಆರಾಧಿಸಬೇಕು. ಅಂಥ ವ್ಯಕ್ತಿಗೆ ಎಲ್ಲವೂ ಬ್ರಹ್ಮನ್. ಒಬ್ಬನು ಎಲ್ಲರನ್ನೂ ತನ್ನಂತೆಯೇ ಕಾಣಬೇಕು. ಸಣ್ಣಪುಟ್ಟ ಸಂಗತಿಗಳೂ, ಉದಾಹರಣೆಗೆ, ಭೀತಿಯಿಂದ ಓಡುವುದು, ದುಃಖದಿಂದ ಅಳುವುದು ಮುಂತಾದವು ನಿಸ್ವಾರ್ಥತೆಯಿಂದ ಪರಮಾತ್ಮನಿಗಾಗಿ ನಡೆದಿದ್ದರೆ ಅದೇ ಧರ್ಮವಾಗುತ್ತದೆ. ಅವನೆಂದನು : ವಿವೇಕಿಗಳ ವಿವೇಕವು, ಬುದ್ಧಿಶಾಲಿಗಳ ಬುದ್ಧಿವಂತಿಕೆಯು ಅಡಗಿರುವುದು ಇಲ್ಲೇ. ಈ ಜನ್ಮದಲ್ಲೇ ಅವರು ನನ್ನನ್ನು ಸೇರುತ್ತಾರೆ .

ಭಗವಂತನ ಪ್ರವಚನಗಳನ್ನು ಕೇಳಿದ ಉದ್ಧವನು ಶ್ರೀ ಕೃಷ್ಣನನ್ನು ಕೊಂಡಾಡಿ "ಎಲೈ ಮಹಾನ್ ಯೋಗಿಯೇ, ನಿನಗೆ ಪ್ರಣಾಮಗಳು. ನಿನ್ನಲ್ಲಿ ಆಶ್ರಯ ಪಡೆದಿರುವ ನನಗೆ ನಿನ್ನ ಪದ್ಮಪಾದದಲ್ಲಿ ನಿರಂತರ ಭಕ್ತಿಯನ್ನು ಗಳಿಸುವುದು ಹೇಗೆ ಎಂಬುದರ ಬಗ್ಗೆ ಸೂಚನೆಗಳನ್ನು ನೀಡು" ಎಂದನು.

ಭಗವಂತನೆಂದನು: "ಎಲೈ ಉದ್ಧವನೇ ನನ್ನ ಅಪ್ಪಣೆಯಂತೆ ನನ್ನ ವಾಸಸ್ಥಾನವಾದ ಬದರೀಕಾಶ್ರಮವೆಂಬ ಸ್ಥಳಕ್ಕೆ ತೆರಳು. ನನ್ನ ಪಾದದಿಂದ ಚಿಮ್ಮುವ ಅಲಕಾನಂದ ನದಿಯನ್ನು ಕಾಣುತ್ತಿದ್ದಂತೆಯೇ ನಿನ್ನ ಪಾಪಗಳೆಲ್ಲವೂ ತೊಡೆದು ಹೋಗುತ್ತವೆ. ನೀನು ಅದನ್ನು ಸ್ಪರ್ಶಿಸಿ ಅದರಲ್ಲಿ ಮಿಂದರೆ ಪರಿಶುದ್ಧನಾಗುತ್ತೀಯೆ. ತೊಗಟೆಯನ್ನು ಧರಿಸಿ. ಮೂಲಿಕೆಗಳನ್ನು ಹಣ್ಣುಗಳನ್ನು ಸೇವಿಸುತ್ತ, ಸಂತಸಗಳಿಗೆ ಹಾತೊರೆಯದೆ, ಕಷ್ಟಕಾಲದಲ್ಲಿ ಸಂಯಮದಿಂದಿದ್ದು, ಇಂದ್ರಿಯಗಳನ್ನು ನಿಯಂತ್ರಿಸಿಕೊಂಡು, ಜ್ಞಾನ ಹಾಗೂ ಅರಿವು ತುಂಬಿದ ಮನಸ್ಸನ್ನು ಚಿತ್ತಿರಿಸಿ ನಾನು ಬೋಧಿಸಿದ್ದೆಲ್ಲವನ್ನೂ ಚಿಂತಿಸುತ್ತ, ನನ್ನ ಮೇಲೆ ಮನಸ್ಸಿಟ್ಟು ನನ್ನ ಧರ್ಮವನ್ನು ಆಚರಿಸು. ನೀನು ಮೂರು ಗುಣಗಳನ್ನು ದಾಟಿ, ನನ್ನನ್ನು ಸೇರುತ್ತೀಯೆ .

ಪರೀಕ್ಷಿತ ರಾಜನು ಶ್ರೀ ಶುಕಾಚಾರ್ಯನನ್ನು ಭಗವಂತನು ಉದ್ಧವನು ಬದರೀಕಾಶ್ರಮಕ್ಕೆ ತೆರಳಿದ ನಂತರ, ಏನು ಮಾಡಿದನು ಹಾಗೂ ಯದುವಂಶದ ನಿರ್ನಾಮದ ನಂತರ ತನ್ನ ಶರೀರವನ್ನು ಹೇಗೆ ಬಿಟ್ಟುಕೊಟ್ಟನು ಎಂಬುದಾಗಿ ಕೇಳಿದನು.

ಶ್ರೀ ಶುಕಾಚಾರ್ಯರೆಂದರು: "ಶ್ರೀ ಕೃಷ್ಣನು ಆಕಾಶದಲ್ಲಿ ಭೂಮಿಯಲ್ಲಿ ಹಾಗೂ ಹೊರವಲಯದಲ್ಲಿ ಕೆಡುಕಿನ ಸೂಚನೆಗಳನ್ನು ಕಂಡಾಗ ತನ್ನ ಸಂತತಿಯ ಸದಸ್ಯರಿಗೆ ದ್ವಾರಕೆಯಲ್ಲಿ ಇರಕೂಡದೆಂಬುದಾಗಿ ತಿಳಿಸಿದನು: ಅವನು ಮಹಿಳೆಯರು ಮಕ್ಕಳು ಹಾಗೂ ವೃದ್ಧರಿಗೆ ಸಂಕದ್ಧಾರಕ್ಕೆ ಹೊರಡಬೇಕೆಂದನು. ಪರಮಾತ್ಮನು ಇತರರೊಂದಿಗೆ ಸರಸ್ವತಿ ನದಿಯು ಪಶ್ಚಿಮ ಸಾಗರವನ್ನು ಸೇರುವ ಪ್ರಭಾಸ ಕ್ಷೇತ್ರಕ್ಕೆ ಹೊರಟನು. ಅಲ್ಲಿ ಇತರರು ನದಿಯಲ್ಲಿ ಮಿಂದು, ಉಪದೇವತೆಗಳನ್ನು ಪೂಜಿಸಿ, ಬ್ರಾಹ್ಮಣರನ್ನು ಆರಾಧಿಸಿ. ಗೋದಾನ ಮಾಡಬೇಕೆಂದನು. ಎಲ್ಲರೂ ಒಪ್ಪಿ ಪ್ರಭಾಸ ಕ್ಷೇತ್ರಕ್ಕೆ ತೆರಳಿದರು. ಅಲ್ಲಿ ಧಾರ್ಮಿಕ ವಿಧಿಗಳನ್ನು ಆಚರಿಸಿದ ನಂತರ ಮೈರೇಯ ವೆಂಬ ಸಿಹಿ ಪಾನೀಯವನ್ನು ಸೇವಿಸಿ ಉನ್ಮತ್ತರಾದರು. ಅನಂತರ ಅಲ್ಲಿ ಅವರವರಲ್ಲೇ ಕದನವು ಪ್ರಾರಂಭವಾಯಿತು. ಪ್ರದ್ಯುಮ್ನನು ಸಾಂಬನೊಂದಿಗೆ, ಅಕ್ರೂರನು ಕುಂತಿ ಭಾಗನೊಂದಿಗೆ, ಅನಿರುದ್ಧನು ಸಾತ್ಯಕಿಯೊಂದಿಗೆ ಹೀಗೆ ಅವರ ಸಂತತಿಯವರಲ್ಲೇ ಕಾದಾಟ ನಡೆಯಿತು. ದಶಹರರು, ದೃಷ್ಟಿಗಳು, ಅಂಧಕರು, ಭೋಜರು, ಸಾತವಾಹನರು, ಮಧುಗಳು, ಅರ್ಬುದರು, ಮಧುರರು, ಸುರಸೇನರು, ವಿಸರ್ಜನರು, ಕುಕುರರು ಮತ್ತು ಕುಂತಿಯರು ಒಬ್ಬರನ್ನೊಬ್ಬರು ಕೊಚ್ಚಿ ಹಾಕಿದರು. ಪುತ್ರರು ತಂದೆಯೊಂದಿಗೆ ಕಾದಾಡಿದರು. ಹೀಗೆ ಒಬ್ಬರನ್ನೊಬ್ಬರು ಕೊಂದರು.

ಅವರೆಲ್ಲರ ಬಿಲ್ಲುಗಳು ಮುರಿದು ಬಿದ್ದು, ಬತ್ತಳಿಕೆಗಳು ಬರಿದಾದಾಗ, ಅವರು ಬರಿಗೈಯಿಂದಲೇ ಕಬ್ಬಿನ ಜಲ್ಲೆಗಳನ್ನು ಹಿಡಿದು ಬಡಿದಾಡಿದರು. ಅವರು ಜಲ್ಲೆಯನ್ನು ಮುಟ್ಟುತ್ತಿದಂತೆಯೇ ಅವು ಕಬ್ಬಿಣದ ದೊಣ್ಣೆಗಳಾಗಿ ಪರಿವರ್ತಿನೆಗೊಂಡಾಗ ಕಾದಾಡುತ್ತಿದ್ದ ಅವರಿಗೆ ಭಗವಂತನು ಕದನವನ್ನು ನಿಲ್ಲಿಸಬೇಕೆಂದಾಗ ಭಗವಂತನನ್ನೇ ಹೊಡೆಯಲು ಬಂದರು. ಬಲರಾಮನನ್ನೂ ಹೊಡೆಯಲು ಮುಂದಾದರು. ಈ ಯೋಧರ ಹಿಂಸಾತ್ಮಕ ರೋಷ ಅವರನ್ನು ನಿರ್ನಾಮಕ್ಕೆ ಕೊಂಡೊಯ್ದಿತು.

ಹೀಗೆ ಎಲ್ಲರೂ ವಿನಾಶಕೊಂಡಾಗ, ಭಗವಂತನು ಭೂಮಿಯ ಮೇಲಿನ ಹೊರೆಯು ಕೊನೆಗೂ ಕಡಿಮೆಯಾಯಿತು ಎಂದುಕೊಂಡನು. ಬಲರಾಮನು ಸಾಗರದ ದಂಡೆಯಲ್ಲಿ ಕೂತು ಭಗವಂತನನ್ನು ಧ್ಯಾನಿಸಿ ತನ್ನನ್ನು ಅವನೊಳಗೆ ಸೇರಿಸಿ, ಲೌಕಿಕ ಶರೀರವನ್ನು ತ್ಯಜಿಸಿದನು. ಬಲರಾಮನ ನಿರ್ಗಮನವನ್ನು ಕಂಡ ಭಗವಂತನು ನಿಶ್ಚಲನಾಗಿ ಪಿಪ್ಪಲ ವೃಕ್ಷದ ಕೆಳಗಿನ ನೆಲದ ಮೇಲೆ ಕೂತನು. ಅವನು ಕೂತಿದ್ದಂತೆಯೇ, ತನ್ನ ಎಡಗಾಲನ್ನು ತನ್ನ ಬಲಗಾಲ ಮೇಲೆ ಏರಿಸಿದನು. ಆ ಸಮಯಕ್ಕೆ ಜರ ಎಂಬ ಹೆಸರಿನ ಬೇಡನು ಭಗವಂತನ ಪಾದವನ್ನು ಜಿಂಕೆಯೊಂದರ ಮುಖವೆಂದು ತಪ್ಪಾಗಿ ಭಾವಿಸಿ, ತನ್ನ ಬಾಣದಿಂದ ಅದಕ್ಕೆ ಹೊಡೆದನು. ಅವನ ಬಾಣದಲ್ಲಿ ಸಾಂಬನ ದೊಣ್ಣೆಯ ಅಂಶವಿತ್ತು. ಜರನು ವ್ಯಕ್ತಿಯೊಬ್ಬನನ್ನು ಕಂಡಾಗ ಅವನು ತನ್ನ ತಪ್ಪಿಗೆ ಭೀತಿಗೊಂಡು ಭಗವಂತನ ಪಾದದ ಮೇಲೆ ತಲೆಯಿಟ್ಟು ಕ್ಷಮೆಯನ್ನು ಯಾಚಿಸಿದನು. ಭಗವಂತನೆಂದನು: ನನ್ನ ಪ್ರಿಯ ಜರನೆ, ಭೀತಿಗೊಳ್ಳದಿರು, ಎದ್ದು ನಿಲ್ಲು. ಈಗ ನಡೆದಿರುವುದು ನನ್ನ ಇಷ್ಟಾರ್ಥದಿಂದಲೇ. ನನ್ನ ಅನುಮತಿಯೊಂದಿಗೆ. ಪವಿತ್ರವಾದ,

ದೈವಿಕ ಜಗತ್ತಿಗೆ "ಹೋಗುವಂಥವನಾಗು". ಬೇಟೆಗಾರ ಜರನು ವಿಮಾನದಲ್ಲಿ ಹೊರಟನು.

ಆ ಸಮಯದಲ್ಲಿ ದರೂಕನು ತನ್ನ ಒಡೆಯನಾದ ಭಗವಂತನಿಗಾಗಿ ಅರಸುತ್ತಿದ್ದನು. ಅವನು ಭಗವಂತನು ಕುಳಿತಿದ್ದ ಸ್ಥಳವನ್ನು ಸಮೀಪಿಸುತ್ತಿದ್ದಂತೆಯೇ ತುಳಸಿ ಎಲೆಯ ಸುವಾಸನೆ ಗಾಳಿಯಲ್ಲಿ ತೇಲಿ ಅವನ ದಿಕ್ಕಿನಲ್ಲಿ ಹರಡಿತು. ಪಿಪ್ಪಲ ವೃಕ್ಷದ ಕೆಳಗೆ ವಿಶ್ರಮಿಸುತ್ತಿದ್ದ ಭಗವಂತನನ್ನು ಕಂಡ ಅವನ ಕಣ್ಣಗಳಲ್ಲಿ ನೀರು ತುಂಬಿ ಅವನು ಭಗವಂತನ ಪಾದದ ಮೇಲೆ, ದುಃಖ ತಾಳಲಾರದೆ, ಬಿದ್ದನು. ದರೂಕನು ಮಾತನಾಡುತ್ತಿದ್ದಂತೆಯೇ, ಭಗವಂತನ ರಥವು ಅಂತರಿಕ್ಷದಲ್ಲಿ ಅದರ ಕುದುರೆಗಳು ಹಾಗೂ ಗರುಡ ಚಿಹ್ನೆಯಿದ್ದ ಧ್ವಜದೊಂದಿಗೆ ಕಾಣಿಸಿಕೊಂಡಿತು. ಎಲ್ಲ ದೈವಿಕ ಆಯುಧಗಳು ಕಾಣಿಸಿಕೊಂಡವು. ಭಗವಂತನು ದರೂಕನಿಗೆ ದ್ವಾರಕೆಗೆ ಹೋಗಿ ತನ್ನ ಜನರಿಗೆ ಸಂಕರ್ಷಣನ ಕಣ್ಮರೆ ಹಾಗೂ ತನ್ನ ಸ್ಥಿತಿಯನ್ನು ಹೇಳುವಂತೆ ತಿಳಿಸಿದನು. ಅವನು ದರೂಕನಿಗೆ ದ್ವಾರಕೆಯನ್ನು ಬಿಡಲು ಏಕೆ ತಿಳಿಸಿದನೆಂದರೆ ಭಗವಂತನು ಕಣ್ಮರೆಯಾದ ಕೂಡಲೆ ನಗರವು ಪ್ರಳಯದಲ್ಲಿ ಕೊಚ್ಚಿ ಹೋಗಲಿದ್ದುದರಿಂದ. ದರೂಕನಿಗೆ ಭಗವಂತನು ಅವನು ತನ್ನ ತಂದೆ ತಾಯಿಗಳನ್ನು ಅರ್ಜುನನ ರಕ್ಷಣೆಯಲ್ಲಿ ಇಂದ್ರಪ್ರಸ್ಥಕ್ಕೆ ಕೊಂಡೊಯ್ಯಬೇಕೆಂದನು: ಎಲೈ ದರೂಕನೇ, ನೀನು ನನ್ನಲ್ಲಿ ಏಕಚಿತ್ತದಿಂದ ಧ್ಯಾನ ಮಗ್ನನಾಗಿದ್ದು, ಅಧ್ಯಾತ್ಮಿಕ ಜ್ಞಾನದಲ್ಲಿ ಮನಸ್ಸಿಟ್ಟು, ಐಹಿಕ ವಿಷಯಗಳ ಬಗ್ಗೆ ವ್ಯಾಮೋಹ ತಳೆಯದವನಾಗಿರಬೇಕು. ನನ್ನ ಭ್ರಮೆ, ಸಾಮರ್ಥ್ಯ ಇವುಗಳ ಪ್ರದರ್ಶನವೇ ಈ ಲೀಲೆಗಳು ಎಂಬುದನ್ನು ಅರಿತು ನೀನು ಶಾಂತನಾಗಿರಬೇಕು". ಹೀಗೆ ಆಜ್ಞಾಪಿಸಲ್ಪಟ್ಟ ದರೂಕನು ಹೊರಟನು.

ಶ್ರೀ ಶುಕಾಚಾರ್ಯರು, ಬ್ರಹ್ಮ ಮಹೇಶ್ವರರು ಹಾಗೂ ಇತರ ಉಪದೇವತೆಗಳು ಪ್ರಭಾಸಕ್ಷೇತ್ರಕ್ಕೆ ಬಂದರೆಂದು ತಿಳಿಸಿದರು. ಭಗವಂತನ ನಿರ್ಗಮನವನ್ನು ಕಾಣಲು ಪಿತೃಗಳು, ಸಿದ್ಧರು, ಗಂಧರ್ವರು ಮುಂತಾದವರು ಆಗಮಿಸಿ ಶ್ರೀ ಕೃಷ್ಣ ಮಂತ್ರವನ್ನು ಪಠಿಸತೊಡಗಿದರು. ಬ್ರಹ್ಮ ಹಾಗೂ ಇತರರನ್ನು ತನ್ನ ಮುಂದೆ ಕಂಡ ಭಗವಂತನು ತನ್ನೊಳಗೇ ಮನಸ್ಸಿಟ್ಟು ಕಣ್ಮುಚ್ಚಿ ತನ್ನ ಆವಾಸಸ್ಥಾನವನ್ನು ಪ್ರವೇಶಿಸಿದನು. ಅವನೊಂದಿಗೇ ಸತ್ಯ, ಧರ್ಮ, ವಿಧೇಯತೆ, ವೈಭವ, ಸೌಂದರ್ಯವೆಲ್ಲವೂ ಹೊರಟವು.

ಉಪದೇವತೆಗಳಲ್ಲಿ ಅನೇಕರು ಹಾಗೂ ಬ್ರಹ್ಮನ ನೇತೃತ್ವದಲ್ಲಿನ ಉನ್ನತ ಜೀವಿಗಳು ಭಗವಂತನು ತನ್ನದೇ ವಾಸಸ್ಥಾನಕ್ಕೆ ಹಿಂತಿರುಗುತ್ತಿದ್ದುದನ್ನು ಕಾಣಲಾಗಲಿಲ್ಲ. ಏಕೆಂದರೆ ಅವನು ತನ್ನ ಚಲನವಲನಗಳನ್ನು ಪ್ರಕಟಿಸಲಿಲ್ಲ. ಆದರೆ ಅದನ್ನು ಕಂಡ ಕೆಲವರು ಸ್ಥಂಭೀಭೂತರಾದರು. ಶ್ರೀ ಶುಕಾಚಾರ್ಯರು ಪರೀಕ್ಷಿತನಿಗೆ ಹೇಳಿದರು : ಭಗವಂತನ ಪ್ರತ್ಯಕ್ಷ ಹಾಗೂ ಕಣ್ಮರೆ ವಾಸ್ತವವಾಗಿ ಅವನ ಭ್ರಮಾಶಕ್ತಿಯಿಂದ ಅಭಿನಯಿಸಲ್ಪಟ್ಟಿದ್ದು ಎಂಬುದನ್ನು ನೀನು ತಿಳಿಯಬೇಕು. ಜಗತ್ತನ್ನು ಸೃಷ್ಟಿಸಿದ ನಂತರ ಅವನು ಅದನ್ನು ಪ್ರವೇಶಿಸಿ, ಅಲ್ಲಿ ಕೆಲವು ಕಾಲ ವಿಹರಿಸಿ ಕೊನೆಗೆ ಅದನ್ನು

ಮುಕ್ತಾಯಗೊಳಿಸುತ್ತಾನೆ. ಅನಂತರ ಭಗವಂತನು ತನ್ನದೇ ಆದ ಅತಿಶಯ ವೈಭವದಲ್ಲಿ, ಜಗತ್ತಿನ ಕ್ರಿಯೆಗಳನ್ನು ಮುಗಿಸಿ ಉಳಿಯುತ್ತಾನೆ".

ಭಗವಂತನು ತನ್ನನ್ನೇ ಸಂರಕ್ಷಿಸಿಕೊಳ್ಳಲು ಸಮರ್ಥನಾಗಿದ್ದರೂ, ಅವನಿಗೆ ಅದು ಬೇಕಿಲ್ಲದಿರುವುದರಿಂದ ಅವನು ಹಾಗೆ ಮಾಡುವುದಿಲ್ಲ. ಆತ್ಮದಲ್ಲಿ ಚಿತ್ತವನ್ನಿರಿಸಿ ಕೊಂಡವರಿಗೆ ಅವರು ತಲಪಬೇಕಾದ ಸ್ಥಳವನ್ನು ತಿಳಿಸಿದ ಅವನು ಈ ನಶ್ವರ ಜಗತ್ತು ಯಾವ ಆಂತರಿಕ ಮಟ್ಟವನ್ನೂ ಹೊಂದಿಲ್ಲ ಎಂಬುದನ್ನು ತಿಳಿಸಿದನು.

ದರೂಕನು ದ್ವಾರಕೆಗೆ ಹಿಂತಿರುಗಿ ಉಗ್ರಸೇನ ಹಾಗೂ ವಸುದೇವನ ಪಾದಗಳಿಗೆ ಬಿದ್ದು ಭಗವಂತನು ಅವನಿಗೆ ಹೇಳಿದ್ದನ್ನೆಲ್ಲ ಅವರಿಗೆ ತಿಳಿಸಿದ. ಅವರು ತಮ್ಮ ಬಂಧಗಳು ಸತ್ತುಬಿದ್ದಿದ್ದ ಸ್ಥಳಕ್ಕೆ ಓಡಿದರು. ಅವರು ಅಗಲಿಕೆಯನ್ನು ಪಡೆಯಲಾಗದೆ ಪ್ರಾಣ ಬಿಟ್ಟರು.

ಅರ್ಜುನನಿಗೆ ಭಗವಂತನಿಂದ ದೂರವಾದದ್ದು ದುಃಖವನ್ನುಂಟು ಮಾಡಿದರೂ ತನ್ನನ್ನೇ ಸಮಾಧಾನಗೊಳಿಸಿಕೊಂಡನು. ಪ್ರತಿಯೊಬ್ಬ ಯದುವಿಗೂ ಅಂತ್ಯಸಂಸ್ಕಾರ ಮಾಡಿದ್ದನ್ನು ಅವನು ಕಂಡನು.

ಭಗವಂತನು ದ್ವಾರಕೆಯಿಂದ ನಿರ್ಗಮಿಸಿದ ಕೂಡಲೆ ಸಾಗರವು ಎಲ್ಲೆಡೆಗಳಿಗೂ ತುಂಬಿಕೊಂಡಿತು. ಭಗವಂತನ ಅರಮನೆ ಮಾತ್ರ ಮುಳುಗಡೆಯಾಗಲಿಲ್ಲ. ಭಗವಂತನು ದ್ವಾರಕೆಯಲ್ಲಿ ಶಾಶ್ವತವಾಗಿ ಉಳಿದು ಕೊಂಡಿದ್ದಾನೆ. ಅದು ಅತ್ಯಂತ ಪವಿತ್ರಸ್ಥಳ.

ಅರ್ಜುನನು ಯದುವಂಶದ ಉಳಿದವರನ್ನು ಕರೆದುಕೊಂಡು ಇಂದ್ರಪ್ರಸ್ಥಕ್ಕೆ ತೆರಳಿ ಅಲ್ಲಿ ವಜ್ರನನ್ನು ಯದುಗಳ ದೊರೆಯಾಗಿ ಸ್ಥಾಪಿಸಿದನು. ಇದನ್ನು ಕೇಳಿದಾಗ ಪರೀಕ್ಷಿತ ರಾಜನಿಗೆ ಶ್ರೀ ಶುಕಾಚಾರ್ಯರು ಹೇಳಿದರು: ನಿನ್ನ ತಾತ ನಿನ್ನನ್ನು ವಂಶವನ್ನು ನಡೆಸುವವನಾಗಿ ಸ್ಥಾಪಿಸಿ ಜಗತ್ತಿನಿಂದ ತಾನು ನಿರ್ಗಮಿಸಲು ನಿಶ್ಚಯಿಸಿದನು.

ಶ್ರೀಮದ್ಭಾಗವತದಲ್ಲಿ ಹಾಗೂ ಇತರ ಧರ್ಮಗ್ರಂಥಗಳಲ್ಲಿ ಸರ್ವ ಪವಿತ್ರವಾದ ಸರ್ವಾಕರ್ಷಕ ಅವತಾರಗಳನ್ನು ಹೊಂದಿದ ಶ್ರೀ ಕೃಷ್ಣನ ಸಾಹಸಗಳನ್ನು ಹಾಗೂ ಮಗುವಾಗಿ ಅವನು ವಿಹರಿಸಿದ ರೀತಿಯನ್ನು ವರ್ಣಿಸಲಾಗಿದೆ. ಈ ಲೀಲೆಗಳನ್ನು ವಿವರಣೆಗಳನ್ನು ಸ್ಪಷ್ಟವಾಗಿ ಪಠಿಸುವವರು ಭಗವಂತನ ಅತಿಶಯ ಕೃಪೆಯನ್ನು ಗಳಿಸುತ್ತಾರೆ. ಶ್ರೀ ಕೃಷ್ಣನೇ ಎಲ್ಲ ಪರಿಪೂರ್ಣ ಯೋಗಿಗಳ ಗುರಿಯು".

## ಪರಿಸಮಾಪ್ತಿ

ಕೃಷ್ಣ ಪರಮಾತ್ಮನ ನಂತರ ಜಗತ್ತನ್ನು ಯಾವ ಮನೆತನವು ಆಳಿತೆಂಬುದಾಗಿ ಪರೀಕ್ಷಿತ ರಾಜನು ಶ್ರೀ ಶುಕಾಚಾರ್ಯರನ್ನು ವಿಚಾರಿಸಿದನು.

ಶ್ರೀ ಶುಕಾಚಾರ್ಯರು ಭವಿಷ್ಯದ ಬಗ್ಗೆ ನುಡಿದರು. ಪುರಂಜಯ ರಾಜನು (ಹಿಂದೆ ವಿವರಿಸಲ್ಪಟ್ಟವನು) ತನ್ನ ಸಚಿವ ಶೌನಕನಿಂದ ಕೊಲ್ಲಲ್ಪಟ್ಟು ಅವನ ಸ್ವಂತ

ಮಗನಾದ ಪ್ರದ್ಯೋಪನನ್ನು ಸಿಂಹಾಸನಕ್ಕೆ ತರಲಾಯಿತು. ಪ್ರದ್ಯೋತ, ಅವನ ಮಕ್ಕಳು ಹಾಗೂ ಮೊಮ್ಮಕ್ಕಳು ಜಗತ್ತನ್ನು ಒಂದು ನೂರ ಮೂವತ್ತೆಂಟು ವರ್ಷಗಳ ಕಾಲ ಆಳಿದರು. ಅನಂತರ ಶಿಶುನಾಗನು ಚಕ್ರವರ್ತಿಯಾಗುತ್ತಾನೆ. ಶಿಶುನಾಗನ ಮಕ್ಕಳು ಹಾಗೂ ಮೊಮ್ಮಕ್ಕಳು ಮುನ್ನೂರ ಅರವತ್ತು ವರ್ಷಗಳ ಕಾಲ ರಾಜ್ಯವನ್ನಾಳುತ್ತಾರೆ. ಅನಂತರ ಶಕ್ತಿಶಾಲಿ ವ್ಯಕ್ತಿಯಾದ ನಂದನೆಂಬುವನು ಶೂದ್ರ ಮಹಿಳೆಯೊಬ್ಬಳ ಗರ್ಭದಲ್ಲಿ ಮಹಾನಂದನೆಂಬ ದೊರೆಗೆ ಹುಟ್ಟುತ್ತಾನೆ. ದೊರೆ ನಂದನು ಕ್ಷತ್ರಿಯರ ನಿರ್ನಾಮಕ್ಕೆ ಮುಖ್ಯ ಕಾರಣನಾಗುತ್ತಾನೆ. ಅನಂತರ ಅಧರ್ಮೀಯರು ಹಾಗೂ ಕೀಳ್ತನವನ್ನುಳ್ಳವರು ಆಳ್ವಿಕೆ ನಡೆಸುತ್ತಾರಷ್ಟೆ. ಮಹಾಪಾದನೆಂಬ ಹೆಸರನ್ನೂ ಉಳ್ಳ ನಂದನು ತನ್ನನ್ನು ಉನ್ನತ ರಾಜನನ್ನಾಗಿ ಸ್ಥಾಪಿಸಿಕೊಂಡು ಅವನ ಮಕ್ಕಳು ಒಂದು ನೂರು ವರ್ಷಗಳ ಕಾಲ ಜಗತ್ತನ್ನು ಆಳುತ್ತಾರೆ. ಚಾಣಕ್ಯನೆಂಬುವನು ಎಲ್ಲ ನಂದರನ್ನೂ ಕೊಲ್ಲುತ್ತಾನೆ. ಅನಂತರ ಮೌರ್ಯ ಸಾಮ್ರಾಜ್ಯವು ಸ್ಥಾಪನೆಗೊಂಡು ಚಂದ್ರಗುಪ್ತನು ಅದರ ನೇತೃತ್ವವನ್ನು ವಹಿಸುತ್ತಾನೆ. ಹಾಗೂ ಮೌರ್ಯರು ಒಂದು ನೂರ ಮೂವತ್ತೇಳು ವರ್ಷಗಳ ಕಾಲ ಆಳುತ್ತಾರೆ. ಪುಷ್ಯಮಿತ್ರನು ಕಟ್ಟ ಕಡೆಯ ಮೌರ್ಯ ಚಕ್ರವರ್ತಿಯನ್ನು ಕೊಂದು ಆಳ್ವಿಕೆ ನಡೆಸುತ್ತಾನೆ. ಅವನು ಹಾಗೂ ಅವನ ಉತ್ತರಾಧಿಕಾರಿಗಳು ಒಂದು ನೂರು ವರ್ಷಗಳು ಆಳುತ್ತಾರೆ.

ಇದಾದ ನಂತರ ಭೂಮಿಯು ಕಣ್ವ ಕುಟುಂಬದ ಆಡಳಿತಕ್ಕೆ ಒಳಪಟ್ಟು ಅದೆಲ್ಲಾ ಸದ್ಗುಣಗಳಿಂದ ದೂರವಿರುತ್ತದೆ ಎಂಬುದಾಗಿ ಶುಕಾಚಾರ್ಯರು ತಿಳಿಸಿದರು. ಈ ಕುಟುಂಬವು ಮುನ್ನೂರ ನಲವತ್ತೈದು ವರ್ಷಗಳ ಕಾಲ ಆಳುತ್ತದೆ. ಅನಂತರ ಆಂಧ್ರ ಮೂಲದ ಮೂವತ್ತು ರಾಜರು ನಾನೂರೈವತ್ತು ವರ್ಷಗಳ ಕಾಲ ಆಳುತ್ತಾರೆ. ಇದರಂತೆಯೇ ವಿವಿಧ ಮನೆತನಗಳು ಜಗತ್ತನ್ನು ಆಳಿ ಅವರ ಆಡಳಿತದ ಕೆಳಗೆ ಪ್ರಜೆಗಳು ಕಷ್ಟ ನಷ್ಟಗಳನ್ನು ಅನುಭವಿಸಿ ದೊರೆಗಳಿಂದ ಶೋಷಣೆಗೆ ಒಳಗಾಗುತ್ತಾರೆ.

ಕುಸಿತವು ನಿಧಾನಗತಿಯಲ್ಲಿ ಸಂಭವಿಸಿ ಇಡೀ ಜೀವನವು ಅಪಮೌಲ್ಯೀಕರಣ ಗೊಳ್ಳುತ್ತವೆ ಎಂಬುದಾಗಿ ಶ್ರೀ ಶುಕಾಚಾರ್ಯರು ತಿಳಿಸಿದರು. ಜನರ ಮುಖ್ಯ ಧ್ಯೇಯ ಸಂಪತ್ತಿನ ಸಂಗ್ರಹವಾಗಿರುತ್ತದೆ. ಆಡಳಿತಗಾರರು ಹಾಗೂ ಆಳ್ವಿಕೆಗೆ ಒಳಪಟ್ಟವರ ನೈತಿಕ ಮೌಲ್ಯಗಳು ನಿಧಾನವಾಗಿ ಕೆಳಮಟ್ಟಕ್ಕಿಳಿಯುತ್ತದೆ. ದುಷ್ಟತನವನ್ನು ಮಾಪನ ಮಾಡುವ ಅಳತೆಗೋಲು "ಬಡತನ" ವಾಗಲಿದ್ದು, ಸಂಪತ್ತು ಮತ್ತು ಬೂಟಾಟಿಕೆತನಕ್ಕೆ ಪುರಸ್ಕಾರ ದೊರೆಯುತ್ತದೆ. ಶಕ್ತಿಯೇ ಹಕ್ಕು ಎಂಬುದು ಧ್ಯೇಯವಾಕ್ಯವಾಗುತ್ತದೆ. ಎಲ್ಲೆಡೆಯಲ್ಲೂ ಅತಿವೃಷ್ಟಿ ಅಥವಾ ಅನಾವೃಷ್ಟಿ ತಲೆದೋರಿ "ಕಲಿಯುಗ" ವು ಮುಗಿಯುತ್ತಿದ್ದಂತೆಯೇ ಜನರು ಪಶುಗಳಂತೆ ವರ್ತಿಸುತ್ತಾರೆ.

ಕಲ್ಕಿಯು ವಿಷ್ಣುಕೀರ್ತಿಯೆಂಬ ಬ್ರಾಹ್ಮಣನೊಬ್ಬನ ವಂಶದಲ್ಲಿ ಶಂಬಲ ಗ್ರಾಮದಲ್ಲಿ ಜನಿಸುತ್ತಾನೆ. ಕಲ್ಕಿಯು "ದೇವದತ್ತ" ನೆಂಬ ಅಶ್ವವನ್ನೇರಿ ಆಯುಧವನ್ನು ಝಳುಪಿಸುತ್ತ ಅದರಿಂದ ದುಷ್ಟ ಜನರನ್ನು ಶಿಕ್ಷಿಸುತ್ತಾನೆ. ಭಗವಂತನು ಕಲ್ಕಿಯಾಗಿ ಅವತರಿಸಿ ಭೂಮಿಯ ಮೇಲೆ ಕಾಣಿಸಿಕೊಂಡಾಗ ಕೃತಯುಗವು ಆರಂಭವಾಗುತ್ತದೆ.

ಶ್ರೀ ಶುಕಾಚಾರ್ಯರು ದೊರೆಗೆ ಅವನು (ಪರೀಕ್ಷಿತ ರಾಜನು) ಕಾಣಿಸಿಕೊಂಡಂದಿನಿಂದ ನಂದನ ಕಿರೀಟಧಾರಣೆಯವರೆಗೆ ಸುಮಾರು ಒಂದು ಸಾವಿರದ ಐದು ನೂರು ವರ್ಷಗಳು ಕಳೆದಿರುತ್ತವೆ ಎಂದು ತಿಳಿಸಿದರು.

ಭೂಮಿಯನ್ನಾಳಿದ ಎಲ್ಲ ದೊರೆಗಳೂ ಕಣ್ಮರೆಯಾಗಿದ್ದು ಉಳಿದಿರುವುದು ಅವರು ಮಾಡಿದ ಒಳ್ಳೆಯ ಕಾರ್ಯಗಳು ಮಾತ್ರ. ಜಗತ್ತನ್ನು ಜಯಿಸಿದೆವೆಂದು ಹೆಮ್ಮೆ ಪಡುತ್ತಿರುವ ಪ್ರಖ್ಯಾತ ರಾಜರನ್ನು ನೋಡುತ್ತಿರುವ ಭೂ ತಾಯಿಯು ಅವರನ್ನು ಅಣಕಿಸುತ್ತಾಳೆ. ಭೂ ತಾಯಿಯು ಉನ್ನತರಾದ ಹಾಗೂ ದುಷ್ಟರಾದ ರಾಜರು, ಪಿಶಾಚಿಗಳು, ಉಪದೇವತೆಗಳು ಇವರುಗಳು ನಡೆಸಿದ ರಾಜ್ಯಭಾರಕ್ಕೆ ಸಾಕ್ಷೀದಾರಳಾಗಿದ್ದು ಅವರೆಲ್ಲರೂ ತಮ್ಮ ಅತಿರೇಕ ಆಸೆ ಹಾಗೂ ಅಹಂಕಾರದಿಂದ ಕಣ್ಮರೆಯಾಗಿದ್ದಾರೆ. ಈ ದೊರೆಗಳ ವೃತ್ತಾಂತವನ್ನು ಪರೀಕ್ಷಿತನಿಗೆ ಉಲ್ಲೇಖಿಸಿದ್ದಕ್ಕೆ ಕಾರಣ ಅವನನ್ನು ವಿವೇಕಿಯನ್ನಾಗಿಸಿ ಅವನು ಲೌಕಿಕ ಬದುಕಿನತ್ತ ವಿರಕ್ತನಾಗಿ ದೈವದ ಬಗ್ಗೆ ಭಕ್ತಿಯನ್ನು ತಾಳುವಂತೆ ಮಾಡುವುದಾಗಿದೆ ಎಂದು ಶ್ರೀ ಶುಕಾಚಾರ್ಯರು ಹೇಳಿದರು.

ಶ್ರೀ ಶುಕಾಚಾರ್ಯರು ಕೃತಯುಗದ ಜನರು ಸದಾಕಾಲವೂ ಹರ್ಷ ತೃಪ್ತಿಯಿಂದ ಸತ್ಯವಂತರಾಗಿ ಹಾಗೂ ನಿಸ್ಪೃಹರಾಗಿರುತ್ತಾರೆಂದರು. ಕಾಲ ಕ್ರಮೇಣ ಮುಂಬರುವ ಯುಗಗಳಲ್ಲಿ ಗುಣಗಳು ಅಪಮೌಲ್ಯೀಕರಣಗೊಳ್ಳುತ್ತವೆ.

ಬ್ರಹ್ಮನ ಇಡೀ ಜೀವನವು ಎರಡು ಹೋಳುಗಳಾಗಿ ವಿಭಜಿಸಲ್ಪಟ್ಟಿವೆ. ಒಂದು "ಕಲ್ಪ" ನಾಗಿದ್ದು ಮತ್ತೊಂದು "ಪ್ರಳಯ" ವಾಗಿದೆ. ಕಲ್ಪವು ಹಗಲಾಗಿದ್ದು ಪ್ರಳಯವು ರಾತ್ರಿ. "ಪ್ರಳಯ" ದ ಕೊನೆಯಲ್ಲಿ ವಿಷ್ಣುವು ಇಡೀ ಜಗತ್ತನ್ನು ತನ್ನೊಳಗೆ ಸೇರಿಸಿಕೊಂಡು ಅನಂತಶಯನನಾಗುತ್ತಾನೆ.

ಶ್ರೀ ಕೃಷ್ಣ ಪರಮಾತ್ಮನು ಶ್ರೀಮದ್ಭಾಗವತದ ಕೇಂದ್ರ ವ್ಯಕ್ತಿ ಎಂಬುದಾಗಿ ಶ್ರೀ ಶುಕಾಚಾರ್ಯರು ತಿಳಿಸಿದರು. ಈ ಮಹಾಪುರಾಣದಲ್ಲಿ ಅವನ ವೈಭವವನ್ನು ವಿವರಿಸಲಾಗಿದೆ. ಸಾವನ್ನು ಕುರಿತ ದುಷ್ಟ ಆಲೋಚನೆಯನ್ನು ನಿವಾರಿಸಿಕೊಳ್ಳಬೇಕೆಂದು ಶ್ರೀ ಶುಕಾಚಾರ್ಯರು ಪರೀಕ್ಷಿತ ರಾಜನಿಗೆ ಉಪದೇಶಿಸಿದರು. ನಿನ್ನ ಶರೀರವು ಸಾಯುತ್ತದೆಯೇ ಹೊರತು ನೀನು ಸಾಯುವುದಿಲ್ಲ. ನೀನು ಹೊಸದಾಗಿ ಹುಟ್ಟುವುದಿಲ್ಲ ಅಥವಾ ನೀನು ಹಿಂದೆ ಸತ್ತಿಲ್ಲ. ಕಟ್ಟಿಗೆಯಲ್ಲಿ ಪ್ರತ್ಯೇಕವಾಗಿರುವ ಅಗ್ನಿಯಂತೆ ನೀನು ಶರೀರದಿಂದ ಪ್ರತ್ಯೇಕನಾದವನು. ಆತ್ಮವು ಅವಿನಾಶಿ. ಅದು ಶಾಶ್ವತ. ಅಂತಿಮವಾಗಿ ವಿನಾಶ ಹೊಂದುವುದು ದೇಹವೇ ಹೊರತು ಆತ್ಮವಲ್ಲ. ಶ್ರೀ ಶುಕಾಚಾರ್ಯರು ದೊರೆಗೆ ಭಗವಂತನ ಮೇಲೆ ಗಮನವನ್ನು ಕೇಂದ್ರಿಕರಿಸುವಂತೆ ಉಪದೇಶಿಸಿದನು.

ಎಲ್ಲವನ್ನೂ ಶ್ರೀ ಶುಕಾಚಾರ್ಯರಿಂದ ಕೇಳಿದ ದೊರೆಯು ಭಗವಂತನ ವೈಭವದ ಬಗ್ಗೆ ಆಳವಾಗಿ ಆಲಿಸಿರುವೆನೆಂಬುದಾಗಿ ಭಾವಿಸಿ, ಪರಮಾತ್ಮನ ಮೇಲಿನ ಉಪನ್ಯಾಸಕ್ಕಾಗಿ ತನ್ನ ಕೃತಜ್ಞತೆಯನ್ನು ವ್ಯಕ್ತಪಡಿಸಿದನು. ಅಲ್ಲಿನೆರೆದಿದ್ದ ಎಲ್ಲ ವಿದ್ವಜ್ಜನರನ್ನೂ

ಮೌನಿಯಾಗಿರುವಂತೆ ಸೂಚಿಸಿ ತಾನು ಭಗವಂತನನ್ನು ಸೇರಿ ಅವನ ಮೇಲೆ ಮನಸ್ಸನ್ನು ಕೇಂದ್ರೀಕರಿಸಲು ಅನುವಾಗುವಂತೆ ಕೋರಿದನು. ಅನುಮತಿ ದೊರೆತ ದೊರೆಯು ಪ್ರಾಣಾಯಾಮದ ಮೂಲಕ ಭಗವಂತನಲ್ಲಿ ಮನಸ್ಸನ್ನು ಕೇಂದ್ರೀಕರಿಸಿ ಧ್ಯಾನಾಸಕ್ತನಾದನು.

ತಕ್ಷನೆಂಬ ಸರ್ಪವು ಬ್ರಾಹ್ಮಣ ವೇಷದಲ್ಲಿ ಪರೀಕ್ಷಿತ ರಾಜನ ಬಳಿಗೆ ಬಂದು ಅವನನ್ನು ಕಚ್ಚಿದಾಗ ದೊರೆಯ ಶರೀರವು ಸಂಪೂರ್ಣವಾಗಿ ಸುಟ್ಟು ಬೂದಿಯಾಯಿತು.

ಅನಂತರ ಜನಮೇಜಯ ರಾಜನಿಗೆ ತನ್ನ ತಂದೆ ಸರ್ಪದ ಕಡಿತದಿಂದ ನಿಧನಗೊಂಡ ವಾರ್ತೆಯು ತಿಳಿದು ಅವನು ಸರ್ಪ ಯಜ್ಞವನ್ನು ಏರ್ಪಡಿಸಿ ಎಲ್ಲ ಸರ್ಪಗಳನ್ನೂ ಆಹ್ವಾನಿಸಿದನು. ಆದರೆ ತಕ್ಷನು ಹೋಗಲಿಲ್ಲ. ವಿಚಾರಿಸಲಾಗಿ ತಕ್ಷನು ಇಂದ್ರದೇವನಿಗೆ ಮೊರೆ ಹೋಗಿರುವ ವಿಷಯ ತಿಳಿಯಿತು. ಜನಮೇಜಯನು ಪುರೋಹಿತರಿಗೆ ತಕ್ಷನನ್ನು ಇಂದ್ರನೊಂದಿಗೆ ಕರೆಯಿಸಲು ಯಜ್ಞವೊಂದನ್ನು ಮಾಡುವಂತೆ ತಿಳಿಸಿದನು. ಆಕಾಶದಲ್ಲಿ ಸಂಚರಿಸುತ್ತಿದ್ದ ಇಂದ್ರನು ಗಾಭರಿಗೊಂಡನು. ಬೃಹಸ್ಪತಿಯು ಜನಮೇಜಯನ ಬಳಿಗೆ ಧಾವಿಸಿ ತಕ್ಷನು ಅಮೃತವನ್ನು ಸೇವಿಸಿ ಅಮರನಾಗಿರುವುದರಿಂದ ಯಜ್ಞವನ್ನು ಕೈಬಿಡಬೇಕೆಂದು ಹೇಳಿದಾಗ ದೊರೆಯು ಯಜ್ಞವನ್ನು ನಿಲ್ಲಿಸಿದನು.

ಪರೀಕ್ಷಿತ ರಾಜನ ಮೇಲಿನ ಶಾಪ ಹಾಗೂ ಜನಮೇಜಯನ ಕೋಪ ಇವೆಲ್ಲವೂ ಭಗವಂತನ ಮಾಯೆಯೆಂಬುದಾಗಿ ಶ್ರೀ ಶುಕಾಚಾರ್ಯರು ತಿಳಿಸಿದರು. ಶ್ರೀ ಶುಕಾಚಾರ್ಯರು ತಾವು ಯಾರಿಂದ ಪುರಾಣವನ್ನು ಕಲಿತಿದ್ದರೋ ಅಂಥ ವೇದವ್ಯಾಸರಿಗೆ ಪ್ರಣಾಮಗಳನ್ನು ಸಲ್ಲಿಸಿದರು.

ಅಲ್ಲಿ ನೆರೆದಿದ್ದ ಸೂತರು ಹಾಗೂ ಶೌನಕರು ಅಲ್ಲಿದ್ದ ಬ್ರಾಹ್ಮಣರನ್ನು ಸಂಭೋದಿಸಿ ಓಂಕಾರವು ಬ್ರಹ್ಮನ ಹೃದಯದಿಂದ ಬಂದದ್ದು ಎಂದು ಹೇಳಿದರು. ಈ ಓಂಕಾರವು ಯೋಗಿಗಳ ಹೃದಯದಿಂದ ಭಯವೆಲ್ಲವನ್ನೂ ನಿರ್ಮೂಲ ಮಾಡಿ ಅವರು ಮೋಕ್ಷವನ್ನು ಪಡೆದುಕೊಂಡರು. ಓಂ ಎಂಬ ಶಬ್ದ ಔವಮ್ ಎಂಬು ಮೂರು ಅಕ್ಷರಗಳಿಂದ ಕೂಡಿದ್ದು ಇದು ಸತ್ವ, ರಜಸ್ ಹಾಗೂ ತಮಸ್ ಎಂಬ ಮೂರು ಗುಣಗಳನ್ನು; ಋಗ್, ಯಜುರ್ ಹಾಗೂ ಸಾಮವೆಂಬ ಮೂರು ವೇದಗಳನ್ನು; ಭುರ್, ಭುವ ಮತ್ತು ಸ್ವಹವೆಂಬ ಮೂರು ಗ್ರಹಗಳನ್ನು ಹಾಗೂ ಎಚ್ಚರ, ಕನವರಿಕೆ ಮತ್ತು ನಿದ್ರಾವಸ್ಥೆಯೆಂಬ ಮೂರು ಸ್ಥಿತಿಗಳನ್ನು ಪ್ರತಿನಿಧಿಸುತ್ತವೆ. ಬ್ರಹ್ಮನು ಈ ಮೂರು ಅಕ್ಷರಗಳಿಂದ ಸ್ವರ ಹಾಗೂ ವ್ಯಂಜನಗಳನ್ನು ಸೃಷ್ಟಿಸಿದನಲ್ಲದೆ, ತನ್ನ ನಾಲ್ಕು ಮುಖಗಳಿಂದ ನಾಲ್ಕು ವೇದಗಳನ್ನು ಸೃಷ್ಟಿಸಿ, ತನ್ನ ಮಗ ಮರೀಚಿ ಹಾಗೂ ಇತರರಿಗೆ ಅವನ್ನು ಬೋಧಿಸಿದಾಗ ಮುಂದೆ ಅವರು ಅದನ್ನು ತಮ್ಮ ಸಂತತಿಗೆ ತಿಳಿಸಿಕೊಟ್ಟರು.

ಅಲ್ಲಿದ್ದ ಸೂತ ಶೌನಕಾದಿ ಮುನಿಗಳು ಎಲ್ಲ ದೋಷರಹಿತ ಹಾಗೂ ಪುರಾಣಗಳಲ್ಲಿ ಅತ್ಯುತ್ತಮವೆಂದು ಪರಿಗಣಿತವಾಗಿರುವ ಶ್ರೀಮದ್ಭಾಗವತದ ವೈಭವವನ್ನು ತಿಳಿಸಿದರು. ಇದು ಎಲ್ಲ ಉಪನಿಷತ್ತುಗಳ ಸಾರಸಂಗ್ರಹ. ಈ ಮಹಾನ್ ಪುರಾಣವನ್ನು ಭಾದ್ರಪದದ

ಪೂರ್ಣಿಮೆಯಂದು ಪೂಜಿಸಬೇಕು. ಈ ಪುರಾಣವು ವೈಷ್ಣವರಿಗೆ ಅತ್ಯಂತ ಪ್ರಿಯವಾಗಿದ್ದು ಇದನ್ನೋದಿ ಕೇಳುವವರೆಲ್ಲರೂ ಮೋಕ್ಷವನ್ನು ಗಳಿಸುತ್ತಾರೆ.

ಈ ಪುರಾಣವನ್ನು ಮೊದಲು ಭಗವಾನ್ ನಾರಾಯಣನು ಬ್ರಹ್ಮದೇವನಿಗೆ ಬೋಧಿಸಿ ಅನಂತರ ಅದು ನಾರದ ಮುನಿಗೆ ಉಪದೇಶಿಸಲ್ಪಟ್ಟಿತು. ನಾರದನಿಂದ ವ್ಯಾಸದೇವನಿಗೂ ಹಾಗೂ ಅವನಿಂದ ಶ್ರೀ ಶುಕಾಚಾರ್ಯರಿಗೂ ಮತ್ತು ಶ್ರೀ ಶುಕಾಚಾರ್ಯರಿಂದ ಪರೀಕ್ಷಿತ ದೊರೆಗೂ ಹಾಗೂ ಅವನೊಂದಿಗೆ ಹಾಜರಾಗಿದ್ದ ವರೆಲ್ಲರಿಗೂ ತಲುಪಿತು.

ಹೀಗೆ 1993ರ ಅಕ್ಟೋಬರ್ ೨೪ರಂದು ಅಂದರೆ ವಿಜಯದಶಮಿಯ ದಿನದಂದು ಬೆಂಗಳೂರಿನಲ್ಲಿ ಮುಕ್ತಾಯಗೊಂಡ ಶ್ರೀಮದ್ಭಾಗವತ ಸಾರಾಂಶದ ಉಲ್ಲೇಖವು ಈ ರೀತಿ ಮುಗಿಯುತ್ತದೆ. ಶ್ರೀಮದ್ಭಾಗವತದಂಥ ಮಹಾ ಪುರಾಣವನ್ನು ಸಂಗ್ರಹ ರೂಪದಲ್ಲಿ ನೀಡಲು ನನಗೆ ಸಾಮರ್ಥ್ಯ ಹಾಗೂ ತಾಳ್ಮೆಯನ್ನು ನೀಡಿದ ಶ್ರೀ ಕೃಷ್ಣ ಪರಮಾತ್ಮನಿಗೆ ನನ್ನ ಭಕ್ತಿಪೂರ್ವಕ ನಮನಗಳು.

## ಆಕರ ಗ್ರಂಥಗಳು ಮತ್ತು ಲೇಖನಗಳು


1) ಶ್ರೀ ಮದ್ಭಾಗವತಮ್ - ISKCON

2) ಟೈಮ್ಸ್ ಆಫ್ ಇಂಡಿಯಾ - 31.3.93

3) ಶ್ರೀ ಗೀತಾ ರಹಸ್ಯ : 1) ಶ್ರೀ ಬಾಳ ಗಂಗಾಧರ ಟಿಳಕ
2) ಶ್ರೀ ಆಲೂರ ವೆಂಕಟರಾಯರು

4) ದ ವೇದಾಂತ - Study of the Brahma Sutra and their five commentaries- PARIS- V.S. Ghate.

5) ದಿ ಪ್ರಿನ್ಸಿಪಲ್ಸ್ ಆಫ್ ಉಪನಿಷತ್ - S. Radhakrishnan.

6) Brighter than Thousand Suns - Robert Jungan.

THE TIMES OF INDIA, BANGALORE 31. 3. 1993

# 'Ganga, Yamuna met in Delhi'

By TARIQ HASAN
The Times of India News Service

ALIGARH: Scientists at the Remote Sensing and Geo-engineering Centre here claim that the original confluence of the Ganga and the Yamuna was in Delhi, and the "Sangam" at Allahabad is, in geological terms, a "recent phenomenon".

With the help of computer-aided visuals and digital data collected through satellites, researchers have been able to trace the course of the Ganga during the Pleistocene period. According to Dr Iqbaluddin, director of the centre, the changes in the course of the Ganga took place around 10,000 B.C. The neotectonics in the region led to the changes in the river's course.

Researchers have also succeeded in simulating colour photographs of the Earth's surface as it must have existed thousands of years ago.

Scientists are using remote sensing for weather forecasting and land use, wasteland and ground water studies. Remote sensing is used for gathering information about objects on the Earth's surface with the help of sensors and radiometers mounted on satellites.

Though it is still in its infancy, remote sensing has helped researchers to suggest an "alternate waterways system" to solve Delhi's chronic water shortage problem and drastically reduce the pollution level of the water supplied to the metropolis.

Dr Iqbaluddin told *The Times of India News Service* that they would be submitting a proposal to the Centre on resurrecting portions of the original channel of the Ganga to help in storing flood water discharged from the river.

Dr Iqbaluddin pointed out that at present Ganga water is supplied to Delhi through a diversion stream from the Upper Ganga Canal, via a balancing reservoir on the Hindon river, near Ghaziabad. In fact, the Hindon itself has been described as a "misfit stream" flowing through an ancient flood plain of the Ganga. But this reservoir has a limited storage capacity.

According to this proposal, by linking the original palaeo drainage of the Ganga between the Hindon and the Ganga barrage, west of Bijnor town, the entire 40-km stretch of the Hindon would become available for storing the surplus flood water of the Ganga.



77 30'
78
78 30'
79
N
10 0 10 KM
LEGEND
Palaeo-channel
Present day channel
Settlement
Dam
30 30'
30 00'
29 30'
29 00'
28 30
SIWALIK
RANGES
BIJNOR
YAMUNA R.
HINDON R.
GANGA R.
MERRUT
GHAZIABAD
DELHI
UPPER GANGA CANAL